# ಅಲ್ಲಮಪ್ರಭುವಿನ ದಾರ್ಶನಿಕ ಮೀಮಾಂಸೆ

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

**ಐ.ಜೆ.ಚೌಕಿಮಠ**

**(ಸಿದ್ಧಲಿಂಗಸ್ವಾಮಿಗಳು)**

ಇಂಗಳೇಶ್ವರ ೫೮೬ ೨೩೫
ಬಸವನ ಬಾಗೇವಾಡಿ ತಾಲೂಕು
ಬಿಜಾಪುರ ಜಿಲ್ಲೆ

ಮಾರ್ಗದರ್ಶಕರು

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**

ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬



**ಭಾಷಾ ನಿಕಾಯ**

**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**೨೦೦೩**

# ಅಲ್ಲಮಪ್ರಭುವಿನ ದಾರ್ಶನಿಕ ಮೀಮಾಂಸೆ

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

**ಐ.ಜಿ.ಚೌಕಿಮಠ**

**(ಸಿದ್ಧಲಿಂಗಸ್ವಾಮಿಗಳು)**

ಇಂಗಳೇಶ್ವರ ೫೮೬ ೨೩೫
ಬಸವನ ಬಾಗೇವಾಡಿ ತಾಲೂಕು
ಬಿಜಾಪುರ ಜಿಲ್ಲೆ

ಮಾರ್ಗದರ್ಶಕರು

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**

ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬





ಭಾಷಾ ನಿಕಾಯ

**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**೨೦೦೩**





ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ
ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

## ದೃಢೀಕರಣ ಪತ್ರ

ಶ್ರೀ ಐ.ಜಿ.ಚೌಕಿಮಠ (ಸಿದ್ಧಲಿಂಗ ಸ್ವಾಮಿಗಳು) ಇವರು ಅಲ್ಲಮಪ್ರಭುವಿನ ದರ್ಶನಮೀಮಾಂಸೆ ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೩ ಮೇ ೨೦೦೩ (ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ)

# ಪ್ರಮಾಣ ಪತ್ರ

ಅಲ್ಲಮಪ್ರಭುವಿನ ದಾರ್ಶನಿಕ ಮೀಮಾಂಸೆ ಎಂಬ ಮಹಾಪ್ರಬಂಧವನ್ನು ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೩ ಮೇ ೨೦೦೩<br>
ಸ್ಥಳ : ವಿದ್ಯಾರಣ್ಯ

(ಐ.ಜಿ.ಚೌಕಿಮಠ)
[ಸಿದ್ಧಲಿಂಗ ಸ್ವಾಮಿಗಳು]
ವಿರಕ್ತಮಠ, ಇಂಗಳೇಶ್ವರ ೫೮೬ ೨೩೫
ಬಸವನ ಬಾಗೇವಾಡಿ ತಾಲೂಕು
ಬಿಜಾಪುರ ಜಿಲ್ಲೆ

# ಕೃತಜ್ಞತೆಗಳು

ಧಾರವಾಡ ಮುರುಘಾಮಠದ ಲಿಂಗೈಕ್ಯ ಮಹಾಂತಪ್ಪಗಳವರ ಕೃಪಾಶೀರ್ವಾದದಿಂದ ಶಿವಯೋಗಿ ಅಪ್ಪಗಳವರ ಕೃಪಕಟಾಕ್ಷದಿಂದ ಬಿಜಾಪುರದಲ್ಲಿ ಬಿ.ಎಸ್ಸಿ ಡಿಗ್ರಿಯನ್ನು "ಪಡೆದಾಗ ಇನ್ನೇನು ಶಿಕ್ಷಣವನ್ನು ಮುಗಿಸಲು ಕಾಶೀ ವಿಶ್ವವಿದ್ಯಾಲಯಕ್ಕೆ ಅಥವಾ ಮತ್ಯಾವದೋ ವಿದ್ಯಾಲಯಕ್ಕೆ ಹೋಗಬೇಕು ಅನ್ನುವ ವಿಚಾರ ತಲೆಯಲ್ಲಿ ಹೊಳೆಯುತ್ತಲೇ ಇತ್ತು. ವಿಜ್ಞಾನ ನಿಂತಲ್ಲಿ ತತ್ವಜ್ಞಾನ ಪ್ರಾರಂಭವಾಗುವದೆಂಬ ನುಡಿಯಂತೆ." ತತ್ವಜ್ಞಾನದ ಬಗ್ಗೆ ಇದ್ದ ಹಂಬಲ ಕರ್ನಾಟಕ ವಿಶ್ವವಿದ್ಯಾಲಯದ ತತ್ವಜ್ಞಾನ ವಿಭಾಗಕ್ಕೆ ಭೆಟ್ಟಿಯಾಗುವಂತೆ ಮಾಡಿತು. ಅಲ್ಲಿಯ ಹಿರಿಯ ತತ್ವಜ್ಞರು, ಚಿಂತಕರು, ಪ್ರೊಫೆಸರ್, ಕರುಣಾಹೃದಯಿ ಎನ್.ಜಿ.ಮಹಾದೇವಪ್ಪ ಅವರನ್ನು ಕಂಡು ಮಾತನಾಡಿದಾಗ ನೀವು ತತ್ವಜ್ಞಾನ ಅಧ್ಯಯನ ಮಾಡಲು ಮನಸ್ಸನ್ನು ಮುದಗೊಳಿಸಿರುವದರಿಂದ ಎಂ.ಎ. ಪ್ರವೇಶವನ್ನು ಪಡೆದುಕೊಳ್ಳಬಹುದೆಂದು ಹೇಳಿ ಅಡ್ಮಿಶನ್ ಮಾಡಿಸಿದರು. ತತ್ವಜ್ಞಾನ ವಿಭಾಗದಲ್ಲಿ ನಾಲ್ಕು-ಐದು ವಿದ್ಯಾರ್ಥಿಗಳು ನಾವಾದ್ದರಿಂದ ಅದರಲ್ಲಿಯೂ ತೀವ್ರ ಚಿಂತನಾ ಮನಸ್ಸನ್ನು ಗುರುತಿಸಿದ ಮಹಾದೇವಪ್ಪ ಅವರು ಎಲ್ಲ ವಿದ್ಯಾರ್ಥಿಗಳಿಗಿಂತಲೂ ನನ್ನ ಮೇಲೆ ವಿಶೇಷ ಆಸಕ್ತಿ ವಹಿಸುತ್ತಿದ್ದರು. ಅಷ್ಟೆ ಅಲ್ಲ ಮುಂದೆ ಪಿಎಚ್.ಡಿ.ಯನ್ನು ಕೂಡಾ ಮಾಡಲು ಪ್ರೇರಣೆಯನ್ನು ಕೊಟ್ಟವರು ಅವರೇ. ಅವರ ಪ್ರೇರಣೆ ಎಂಬಂತೆ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಆಗಲೇ ಇಬ್ಬರು, ಮೂವರು ಸ್ವಾಮಿಗಳು ಸಂಶೋಧನೆಯನ್ನು ನಡೆಸಿದ್ದರು. ಸಂಶೋಧನೆಯನ್ನು ಯಾವ ವಿಶ್ವವಿದ್ಯಾಲಯದಲ್ಲಿ ಮಾಡಬೇಕೆಂದು ಚಿಂತಿಸುತ್ತಿರುವಾಗ ಕೇವಲ ಸಂಶೋಧನೆಗೆ ಮೀಸಲಾದ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿಯೇ ಮಾಡುವ ವಿಚಾರದಲ್ಲಿರುವಾಗ ಲಿಂಗಾಯತ ಸಮಾಜದ ಹಿರಿಯ ಚಿಂತಕರು ಹಾಗೂ ಇಂಗಳೇಶ್ವರ ಮಠದ ಹಿತಚಿಂತಕರು ಆದ ಗೋ.ರು.ಚನ್ನಬಸವಪ್ಪ ಅವರು ನಮ್ಮ ಇಂಗಳೇಶ್ವರ ವಿರಕ್ತಮಠಕ್ಕೆ ಬಂದಾಗ ಅವರಿಗೆ ನನ್ನಾಸೆಯನ್ನು ತಿಳಿಸಿದೆನು. ಆಗ ಅವರು ನಾನು ಹಂಪಿ ವಿಶ್ವವಿದ್ಯಾಲಯಲದಲ್ಲಿ ವ್ಯವಸ್ಥೆ ಮಾಡುತ್ತೇನೆ. ನೀವು ಸಂಶೋಧನೆ ಮಾಡಲೇಬೇಕು ಎಂದು ಗುರುಗಳಾದ ಶ್ರೀ. ಮ.ನಿ.ಪ್ರ. ಚನ್ನಬಸವ ಮಹಾಸ್ವಾಮಿಗಳವರ ಸಮಕ್ಷಮದಲ್ಲಿ ಅಗ್ರಹಿಸಿದರು. ಅಷ್ಟೇ ಅಲ್ಲ ನಮ್ಮವರೇ ಆದ ಶ್ರೀ ಮಲ್ಲೇಪುರಂ ಜಿ.ವೆಂಕಟೇಶರವರು ಒಳ್ಳೆಯ ವಿಮರ್ಶೆ ಚಿಂತಕರೂ, ತತ್ವಜ್ಞಾನಕ್ಕೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯದಲ್ಲಿ ಅವರೊಬ್ಬರೇ ಎದ್ದು ಕಾಣಿಸುತ್ತಾರೆ ಎಂದು ಹೇಳಿ ಅವರಿಗೆ ತಿಳಿಸಿ ಪಿಎಚ್.ಡಿ. ರಿಜಿಸ್ಟ್ರೇಶನ್ ಮಾಡಿಸಿದರು. ಆಗ ಮಲ್ಲೇಪುರಂ ಅವರು ಈ ವಿಶ್ವವಿದ್ಯಾಲಯ ರಿಜಿಸ್ಟ್ರಾರ್ ಆಗಿದ್ದರು. ಅವರನ್ನು ಮಾತನಾಡಿಸಿದಾಗ ನೀವೇನು ಚಿಂತಿಸಬೇಡಿ. ನಮ್ಮ ಮಾರ್ಗದರ್ಶನದಲ್ಲಿಯೇ ನೀವು ಸಂಶೋಧನೆಯನ್ನು ಪ್ರಾರಂಭಿಸಬಹುದೆಂದು ತಿಳಿಸಿದರು. ಆಗ ಪ್ರಭುದೇವರ ದಾರ್ಶನಿಕ ನಿಲುವಿನ ಬಗ್ಗೆ ವಿಶೇಷ ಅಧ್ಯಯನ ಮಾಡವದು ಅವಶ್ಯವೆನಿಸಿ 'ಸಿನಾಪ್‌ಸಿಸ್ ' ತಯಾರು ಮಾಡಲಾಯಿತು. ನಂತರದಲ್ಲಿ ಮಲ್ಲೇಪುರಂ ಅವರು ಆಳವಾದ ವಿಮರ್ಶೆ ಚಿಂತಕರು ಎಂಬುದು ತಿಳಿಯಿತು. ಇವರ ಮಾರ್ಗದರ್ಶನದಲ್ಲಿ ಸಂಶೋಧನೆಯನ್ನು ಪ್ರಾರಂಭಿಸಿದ ನಾನೇ ಧನ್ಯನೆಂದು ಹೇಳುತ್ತೇನೆ. ಅವರ ಮಾರ್ಗದರ್ಶನದಂತೆ ಈ ಮಹಾಪ್ರಬಂಧ ಸಿದ್ಧಗೊಂಡಿದೆ. ಅವರಿಗೂ ಕೂಡಾ ಕೃತಜ್ಞತೆಗಳು.

ಕನ್ನಡ ವಿಶ್ವವಿದ್ಯಾಲಯದಲ್ಲಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ ಅವರಿಗೂ, ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೂ, ಈ ಪ್ರಬಂಧವನ್ನು ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ತಮ್ಮ ಹೃದಯ ವೈಶಾಲ್ಯತೆಯಿಂದ ಸಹಕರಿಸಿದ ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಹಂಪೆಗೆ ಹೋದಾಗ ಇರಲು ವ್ಯವಸ್ಥೇ ಬೇಕಲ್ಲಾ? ಹೊಸಪೇಟೆಯ ಜಗದ್ಗುರು ಶ್ರೀ.ಮ.ನಿ.ಪ್ರ.ಸಂಗನಬಸವ ಮಹಾಸ್ವಾಮಿಗಳವರು ಪಿಎಚ್.ಡಿ. ಮಾಡುವ ಇಂಗಿತವನ್ನು ತಿಳಿಸಿದಾಗ ಬಹಳ ಖುಷಿಯಿಂದ ನೀವು ಸಂಶೋಧನೆಯನ್ನು ಹಂಪಿಯಲ್ಲಿಯೇ ಮಾಡಿರಿ. ನಮ್ಮ ಮಠದಲ್ಲಿಯೇ ಸಂಶೋಧನೆ ಮುಗಿಯುವವರೆಗೆ ಪ್ರಸಾದ ವ್ಯವಸ್ಥೆಯಾಗುವದು ಎಂದು ತುಂಬುಹೃದಯದಿಂದ ಹರಿಸಿ, ತಮ್ಮ ಹೃದಯ ವೈಶಾಲ್ಯತೆಯಿಂದ ಹುರಿದುಂಬಿಸಿದ್ದಾರೆ. ಆಚಾರವಂತ ಸ್ವಾಮಿಗಳು ಕಡಿಮೆ ಜನ ಸಿಗುವರು. ನಿಮ್ಮಂತಹ ಆಚಾರವಂತ ಸ್ವಾಮಿಗಳವರನ್ನು ತಯಾರು ಮಾಡುವುದೆಂದರೆ ನಮಗೆ ಅಚ್ಚುಮೆಚ್ಚಿನ ಸಂಗತಿಯೆಂದು, ಮಠಕ್ಕೆ ಹೋದಾಗ ಅಲ್ಲಿ ಪ್ರಸಾದದ ವ್ಯವಸ್ಥೆಯನ್ನು ಮುತುವರ್ಜಿಯಿಂದ ಮಾಡಿದ್ದನ್ನು ಸ್ಮರಿಸಿದಾಗ ಮಾತ್ರ ಹೃದಯಕ್ಕೆ ಧನ್ಯತೆಗಳನ್ನು ಹೇಳದಿರಲಾರೆ. ನನ್ನ ಜೀವನದಲ್ಲಿ ಅಜೀವನ ಹಿತ ಚಿಂತಕರು ಪಾಲಕರೂ ಹಿರಿಯರಾದ ಮಹಾಗಾಂವದ ಆರ್.ಎಸ್.ಪಾಟೀಲರು ಮೇಲಿಂದ ಮೇಲೆ ಎಲ್ಲಿಗೆ ಬಂದಿತು ನಿಮ್ಮ ಸಂಶೋಧನೆ ಎಂದು ಪದೇ ಪದೇ ಕೇಳುತ್ತಿದ್ದವರು. ಸಂಶೋಧನೆಯನ್ನು ಮುಗಿಸಲೇಬೇಕೆಂದು ಹೇಳುತ್ತಾ ಅದರ ಖರ್ಚನ್ನು ಅವರೇ ಕೊಟ್ಟಿರುತ್ತಾರೆ. ಅದಲ್ಲದೆ ಬೀಳಗಿಯ ಕೆರೂರ ಇಂಜನಿಯರ್ ಟಕ್ಕಳರೆಯ ರಮೇಶ ಸೂಳಿಬಾಯಿ, ನಾಲತವಾಡ ಎಂ.ಬಿ.ಅಂಗಡಿ, ಮುದ್ದೇಬಿಹಾಳದ ಬಸವರಾಜ ಮೋಟಗಿ, ಮಾಹಾಂತಪ್ಪ ನಾವದಗಿ ಹಿತಚಿಂತಕರಾದ ಸಧ್ಯದ ಬೀದರ ಜಿಲ್ಲೆಯ ಉಸ್ತುವಾರಿ ಸಚಿವರಾದ ಶ್ರೀ ಬಸವರಾಜ ಪಾಟೀಲ್ ಹುಮನಬಾದ ಇವರಿಗೂ, ಸೂಕ್ಷ್ಮಮನಸ್ಸಿನ ನೀಡಸೋಸಿಯ ಜಗದ್ಗುರು ಪಂಚಮಶಿವಲಿಂಗೇಶ್ವರ ಸ್ವಾಮಿಗಳವರಂತು ತಮ್ಮ ಮಠದ ಗ್ರಂಥಾಲಯದ ಪುಸ್ತಕಗಳನ್ನು ಕೊಟ್ಟು ಈ ಸಂಶೋಧನೆ ಉತ್ತಮ ಕೃತಿಯಾಗಿ ಹೊರಬರಲಿ ಅಷ್ಟೇಯಲ್ಲ ನೀವು ಮುಂದೆ ಸಮಾಜಕ್ಕೆ ಒಬ್ಬ ಒಳ್ಳೆಯ ಆದರ್ಶ ಸ್ವಾಮಿಯಾಗುತ್ತೀರಿ ಎಂಬ ಭರವಸೆ ನಮಗಿದೆ ಎಂದು ತುಂಬು ಹೃದಯದಿಂದ ಹೇಳಿದ್ದು ಇಂದಿಗೂ ಕೂಡ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದೆ. ಅವರಿಗೂ ಕೂಡ ಅನಂತ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ನನ್ನ ಅಧ್ಯಯನಕ್ಕೆ ಒತ್ತಡವನ್ನು ತಂದವರಾದ ಶ್ರೀ ಸಿದ್ದಣ್ಣ ಕುಂಬಾರ ಅವರಿಗೆ, ಹಾಗೆಯೇ ಬರವಣಿಗೆಯಲ್ಲಿ ಸಹಾಯಮಾಡಿದ ಹರಪೂರು ಕಲ್ಮಠದ ಶ್ರೀ ಸಿದ್ದೇಶ್ವರನಿಗೂ ಸೇವಕ ಬಂಧುಗಳಾದ ಈ ಸಂಶೋಧನೆ ಮುಗಿಯುವವರೆಗೆ ವ್ಯವಸ್ಥೆಗೆ ತೊಂದರೆಯಾಗದಂತೆ ಸಹಕರಿಸಿದ ಲೋಟಗೇರಿಯ ಶ್ರೀ ಗುರುಮೂರ್ತಿಗೂ, ಮಹಾಗಾಂವದ ಮಹಾಲಿಂಗಪ್ಪ ಅವರಿಗೂ, ಮುಗ್ಧ ಮನಸ್ಸಿನ ಚಿಕ್ಕಂದಿನಿಂದಲೂ ನಮ್ಮ ಮಠದಲ್ಲಿ ಬೆಳೆದು ದೊಡ್ಡವನಾಗಿ ಈಗ ಕಾರ್ ಡ್ರೈವಿಂಗ್ ಮಾಡುತ್ತಿರುವ ಹಗರಟಿಯ ಶರಣನಿಗೂ, ಅಧ್ಯಯನ ಸಂದರ್ಭದಲ್ಲಿ ನೆರವಾದ ಡಾ. ಕೆ.ರವೀಂದ್ರನಾಥ ಮತ್ತು ಜಾಜಿ ದೇವೇಂದ್ರಪ್ಪ ಅವರಿಗೂ, ಎಲ್ಲಕ್ಕಿಂತಲೂ ಮಿಗಿಲಾಗಿ ಆತ್ಮೀಯ ಹಿತಚಿಂತಕರಂತೆ ವಿಶ್ವವಿದ್ಯಾಲಯಕ್ಕೆ ಸಂಬಂಧಪಟ್ಟಂತಹ ಪತ್ರ ವ್ಯವಹಾರವನ್ನು ನೋಡಿಕೊಂಡು ಡಿ.ಟಿ.ಪಿ.ಯನ್ನು ಮಾಡಿಕೊಟ್ಟ ಶ್ರೀ ಸೋಮನಾಥ ಕುಡುತಿನಿ ಅವರಿಗೂ, ಈ ಮೇಲಿನ ಎಲ್ಲ ಬಾಂಧವರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಐ.ಜಿ.ಚೌಕಿಮಠ
(ಸಿದ್ಧಲಿಂಗಸ್ವಾಮಿಗಳು)

# ಪರಿವಿಡಿ

# ೧

# ಅಧ್ಯಯನದ ಸ್ವರೂಪ ಮತ್ತು ಉದ್ದೇಶ

ಅಲ್ಲಮಪ್ರಭು ದೇವರ ಬಗೆಗೆ ಕನ್ನಡದಲ್ಲಿ ವ್ಯಾಪಕವಾದ ಅಧ್ಯಯನ ಇನ್ನೂವರೆಗೆ ನಡೆದಿಲ್ಲ. ಹನ್ನೆರಡನೆಯ ಶತಮಾನದ ಮುಖ್ಯ ವಚನಕಾರರ ಬಗೆಗೆ ನಡೆದಿರುವಷ್ಟು ಅಧ್ಯಯನ ಅಲ್ಲಮನ ವಿಷಯದಲ್ಲಿ ನಡೆಯದಿರುವುದು ಎದ್ದು ತೋರುವ ಸಂಗತಿ. ಈಗ ಅಲ್ಲಮನ ಬಗೆಗೆ ನಡೆದಿರುವ ಅಧ್ಯಯನಗಳು ಸಾಹಿತ್ಯಕ ಹಾಗೂ ಕಾಲದೇಶಾದಿಗಳ ಕುರಿತೇ ಹೊರತು ಸಮಗ್ರ ಅಧ್ಯಯನವಲ್ಲ. ಈಚೆಗೆ ಬಂದಿರುವ ಎಸ್.ಎಂ.ವೃಷಭೇಂದ್ರಸ್ವಾಮಿಯವರ ಕನ್ನಡ ಸಾಹಿತ್ಯದಲ್ಲಿ 'ಅಲ್ಲಮ ಪ್ರಭು', ಸಿದ್ದೇಶ್ವರ ಸ್ವಾಮಿಗಳ 'ವಚನ-ನಿರ್ವಚನ' ಡಾ. ಡಿ.ಆರ್.ನಾಗರಾಜ್ ಅವರ 'ಅಲ್ಲಮಪ್ರಭು ಮತ್ತು ಶೈವಪ್ರತಿಭೆ' ಶ್ರೀ ಬಸವರಾಜ ಪುರಾಣಿಕ ಅವರ 'ಅಲ್ಲಮನ ಅನುಸಂಧಾನ' ಇವು ಮೂರು ಕೃತಿಗಳಾಗಿವೆ. ಇವುಗಳು ಅಲ್ಲಮನ ವಚನಗಳ ಮೂಲಕ ಕೆಲವು ಸಾಂಸ್ಕೃತಿಕ ವಿಚಾರಗಳನ್ನು, ಷಟ್‌ಸ್ಥಲಗಳ ಅನುಸಂಧಾನದ ಮೂಲಕ ನಿರ್ವಚನವನ್ನು ನಡೆಸಿವೆ.

ಈ ಹಿನ್ನೆಲೆಯಲ್ಲಿ ಅಲ್ಲಮನ ವಚನಗಳನ್ನು ತಾತ್ವಿಕ ದೃಷ್ಟಿಕೋನವೊಂದನ್ನು ತೆಗೆದುಕೊಂಡು ಅಧ್ಯಯನ ಮಾಡುವುದು ಪ್ರಬಂಧದ ಉದ್ದೇಶವಾಗಿದೆ. ಈ ತಾತ್ವಿಕ ದೃಷ್ಟಿಕೋನವು ಅಲ್ಲಮನ ವಚನಗಳಿಂದ ರೂಪಿತವಾಗಿರುವಂಥದು. ಶೂನ್ಯ ಸಂಪಾದನೆಗಳಲ್ಲಿ ಶಿವಾದ್ವೈತ ಸಿದ್ಧಾಂತದ ರೀತಿ ವ್ಯಾಖ್ಯಾನವೊಂದು ಮಂಡಿತವಾಗಿದೆ. ಇದು ಪ್ರಾಚೀನ ಸಂಕಲನಕಾರರು ನೀಡಿದ ಕ್ರಮ. ಇನ್ನು ಆಧುನಿಕರಲ್ಲಿ ಸಂ.ಶಿ. ಭೂಸನೂರುಮಠ ಅವರ 'ಶೂನ್ಯ.ಸಂ.ಪರಾಮರ್ಶೆ' ಜಾಗತಿಕ ತತ್ವಗಳ ಹಿನ್ನೆಲೆಯಲ್ಲಿ ಒಟ್ಟು ಶೂನ್ಯ ಸಂಪಾದನೆಯ ತಿರುಳನ್ನು ನೋಡುವ ಕ್ರಮವನ್ನು ಹೊಂದಿದೆ. ವೈಜ್ಞಾನಿಕ ತತ್ತ್ವಜ್ಞಾನ ಹಾಗೂ ಅದ್ವೈತ ದರ್ಶನದ ನೆಮ್ಮುಗೆಗಳನ್ನು ಇದು ಹಿಡಿದಿರುವುದು ಸ್ಪಷ್ಟವಾಗಿದೆ.

ಪ್ರಸ್ತುತ ಅಧ್ಯಯನವು ಇವೆರಡೂ ಬಗೆಯ ಅಧ್ಯಯನ ಕ್ರಮುಗಳನ್ನು ತೆಗೆದುಕೊಂಡು ನಿರ್ವಹಿಸಲಾಗಿದೆ. ವಚನಗಳಲ್ಲಿ ಮಂಡಿತವಾಗಿರುವ ತಾತ್ವಿಕ ಚೌಕಟ್ಟು ಏನಿದೆಯೋ ಅದರ ಮೂಲಕ 'ಮೀಮಾಂಸೆ'ಯೊಂದನ್ನು ರೂಪಿಸುವ ಹಂಬಲವನ್ನು ಹೊತ್ತಿದೆ. ಅಲ್ಲಮನು 'ಶಿವಾದ್ವೈತ ಸಿದ್ಧಾಂತ'ಕ್ಕೆ ಸೇರಿದವನು. ಆ ಮುಖಾಂತರ ತಾತ್ತ್ವಿಕ ಪ್ರಮೇಯವೊಂದನ್ನು ಮಂಡಿಸುತ್ತಿದ್ದಾನೆಂದು ಹೇಳುವುದು ಉಂಟಷ್ಟೆ. ಅದೇ ರೀತಿ 'ಅದ್ವೈತ ಸಿದ್ಧಾಂತ'ದ ರೀತಿ ಅದ್ವೈತ ದರ್ಶನದ ಒಳಗೆ ವ್ಯಾಖ್ಯಾನಿಸುವ ಆಧುನಿಕ ಮಾದರಿಯೂ ಒಂದುಂಟು. ಇದರ ಜೊತೆಗೆ 'ದೇಸೀ ಮೀಮಾಂಸೆ'ಯ ಹಿನ್ನೆಲೆಯಲ್ಲಿ ನೋಡುವ ಒಂದು ಕ್ರಮವಿದೆ. ಆದರೆ, ಇವೆಲ್ಲಕ್ಕೂ ಭಿನ್ನವಾದ ಆದರೆ, ಅಲ್ಲಮನೇ ಸೂಚನೆ ನೀಡುವಂತೆ ಅವಧೂತ ಸಂಪ್ರದಾಯ ಹಾಗೂ ಮೌನಸಂಪ್ರದಾಯದ ಒಳಗೆ ಅಲ್ಲಮನ ನಿಲುವನ್ನು ಕುರಿತ ಅಧ್ಯಯನದ ಅವಶ್ಯಕತೆ ಇತ್ತು. ಈ ನೆಲೆಯನ್ನು ಹಿಡಿದು 'ದಾರ್ಶನಿಕ ಮೀಮಾಂಸೆ' ಎಂಬ ಪರಿಕಲ್ಪನೆ ಕ್ರಮದಲ್ಲಿ ಅಧ್ಯಯನವನ್ನು ಮಾಡಲಾಗಿದೆ.

ಈ ಹಿನ್ನೆಲೆಯಲ್ಲಿ ಮಹಾಪ್ರಬಂಧದ ಒಟ್ಟು ಚೌಕಟ್ಟು ಈ ಕೆಳಕಂಡಂತೆ ಇದೆ.

೧. ಅಧ್ಯಯನದ ಸ್ವರೂಪ ಮತ್ತು ಉದ್ದೇಶ

೨. ದರ್ಶನ ಪರಿಕಲ್ಪನೆ

  ಅ. ಪಾಶ್ಚಾತ್ಯ ವ್ಯಾಖ್ಯಾನಗಳು

  ಆ. ಪೌರ್ವಾತ್ಯ ವ್ಯಾಖ್ಯಾನಗಳು

೩. ಭಾರತೀಯ ಕೆಳವರ್ಗದ ದಾರ್ಶನಿಕ ಪರಂಪರೆ

೪. ಮಧ್ಯಕಾಲೀನ ದಾರ್ಶನಿಕ ಪರಂಪರೆ ಮತ್ತು ವಚನಕಾರರು

  ಅ. ಸೂಫಿ ಮತ್ತು ವಚನಕಾರರು

  ಆ. ದಾಸರು ಮತ್ತು ವಚನಕಾರರು

೫. ಅಲ್ಲಮಪ್ರಭುವಿನ ದಾರ್ಶನಿಕ ತತ್ವ

  ಅ. ಕಾವ್ಯಕೃತಿಗಳಲ್ಲಿ ನಿರೂಪಿತವಾದ ದಾರ್ಶನಿಕ ಮೀಮಾಂಸೆ

  ಆ. ಪೌರಾಣಿಕ ಕೃತಿಗಳಲ್ಲಿ ನಿರೂಪಿತವಾದ ದಾರ್ಶನಿಕ ಮೀಮಾಂಸೆ

  ಇ. ವಚನಗಳಲ್ಲಿ ನಿರೂಪಿತವಾದ ದಾರ್ಶನಿಕ ಮೀಮಾಂಸೆ

೬. ಸಮಾರೋಪ

ಮೊದಲನೆಯ ಅಧ್ಯಾಯವು ಈವರೆಗೂ ಅಲ್ಲಮಪ್ರಭುದೇವರನ್ನು ಯಾವ ಯಾವ ದೃಷ್ಟಿಕೋನಗಳಲ್ಲಿ ಚರ್ಚಿತವಾಗಿದೆ ಎಂಬ ಅಂಶವನ್ನು ಇರಿಸಿಕೊಂಡು 'ದಾರ್ಶನಿಕ ಮೀಮಾಂಸೆ' ಎಂಬ ಚೌಕಟ್ಟಿನಲ್ಲಿ ಪ್ರಬಂಧದ ಸ್ವರೂಪವನ್ನು ಇಟ್ಟುಕೊಳ್ಳಲಾಗಿದೆ. ಆ ಕ್ರಮದಲ್ಲಿಯೇ ಒಂದು ಹೊಸಬಗೆಯ ನಿರ್ವಚನ ಮತ್ತು ವ್ಯಾಖ್ಯಾನಗಳ ಕ್ರಮವನ್ನು ಅನುಸರಿಸಲಾಗಿದೆ. ಪ್ರಬಂಧವು ಅಂತಿಮವಾಗಿ ನೀಡಬಹುದಾದ ದಾರ್ಶನಿಕ

ಎಂಬ ಮಾತನ್ನು ಅಲ್ಲಮನನ್ನು ಕುರಿತ ಕಾವ್ಯಕೃತಿಗಳ ಮೂಲಕ, ಪೌರಾಣಿಕ ಕೃತಿಗಳ ಮೂಲಕ ಮತ್ತು ಅವನ ವಚನಗಳಲ್ಲಿ ನಿರೂಪಿತವಾಗಿರುವ ಅಂಶಗಳ ಮೂಲಕ ಅಧ್ಯಯನ ಕ್ರಮವನ್ನು ಕೈಗೊಳ್ಳಲಾಗಿದೆ.

ಎರಡನೆಯ ಅಧ್ಯಾಯವು ದರ್ಶನ ಪರಿಕಲ್ಪನೆ ಕುರಿತು ಚಿಂತಿಸುತ್ತದೆ. ಇದು ಅಲ್ಲಮಪ್ರಭುವಿನ ದಾರ್ಶನಿಕ ನೆಲೆಗೆ ಪೂರ್ವಭಾವಿ ಸಂಗತಿಗಳನ್ನು ಸೇರಿಸುತ್ತದೆ. ದರ್ಶನ ಎಂದರೆ ಕಾಣುವುದು. ಪ್ರತಿಯೊಬ್ಬ ಸಂತ, ಅವಧೂತ, ಕವಿ ಇವರೆಲ್ಲರೂ ಲೋಕವನ್ನು ಲೋಕದ ಹೊರಗಿರುವುದನ್ನು ಕಾಣುತ್ತಾರೆ. ಅವರು ಕಾಣುವುದು ವಿಶಿಷ್ಟವಾಗಿಯೇ. ಹೀಗೆ ಕಾಣುವ ಕ್ರಮ ಯಾವುದೆಂಬುದನ್ನು ಕಾಣಬಲ್ಲ ಮನಸ್ಸಿನ ಸ್ವರೂಪವನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಈ ಅಂಶಕ್ಕೆ ಪೂರಕವಾಗಿ ದರ್ಶನ ಪರಿಕಲ್ಪನೆಯನ್ನು ನಿರ್ವಚಿಸಿಕೊಳ್ಳಲಾಗಿದೆ. ಈ ಅಧ್ಯಾಯವು ಎರಡು ಮುಖ್ಯ ದರ್ಶನಗಳ ನೆಲೆಗಳನ್ನು ಹೊತ್ತಿದೆ. ಮೊದಲನೆಯದಾಗಿ ಪಾಶ್ಚಾತ್ಯ ವ್ಯಾಖ್ಯಾನಗಳು. ಈ ವ್ಯಾಖ್ಯಾನಗಳು 'ದರ್ಶನ' ಎಂಬ ಮಾತನ್ನು ವ್ಯಾಖ್ಯಾನಿಸಿಕೊಳ್ಳುವ ಎಷ್ಟು ಮಾದರಿಗಳಿವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಪಾಶ್ಚಾತ್ಯ ತತ್ವ ವ್ಯಾಖ್ಯಾನಗಳಲ್ಲಿ ನಾಲ್ಕು ಮುಖ್ಯ ಹಂತಗಳನ್ನು ಕಾಣುತ್ತೇವೆ. ಪ್ರಾಚೀನ ತತ್ವಶಾಸ್ತ್ರ, ಮಧ್ಯಕಾಲೀನ ತತ್ತ್ವಶಾಸ್ತ್ರ, ಆಧುನಿಕ ಹಾಗೂ ಸಮಕಾಲೀನ ತತ್ವಶಾಸ್ತ್ರ ಇವುಗಳಲ್ಲಿ ಬಹುಮುಖ್ಯವಾದ ತತ್ತ್ವಜ್ಞರನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ. ತತ್ತ್ವಶಾಸ್ತ್ರ ಮತ್ತು ಅನುಭಾವಶಾಸ್ತ್ರಗಳ ನಡುವಣ ಸಹಸಂಬಂಧದ ಅಲ್ಪಗೆರೆಯನ್ನು ಕುರಿತು ಯೋಚಿಸಲಾಗಿದೆ. ಪಾಶ್ಚಾತ್ಯರಲ್ಲಿ ತತ್ತ್ವಶಾಸ್ತ್ರ ಮತ್ತು ಅನುಭಾವ ಇವೆರಡರಲ್ಲಿ ತುಸು ಅಂತರವುಂಟು. ಗ್ರೀಕ್ ತತ್ತ್ವಜ್ಞಾನದಲ್ಲಿ ಇವೆರಡೂ ಒಂದರೊಳಗೊಂದು ಬೆರೆತುಕೊಂಡಿವೆ. ಆದರೆ, ಆನಂತರ ಅವು ಪ್ರತ್ಯೇಕವಾಗಿ ಕಾಣಿಸಿಕೊಂಡದ್ದು ಉಂಟು. ಅನುಭವಕ್ಕೆ ಅನುಭಾವ ಆದಮೇಲೆ - ಅದು ಸಿದ್ಧಾಂತಗೊಂಡಾಗ ತತ್ತ್ವಪ್ರಮೇಯವಾಗಿ ಇರುವುದುಂಟು. ಪಾಶ್ಚಾತ್ಯ ದರ್ಶನ ಪರಿಕಲ್ಪನೆಯಲ್ಲಿ ಮೂರ್ತವಾಗಿ ಮತ್ತು ಅಮೂರ್ತವಾಗಿ ಚಲಿಸಿರುವುದನ್ನು ಭಾರತೀಯ ಅನುಭಾವದ ಹಿನ್ನೆಲೆಯಲ್ಲಿ ತಿಳಿಯಲಾಗಿದೆ. ಈ ತತ್ತ್ವಜ್ಞಾನದಲ್ಲಿರುವ ಪರಸ್ಪರ ಸಾಮ್ಯ - ವೈಷಮ್ಯಗಳನ್ನು ನೋಡಲಾಗಿದೆ.

ಮೂರನೆಯ ಅಧ್ಯಾಯವು ಭಾರತೀಯ ಕೆಳವರ್ಗದ ದಾರ್ಶನಿಕ ಪರಂಪರೆಯನ್ನು ಕುರಿತು ಚಿಂತಿಸಿದೆ. ಕರ್ನಾಟಕದ ದಾರ್ಶನಿಕ ಪರಂಪರೆಯ ನೆಲೆ-ಬೆಲೆಗಳನ್ನು ತಿಳಿಯುವ ಮೊದಲು ಭಾರತೀಯ ದಾರ್ಶನಿಕ ಪರಂಪರೆಯ ನೆಲೆ-ಬೆಲೆಗಳನ್ನು ತಿಳಿಯುವುದು ಅವಶ್ಯವಷ್ಟೆ. ಆ ಹಿನ್ನಲೆಯಲ್ಲಿ ಅವೈದಿಕ ಪರಂಪರೆಯ ಕೆಳವರ್ಗದ ನೆಲೆಗಳನ್ನು ಮುಖ್ಯವಾಗಿ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಈ ಅಧ್ಯಾಯದಲ್ಲಿ ಅವೈದಿಕ ದರ್ಶನಗಳಾದ ಬೌದ್ಧ, ಜೈನ, ಚಾರ್ವಾಕ, ಸಾಂಖ್ಯ ಮತ್ತು ವೈಶೇಷಿಕ ದರ್ಶನಗಳನ್ನು ತಮಿಳುನಾಡಿನ ಶೈವಸಂತರನ್ನೂ ವೈಷ್ಣವ ಅನುಭಾವಿಗಳನ್ನೂ ಅಧ್ಯಯನಕ್ಕೆ ಗುರಿಮಾಡಲಾಗಿದೆ. ಇವರ ಜತೆಗೆ ಕಬೀರ, ರಾಮದಾಸ, ತುಕಾರಾಮ, ಭೀಮಾಬಾಯಿ ಮೊದಲಾದವರ ಆನುಭಾವಿಕ ನೆಲೆಗಳನ್ನು ಕುರಿತು ಪ್ರಾಸಂಗಿಕವಾಗಿ ಅಧ್ಯಯನಕ್ಕೆ ಸ್ವೀಕರಿಸಲಾಗಿದೆ. ಈ ಪರಂಪರೆಯು ಜಾತಿ-ಹೆಣ್ಣು-ಗಂಡು ಎಂಬ ಅಂಶಗಳನ್ನು ಚಾತುರ್ವಣ್ಯ ಎಂಬ ಸಾಂಸ್ಥಿಕ ಸ್ವರೂಪವನ್ನು ಕಿತ್ತುಕೊಂಡು ಹೊರಬಂದು ಜಾತಿರಹಿತ, ಲಿಂಗರಹಿತ ಸಮಾಜದರ್ಶನವನ್ನು ಕಟ್ಟಿದ ಬಗೆಯು ಕರ್ನಾಟಕದ ಆನುಭಾವಿಕ ಸಮಾಜವಾದ ಪುನಾರೂಪಣೆಗೆ ಅವಕಾಶ ನೀಡಿದೆ.

ನಾಲ್ಕನೆಯ ಅಧ್ಯಾಯವು ಕರ್ನಾಟಕದ ಮಧ್ಯಕಾಲೀನ ದಾರ್ಶನಿಕ ಪರಂಪರೆಗಳ ಅಧ್ಯಯನ ಮಾಡಿದೆ. ಇದು ಬಹು ಮುಖ್ಯವಾದ ಅಧ್ಯಯನ. ಈ ಅಧ್ಯಯನವು ಒಂದೊಂದು ಪಂಥದ ಹುಟ್ಟು-ಬೆಳವಣಿಗೆ ಎಂಬ ಚಾರಿತ್ರಿಕ ಕ್ರಮಗಳನ್ನು ಹಿಡಿಯದೆ ಆಯಾಯ ಪಂಥಗಳ ನಿಜದ ನೆಲೆಯ ದಾರ್ಶನಿಕ ಕ್ರಮಗಳು ಯಾವುದೆಂಬುದನ್ನು ಗುರುತಿಸಲು, ತಿಳಿಯಲು ಅನುವು ಮಾಡಿಕೊಡುತ್ತದೆ. ಈ ಅಧ್ಯಾಯದಲ್ಲಿ ಅವಧೂತ ಸಂಪ್ರದಾಯ, ಸಿದ್ಧ ಸಂಪ್ರದಾಯ, ಗೋರಕ್ಷ ಸಂಪ್ರದಾಯ ಮೊದಲಾದ ಸಂಪ್ರದಾಯಗಳನ್ನು ಸೂಫಿ, ದಾಸರ ಮೊದಲಾದವರು ಪಂಥಗಳನ್ನು ಪಾರಸ್ಪರಿಕವಾದ ತೌಲನಿಕ ನೆಲೆಯಲ್ಲಿ ಇಟ್ಟು ನೋಡಲಾಗಿದೆ. ಇದರಿಂದ ಆಯಾಯ ಸಂಪ್ರದಾಯಗಳ ಮತ್ತು ಪಂಥಗಳ ಮುಖ್ಯ ತತ್ತ್ವ ವಿವಕ್ಷೆಯನ್ನು ತೋರಿಸಿದಂತಾಗಿದೆ. 'ದರ್ಶನ ಎಂಬ ಮಾತು ತತ್ತ್ವ ಸಿದ್ಧಾಂತದಲ್ಲಿ ಹುಟ್ಟಿ ಆನ್ವಯಿಕ ನೆಲೆಯಲ್ಲಿ ಸೇರಿಹೋದುದನ್ನು ನಾವು ತಿಳಿಯುತ್ತೇವೆ.

ಈ ಮಹಾಪ್ರಬಂಧದ ಜೀವಸಾರ ಇರುವುದು ಐದನೆಯ ಅಧ್ಯಾಯದಲ್ಲೇ. ಈ ಅಧ್ಯಾಯವು ಮೊದಲಿನ ನಾಲ್ಕು ಅಧ್ಯಾಯಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಅಲ್ಲಮಪ್ರಭುದೇವರ ದಾರ್ಶನಿಕ ತತ್ವಗಳನ್ನು ಅವರ ಕೃತಿಗಳ ಮೂಲಕ ಪ್ರಕಟಗೊಂಡ ಕ್ರಮಗಳಲ್ಲಿಯೇ ಹಿಡಿದು ನೋಡಲಾಗಿದೆ. ಅಲ್ಲಮಪ್ರಭು ದೇವರನ್ನು ಹರಿಹರ ತನ್ನ ರಗಳೆಯಲ್ಲೂ ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲೂ ಹಿಡಿದು ತೋರಿಸಿದರಷ್ಟೆ. ಅವರು ಕಾವ್ಯಕೃತಿಯ ಮೂಲಕ ಅಲ್ಲಮನನ್ನೂ ಅವನ ತತ್ವವನ್ನೂ ಘನವಾಗಿ ಬಿಡಿಸಿ ತೋರಿಸಿದರು. ಹರಿಹರನದು ವಾಸ್ತವವೂ ಲೌಕಿಕದ ಮಾರ್ಗವಾದರೆ; ಚಾಮರಸನದು ಅಲೌಕಿಕ, ಸಿದ್ಧಮಾರ್ಗ. ಈ ಮಾರ್ಗವು ಅಲ್ಲಮನ ಒಳವ್ಯಕ್ತಿತ್ವದ ಬೆಳಗನ್ನು ತೋರಿಸಲು ಯತ್ನಿಸುತ್ತದೆ. ಅಲ್ಲಮನ ಒಳ ಅರಿವಿನ ದಾರ್ಶನಿಕ ನೆಲೆಗಳನ್ನು ಈ ಒಂದು ದಾರಿಯ ಮೂಲಕ ಅರಿಯಲು ಯತ್ನಿಸಲಾಗಿದೆ. ಅಲ್ಲಮಪ್ರಭುವನ್ನು ಪೌರಾಣಿಕ ನೆಲೆಗಳಲ್ಲಿ ಹುಡಿಕಿನೋಡುವ ಒಂದು ಮಾರ್ಗವೂ ಉಂಟು. ಅದು ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ್ಯ, ಬಸವಪುರಾಣ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ ಇಂಥ ಕೃತಿಗಳು ಅಲ್ಲಮನ ವ್ಯಕ್ತಿತ್ವ ಮತ್ತು ಅವನ ದಾರ್ಶನಿಕ ನೆಲೆ ಹಿಡಿದಿರುವ ಮಾರ್ಗಗಳನ್ನು ತೋರಿಸುತ್ತವೆ. ಇವೆರಡು ಹಾದಿಗಳಲ್ಲದೆ, ಅಲ್ಲಮನೇ ತನ್ನ ವಚನಗಳ ಮೂಲಕ ಮೂರ್ತೀಕರಿಸಿರುವ ದಾರ್ಶನಿಕ ಕ್ರಮಗಳುಂಟು. ಆ ಕ್ರಮಗಳನ್ನು ಇಲ್ಲಿ ವ್ಯಾಪಕವಾಗಿ ವ್ಯಾಖ್ಯಾನಿಸಿ, ವಿವರಿಸಿಕೊಂಡು ನೋಡಲಾಗಿದೆ.

ದಾರ್ಶನಿಕ ಮೀಮಾಂಸೆ ಎಂಬ ಮಾತಿನಲ್ಲಿ ಮೂರು ಬಗೆಯ ಕೃತಿ ಹಾದಿಗಳಲ್ಲಿ ವ್ಯಾಖ್ಯಾನಿಸಿಕೊಳ್ಳಲಾಗಿದೆ. ಅಲ್ಲಮನದು ಜೀವಪರವಾದ ಹಾದಿ. ಅದು ಜಾತಿನಿರಾಕರಣೆ, ವರ್ಣ ನಿರಾಕರಣೆ, ಲಿಂಗಬೇಧ ನಿರಾಕರಣೆಯ ಮೂಲಕ ಸಾಮಾಜೀಕರಣದ ಸಿದ್ಧಾಂತವನ್ನು ಮಂಡಿಸುತ್ತದೆ. ಲೌಕಿಕವು ನಮಗೆ ಬೇಕು. ಆದರೆ, ಅದು ತಮ್ಮ ಒಳಬೆಳ್ಳಾನ ತಿಳಿವಿಗೆ ಎರವಾಗಕೂಡದು. ಹಾಗೆ ಎರವಾಗದೆ ಬದುಕಬೇಕಾದ ಮಹೋನ್ನತಿ ಹಾದಿಯನ್ನು ತೋರಿಸುತ್ತಾನೆ. ಭಕ್ತಿ ಎಂಬುದಕ್ಕೆ ಹೊಸ ವ್ಯಾಖ್ಯೆ ನೀಡುತ್ತಾನೆ. ಜಾತಿ-ಲಿಂಗ-ವರ್ಣಬೇಧ ನೀತಿಯನ್ನು ಹಿಂದೂ ಹಾಗೂ ಮುಂದೂ ಚೌಕಟ್ಟಿನಲ್ಲಿಟ್ಟು ವ್ಯಾಖ್ಯಾನಿಸುತ್ತಾನೆ. ಕಾವ್ಯಕೃತಿಗಳು, ಪುರಾಣ ಕೃತಿಗಳು, ವಚನಗಳು - ಈ ಮೂರು ಆಕರಗಳು ತತ್ವೀಕರಿಸುವ ಕ್ರಮಗಳು ಯಾವುದೆಂಬುದನ್ನು ತಿಳಿಯುವ ಹಂಬಲ ತತ್ವೀಕರಿಸುವ ಕ್ರಮಗಳು ಯಾವುದೆಂಬುದನ್ನು ತಿಳಿಯುವ ಹಂಬಲ ಈ ಅಧ್ಯಾಯಕ್ಕೆ

ಇದೆ. ಬಸವಣ್ಣ ಸಾಮಾಜೀಕರಣದ ನೆಲೆಯನ್ನು ಕುರಿತಿದ್ದರೆ ಸಿದ್ಧರಾಮ ಕಾಯಕ ತತ್ವದ ಪ್ರಭೇದಗಳು ಅವುಗಳು ಸಮಾಜದ ನೆಲೆಯಲ್ಲಿ ಐಕ್ಯಗೊಳ್ಳುವ ಬಗೆಗಳನ್ನು ಕುರಿತಿದೆ. ಅಕ್ಕಮಹಾದೇವಿ ಜೀವ-ದೇವ ಭಾಗಗಳನ್ನು 'ಶಿವತ್ವ'ದ ಮೂಲಕ ನೋಡುವ ಹಾದಿಯುಂಟು. ಈ ಹಾದಿಗಳ ಸಮನ್ವಯವನ್ನು ಅಲ್ಲಮನು ತನ್ನ ವಚನಗಳ ಮೂಲಕ ಮಾಡಿತೋರಿಸುತ್ತಾನೆ. ಸಮಾಜೀಕರಣ, ಕಾಯಕ ಸಮಾನತೆ, ಶಿವತ್ವದ ಸಾಧಕ ನೆಲೆಗಳು ಬೇಕೆಂಬುದರ ಕಡೆಗೆ ಅಲ್ಲಮನು ಬೆಳಗನ್ನು ಹಿಡಿದು ತೋರಿಸುತ್ತಿದ್ದಾನೆ. ಈ ಮಹಾಪ್ರಬಂಧವು ಆ ಬೆಳಗಿನ ಒಂದೊಂದೇ ಅಂಶಗಳನ್ನು ಕಾವ್ಯಕೃತಿಗಳ ಅನುಸಂಧಾನದ ಮೂಲಕ, ಪುರಾಣಕೃತಿಗಳ ಮೂಲಕ ವಚನಗಳ ಮೂಲಕ ಅನುಸಂಧಾನಿಸಿ ತೋರಿಸಿದೆ.

ಆರನೆಯ ಅಧ್ಯಾಯವಾದ ಸಮಾರೋಪದಲ್ಲಿ ಈ ಅಧ್ಯಯನದ ಫಲಿತಗಳನ್ನು ಅಧ್ಯಯನದ ಔಪಯೋಗಿಕ ನೆಲೆಗಳನ್ನು ಕುರಿತು ಮಾತುಗಳಿವೆ. ಈ ಅಧ್ಯಯನವು ತತ್ವಶಾಸ್ತ್ರೀಯ ನೆಲೆಯಾಗದೆ, ಸಮಾಜಶಾಸ್ತ್ರೀಯ ಮತ್ತು ವ್ಯಕ್ತಿವಿಕಸನ ಮಾದರಿಗಳನ್ನೂ ಜೋಡು ಹೆಣಿಗೆಯಾಗಿ ಹಿಡಿದಿದೆ. ಇದು ಈ ಮಹಾಪ್ರಬಂಧದ ವಿಶೇಷಾಂಶವೂ ಆಗಿದೆ.

❖❖

# ೨

# ದರ್ಶನ ಪರಿಕಲ್ಪನೆ

## ಅ. ಪಾಶ್ಚಾತ್ಯ ವ್ಯಾಖ್ಯಾನಗಳು

ಅಭ್ಯಾಸದ ಅನುಕೂಲತೆಗಾಗಿ ಬೇರೆ ಬೇರೆ ಶಾಸ್ತ್ರಗಳನ್ನು ವರ್ಗೀಕರಿಸಿಕೊಂಡು ದರ್ಶನ ಪರಿಕಲ್ಪನೆಯನ್ನು ಅಧ್ಯಯನ ಮಾಡಬೇಕಾಗುತ್ತದೆ. ಜೀವ, ಜಗತ್ತು, ಈಶ್ವರ ಇವು ಮೂರರ ಬಗ್ಗೆ ಚಿಂತಿಸುವುದೇ ದರ್ಶನಶಾಸ್ತ್ರದ ಅಂತಿಮ ಉದ್ದೇಶ. ಒಬ್ಬೊಬ್ಬ ದರ್ಶನಕಾರರು ತಮ್ಮದೇ ಆದ ರೀತಿಯಲ್ಲಿ ಚರ್ಚಿಸಿ ದಾರಿಯನ್ನು ಕಂಡುಕೊಂಡಾಗ ಆಯಾ ರೀತಿಯ ದರ್ಶನೋದಯವಾದವು. ವ್ಯಾವಹಾರಿಕ ಪ್ರಪಂಚದಲ್ಲಿ ಹೆಚ್ಚು ರೀತಿಯ ಅನುಭವವುಳ್ಳ ಮನುಷ್ಯ ಅನುಭವಿ ಅನ್ನಿಸಿಕೊಂಡರೆ; ಅತೀಂದ್ರಿಯ ವಿಷಯಾರ್ಥದಲ್ಲಿ ಅನುಭಾವಿ ಅನಿಸಿಕೊಳ್ಳುತ್ತಾನೆ. ಇದು ಅಂತರಂಗದಲ್ಲಿ ಅರಿತು ಬಹಿರಂಗದಲ್ಲಿ ನಡೆಯುವ ಮಾರ್ಗೋಪಾಯದ ಸಂಗಮಸುಖ. ಅದನ್ನು ಅನುಭವಿಸಿದವನೇ ತತ್ತ್ವಚಿಂತಕ, ಅನುಭಾವಿ, ದಾರ್ಶನಿಕ.

ಗ್ರೀಕ್ ತತ್ವಶಾಸ್ತ್ರವೆಂದರೇನೇ ಪಾಶ್ಚಾತ್ಯ ತತ್ವಶಾಸ್ತ್ರ. ಪ್ರಾರಂಭದಲ್ಲಿ ಬಾಹ್ಯ ಪ್ರಪಂಚವೇ ಅದರ ಚರಮಗುರಿಯಾಗಿತ್ತು. ತದನಂತರ ಜೀವನದ ಬಗ್ಗೆ ಅದಾದನಂತರ ಪ್ರಪಂಚಕ್ಕೂ, ಜೀವಕ್ಕೂ ಏನು ಸಂಬಂಧ ಅನ್ನುವ ಚರ್ಚೆ ಬೆಳೆಯಿತು. ಜೀವಿಯ ಮುಖ್ಯ ಉದ್ದೇಶವೇನು? ಅವನ ಸರ್ವೋತ್ತಮವಾದ ವಸ್ತು ಯಾವುದು? ಇದಕ್ಕೆ ತತ್ವಶಾಸ್ತ್ರವು ಮಾತ್ರ ಉತ್ತರವನ್ನು ಕೊಡಬಲ್ಲುದು. ಕೊನೆಯ ವಸ್ತು ದೇವರಾದರೆ ಅದನ್ನು ಸೇರಲಿಕ್ಕೆ ಯಾವ ಪ್ರಯತ್ನಬೇಕು? ಅನ್ನುವ ಗ್ರೀಕ್ ಚಿಂತನೆ ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. ಗ್ರೀಕ್‌ರಲ್ಲಿ ದಾರ್ಶನಿಕ ಚಿಂತನೆ ನಡೆದಾಗ ಪೌರ್ವಾತ್ಯದಲ್ಲಿಯು ಅದೇ ಕಾಲದಲ್ಲಿ ದಾರ್ಶನಿಕ ಚಿಂತನೆ ನಡೆಯುತ್ತಿತ್ತು. ಆದರೆ

ಅವುಗಳ ಸಮೀಕರಣ ನಂತರದಲ್ಲಿ ಆಯಿತು. ಕೆಲವು ಎರಡು ಕಡೆ ದಾರ್ಶನಿಕ ಪರಿಕಲ್ಪನೆಗಳಲ್ಲಿ ಸಾಮರಸ್ಯ ವಿರುವುದನ್ನು ನಾವು ಮರೆಯುವಂತಿಲ್ಲ.

| | |
|---|---|
| ಪ್ರಾಚೀನ ತತ್ವಶಾಸ್ತ್ರ (Ancient Philosophy) | ಕ್ರಿ.ಪೂ. ೭ ರಿಂದ ಕ್ರಿ.ಶ. ೨ |
| ಮಧ್ಯಕಾಲೀನ ತತ್ವಶಾಸ್ತ್ರ (Medieval Philosophy) | ಕ್ರಿ.ಶ. ೨ ರಿಂದ ಕ್ರಿ.ಶ. ೧೬ |
| ಆಧುನಿಕ ತತ್ವಶಾಸ್ತ್ರ (Modern Philosophy) | ಕ್ರಿ.ಶ. ೧೬ ರಿಂದ ಕ್ರಿ.ಶ. ೧೯ |
| ಸಮಕಾಲೀನ ತತ್ವಶಾಸ್ತ್ರ (Contemporary Philosophy) | ಕ್ರಿ.ಶ. ೧೯ ರಿಂದ |

ಪಾಶ್ಚಾತ್ಯ ತತ್ವಶಾಸ್ತ್ರವೆಂದರೆ ಪುರಾತನ ಗ್ರೀಕ್ ತತ್ವಶಾಸ್ತ್ರವಾಗಿದೆ. ಗ್ರೀಸ್ ಇದು ತತ್ವಶಾಸ್ತ್ರದ ಕೇಂದ್ರಬಿಂದು. ವಿಶ್ವದ ಎಲ್ಲ ಬಗೆಯ ರಹಸ್ಯಗಳನ್ನು ಅರಿಯುವತ್ತ ಅದರ ಮಾರ್ಗ. ಮಧ್ಯಕಾಲೀನ ತತ್ವಶಾಸ್ತ್ರದಲ್ಲಿ ಹೆಚ್ಚಾಗಿ ಧರ್ಮಶಾಸ್ತ್ರವೇ ಕೂಡಿದೆ. ಅದೇ ಕಾಲಕ್ಕೆ ಯಹೂದಿ, ಮಹಮ್ಮದೀಯ, ಕ್ರೈಸ್ತ ಧರ್ಮ, ಹೆಚ್ಚಾಗಿದೆ.ಕ್ರೈಸ್ತ ಧರ್ಮದಡಿಯಲ್ಲಿ ತತ್ವಶಾಸ್ತ್ರವು ನಲುಗಿ ಹೋಗಿ ತನ್ನ ಸ್ವಾತಂತ್ರತೆಯನ್ನು ಕಳೆದುಕೊಂಡಿದೆ. ಆಧುನಿಕ ತತ್ವಶಾಸ್ತ್ರವು ಜೀವಿಗಳ ಬಗ್ಗೆ ಇರುವ ರಹಸ್ಯವನ್ನು ಅರಿಯುವದರತ್ತ ಸಾಗಿದೆ. ಸಮಕಾಲೀನದಲ್ಲಿ ವಿಮರ್ಶವಾದವನ್ನು ನಾವು ಕಾಣುತ್ತೇವೆ. ಸತ್ಯವನ್ನು ಹೇಗೆ ಪಡೆಯುವುದು. ಅದರ ಅರ್ಥವೇನು. ಸತ್ಯಾನ್ವೇಷಣೆಯನ್ನು ಮಾಡಲು ಬುದ್ಧಿ ಸಮರ್ಥವಾಗಿದೆಯೋ ಇಲ್ಲವೊ ಇಂತಹ ಚಿಂತನೆಗಳು ಇಲ್ಲಿ ಅವಶ್ಯ. ಪುರುಷನಂತೆ ಪ್ರಕೃತಿಯು ಸೃಷ್ಟಿಯ ಉಗಮದ ಫಲವಾದರೆ ಅದು ದ್ವೈತವಾಗುವುದು. ಪುರಾತನ ಗ್ರೀಕರಲ್ಲಿ ಸುಮಾರಾಗಿ ನಾವು ಇದನ್ನು ಕಾಣುತ್ತೇವೆ. ೧. ಜೀನೋ ಸ್ಥಾಪಿಸಿದ ವಿರಕ್ತಮತ (Stocism). ೨. ಎಫಿಕ್ ಯೂರಿಯನ್‌ರ ಸುಕಾಂಕ್ಷಿಮತ ೩. ಫಿರೋನಿನ ಸಂದೇಹವಾದ (Scpticism) ಇಲ್ಲಿ ವಿರಕ್ತ ಜೀನೊನಿಗೂ ಹಾಗೂ ಎಫಿಕ್ಯೂರಸ್ ಸುಖ ಮೀಮಾಂಸಕನಿಗೂ ವ್ಯತ್ಯಾಸವೆಂದರೆ, ಜೀನೊನಂತೆ ಸೌಜನ್ಯ ಸತ್‌ಶೀಲವಾದ ಭರಿತ ಜೀವನವು ಮಾನವನ ಶ್ರೇಯಸ್ಸು. ಎಫಿಕ್ಯೂರಸನ ಸೌಖ್ಯಜೀವನವೇ ಪ್ರಯತ್ನದ ಶ್ರೇಯಸ್ಸು. ಇಬ್ಬರು ತತ್ವಶಾಸ್ತ್ರಕ್ಕೆ ಗೌರವವನ್ನು ಕೊಡುತ್ತಾರೆ. ತತ್ವಜ್ಞಾನದಿಂದ ಮೂಢತರ ಭಕ್ತಿ ಭಾವಗಳನ್ನು ಕಿತ್ತೆಸೆದು ಅಜ್ಞಾನ ಅಂಧಕಾರಗಳನ್ನು ಬಿಡಿಸಿ ಸುಖಕ್ಕೆ ದಾರಿ ಮಾಡಿಕೊಡುವದು. ಇದು ಎಪಿಕ್ ಕ್ಯೂರಸ್‌ನ ವ್ಯಾಖ್ಯೆ. ಆದರೆ, ಈ ಬ್ರಹ್ಮಾಂಡದಲ್ಲಿ ತಾನು ಒಂದು ವಸ್ತುವಾಗುವ ಈ ಮಾನವನಿಗೆ ತನ್ನ ಕರ್ತವ್ಯವೇನು ಎಂಬುದು ವ್ಯಕ್ತಪಡಿಸುವುದೇ ಜೀನೊಮತ. 'ವಿರಕ್ತ' ಎಂಬ ಮಾತನ್ನು ನಾವು ವೀರಶೈವದಲ್ಲಿ ಕಾಣುತ್ತೇವೆ. ಅದು ಜಂಗಮ, ವಿರಕ್ತ, ಸದಾಶಕ್ತ, ಧರ್ಮದ ಪರಮೋಚ್ಚ ಶಬ್ದ ಸ್ಥಾನ. ಇದರ ಉತ್ಪತ್ತಿ ಪುರಾತನ ಗ್ರೀಕರಲ್ಲಿಯೂ ಸಿಗುತ್ತದೆ. ಈ ರೀತಿಯ ವಿರಕ್ತ ವ್ಯಕ್ತಿಯ ಉಪಯೋಗ ಧರ್ಮಕ್ಕೆ ಅವಶ್ಯವೆಂಬುದನ್ನು ಪೌರ್ವಾತ್ಯದಂತೆ ಪಾಶ್ಚಿಮಾತ್ಯದಲ್ಲಿಯೂ ಕಂಡುಬರುವದು. ಪುರಾತನ ಗ್ರೀಕ್‌ರಲ್ಲಿ ಮೊದಲು ಸೊಫಿಸ್ಟರು ತದನಂತರ ಸಾಕ್ರೇಟಿಸ್ ನಿಂದ ಪ್ರಾರಂಭವಾಯಿತು. 'ಥಾಲಿಸ್' ಅನ್ನುವವನು ಪಾಶ್ಚಾತ್ಯ ತಾತ್ವಿಕದ ಜನಕನೆಂದು ಕರೆಯುತ್ತಾರೆ. ಈ ಚಿಂತನೆಗೆ 'ಅಯಾನಿಕ್' ಅಥವಾ 'ಮಿಲಿಟಸ್' ಚಿಂತನೆ ಎಂದು ಕರೆಯುತ್ತಾರೆ. ಇವನ ನಂತರದಲ್ಲಿ 'ಅನಾಕ್ಸಿಮಾಂಡರ್' ಮತ್ತು 'ಅನಾಕ್ಸಿ ಮಿನಸ್'. ಇಲ್ಲಿ ಥಾಲಿಸ್‌ನ ವೈಶಿಷ್ಟ್ಯವೇನೆಂದರೆ ತನ್ನ ಚಿಂತನೆಗೆ ಯಾವುದೇ ಕಟ್ಟುಕತೆಗಳನ್ನು ಅವಲಂಬಿಸಿದೆ, ಯಾವುದೇ, ಧರ್ಮಶಾಸ್ತ್ರದ ಅಡಿಯಾಳಗದೇ ವೈಜ್ಞಾನಿಕ ಮನೋದೃಷ್ಟಿಯಿಂದ ತನ್ನದೇ ಆದ ರೀತಿಯಲ್ಲಿ ಚಿಂತನೆ ಮಾಡಿದ. ಆದುದರಿಂದ ಈತನನ್ನು ಪಾಶ್ಚಾತ್ಯ

ವಿಶ್ವದ ವೈಜ್ಞಾನಿಕ ಮನೋಭಾವವುಳ್ಳ ಮೊದಲ ತಾತ್ವಿಕರೆಂದು ಕರೆಯುತ್ತಾರೆ. ಇವನ ಪ್ರಕಾರ ಪ್ರಪಂಚವು ಚೇತನದಿಂದ ಕೂಡಿದೆ ಅದು ಜಡವಾಗಿಲ್ಲ ಕ್ರಿಯಾತ್ಮಕವಾಗಿದೆ. ಇದಕ್ಕೆ ಸರ್ವಚೇತನವಾದ ಎಂದು ಕರೆಯಲಾಗಿದೆ. ಈ ಜಗತ್ತಿಗೆ ಒಂದು ಮೂಲತತ್ವವಿದೆ. ಅದೇ ಜಗತ್ತಿಗ ಕಾರಣ. ಆ ಮೂಲ ಭೌತಿಕವಾದುದು. ಅದು ನೀರು, ಈ ಜಗತ್ತು ನೀರಿನಿಂದ ಹೊರಬಂದಿದೆ. ನೀರಲ್ಲಿ ನಿಂತಿದೆ. ವಿಶ್ವದ ಪ್ರತಿ ವಸ್ತುಗಳಲ್ಲಿಯೂ ಚೇತನವಾದ ನೀರಿನ ಅಂಶವಿದೆ. ಮನುಷ್ಯನಲ್ಲಾಗಲೀ ಯಾವುದೇ ಜೀವಿಯಲ್ಲಾಗಲೀ ಇದೇ ಪ್ರಮುಖವಾಗಿರುವದರಿಂದ ಇದೇ ವಿಶ್ವದ ಮೂಲ ಉತ್ಪತ್ತಿಗೆ ಕಾರಣ.

'ಅನಾಕ್ಸಿ ಮಾಂಡರು' ಇವನು ಈ ಜಗತ್ತಿಗೆ ಮೂಲವಾದುದು ಭೌತಿಕವಾದ ವಸ್ತುವಲ್ಲ. ಯಾಕೆಂದರೆ ಆ ವಸ್ತು ಭೌತಿಕವಾಗಿದ್ದರೆ, ಅದು ಹೇಗೆ ಉತ್ಪತ್ತಿಯಾಯಿತು. ಮತ್ತೆ ಇದು ಯಾವುದರಿಂದ ಆಯಿತು ಹೀಗೆಯೇ ಹಿಂದಕ್ಕೆ ಸಾಗಬೇಕಾಗುತ್ತದೆ. ಆದ್ದರಿಂದ ಇದಕ್ಕೆ ಮೂಲಭೂತವಾದ ಒಂದು ತತ್ವ ಇರಬೇಕಾಗುವುದು ಅನಿವಾರ್ಯ. ಅವು ನಿರಾಕಾರವು ನಿರಂತರವೂ ಆದದ್ದು. ಎಲ್ಲದರ ಹುಟ್ಟು ಅದರಿಂದಲೇ, ಅದಕ್ಕೆ "ಅಪಯಿರಾನ್" ಅನ್ನುವನು. ಅದು ವಿಶ್ವದ ಮೂಲಭೂತ ಪರಸ್ಪರ ವಿರುದ್ಧವಾದ ಶೀತ - ಉಷ್ಣ, ಒಣ - ತೇವ ಮುಂತಾದ ಗುಣಗಳನ್ನು ಹೊಂದಿದೆ. ಇದರಿಂದಲೇ ವಿಶ್ವ ಉತ್ಪತ್ತಿ.

'ಅನಾಕ್ಸಿಮೀನಸ್' ಈ ವಿಶ್ವಕ್ಕೆ ಮೂಲಭೂತವಾದದ್ದು ವಾಯು. ಅದರಿಂದಲೇ ಎಲ್ಲದರ ಉತ್ಪತ್ತಿ ಇಲ್ಲಿ ಸಕಲ ವಸ್ತುಗಳೆಲ್ಲಾ ನಿರಸನ ಹಾಗೂ ಘನೀಭವನದ ಮುಖಾಂತರ ಸೃಷ್ಟಿಯಾದವುಗಳು. ಘನೀಭವಿಸಿದಾಗ ಮೋಡ ನೀರು ಉತ್ಪತ್ತಿಯಾಗುವವು. ಅದರಂತೆ ಕಲ್ಲು, ಮರ, ಮನುಷ್ಯ, ಜೀವಿ ಇತ್ಯಾದಿಗಳಾಗುವವು. ವಾಯು ಸರ್ವ ಪ್ರಾಣಿಗಳಿಗೂ, ಸಸ್ಯಗಳಿಗೂ, ಮೂಲಾಧಾರವಾಗಿರುವದರಿಂದ ಅದರಿಂದಲೇ ಇಂದ್ರಿಯಗಳ ಉತ್ಪತ್ತಿ ಅನ್ನುವ ಭಾವನೆ ಅವನದು.

ಇಲಿಯಾಟಿಕ್ ಚಿಂತನೆಯಲ್ಲಿ[1] ತತ್ವಶಾಸ್ತ್ರವೆಂದರೆ ಕ್ಸೇನೋಫೆನಸ್ ತತ್ವಶಾಸ್ತ್ರವೇ ಬೇರೆ ಮತಧರ್ಮವೇ ಎಂದು ಮೊದಲಿಗೆ ಅವನು ವಿಂಗಡಿಸಿದ. ತತ್ವಶಾಸ್ತ್ರವು ತರ್ಕ ಬುದ್ಧಿಗೆ ಅದರ ಒರೆಗಲ್ಲಿಗೆ ಹಚ್ಚಿ ತೆಗೆದ ಬೌದ್ಧಿಕ ತಿರ್ಮಾನಗಳಾದರೇ ಮತಧರ್ಮವು ನಂಬಿಕೆಗೆ ಸಂಬಂಧಿಸದ್ದಾಗಿದೆ. ಮತಧರ್ಮದಲ್ಲಿ ತಾರ್ಕಿಕತೆಗೆ ಮಹತ್ವವಿಲ್ಲ. ಕೇವಲ ಶ್ರದ್ಧೆಯಿಂದ ಮಾತ್ರ ನೋಡಬೇಕಾಗುತ್ತದೆ. ಆದರೆ ತತ್ವಶಾಸ್ತ್ರ ಹರಿತವಾದ ಬುದ್ಧಿ ಶೋಧಿಸಿ ತೆಗೆದ ಹೂರಣವಷ್ಟೆ.

**ಪಾರ್ಮಿನೈಡಿಸ್**

ಇವನ ಪ್ರಕಾರ ಸತ್ಯದ ಕಲ್ಪನೆ ಐಕ್ಯ ನಿಯಮವನ್ನು ಹೇಳುತ್ತದೆ. ಒಂದು ವಸ್ತು ಸದಾಕಾಲ ಒಂದೇವಸ್ತು. ಅದು ಅವಸ್ತುವಾಗಲಿಕ್ಕೆ ಸಾಧ್ಯವಿಲ್ಲ. (IF is A, It is a, It cannot be not a)[2] ಸತ್ಯ ಯಾವ ವಿಕಾರವನ್ನು, ಬದಲಾವಣೆಯನ್ನು ಹೊಂದುವದಿಲ್ಲ. ಒಂದೇ ವಸ್ತು ಏಕಕಾಲದಲ್ಲಿ ಇರುವುದು. ಇಲ್ಲದಿರುವುದು ಸಾಧ್ಯವಿಲ್ಲ. (A Thing cannot be and be at the some time, if it is A, it cannot be not A, if it is not A, it cannot be A) ಅಂತಿಮ ಸತ್ಯದ ಇರುವಿಕೆ, ಇಲ್ಲದಿರುವಿಕೆ ಎರಡು ಸಾಧ್ಯವಿಲ್ಲ. ಅವು ಎಂದೆಂದಿಗೂ ಇರುತ್ತವೆ. ಬುದ್ಧಿ ಹಾಗೂ ಇಂದ್ರಿಯಗಳ ಮೇಲೆ ಆಳೆಯುವಾಗ ಇವೆರಡರ ನಡುವೆ ಭೇದ ಇದೆ. ಇಂದ್ರೀಯಗಳಿಗೆ

ಸಿಗದೇ ಮುಟ್ಟದೇ ಇರುವದು, ಬುದ್ಧಿಗೆ ಮಾತ್ರ ದೊರಕಿರುವ ಆ ಅಂತಿಮವೇ ಚರಮಸತ್ಯ. ಒಂದು ಹಂತದಲ್ಲಿ ಆ ಚರಮಸತ್ಯ ಬುದ್ಧಿಗೂ ಮೀರಿದುದು ಅಂತಿಮ ಸತ್ಯ ಅದು 'ಸತ್' ತತ್ವ ಮೂಲರೀತಿಯದು, ಕಣ್ಣಿಗೆ ಕಾಣುವದು ಅಸತ್, ಕಾಣದಿರುವದು ಸತ್ ಆಗಿದೆ. ಫಾರ್ಮೆನೈಡಿಸ್‌ನ ತಾತ್ವಿಕ ಚಿಂತನೆ ಹಾಗೂ ಶಾಂಕರರಚಿಂತನೆ ಒಂದನ್ನೊಂದು ಹೋಲುತ್ತವೆ. ಅಂತಿಮ ಸತ್‌ದ ಬಗ್ಗೆ ಫಾರ್ಮಿನೈಡಿಸ್‌ನ ವಿಚಾರವು ಅದ್ವೈತ್ ದರ್ಶನದ ಈಶ್ವರ ತತ್ವವು ಒಂದೇ ಆಗಿದೆ. ೧. ಸತ್ ತತ್ವ ಅಚಲ, ಅನಂತ, ಅಖಂಡ, ಆದಿ ಅಂತ್ಯ ರಹಿತ, ನಿರ್ವಿಕಾರ, ನಿರ್ವಿಶೇಷ, ೨. ಕಣ್ಣಿಗೆ ಕಾಣುವ ಭೇದ ಕೇವಲ ಅದು ತೋರಿಕೆಯದು ೩. ಜಗತ್ತಿನ ಸತ್ಯತೆಯನ್ನು ಅಲ್ಲಗಳೆಯುವನು, ಯಾಕೆಂದರೆ ಎರಡು ಚಿಂತನೆ ಪ್ರಕಾರ ಇಂದ್ರಿಯಗಮ್ಯ, ಬುದ್ಧಿಗಮ್ಯ, ಆ ಸತ್ಯದ ಬಗ್ಗೆ ಮಾತ್ರ ಫಾರ್ಮಿನೈಡಿಸ್ ಹೇಳುತ್ತಾನೆ. ಜೀವ ಜಗತ್ತುಗಳ ಬಗ್ಗೆ ವಿಸ್ತೃತವಾಗಿ ಹೇಳಿಲ್ಲ. ಅವನ ಪ್ರಕಾರ ಆ ವಸ್ತುವೊಂದೇ ಸತ್ಯ. ಜೀವ - ಜಗತ್ತು - ಈಶ್ವರಗಳಲ್ಲಿರುವದು ಒಂದೇ ಒಂದು ಸತ್ಯ, ಉಳಿದೆರಡು ಕೇವಲ - ತೋರಿಕೆಗಳು ಮಾತ್ರ. ಹುಟ್ಟು ಸಾವು ನಿರಂತರ ಚಕ್ರದಿಂದ ಹೊರಬರುವುದು. ಮೋಕ್ಷ ಅದಕ್ಕೆ ಜ್ಞಾನದ ಆವಶ್ಯಕತೆ ಇದೆ ಎಂದು ಅದ್ವೈತ ಹೇಳಿದೆ. ಜೀವನದ ಗುರಿಯ ಬಗ್ಗೆ ಫಾರ್ಮಿನೈಡಿಸ್‌ನಲ್ಲಿ ಏನು ಇಲ್ಲ. ಫಾರ್ಮಿನೈಡಿಸ್ ಚಿಂತನೆ ಕೇವಲ ದರ್ಶನ ಅಷ್ಟೇ. ಆದರೆ ಅದ್ವೈತ ದರ್ಶನ ಧರ್ಮವಾಗಿದೆ.

**ಹೆರಾಕ್ಲೀಟಸ್**

ಜಗತ್ತಿನಲ್ಲಿ ಶಾಶ್ವತವಾದದು, ಸತ್ಯವಾದದು, ನಿಶ್ಚಲವಾದುದು, ಯಾವುದು ಇಲ್ಲದೆ ಇಲ್ಲ, ಎಲ್ಲವೂ ಕ್ಷಣಿಕ, ಕ್ಷಣಕ್ಷಣಕ್ಕೆ ಬದಲಾವಣೆ ಹೊಂದುವದು, ಬದಲಾವಣೆಯ ಅಂತೀಮ ರೂಪವೇ ಚರಮ ಸತ್ಯ. ಉದಾಹರಣೆಗೆ 'ಹರಿಯುತ್ತಿರುವ ನದಿಯಲ್ಲಿ ಎರಡು ಬಾರಿ ಕಾಲ ನೀಡಲಾಗುವದಿಲ್ಲ' ಅಂದರೆ ಮೊದಲನೆ ಬಾರಿ ಕಾಲಿಟ್ಟು ತೆಗೆದು ಎರಡನೇ ಸಲ ಕಾಲನ್ನಿಡುವಾಗ ಅಲ್ಲಿ ಬೇರೆ ನೀರೆ ಬಂದಿರುವದು ಅಂದರೆ ಮೊದಲನೆ ನೀರು ಇರುವದಿಲ್ಲ. ಪ್ರತಿದಿನವೂ ಹೊಸದಿನ, ಸ್ಥಿರವೆಂಬುದಾವುದು ಇಲ್ಲ. ಪ್ರತಿಯೊಂದು ವಸ್ತು ವಿರುದ್ಧವುಗಳ ಸಂಗಮ, ದ್ವಂದ್ವಗಳ ಸಂಯೋಗ, ಹಿತ - ಅಹಿತ, ಜನನ - ಮರಣ, ಯೌವ್ವನ - ವಾರ್ಧಕ್ಯ. ಈ ದ್ವಂದ್ವಗಳು ಎಲ್ಲಿ ಸಮತೋಲನರೀತಿಯಲ್ಲಿ ಕಾಣುತ್ತೇವೆಯೋ ಅಲ್ಲಿ ಶಾಂತಿ ಸಮಾಧಾನವಿರುತ್ತದೆ. ಯಾವಾಗಲೂ ಮನುಷ್ಯನ ಜೀವನದಲ್ಲಿ ಬದಲಾವಣೆಗಳನ್ನು ಕಾಣುತ್ತೇವೆ. ಹುಟ್ಟಿನಿಂದ ಹಿಡಿದು ಸಾಯುವವರೆಗೆ ನಿರಂತರ ಬದಲಾವಣೆಯೇ ಕಡೆಯ ಸತ್ಯ. ಬೆಂಕಿ ಯಾವಾಗಲೂ ಒಂದೇ ತೆರನಾಗಿ ಉರಿಯುವುದಿಲ್ಲ. ಕ್ಷಣ ಕ್ಷಣಕ್ಕೆ ಬದಲಾದ ರೂಪವನ್ನೇ ಪಡೆಯುವದು. ಇಲ್ಲಿ ವಿಶ್ವದ ಮೂಲತತ್ವ ಅಗ್ನಿಯೇ. ಈ ಅಗ್ನಿಯ ರೂಪಗಳೇ ಚರಾಚರ ವಸ್ತುಗಳು ಎಲ್ಲಿ ಅಗ್ನಿಯ ಅಂಶ ಹೆಚ್ಚಾಗಿರುತ್ತದೆಯೋ ಅಲ್ಲಿ ಬುದ್ಧಿ, ವಿಮರ್ಶಾಶಕ್ತಿ ಹೆಚ್ಚಾಗಿರುತ್ತದೆ. ಪ್ರಾಣಿಗಳಲ್ಲಿ ಅಗ್ನಿಶಕ್ತಿ ಕಡಿಮೆ ಅಲ್ಲಿ ವಿಮರ್ಶಾಶಕ್ತಿಯ ಕೊರತೆಯಿದೆ. ಮನುಷ್ಯನಲ್ಲಿ ಅಗ್ನಿಶಕ್ತಿ ಹೆಚ್ಚು ಆದ್ದರಿಂದ ವಿಚಾರಶಕ್ತಿ ಹೆಚ್ಚಾಗಿದೆ. ಮನುಷ್ಯನಲ್ಲಿ ಅಗ್ನಿಶಕ್ತಿ ಕಡೆದುಹೋದರೆ ಆತ ಮಂದಮತಿ. ಆತ್ಮಕ್ಕೆ ಚೈತನ್ಯ ಕೊಡುವದು ಅಗ್ನಿ. ಕಡಿಮೆಯಾದಲ್ಲಿ ಆತ್ಮಶಕ್ತಿ ಮಾಯವಾದಂತೆ ಪ್ರಕೃತಿ ಅನುಭವಿಸುವ ಕ್ರಮಬದ್ಧತೆಯೇ ಧರ್ಮ. ಮೂಲಶಕ್ತಿ ಆದಿ ಅಂತ್ಯ ರಹಿತವಾದದ್ದು, ಅದು ಸ್ವಯಂಕೃತ ಮತ್ತು ಸ್ವಯಂಲಯ ಅದನ್ನು ಅರಿತುಕೊಳ್ಳುವುದೇ ನಿಜ ವಿವೇಕ. ಇದಕ್ಕೆ ಪಾಶ್ಚಾತ್ಯರು ದೇವರು ಎಂದು

ಕರೆದರು. ಈ ಹೆರಾಕ್ರಟಿಸ್ ಚಿಂತನೆಯಲ್ಲಿ ತರ್ಕಕ್ಕೆ ಪ್ರಾಧಾನ್ಯತೆಯಿಲ್ಲ. ಅನುಭಾವವೇ ಈ ಚಿಂತನೆಗೆ ಆಧಾರ. ಈ ಚಿಂತನೆ ಹಾಗೂ ಬೌದ್ಧರ್ಶನ ಬಹುತೇಕ ಒಂದನ್ನೊಂದು ಹೋಲುತ್ತವೆ. ಈ ಜಗತ್ತು ಕ್ಷಣಿಕವಾದದ್ದು. ಅಶ್ವಾಸವಾದದ್ದು ಹರಿಯುವ ನದಿಯಂತೆ. ಆತ್ಮ ಎಂಬುದು ಇಲ್ಲ, ಕೇವಲ ಕರ್ಮ, ನಿಯಮ, ಬದ್ಧತೆ ಅನುಕಂಪ, ಸೌಜನ್ಯ, ಧಯೆ, ಇತ್ಯಾದಿಗಳು ಮಾನವೀಯ ಮೌಲ್ಯಗಳು ಇಲ್ಲಿ ಸಿಗುತ್ತವೆ. ಸಾಂಖ್ಯದೊಂದಿಗೆ ಸಹಿತ ಹೋಲುತ್ತಿದೆ ಚಲನೆಯೇ ಅದರ ಸ್ವಭಾವ, ನಿರಂತರ ಬದಲಾಗುವಿಕೆ ಕ್ರಿಯಾತ್ಮಕವಾದ ಪ್ರಪಂಚದ ವಿವರಣೆಯಲ್ಲಿ ಹೆರಾಕ್ಲೋಟಿಸ್, ಸಾಂಖ್ಯ ಬೌದ್ಧ ಇವು ಒಂದೇ ವಿವರಣೆಯನ್ನು ನೀಡುತ್ತವೆ.

**ಎಂಪೇಡೋಕ್ಲಸ್**

ಈತ ಚತುರ್ಭೂತ ಸಿದ್ಧಾಂತವನ್ನು ಪ್ರತಿಪಾದಿಸಿದ. ವಾಯು, ಅಗ್ನಿ, ಅಪ್ಪು, ಪೃಥ್ವಿ ಇವು ತತ್ವಗಳು. ಭೂತವೆಂದರೆ ಎಲ್ಲದರ ಮೂಲ ಎಂದರ್ಥ. ಈ ಮೂಲಗಳಿಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ, ಸೃಷ್ಟಿಯು ಇಲ್ಲವೇ ಇಲ್ಲ. ಚತರ್ಭೂತಗಳು ಒಂದುಗೂಡಿ ಉತ್ಪತ್ತಿಯಾದಂತೆ ಒಂದಕ್ಕೊಂದು ಅಗಲಿದಾಗ ನಾಶ ಹೊಂದುತ್ತವೆ. ಇಲ್ಲಿ ಪಾರ್ಮಿನೈಡಸ್ ಹಾಗೂ ಹೆರಾಕ್ಲೆಟಸ್ ಇಬ್ಬರ ಚಿಂತನಗಳ ಸಮನ್ವಯವಿದೆ. ಈ ವಿಶ್ವದಲ್ಲಿಯ ವಸ್ತುಗಳು ಬೇರೆ ಬೇರೆಯಾಗಿರುವುದಕ್ಕೆ ವಿವಿಧ ಅನುಪಾತದಲ್ಲಿ ತತ್ವಸಂಯೋಗವೇ ಕಾರಣವಾಗಿದೆ. ಇವೆಲ್ಲವು ಚಲನ ರಹಿತವಾದ ಭೂತಗಳು. ಅವುಗಳೆಲ್ಲಾ ಹೇಗೆ ಚಲನೆ ಹೊಂದಿ ಒಂದಾಗುವದು ಹಾಗೂ ಬೇರೆಯಾಗುವದು ಮಾಡುತ್ತವೆ ಅದಕ್ಕೆ ಆಕರ್ಷಣವೆಂದರೆ ಪ್ರೀತಿ, ವಿಕರ್ಷಣೆಯೆಂದರೆ ದ್ವೇಷ. ಇವುಗಳಿಂದ ಸಂಯೋಗ - ವಿಯೋಗ, ಪ್ರೇಮಶಕ್ತಿ ಹೆಚ್ಚಾದಾಗ ಉತ್ಪತ್ತಿ; ದ್ವೆವಿಶಕ್ತಿ ಹೆಚ್ಚಾದಾಗ ಲಯ. ಮನುಷ್ಯನಲ್ಲಿ ಕೂಡಾ ಆಕರ್ಷಣೆ - ವಿಕರ್ಷಣೆಗಳಿಗೆ ಪ್ರೇಮ ಮತ್ತು ದ್ವೇಷಗಳೇ ಕಾರಣವೆಂದು ಹೇಳಬಹುದು. ವಿಶ್ವದ ಈ ವೈಶಿಷ್ಟ್ಯಗಳು ಒಂದು ನಿರಂತರ ಪ್ರಕ್ರಿಯೆ ಅದನ್ನು ತಿರುಗುತ್ತಿರುವ ಚಕ್ರ ಆದಿ - ಅಂತ್ಯ - ರಹಿತವಾಗಿರುವದು.

**ಪರಮಾಣುವಾದ**

ಈ ವಾದದಲ್ಲಿ ಲೂಸಿಫಸ್ ಮತ್ತು ಡೆಮಾಕ್ರೈಟಸ್ ಬರುತ್ತಾರೆ. ಎಂಪೆಡೊಕ್ಲಸ್‌ನಂತೆಯೇ ಒಂದು ಪದಾರ್ಥವನ್ನು ವಿಭಜಿಸುತ್ತ ಹೋದಂತೆ ಕೊನೆಯಾದಾಗಿ ಉಳಿಯುವ ವಿಭಜಿಸಲಾಗದ ವಸ್ತು ಅದೇ ಪರಮಾಣು. ಅವುಗಳು ತನ್ನದೇಯಾದ ಚಲನಶಕ್ತಿಯಿಂದ ಸಂಯೋಗ ಮತ್ತು ವಿಯೋಗವನ್ನು ಹೊಂದುತ್ತವೆ. ಇವುಗಳಿಗೆ ನಾಶ ಎಂಬುದೇ ಇಲ್ಲ. ಸಂಯೋಗ - ವಿಯೋಗ ರಹಿತ ಸ್ಥಿತಿಯಲ್ಲಿ ತಾನಿರುವ ಸ್ಥಿತಿಯಲ್ಲಿಯೇ ಇರುವವು. ಇಲ್ಲಿ ಪ್ರೇಮ ಮತ್ತು ದ್ವೇಷಗಳೇ ಚತುರ್ಭೂತಗಳ ಸಂಯೋಗ - ವಿಯೋಗಕ್ಕೆ ಕಾರಣವೆಂಬುದನ್ನು ತಳ್ಳಿಹಾಕಿ, ಚಲನೆಯ ಗತಿಯೇ ಪರಮಾಣುಗಳ ಸ್ವರೂಪವೆಂದು ಪ್ರತಿಪಾದಿಸಿದರು. ಈ ದೃಷ್ಟಿಯಲ್ಲಿ ಇವರಿಬ್ಬರ ಚಿಂತನೆ ಎಂಪೆಡೊಕ್ಲಸ್‌ಗಿಂತ ಉತ್ತಮವೆನ್ನಬಹುದು.

**ಅನಾಕ್ಸ್ ಗೋರಸ್**

ವಿಶ್ವದಲ್ಲಿ ಕೇವಲ ನಾಲ್ಕು ಭೂತಗಳ ಪರಮಾಣುಗಳಿವೆ ಎಂಬುದನ್ನು ತಿರಸ್ಕರಿಸಿ ಜಗತ್ತಿನಲ್ಲಿ ಎಷ್ಟು ವಸ್ತುಗಳಿವೆಯೋ ಅಷ್ಟೂ ತರಹದ ಪರಮಾಣುಗಳು ಅಥವಾ ಭೌತಿಕ ಕಣಗಳು ಇರಬಹುದೆನ್ನಬಹುದು.

ಅನಂತ ಬೀಜಾಣುಗಳು ಸಂಯೋಗವಾದಾಗ ಉತ್ಪತ್ತಿ, ವಿಯೋಗವಾದಲ್ಲಿ ನಿಷ್ಪತ್ತಿ. ಇವುಗಳ ಪ್ರಕಾರ ಸಂಯೋಗ ಹಾಗೂ ವಿಯೋಗಗಳಿಗೆ ಪ್ರೇಮ ದ್ವೇಷಗಳ ಸಂಬಂಧವಿಲ್ಲ. ಜಗತ್ತನ್ನು ನೋಡಿದಾಗ ಒಂದು ನಿರ್ದಿಷ್ಟ ಕ್ರಮವಿದೆ. ಪ್ರತಿಯೊಂದು ವಸ್ತುವಿಗೂ ತನ್ನದೇ ಆದ ಗುರಿ ಇದೆ. ಈ ರೀತಿಯಾಗಿರಲು ಪ್ರಯತ್ನ ಪೂರ್ವಕ ಕ್ರಮವಿದೆ. ಈ ಅನಾಕ್ಸಿ ಗೋರಸ್‌ನು ದ್ವೈತದಲ್ಲಿ ಕೊನೆಯನ್ನು ಹೊಂದುತ್ತಾನೆ. ಇವನ ನಂತರದಲ್ಲಿ ಗ್ರೀಕ್ ಚಿಂತನೆ ಅಂತರ್ಮುಖವಾಯಿತು.

**ಸಾಕ್ರೇಟಿಸ್**

ಸೋಫಿಸ್ಟ್ ಇತ್ಯಾದಿಯಾಗಿ ನಾವು ನೋಡುವಾಗ ಸಂಪ್ರದಾಯವಾದಿ ಸೋಫಿಸ್ಟ್ ಇದರ ಅರ್ಥ ತಿರುಗಾಡಿ ಪೂಜಿಸುವ ಶುಲ್ಕವನ್ನು ತೆಗೆದುಕೊಳ್ಳುವರು ಎಂದು, ಅವರು ಹೇಳುವುದೇ ಸತ್ಯ. ಅದು ಯಾಕೆ ಹೀಗೆ ಅಂತ ಕೇಳುವ ಪ್ರಶ್ನೆ ಉದ್ಭವಿಸುವುದಿಲ್ಲ. ಇದು ಪ್ರಪಂಚದಲ್ಲಿ ಅವರು ಹೇಳಿದ್ದೇ ವೇದವಾಕ್ಯವೆಂದು ಮಾತ್ರ ತಿಳಿಯುವುದು, 'ಪ್ರಪಂಚದಲ್ಲಿ ಎಲ್ಲ ವಿಷಯಗಳಿಗೂ ಮಾನವನೇ ಒರೆಗಲ್ಲು. ಸತ್ಯಕ್ಕೆ ಪ್ರತಿಯೊಬ್ಬ ವ್ಯಕ್ತಿಯೇ ಒರೆಗಲ್ಲು, ನನಗೆ ಸತ್ಯವೆಂದು ತೋರಿದ್ದು ನನಗೆ ಸತ್ಯ, ನಿನಗೆ ಸತ್ಯವೆಂದು ತೋರಿದ್ದು ನಿನಗೆ ಸತ್ಯ. ಆದಕಾರಣ ಈ ಲೋಕದಲ್ಲಿ ತಪ್ಪು ಎನ್ನುವುದು ಇಲ್ಲವೆ ಇಲ್ಲ. ಒಟ್ಟಿನಲ್ಲಿ ಜ್ಞಾನವೆನ್ನುವುದೂ ಇಲ್ಲ, ಇದ್ದರು ಅದನ್ನು ತಿಳಿಯುವುದಕ್ಕೂ ಸಾಧ್ಯವಿಲ್ಲ. ಒಂದು ಪಕ್ಷ ತಿಳಿಯುವದು ಸಾಧ್ಯವಾದರೂ ಅದನ್ನು ಮತ್ತೊಬ್ಬರಿಗೆ ಬೋಧಿಸುವುದು ಸಾಧ್ಯವಿಲ್ಲ. ಅದರಂತೆ ನೀತಿ ಎಂಬುದಕ್ಕೆ ನೆಲೆಯಿಲ್ಲ. ರಾಷ್ಟ್ರ ಶಾಸನಗಳು ಪದ್ಧತಿಯ ಮೇಲು, ಪಶುಬಲದ ಮೇಲು ನಿಂತಿವೆ. ನ್ಯಾಯ, ಧರ್ಮ ಒಂದು ಇಲ್ಲ, ನನ್ನ ಮನಸ್ಸಿಗೆ ತೋರಿದ್ದೆ ನ್ಯಾಯ; ನನ್ನ ಆಚರಣೆಯೇ ಸದಾಚಾರ; ಎಂದು ನ್ಯಾಯದ ಮಾತಿಗೆ ಒಳಗಾಗುವವನು ಕೆಲಸಕ್ಕೆ ಬಾರದ ಶುದ್ಧ ಮೂರ್ಖ: "ಪಿತೂರಿ ಒಳಸಂಚಿನಲ್ಲಿ ಜಯಶೀಲನಾದವನೇ ಬುದ್ಧಿವಂತ" ಈ ರೀತಿಯಾಗಿ ಅರಾಜಕತೆಯ ಅಧರ್ಮದ ಅನ್ಯಾಯದ ಸಂಪ್ರದಾಯ ಬೋಧನೆಯನ್ನು ವಿರೋಧಿಸಿ ನಿಜವಾದ ತತ್ವವನ್ನು ಬಿತ್ತುವಲ್ಲಿ ಮುಖ್ಯಪಾತ್ರ ವಹಿಸಿದ ಅಗ್ರಗಣ್ಯ ಪಾಶ್ಚಾತ್ಯ ತತ್ವಶಾಸ್ತ್ರ ಜನಕನೆಂದರೇ ಸಾಕ್ರೇಟಿಸ್. ಆತ ಅನ್ಯಾಯದ ಅತಿರೇಕವನ್ನು ಖಂಡಿಸಿದ ಪ್ರಪಂಚದ ಎಲ್ಲ ವಿಷಯಗಳಿಗೆ ಮಾನವನೇ ಒರೆಗಲ್ಲು. (Man is the Measure of all things) ಎಲ್ಲದನ್ನು ತಿಳಿಯುವುದಕ್ಕೆ ಮನುಷ್ಯ ಮಾನದಂಡವಾದರೂ ಇದು ಇಂದ್ರಿಯ ಪ್ರತ್ಯಕ್ಷವಾದಕ್ಕೆ ಹೊಂದಿಕೊಳ್ಳುವುದು. ಕೆಲವು ಅನಾಗರಿಕ ಪದ್ಧತಿಗಳನ್ನು ಹೊಡೆದೊಡಿಸಿದ ಮೊದಲು ಪಾಶ್ಚಾತ್ಯರಲ್ಲಿ ಕಂಡ ಸಾಕ್ರೆಟಿಸ್, ಸಾಕ್ರೆಟಿಸ್‌ನೇ ತತ್ವಶಾಸ್ತ್ರ. ತತ್ವಶಾಸ್ತ್ರವೇ ಸಾಕ್ರೆಟಿಸ್ ಅನ್ನುವಷ್ಟರ ಮಟ್ಟಿಗೆ ಈತನ ಪ್ರಭಾವ (ಕ್ರಿ.ಪೂ. ೪೬೯ - ೩೯೯) ಈತನನ್ನು ನೋಡಲು ಬಲು ಕುರೂಪಿ. ಆದರೆ ಅವನ ಅಂತರ್ಯ ಬಲು ಮೃದು. ಆತನ ರಾಷ್ಟ್ರರೂಪಿ ರಸ ವಿಚಾರ ಮಂಥನದಿಂದ ತತ್ವವೆತ್ತರ ಹೃದಯದ ಮುಂದೆ ರೂಪಗೌಣ. ಆತ ದೊಡ್ಡವನಾಗಲು ಸ್ಥೈರ್ಯ, ಕಷ್ಟ ಸಹಿಷ್ಣುತೆ ಇಂದ್ರಿಯ ನಿಗ್ರಹ ಇವೆಲ್ಲಾ ಕಾರಣಗಳು. ಅವನೊಬ್ಬ ವಿಮರ್ಶಕರ ಬಾಹ್ಯ ಜಗತ್ತಿನ ಕಡೆಗೆ ಲಕ್ಷ್ಯ ಕೊಡದೇ ಅಂತರಂಗಕ್ಕೆ ಮಹತ್ವಕೊಟ್ಟ ಅನುಭವಿ. ತಾನು ಏನೇ ಮಾಡಿದರೂ ಯಾಂತ್ರಿಕದಂತಾಗದೇ ಆತ್ಮವಿಮರ್ಶೆಗೊಳಪಡಿಸಬೇಕೆನ್ನುವ ಹಾದಿಯವನು. 'ಆತ್ಮ ವಿಮರ್ಶೆಯಿಲ್ಲದ ವೈಚಾರಿಕ ಜೀವನ ಬಹಳ ಯೋಗ್ಯವಾದುದಲ್ಲ. (Unexamiend life is not worth living) ಈತನ ಬೋಧೆ ವಿಮರ್ಶಾತ್ಮಕವಾದದ್ದು. "ತನ್ನನ್ನು ತಾನು ತಿಳಿ". (Know the self) ತನ್ನನ್ನುತಾನು

ತಿಳಿಯುವುದಕ್ಕಿಂತ ಹೆಚ್ಚಿನ ಕರ್ತವ್ಯವೇನು ಇಲ್ಲವೆನ್ನುವನು. ಜ್ಞಾನ ಮಾನವನ ಪರಮ ಶ್ರೇಯ. ಅದನ್ನು ಪಡೆಯಬಹುದು. ಅದು ಬರಿ ಮಾತಲ್ಲ; ಅದು ಬರಿ ಬುದ್ಧಿವಂತಿಕೆ ಅಲ್ಲ, ಶಬ್ದಾರ್ಥದ ತಿಳಿವಳಿಕೆಯಲ್ಲ, ಅದೊಂದು ಅಗಮ್ಯಶಕ್ತಿ, ಚೇತನ. ಜ್ಞಾನವೇ ಸದ್ಗುಣ, ಸದ್ಗುಣವೇ ಜ್ಞಾನ ಎಂದು ಗುಣಕ್ಕೂ ಜ್ಞಾನಕ್ಕೂ ತಳಕು ಹಾಕಿದವನು (Knowledge is Virtue / Virtue is Knowledge)[2] ಒಳ್ಳೆಯ ನಡೆತೆಯೇ ಜ್ಞಾನ ಎಂದರು. ಚೇತನ ಅನ್ನುವಲ್ಲಿ ದೇವನನ್ನು ಕಾಣಬಹುದು. ವಿಚಾರ ತರ್ಕಗಳಿಗೆ ಆತನ ಪ್ರಾಶಸ್ತ್ಯವಿದೆ. ಅವನ ಪ್ರಕಾರ ದೇಹವಿದು ಆತ್ಮನ ಅರಮನೆ, ಆತ್ಮ, ಅಭೌತಿಕ, ದೇಹ ಭೌತಿಕ, ಆತ್ಮ ಅಮರ, ದೇಹ ಮಿಥ್ಯ, ಆತ್ಮ ಅಗೋಚರ ದೈವಿಕ ಜ್ಞಾನಪೂರಿತ ಅದುದು. ಅದು ಸಹ ಶರೀರಿಯಾದಾಗ ಎಲ್ಲ ರೀತಿಯ ಬಂಧನಗಳಿಗೆ ಒಳಗಾಗುವದು. ದೇಹದಿಂದ ಬಿಡುಗಡೆಯೇ ಜೀವನದ ಅಂತಿಮಗುರಿ ಇದಕ್ಕೆ ಭಾರತೀಯ ತತ್ವಶಾಸ್ತ್ರದಲ್ಲಿ ಮೋಕ್ಷವೆನ್ನಬಹುದು. ರಾಗದ್ವೇಷಗಳಿಂದ ಬಿಡುಗಡೆ ಹೊಂದಿ ಆತ್ಮವು ಆನಂದ ರಸದಲ್ಲಿ ಒಂದಾಗುವದು. ಆ ಸ್ಥಿತಿಯನ್ನೇ ಆತ್ಮಜ್ಞಾನ ಪರಮಶ್ರೇಯ ಜ್ಞಾನ ಎನ್ನಲಾಗಿದೆ. ಆದರೆ ಈತ ಚರ್ಚೆಯಲ್ಲಿ ಬುದ್ಧಿಯನ್ನೇ ಬಂಡವಾಳವಾಗಿ ಮಾಡಿಕೊಂಡ. ಅನುಭವಿಸಿ ಹೇಳಿ ಅನುಭಾವಿಗಿಂತ ಸ್ವಲ್ಪ ಭಿನ್ನ ಅನುಭಾವಿ ಇವನು. ತಾನು ಕಂಡು ಅನುಭವಿಸಿ ಹೇಳಿದರು ಕೂಡಾ ವಿಚಾರಕ್ಕೆ ಒಳಪಡಿಸಿ ಎಲ್ಲರಿಂದ ತಾರ್ಕಿಕತೆಯನ್ನು ಪಡೆದು, ತನ್ನನ್ನು ಅದಕ್ಕೆ ಒಳಪಡಿಸುವ ಚಿಂತನಗಾರ, ಅನುಭಾವಿಗಳಿಗೆ ಹತ್ತಿರವಾದರೂ ಬೌದ್ಧಿಕಕ್ಕೆ ಹೆಚ್ಚು ಮಹತ್ವಕೊಟ್ಟ ಪಾಶ್ಚಾತ್ಯ ಜ್ಞಾನಾನುಭಾವಿ. ಮಾನವ ಆಂತರಿಕ ದೃಷ್ಟಿವುಳ್ಳವನು. ಈತನಿಗೆ ಆಗಾಗ್ಗೆ ಒಂದುವಿಧವಾದ ದೈವಿಕ ಅಶರೀರವಾಣಿ ಕೇಳಿಸುವುದು. ಯಾವುದಾದರೂ ಕೆಲಸಕ್ಕೆ ಕೈ ಹಾಕಿದಾಗ ಅದು ಅನರ್ಥವಾಗುವ ಪ್ರಸಂಗ ಬಂದಲ್ಲಿ ಅಂತಃಕರಣದಲ್ಲಿ ಅದನ್ನು ಮಾಡಬೇಡ ಅನ್ನುವ ಭಾವನೆ ಹೊರಹೊಮ್ಮಿದಂತೆ ಈತನಿಗೆ ಆಗಾಗ್ಗೆ ಅಸಾಧಾರಣವಾದ ಆತ್ಮ ಪರವಶತೆ ಅಥವಾ ಸಮಾಧಿಯೋಗದ ಅನುಭವ ಈತನಿಗೆ ಉಂಟು. ಮನುಷ್ಯ ಆಂತರಿಕ ವಿಚಾರ ಶೀಲತೆಯಿಂದ ಇರುವಾಗ ಕೆಲವೊಂದು ಅಲೌಕಿಕವಾದ ವಿಚಾರಗಳು ಹೊಳೆಯುವವು. ಅವು ಸಮಾಧಿ ಸ್ಥಿತಿಯಿಂದ ಪ್ರೇರಣೆ ಪಡೆದವು ಎನ್ನಬಹುದು. ಅವು ಆನಂತರದಲ್ಲಿ ಪ್ರಕಟಗೊಂಡ ಈ ಆಲೋಚನೆಗಳನ್ನು ದೈವಿಕವಾಣಿ ಅನ್ನಬಹುದು. ಆ ರೀತಿಯ ಅಂತರಂಗದ ಆಲೋಚನೆ ಅನುಭವಕ್ಕೆ ಬಂದಾಗ ಆತ ಅಧ್ಯಾತ್ಮವಾದಿ ಅನುಭಾವಿ ಅನಿಸಿಕೊಳ್ಳುವನು. ಈ ಅರ್ಥದಲ್ಲಿಯೂ ಕೂಡಾ ಸಾಕ್ರೇಟಿಸ್ ಅನುಭಾವಿಯೇ.

**ಪ್ಲೇಟೊ**

ಇವನ ಪ್ರಕಾರ ತತ್ವಶಾಸ್ತ್ರದ ಗುರಿ ವಸ್ತುಗಳ ಸಂಪೂರ್ಣ ಹಾಗೂ ಯಥಾರ್ಥ ಜ್ಞಾನವನ್ನು ತರ್ಕಬುದ್ದಿಯು ಒಪ್ಪುವ ರೀತಿಯಲ್ಲಿ ವಿಚಾರಪೂರ್ಣವಾಗಿ ಮಂಡಿಸುವುದು. ತತ್ವಜ್ಞಾನವು ಪೂರ್ಣವಾದ ಯಥಾರ್ಥ ಜ್ಞಾನವನ್ನು ಮುಂದಿಡುವದು. ತನ್ನ ಆಸೆ ಅನಿಸಿಕೆಗಳಿಗೆ ಅನುಸಾರನಾಗಿದ್ದನಲ್ಲ. ಬುದ್ದಿಯ ಕಸರತ್ತು ಆತನ ಬಂಡವಾಳ ಭಾವನೆಗೆ ಆಗಲೀ ಅನಿಸಿಕೆಗಾಗಲೀ ಕಾಲ್ಪನಿಕ ಉಹಾಪೋಹಗಳಿಂದ ದೂರವಿರಬೇಕೆನ್ನುವನು. ಕವಿಯ ಮನೋಧರ್ಮ ಆದರೆ ತತ್ವಜ್ಞಾನದಲ್ಲಿ ತತ್ವವೇ ಪ್ರಧಾನ ಹರಿತವಾದ ಬುದ್ಧಿ ಉಪಕರಣ. ನಿಜವಾದ ಅರ್ಥದಲ್ಲಿ ತತ್ವಜ್ಞನು ಕವಿಯಾಗಿರಲು ಸಾಧ್ಯವಿಲ್ಲ ಹಾಗೆಯೇ ಕವಿ ಎಂದಿಗೂ ತತ್ವಜ್ಞಾನಿಯಾಗಲು ಬರುವುದಿಲ್ಲವೆಂದು ಪ್ಲೇಟೊ ಬುದ್ಧಿಯ ಹೆಚ್ಚುಗಾರಿಕೆಯನ್ನು ಪ್ರತಿಪಾದಿಸುತ್ತಾನೆ.

ಸಾಕ್ರೇಟಿಸ್‌ನಲ್ಲಿ ತತ್ವಶಾಸ್ತ್ರದ ಗುರಿ ಈ ಜನ್ಮದಲ್ಲಿ ಪೂರ್ವಜನ್ಮದ ಸ್ಮೃತಿ ಮಾತ್ರ ಇಂತಹ ಪರಮ ಸಾಕ್ಷಾತ್ಕಾರವನ್ನು ಪುನಃ ನಾವು ಪಡೆಯುವಂತೆ ಮಾಡುವುದಾಗಿದೆ. ಅಂತರಂಗದ ಪೂರ್ವ ಐತಿಹ್ಯಗಳನ್ನು ಬರಮಾಡಿಕೊಳ್ಳುವ ಒಂದು ರೀತಿಯ ಅತೀಂದ್ರಿಯ ಆನುಭಾವಿಕ ತಿಳುವಳಿಕೆಯೇ ಆ ಮಾರ್ಗದ ಕ್ರಿಯಾಸಾಧನ.ಅನುಭಾವಕ್ಕೂ, ಇದಕ್ಕೂ ಏನು ವ್ಯತ್ಯಾಸ? ಅನುಭಾವಿ ತನ್ನ ಅಂತಃಸ್ಫುರಣಕ್ಕೆ ಹೊಳೆದದ್ದನ್ನು ಅನುಭವಿಸಿ ಹೇಳುವನು. ಆದರೆ ಇಲ್ಲಿ ಇಂದ್ರಿಯ ಪ್ರಧಾನ, ವಿಚಾರ ಶೀಲತೆಯಿಂದ ಹೇಳಲಾಗುತ್ತದೆ. ಇಂದ್ರಿಯಗಳಿಗೆ ಕಂಡದ್ದು ಅದು ತೋರಿಕೆ, ಬುದ್ಧಿಗೆ ಹೊಳೆದದ್ದು ಅಥವಾ ವಿಚಾರತೆಗೆ ದೊರಕಿದ್ದುದು ಯಥಾರ್ಥ ಜ್ಞಾನ, ಅದು ಮಾತ್ರ ಸತ್ಯ. ಇಂದ್ರಿಯ ಪರೆಯನ್ನು ದಾಟಿ ಪರಮಶ್ರೇಯವನ್ನು ಸಾಕ್ಷಾತ್ಕಾರಗೊಳಿಸಿಕೊಳ್ಳುವುದೇ ಈತನ ಕೊನೆಯ ಗುರಿ. ಈ ಪರಮಶ್ರೇಯ ಜ್ಞಾನವನ್ನು ಹೊಂದುವುದಾದರೇ ಎಲ್ಲವನ್ನು ತಿಳಿದಂತೆ. ಪಾಶ್ಚಾತ್ಯರಲ್ಲಿ "ಪ್ಲೋಟೋನಿಕ್ ಸಂವಾದಗಳು" ಎಂಬ ಪ್ಲೋಟೊವಿನ ಗ್ರಂಥವು ಪೌರ್ವಾತ್ಯದ ಅದ್ವೈತ ದರ್ಶನದ ಪಸ್ಥಾನತ್ರಯಗಳಾದ ಪರಮಸೂತ್ರ, ಉಪನಿಷತ್ತು , ಭಗವದ್ಗೀತೆಗಳಂತೆ, ಪ್ರಭುದರ್ಶನದ ಶೂನ್ಯ ಸಂಪಾದನೆಯಂತೆ ಮಹತ್ವಪಡೆದ ಸಂವಾದನಾ ಗ್ರಂಥ. ಪ್ಲೋಟೊ ಹಾಗೂ ಶಂಕರನಲ್ಲಿ ವ್ಯತ್ಯಾಸವಿದ್ದಂತೆ ಹೋಲಿಕೆಯೂ ಇದೆ. ಪ್ಲೋಟೊ - ಅತ್ಯಂತೀಕ ಸತ್ಯವಾದ ಸಾಮಾನ್ಯಗಳು ಅನೇಕವಾದರು, ಅವುಗಳಿಗೆ ಆಧಾರವಾದದು ಒಂದೇ ಸಾಮಾನ್ಯ, ಅದೇ ಶ್ರೇಯ, ಎಲ್ಲ ಸಾಮಾನ್ಯಗಳಿಗೂ ಮೂಲರೂಪದ್ದು, ಇದಕ್ಕಿಂತಲೂ ಉತ್ಕೃಷ್ಟವಾದದ್ದು ಯಾವುದು ಇಲ್ಲ ಈ ಶ್ರೇಯ ಸಾಮಾನ್ಯವನ್ನು ಎಲ್ಲದರ ಉತ್ಪತ್ತಿಗೆ ಕಾರಣವಾದ ಸೂರ್ಯನಿಗೆ ಅವನು ಹೋಲಿಸುತ್ತಾನೆ. ಮೊದಲು ಸಾಮಾನ್ಯಗಳು ಬಹುವಿಧರೆಂದರು ಕೊನೆಯಲ್ಲಿ ಏಕತ್ವಕ್ಕೆ ಬರುವನು. ಬಹುತ್ವದಲ್ಲಿ ಏಕತ್ವ, ವೈವಿಧ್ಯದಲ್ಲಿ ಐಕಮತ್ಯ, ಆದರೆ ಶಂಕರನಲ್ಲಿ ಬಹುತ್ವದಲ್ಲಿ ಏಕತ್ವವನ್ನು ಹುಡುಕುವದಲ್ಲ. ಏಕೈಕ ಸತ್ಯವೆಂದರೆ ಏಕಮೇವಾ ದ್ವಿತೀಯ ಬ್ರಹ್ಮ[5] ಇಲ್ಲಿ ಪರಮಶ್ರೇಯವನ್ನು ಆತನ ಈಶ್ವರ ತತ್ವ ತಿಳಿದನೇ ಅಥವಾ ಇಲ್ಲವೇ ಎನ್ನುವ ವಿಷಯದಲ್ಲಿ ಚರ್ಚೆಯಿದೆ. ಕೆಲವರು ಈಶ್ವರನನ್ನು ಶ್ರೇಯ ರೂಪ ಸಮಾನವಾದ, ಆದರೆ ಭಿನ್ನರೂಪ ತತ್ವಗಳೆಂದು ಅಭಿಪ್ರಾಯ ಆತ್ಯಂತಿಕ ಸತ್ಯ ಮತ್ತು ಪರಮಶ್ರೇಯ ಒಂದೇ ಎಂದು ಪ್ಲೋಟೊ ಹೇಳುವನು. ಆದುದರಿಂದ ಈ ತತ್ವವನ್ನು ನಾವು ಈಶ್ವರತತ್ವ ಎಂದು ಭಾವಿಸಿದರೂ ತಪ್ಪಿಲ್ಲ. ಪ್ಲೋಟೊವಿನ ಪ್ರಕೃತಿ ತತ್ವಶಾಸ್ತ್ರವು ಅದ್ವೈತದ ಮಾಯೆಯನ್ನು ಹೋಲುವುದು.[೬] ಪ್ರಕೃತಿ ಕಪಿಲರ ಸಾಂಖ್ಯವನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ. ಈ ಸಾಂಖ್ಯರ ಪ್ರಕೃತಿಗೆ ಸ್ವಂತ ಅಸ್ತಿತ್ವವಿದ್ದರೆ ಪ್ಲೋಟೋವಿನ ಪ್ರಧಾನಕ್ಕೆ ಇಲ್ಲ.[೭] ಅವನ ಪ್ರಕಾರ ಸಾಮಾನ್ಯಗಳೆಲ್ಲವೂ ಶುಭದಾಯಕ ಉಳಿದವುಗಳೆಲ್ಲಾ ಅನಿಷ್ಟ. ಈ ಅರ್ಥದಲ್ಲಿ ಪ್ಲೋಟೊ ಏನು ಹೇಳಿಲ್ಲವೆಂಬುದು ವಿಶೇಷವಾದರೂ ಶಂಕರರಂತೆ ಪ್ಲೋಟೊವಿಗೂ ತತ್ವಶಾಸ್ತ್ರವೆಂಬುದು ಬರೀ ಸಿದ್ಧಾಂತ ಮಾತ್ರವಾಗಿರಲಿಲ್ಲ. ಅದು ಜ್ಞಾನದ್ವಯರಿಗೆ ಜೀವನದ ಒಂದು ಹಾದಿ. ಸಾಮಾನ್ಯರ ಸಾನ್ನಿಧ್ಯವನ್ನು ಸೇರಲು ಮೂರು ಮಾರ್ಗಗಳನ್ನು ಹೇಳುವನು. ೧. ಚಿಂತನಾ ಅಥವಾ ವಿಮರ್ಶೆ ೨. ಪ್ರೇಮ ೩. ಧರ್ಮಸೂತ್ರದ ಅಂತರದೃಷ್ಟಿ ಈ ಮೂರರಲ್ಲಿ ಕೊನೆಯದು ಅನುಭಾವವನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ. ಪ್ರತಿಯೊಂದು ವಸ್ತು, ಅದಕ್ಕನುಗುಣವಾಗಿ ಪ್ರಯೋಜನ, ಉದ್ದೇಶವಿದೆ. ಈ ಉದ್ದೇಶವನ್ನು ಸಫಲತೆಗೊಳಿಸುವುದೇ ನಿಜವಾದ ಶ್ರೇಯ ಅಥವಾ ಪೂರ್ಣತೆಯನ್ನು ಪಡೆಯುವುದು. ಉಪನಿಷತ್ತುಗಳ ವಿದ್ಯೆಯನ್ನು ಪರಾವಿದ್ಯೆಯೆಂದು, ಅಪರಾವಿದ್ಯೆಯೆಂದು ವಿಭಾಗಿಸಿ, ಪರಾವಿದ್ಯೆಯು ಶ್ರೇಷ್ಠವೆಂದು ಹೇಳಿದರೆ, ಪ್ಲೋಟೊ ಕೂಡಾ ಪರಮಶ್ರೇಯದ ಸ್ವರೂಪವನ್ನು ಅರಿಯುವುದೇ ಪ್ರಪಂಚದಲ್ಲಿ

ಅತೀಶಯವಾದ ವಿದ್ಯೆ ಎಂದು ಹೇಳುತ್ತಾನೆ. ಆದರೆ ಯಾವ ಜ್ಞಾನವು ಪರಮಶ್ರೇಯದ ಸ್ವರೂಪವನ್ನು ತಿಳಿಸಲು ಅಸಮರ್ಥವಾಗುತ್ತದೋ ಅದು ಜ್ಞಾನವೇ ಅಲ್ಲ. ಪರಮಶ್ರೇಯವನ್ನು ಪಡೆಯಬೇಕಾದರೆ ಶಂಕರರಂತೆ ಪ್ಲೇಟೊ ಕೂಡಾ ವ್ಯವಹಾರಿಕ ಎಂಬ ಕಣ್ಣಿನ ಪೊರೆಬಿದ್ದು ಹೋಗಿ ಸಮ್ಯೆಕ್ಯ ದೃಷ್ಟಿ ಮಾನವನಲ್ಲಿ ಉದಿಸಬೇಕೆಂದು ಹೇಳುವನು. ಶಾಸ್ತ್ರೀಯವಾದ ಹಾಗೂ ತಾತ್ವಿಕ ರೂಪದ ಆಧ್ಯಾತ್ಮಿಕ ಯೋಗದೃಷ್ಟಿಯೇ ಪರಮಶ್ರೇಯದ ಮಾರ್ಗ. ಶಂಕರರಂತೆ ಪ್ಲೇಟೊ ಕೂಡಾ ಜ್ಞಾನವೇ ಪ್ರರಮಶ್ರೇಯ ಎಂದು ಹೇಳುವನು. ಜೀವನದ ಡೊಂಕುಗಳನ್ನೆಲ್ಲಾ ಸರಿಪಡಿಸಿಕೊಂಡು ಧರ್ಮಬದ್ಧವಾದ ರೀತಿಯಲ್ಲಿ ನಡೆಯಬೇಕಾದರೆ ಮಾನವನ ಪರಮಶ್ರೇಯ ಯಾವುದೆಂಬುದನ್ನು ಸಮ್ಯೆಕ್ಯಜ್ಞಾನ ಪಡೆಯುವುದು ಅತ್ಯಂತ ಆವಶ್ಯಕವೆಂದು ಸಾಕ್ರೆಟಿಸ್ ಸಾರಿದ್ದನ್ನು ಇಲ್ಲಿ ಕಾಣಬಹುದು. ಇಂತಹ ಜ್ಞಾನವನ್ನು ಹೊಂದುವದು ಸಾಧ್ಯವೆಂದು ತನ್ನದೇ ಆದ ರೀತಿಯಲ್ಲಿ ತೋರಿಸಿಕೊಡದಿದ್ದರೂ ತನ್ನ ಅದೃಶ್ಯವಾದ ವಿಧಾನದಿಂದಲೇ ಇಂತಹ ಭಾವನೆ ಸಾಧ್ಯವೆಂಬುದನ್ನು ಪ್ರಚುರಪಡಿಸಿದನು. ಆತನ ಶಿಷ್ಯನೆನಿಸಿದ ಪ್ಲೇಟೊ ಸಂವಾದ ಸೋಜಿಗವನ್ನು ತನ್ನ ಬರವಣಿಗೆಯಲ್ಲಿ ಅತ್ಯಂತ ಮನೋಹರವಾದ ಶೈಲಿಗೆ ತಂದಿದ್ದಲ್ಲದೆ ಸಿದ್ಧಾಂತರೂಪವಾಗಿಯೂ ಸಹ ಸತ್ಯವೆಂದರೇನು? ಅದನ್ನು ದೊರಕಿಸಿಕೊಳ್ಳುವ ಬಗೆ ಹೇಗೆಯೆಂಬುದನ್ನು ಚರ್ಚೆಮಾಡುವ ನ್ಯಾಯಶಾಸ್ತ್ರವೊಂದನ್ನು ಏರ್ಪಡಿಸಿದನು. ಅದರ ಸತ್ಯಾಸತ್ಯತೆಯನ್ನು ಪಡೆದು ಅದರ ಸಹಾಯದಿಂದ ಸತ್ಯವಸ್ತುವಿನ ಸ್ವರೂಪ ನಿರ್ಣಯಮಾಡುವುದೇ ಆತನ ಮುಖ್ಯ ಆಶಯವಾದ್ದರಿಂದ ಜ್ಞಾನ ಸಿದ್ಧಾಂತದ ಜೊತೆಗೆ ಪ್ರಪಂಚ ತತ್ವದಲ್ಲಿ ಪರಿಶೋಧನೆಯ ವಿಚಾರಗಳನ್ನು ಕೈಗೊಂಡ ಪರಿಪೂರ್ಣವಾದ ತತ್ವಶಾಸ್ತ್ರವನ್ನು ಅವನು ಬರೆದನು.[೬] ಪಾಶ್ಚಾತ್ಯರ ತತ್ವಶಾಸ್ತ್ರದಲ್ಲಿ ಶುದ್ಧ ಬುದ್ಧಿ ಮೀಮಾಂಸೆ ಹೆಗಲ್ ನ ನ್ಯಾಯಶಾಸ್ತ್ರ ಹಾಗೂ ಪ್ಲೋಟೊನಿಕ್ಸ್ ಸಂವಾದಗಳನ್ನು ಪಾಶ್ಚಾತ್ಯರ ಉಪನಿಷತ್ತುಗಳನ್ನೆಬಹುದು.[೭] ತತ್ವಶಾಸ್ತ್ರವೆಂಬುದು ಪ್ಲೇಟೊವಿಗೆ ಸಿದ್ಧಾಂತ ಮಾತ್ರವಾಗಿರಲಿಲ್ಲ ಜೀವನದ ಹಾದಿ ವ್ಯಕ್ತಿತ್ವದಲ್ಲಿ ಅಡಗಿದ್ದು ಪ್ರಕಾಶಿಸುವ ಒಂದು ಶಕ್ತಿ ವಿಶೇಷವೇ. 'ಫಿಡಾನ್' ಮತ್ತು 'ಬ್ಯಾಂಕ್ವಟ್' ಎಂಬುವು ಸತ್ಯದ ವಸ್ತು ಸ್ವರೂಪವನ್ನು ತಿಳಿಯಬೇಕೆಂಬ ಅಗಾಧವಾದ ಆಕಾಂಕ್ಷೆ. "ಸಾಮಾನ್ಯಭಕ್ತಿ" ಇದ್ದಲ್ಲಿ ಶಾಸ್ತ್ರೀಯ ಮಾರ್ಗ ದೊರಕುವದಿಲ್ಲವೆಂದು, ನಮ್ಮ ಅಭಿಪ್ರಾಯ. ಪ್ಲೋಟೊಶ್ರೇಯ ಮತ್ತು ಪ್ರೇಯ ಮಾನವ ಜ್ಞಾನಗಳನ್ನು ತನ್ನ ದರ್ಶನ ಉದಾತ್ತ ತತ್ವಗಳ ಮೂಲಕ ಹೇಳಿರುವನು. ಪ್ರಪಂಚದಲ್ಲಿ ಪ್ಲೇಟೋನ ಸಂವಾದಗಳು ಕ್ರೈಸ್ತರ ಹೊಸ ಒಡಂಬಡಿಕೆ, ಹಿಂದೂಗಳ ಉಪನಿಷತ್ತು ಮತ್ತು ಗೀತೆ ಆಧ್ಯಾತ್ಮಜೀವನದ ತಿರುಳುಗಳಾಗಿವೆ.

### ಅರಿಸ್ಟಾಟಲ್

ಪರಮ ಶ್ರೇಯ ಯಾವುದೆಂಬುದನ್ನು ತಿಳಿಯುವುದಕ್ಕಿಂತಲೂ ಪರಮ ಸತ್ಯ ಯಾವುದೆಂಬುದು ಮುಖ್ಯ. ಇಲ್ಲಿ ತತ್ವಶಾಸ್ತ್ರದ ಮೂಲ ಸಮಸ್ಯೆಯೆಂದರೆ ಜಗತ್ತು ಏಕೆ ಇದೆ? ಹೇಗೆ ಬಂದಿತು ಎಂಬುದೇ ಆಗಿದೆ. ದೇವರ ಬಗ್ಗೆ ಹೇಳುವಾಗ ನಿಮಿತ್ಯಕಾರಣವೂ, ರೂಪ ಕಾರಣವೂ, ಅಂತಿಮ ಕಾರಣವೂ, ಸಾರದಲ್ಲಿ ಬುದ್ಧಿಬದ್ದನು ಅಂತಿಮ ಕಾರಣ ಇವೆಲ್ಲಾ ವಸ್ತುಗಳ ಗುರಿಯಾಗಿದ್ದಾನೆ. ಪರಿಪೂರ್ಣ ಚಲನೆಯ ಪ್ರಥಮಕಾರರ ಆದರೆ ಅವನು ಅಚಲ. ಎಲ್ಲದರಲ್ಲಿಯೂ ಚಲನೆಯನ್ನು ಉಂಟುಮಾಡುತ್ತಾನೆ ತಾನು ಮಾತ್ರ ಎಂದೆಂದಿಗೂ ಚಲನ ರಹಿತನಾಗಿರುತ್ತಾನೆ. ಈ ಅರ್ಥದಲ್ಲಿ ಅರಿಸ್ಟಾಟಲ್ ದೇವರನ್ನು 'ಅಚಲನಾದ ಚಲನಾಕಾರ' (Unmoves

Mover) ಎಂದು ಕರೆಯುತ್ತಾನೆ. ಎಲ್ಲದಕ್ಕೂ ಕಾರಣ ದೇವರು ಕೊನೆಯ ಗುರಿಯು ಅವನ ಇದು ಅದ್ವೈತವಾದಕ್ಕೆ ಸಮೀಪವರ್ತಿಯಾಗಿದೆ. ದೇವರು ಚಿಂತನಾಸ್ವರೂಪ ಅವನು ಚಿಂತನೆಯನ್ನು ಕುರಿತು ಚಿಂತಿಸುತ್ತಾನೆ ಹೇಗೆ ಅನ್ನುವ ಚಿಂತನೆಯ ಮೇಲಿನ ಚಿಂತನೆ (Thought of Thought) ಎಂದು ಕರೆಯುವನು.೧ ಅವನು ತನ್ನ ದಿವ್ಯಾನಂದದಲ್ಲಿಯೇ ಮುಳುಗಿರುವ ತನ್ನ ಸ್ವರೂಪತೆಯನ್ನು ಕುರಿತು ಚಿಂತನೆಯಲ್ಲಿ ಆತನ ಆನಂದವಿದೆ. ತನ್ನನ್ನು ಕುರಿತು ಧ್ಯಾನಿಸುವುದೇ ಅವನ ಕೆಲಸ. ಇವನ ಪ್ರಕಾರ ಮಾನವನ ಆತ್ಮದಲ್ಲಿ ಮೂರು ಭಾಗಗಳು ೧. ಜ್ಞಾನ (Knowledge), ೨. ಭಾವ (Feeling), ೩. ಕ್ರಿಯೆ (Conatior) ಇವುಗಳ ನಡುವೆ ಸಾಮಾನ್ಯ ಸ್ಥಿತಿ ಏರ್ಪಟ್ಟಾಗ 'ಅಂತಾತ್ಮ', 'ಧರ್ಮಾತ್ಮ' ಅಥವಾ 'ಸ್ಥಿತಪ್ರಜ್ಞ' ಎಂದು ಕರೆಯಿಸಿಕೊಳ್ಳುವದು. ಈ ಸಾಮಾನ್ಯ ಅವಸ್ಥೆಯ ಫಲವೇ ಧೈರ್ಯ, ಶೌರ್ಯ, ಮಿತವ್ಯಯ, ಸತ್ ಶೀಲ, ಸದ್ಗುಣಗಳು ಇತ್ಯಾದಿ. ಅತೀರೇಕಿಗಳಿಲ್ಲದ ಸ್ವರ್ಣ ಮಾಧ್ಯಮವೇ ನೈಜ ಜೀವನದ ತಳಹದಿ. ಸ್ಥಿತಪ್ರಜ್ಞ ಅನ್ನುವಲ್ಲಿ ಜ್ಞಾನ, ಭಾವ, ಕ್ರಿಯೆಗಳಲ್ಲಿ ಜ್ಞಾನದಂತೆ ನಡೆಯುವುದಾದರೆ ಒಂದು ಭಾವನೆಯು ಉತ್ಪನ್ನವಾಗುವದು. ಉತ್ಪನ್ನವಾದ ಈ ಭಾವನೆಯು ದೇವರನ್ನು ಕುರಿತು ಜೀವ - ಜಗತ್ತು - ಈಶ್ವರಗಳ ಬಗ್ಗೆ ವಿಚಾರ ಹೊರಹೊಮ್ಮಿದರೆ ಅದಕ್ಕೆ ಅನುಭಾವವೆಂದು ಆತನಿಗೆ ಅನುಭಾವಿ ಎಂದು ಕರೆಯುವರು. ಹುಚ್ಚುಸಾಹಸ ಅತೀರೇಕತನವಾದರೆ ಹೇಡಿತನ ಮತ್ತೊಂದು ಅತಿರೇಕ ಇವೆರಡನ್ನು ತ್ಯಜಿಸಿ ಮಧ್ಯಮ ಮಾರ್ಗದ ನಿಜಧೈರ್ಯವನ್ನು ಅಳವಡಿಸಿಕೊಳ್ಳುವದು. 'ಕೃಪಣತೆ' ಒಂದು ವೈಪರಿತ್ಯವೆಂದಾದರೆ, ದುಂದುಗಾರಿಕೆ ಕೂಡಾ ಸರಿಯಲ್ಲ, ಇವೆರಡರ ಮಧ್ಯಮಮಾರ್ಗದ ಔದಾರ್ಯವನ್ನು ಹಿಡಿದು ಸಾಗಿದರೆ ಅದು ನಿಜವಾದ ಜೀವನದ ಗುರಿ. ಮನುಷ್ಯ ಜ್ಞಾನ ಸಂಪಾದನೆಯನ್ನು ಮಾಡಿ ಜ್ಞಾನ ಪೂರ್ವಕವಾದ ಜೀವನ ಮಹಾದಾನಂದದಲ್ಲಿ ಪರ್ಯಾವಸಾನವಾದರೆ ಅಲ್ಲಿ ಭಾವುಕತೆ ತುಂಬಿ ಅದನ್ನು ಬಹಿರ್‌ಲೋಕಕ್ಕೆ ಪ್ರಕಟಗೊಳಿಸುವುದೇ ದರ್ಶನ. ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲ್ ಇವರ ದರ್ಶನ ಸಾಂಖ್ಯಕ್ಕೆ ಹೋಲಿಕೆಯಿದೆ. ಈತ ತತ್ವ ಸಿದ್ಧಾಂತಕ್ಕೆ ತಾರ್ಕಿಕವನ್ನು ಹೊಂದಿಸುವನು. ಈ ಅರ್ಥದಲ್ಲಿ 'ಸಾಂಖ್ಯ' ತಾರ್ಕಿಕವಾದಿ ನ್ಯಾಯ ಅಥವಾ ತರ್ಕವನ್ನು ಶಾಸ್ತ್ರೀಯ ರೀತಿಯಲ್ಲಿ ಕಟ್ಟಿ ಬೆಳೆಸಿದನು. ತರ್ಕಶಾಸ್ತ್ರದ ವಿಷಯ ಚಿಂತನೆಯನ್ನು ಶಾಸ್ತ್ರೀಯವಾಗಿ ವಿಚಾರ ಚಿಂತನೆ ಎನ್ನಬಹುದು. ಈ ಮೂವರ ಬಗ್ಗೆ ದರ್ಶನ ಪರಿಕಲ್ಪನೆಯೇ ಪಾಶ್ಚಾತ್ಯ ದರ್ಶನ ವ್ಯಾಖ್ಯಾನಗಳಾಗಿರುವುದರಿಂದ ಮೂವರನ್ನು ಒಟ್ಟಾಗಿಯೇ ತೆಗೆದುಕೊಂಡು ಚಿಂತನೆಯನ್ನು ಮಾಡಲಾಗಿದೆ. ಪ್ರತಿಯೊಬ್ಬರ ಜೀವನದಲ್ಲಿ ಕಲೆ, ಸಾಹಿತ್ಯಾತ್ಮಕದಲ್ಲಿ ಹಾಗೂ ಕಾವ್ಯ, ಎಲ್ಲಿ ಸರಳತೆ ಇರುತ್ತದೆಯೋ ಅಲ್ಲಿ ನಿಜ ಸೊಬಗಿರುವದು. ಅರ್ಥವಾಗದ ಸಂಕೀರ್ಣತೆಗಿಂತ ಅರ್ಥವಾಗುವ ಸರಳತೆಯ ಅರ್ಥ ಹೆಚ್ಚು ಮಹತ್ವದ್ದು ಹೆಚ್ಚು ಅರ್ಥವಾದಷ್ಟು ಹೃದಯಕ್ಕೆ ತಟ್ಟುತ್ತದೆ.

ಬುದ್ಧಿಗೆ ನಿಲುಕದ ಮನಸ್ಸಿಗೆ ಮೀರಿದ ಸಾಮರಸ್ಯ ಸುಖವನ್ನು ಸವಿಯಲು ಅಸಾಧ್ಯ. ಜೀವನದಲ್ಲಿ ಸರಳತೆಯಿರಬೇಕಾದರೆ ಒಂದು ನಿರ್ದಿಷ್ಟ ಗುರಿಯಿರಬೇಕು. ಅದರೆಡೆಗೆ ಸಾಗಲು ಎಲ್ಲ ಸಾಮರ್ಥ್ಯಗಳನ್ನು ಬಳಸಿಕೊಳ್ಳಬೇಕು. ಹೀಗಾದಾಗ ಮಾತ್ರ ಜೀವ ನೆಮ್ಮದಿಯಿಂದ ಇರುವದು. ವಿಧವಿಧವಾದ ದೇಹ ಧೋರಣೆಗಳಿದ್ದರೆ ಅವೆಲ್ಲವುಗಳನ್ನು ಸಾಧಿಸಲಿಕ್ಕಾಗುವದಿಲ್ಲ. ಸಂಕೀರ್ಣತೆ ಹೆಚ್ಚಾದಂತೆ ಜೀವನ ಗೊಂದಲದ ಗೂಡಾಗುವದು. ಪ್ಲೋಟೊ - ಅನುಭಾವ ಅನ್ನುವ ಅರ್ಥ ಸರಳವಾದದ್ದೇ ವಿನಹ ಸಂಕೀರ್ಣವಾದದ್ದಲ್ಲ. ಸಂಕೀರ್ಣತೆ ಅನ್ನುವ ಪರಿ ಇದರ ಸಮೀಪ ಸುಳಿಯುವುದೇಯಿಲ್ಲ. ಏಕೆಂದರೆ 'ಅನುಭಾವ' ದರ ಅನುಭವ

ಸರಳತೆಯಿಂದಲೇ ಅನುಭವಿಸಬೇಕಾಗುವುದು. ಅತೀ ಸರಳತೆ ಎಂದರೇನೆ ಅನುಭಾವ ಅದಕ್ಕಿಂತ ಸರಳವಾದದ್ದು ಜಗತ್ತಿನಲ್ಲಿ ಯಾವುದೂ ಇಲ್ಲ. ಸರಳಾನಂದದ ಸವಿಯೇ ಸಾಮರಸ್ಯ ಗುರಿಯಲ್ಲಿ ಸೇರಿ ಇದನ್ನು ಮರೆಯುವ ತನ್ಮಯತೆಯು ಆ ತನ್ಮಯತೆಯಿಂದ ಅನುಭವಿಸಿದ ಆನಂದದ ಪರಿಯನ್ನು ಹೇಳುವುದೇ ದರ್ಶನ ಶಬ್ದಗಳು, ವ್ಯಾಖ್ಯೆಗಳು ಅವು ಅವರವರು ಅನುಭವಿಸಿದ ಪರಿಪೂರ್ಣತೆಯ ಮೇಲಿಂದ ಹೆಚ್ಚು ಕಡಿಮೆ ಮಟ್ಟದ್ದಾಗಿರಬಹುದು. ಗ್ರೀಕ್‌ರದ್ದು ಸುಂದರ ಜೀವನ ಯಾರು ಸುಂದರ ಜೀವನವನ್ನು ಕಳೆಯಲು ಶಕ್ಯರೋ ಅವರು ಆಧ್ಯಾತ್ಮಕರು. ಅದನ್ನು ಸಾಧಿಸಲು ಬದ್ಧರು ಬದುಕು ಸುಂದರವಾದಾಗ ಭಾವಸುಂದರ, ಭಾವ ಅನುಭಾವಕ್ಕೆ ದಾರಿ ಅದು ದರ್ಶನದ ಸುಂದರ ನಿದರ್ಶನ 'ಅನುಭಾವ ದರ್ಶನ' ಪಾಶ್ಚಾತ್ಯವೆಂದರೆ ದರ್ಶನದಲ್ಲಿ ಗ್ರೀಕರದ್ದೆ ಅವರು ಸೃಷ್ಟಿಯ ರಹಸ್ಯಗಳನ್ನು ಹುಡುಕುವದರಿಂದ ಪ್ರಾರಂಭಿಸಿ ನಂತರ ತನ್ನರಿವ ರಹಸ್ಯಗಳನ್ನು ತಿಳಿಯಲು ಎಳೆಸಿದರು. ಬದುಕಿನಲ್ಲಿ ಸುಂದರತೆಯನ್ನು ಕಂಡವರು ಬಾಹ್ಯ ಪ್ರಪಂಚದಲ್ಲಿ ಕಂಡಂತೆ ಆಂತರಂಗಿಕವಾಗಿಯೂ ನೋಡಿದರು. ಈಶ್ವರ ರಹಸ್ಯ ಅರಿಯಲಿಕ್ಕೆ ಸತ್ಯಸುಂದರಗಳು ಸಾಧನಗಳು ಅದಕ್ಕೆಂದೇ ಸತ್ಯಂ - ಶಿವಂ - ಸುಂದರಂ. ಮಾನವ ತನ್ನ ಜೀವಿತದ ಅವಧಿಯಲ್ಲಿ ಹಲವಾರು ಪ್ರಸಂಗಗಳು ಬರುತ್ತವೆ. ಕೆಲವು ಕ್ರಿಯೆಗಳನ್ನು ಮಾಡುಬೇಕು ಅಥವಾ ಬಿಡಬೇಕು ಅನ್ನುವ ಕಲ್ಪನೆ ಕೂಡಾ ಇರಲಾರದು. ಆದಾಗ್ಯೂ ಆ ಕ್ರಿಯೆ ನ್ಯಾಯೋಚಿತವಾದದ್ದೋ ಅಥವಾ ಅನ್ಯಾಯಪರವಾದದ್ದೋ ವಿಚಾರಿಸುವ ಮುಂಚೆಯೇ ಅಲಕ್ಷ್ಯತನದಿಂದ ಕೆಲವು ಕಾರ್ಯಗಳು ಘಟಿಸುವವು. ಅವೇ ಉತ್ತಮಕಾರ್ಯಗಳಾದದ್ದುಂಟು. ಅಂದಾಗ ಅಲಕ್ಷ್ಯತನಕ್ಕೆ ಬೆಲೆ ಕೊಡುವುದು ಸರಿಯೇ? ಅನ್ನಿಸುವುದು. ಯಾವುದು ನಿಜವಾದ ಕರ್ಮ ಎಂಬುದನ್ನು ವಿಚಾರ ಮಾಡುತ್ತಾ ಸಾಗಿದಾಗ ಗ್ರೀಕರು ಇದಕ್ಕೆ ಕರ್ಮವಾದ ಅಥವಾ ಅದೃಷ್ಟ ಎನ್ನುವರು.

ಗ್ರೀಕರು ಪಾರಲೌಕಿಕದಲ್ಲಿ ಹೆಚ್ಚು ನಂಬಿಕೆಯನ್ನು ಹೊಂದಿದವರಾದ್ದರಿಂದ ಆ ಕಲ್ಪನೆ ಯಾವ ರೀತಿಯದ್ದಾಧರು ಸರಿಯೆ ಈ ರೀತಿಯ ನಂಬಿಗೆಯೇ ಆಧ್ಯಾತ್ಮದ ಉದಯಕ್ಕೆ ಹೆಚ್ಚು ಸಹಕಾರಿಯಾಯಿತೆನ್ನಬಹುದು. ತತ್ವ ಸಂಶೋಧನೆಗೆ ಪ್ರಾರಂಭಮಾಡಿದವರು ಪಾಶ್ಚಾತ್ಯ ಗ್ರೀಕರೆನ್ನಬಹುದು. ಇವರು ಸ್ವತಂತ್ರ ವಾದಿಗಳು, ಸ್ವತಂತ್ರ ಪ್ರಿಯರು. ಚಿಂತನೆಯಲ್ಲಿಯೂ ಕೂಡಾ ಸ್ವತಂತ್ರತೆಯನ್ನು ತೋರಿಸಿಕೊಂಡವರು. 'ಪರ್ಶಿಯಾದ ಗವರ್ನರನೊಬ್ಬನು ಪರ್ಶಿಸನಿಗೆ ವಶವಾಗಿ ಹೋಗಿರೆಂದು ಸ್ಪರ್ಧಾನಗರದ ಸೈನಿಕರಿಗೆ ಹೇಳಲು ಅವರೆಂದರು. ಪೊಡಾರ್ನಸ್ ನೀನು ನಮಗೆ ಹೇಳುತ್ತಿರುವ ಬುದ್ಧಿವಾದ ಅರ್ಥವೇನೆಂಬುದು ನಿನಗೆ ಗೊತ್ತಿಲ್ಲ. ಗುಲಾಮನಾಗಿರುವದು ನಿನಗೆ ಗೊತ್ತಷ್ಟೆ. ಸ್ವಾತಂತ್ರ್ಯದ ಸವಿಯನ್ನು ನೀನು ಎಂದೂ ಅನುಭವಿಸಿಲ್ಲ. ಅನುಭವಿಸಿದ್ದರೆ ಬರ್ಚಿಗಳಿಂದಲೇ ಅಲ್ಲ, ಕತ್ತಿಗಳಿಂದಲೂ ಅದಕ್ಕೋಸ್ಕರ ಕಾದಾಡಿ ಎಂದು ನೀನು ನಮಗೆ ಹೇಳುತ್ತಿದ್ದೆ''[೮] ಇದನ್ನು ನೋಡಿದರೆ ಗ್ರೀಕ್‌ರು ಸ್ವತಂತ್ರವಾದಿ ಚಿಂತಕರೆನ್ನಬಹುದು. ಅವರು ಸ್ವತಂತ್ರ ಚಿಂತಕರಾಗಲು, ಸ್ವಾತಂತ್ರ ಪ್ರಿಯರಾಗಲು ಅದಕ್ಕಾಗಿಯೇ ಅವರು ಚಿತ್ತ ಸ್ವಾತಂತ್ರ, ಸತ್ಯ ಪರೀಶೀಲನತ್ವ, ಇದರ ಸಂತೋಷವನ್ನು ಇತರರು ಯಾರು ಮೀರಿಸಿಲಾರದಷ್ಟದೆ 'ಗ್ರೀಕ್‌ರ ಪ್ರಪಂಚದಲ್ಲಿ ಪ್ರಾರಂಭವಾಗಿ ವೃದ್ಧಿಯನ್ನು ಹೊಂದಿದ ಜ್ಞಾನಾಭ್ಯುದಯ ಸಾಧಕವಾದ ಪ್ರಯತ್ನವೆ ಗ್ರೀಕರ ತತ್ವಶಾಸ್ತ್ರ' ಎನ್ನುತ್ತಾರೆ. ಜ್ಞಾನವನ್ನು ಅರಿಯಲು ವಿಷಯಬೇಕು. ಆ ಜನ ಯಾವುದನ್ನು ಕುರಿತು ನಿಜ ಅರಿವೆ ಸುಜ್ಞಾನ. ಅದೇ ದರ್ಶನಜ್ಞಾನ, ಅದರ ಕಲ್ಪನೆಯೇ ನಿಜದ ಕಲ್ಪನೆ, ಸತ್ಯದ ಕಲ್ಪನೆ, ಆ ಶಾಸ್ತ್ರ, ದರ್ಶನದ್ದು. ಆ

ಮಾರ್ಗದಲ್ಲಿ ಸಾಗುವುದಕ್ಕೋಸ್ಕರ ಉಳಿದ ಪರಿಕಲ್ಪನೆಗಳನ್ನು ಕೂಡಿಸಿಕೊಂಡು ಆ ಗುರಿಯತ್ತ ಸಾಗುವದು ಯಾವುದೇ ಜನಾಂಗದ ಚಿಂತನೆ, ಆ ಜನಾಂಗದ ಸಂಸ್ಕೃತಿಯನ್ನು ಅವಲಂಬಿಸಿರುವದು. ಪಾರಮಾರ್ಥಿಕ ಕುತೂಹಲವೇ ದರ್ಶನ ಪ್ರಕಲ್ಪಗಳನ್ನು ಹುಡುಕುವದಕ್ಕೆ ನಾಂದಿ. ತೀಕ್ಷ್ಣಬುದ್ಧಿವುಳ್ಳವರು, ಜ್ಞಾನಾಸಕ್ತರು, ಸದಾ ದುಡಿಮೆ ಪ್ರವೃತ್ತರು ತಮ್ಮ ಬುದ್ಧಿಶಕ್ತಿಯಿಂದ ಶೋಧಕ ಬುದ್ಧಿಯನ್ನು ಕಂಡುಕೊಂಡರು. ದೈವ ಸಿದ್ಧಾಂತದ ಬಗ್ಗೆ ವಿಚಾರ ಮಾಡುವಾಗ ಮೊದ ಮೊದಲು ದೇವತೆಗಳನ್ನು ಕುರಿತು ಅದರ ಉತ್ಪತ್ತಿ ಹಾಗೂ ಸ್ಥಿತಿ ಹೇಗಾಯಿತು ಪ್ರಪಂಚಕ್ಕೂ ಅವರಿಗೂ ಏನು ಸಂಬಂಧ, ಪ್ರಪಂಚ ಏಕೆ? ಹೇಗೆ ಉತ್ಪತ್ತಿಯನ್ನು ಪಡೆಯಿತು ಅದು ಹೀಗೆ ಇರುವುದೇ ಹ್ಯಾಗೆ ದೇವತೆಗಳು ಇದ್ದಾರೋ ಇಲ್ಲವೊ ಇದ್ದರೂ ಇವರನ್ನು ಸೃಷ್ಟಿಸಿದವರು ಯಾರು ಈ ರೀತಿ ನಡೆದ ಚಿಂತನೆ ಬೆಳೆಯುತ್ತಾ ಸಾಗಿತ್ತೆನ್ನಬಹುದು. ಕ್ರಿ.ಪೂ. ೬ನೇ ಶತಮಾನದಲ್ಲಿ ಪುರಾತನ ಗ್ರೀಕ್ ತತ್ವಶಾಸ್ತ್ರ 'ನಿಷ್ಪಕ್ಷಪಾತವಾಗಿ ವಸ್ತು ವ್ಯಾಪಾರಗಳ ಅರ್ಥ ಶೋಧನೆ ಮಾಡುವ ಪ್ರಯತ್ನವನ್ನು ತತ್ವಶಾಸ್ತ್ರವೆನ್ನುವರು: ಮೊದಮೊದಲು ಗ್ರೀಕ್‌ರ ದಾರಿ ಬಾಹ್ಯಪ್ರಪಂಚದ ಗುರಿ ಅದರ ನಂತರದಲ್ಲಿ ಮಾನವಜೀವನದ ಪ್ರಶ್ನೆ. ಪ್ರಕೃತಿ ಇದು ಹ್ಯಾಗೆ? ಜೀವೋತ್ಪತ್ತಿ ಹ್ಯಾಗೆ? ಜೀವಿಗೂ ಪ್ರಕೃತಿಗೂ ಏನು ಸಂಬಂಧ? ಬಾಹ್ಯ ಪ್ರಪಂಚದಿಂದ ಅಂತರಲೋಕಕ್ಕೆ ಸಾಗುವ ಪ್ರಯತ್ನ ನಡೆಯಿತು. ಸರ್ವಮನುಷ್ಯನಿಗೆ ಸರ್ವವಸ್ತು ಯಾವುದು ಜೀವನದ ಮುಖ್ಯ ಉದ್ದೇಶವೇನು ಇವೆರಡಕ್ಕೂ ಕಾರಣವಾದ ಈಶ್ವರ ಅನ್ನುವ ವಸ್ತು ಯಾವುದು, ಹೀಗೆ ಪಾರಮಾರ್ಥಿಕ ಚಿಂತನೆ ಗ್ರೀಕ್‌ರಲ್ಲಿ ಸಾಗಿ ಬಂದಿತು.

ಪ್ಲೋಟೋ - ಮಾನವ ಧರ್ಮಬದ್ಧ ಜೀವನ ನಡೆಸಬೇಕಾದರೆ ಪರಮಶ್ರೇಯದ ಸಮ್ಯಕ್‌ಜ್ಞಾನವನ್ನು ಪಡೆಯಬೇಕಾಗುವದು. ಆ ಜ್ಞಾನ ಹೊಂದುವದು ಸಾಧ್ಯವಿದೆ ಈ ಜೀವನದಲ್ಲಿ ಅದನ್ನು ಹೇಗೆ ಸಾಧಿಸಬೇಕು ಅನ್ನುವದನ್ನು ತನ್ನ ಅದಮ್ಯಶಬ್ದದ ವಿಧಾನದಿಂದ ತೋರ್ಪಡಿಸಲು ಯತ್ನಿಸಿದ ಜ್ಞಾನ ಸಿದ್ಧಾಂತದ ಜೊತೆಗೆ ಪ್ರಪಂಚದ ಬಗೆಯು ವಿವರಿಸಿದ್ದಾನೆ. ಇವನು ಬರೆದ ಗ್ರಂಥ 'ಸಂವಾದಗಳು' ಆರ್ಯರಲ್ಲಿ ಬ್ರಹ್ಮಸೂತ್ರ, ಭಗವದ್ಗೀತೆ, ಉಪನಿಷತ್ತು ಹೀಗೆ ಪ್ರಸ್ಥಾಪನತ್ರಯಗಳು ಹಾಗೆ ಗ್ರೀಕ್‌ರಲ್ಲಿ. 'ಕಾಂಟ್‌ನ ಶುದ್ಧಬುದ್ಧಿ ಮೀಮಾಂಸೆ', ಹೇಗಲ್‌ನ ನ್ಯಾಯಶಾಸ್ತ್ರ ಮತ್ತು ಪ್ಲೇಟೋನ ಸಂವಾದಗಳು ಎನ್ನಬಹುದು. ಇದರಲ್ಲಿ ಮನೆಗೆಲಸಗಳು ರಾಜತಂತ್ರಗಳು ಸಾಮಾಜಿಕ ಮತ ಸುಧಾರಣೆಗಳಾದ ಮತತತ್ವ, ನೀತಿ ಇವುಗಳನ್ನು ಒಳಗೊಂಡಿದೆ. ಇವನಂತೆ ತತ್ವಶಾಸ್ತ್ರವೆಂಬುದು ಕೇವಲ ಸಿದ್ಧಾಂತವಲ್ಲ ಅದು ಜೀವನದ ಮಾರ್ಗ ಅದು ಜ್ಞಾನಿಯ ವ್ಯಕ್ತಿತ್ವದಲ್ಲಿ ಅಡಗಿ ತನ್ನಿಂದತಾನೇ ಹೊರಹೊಮ್ಮುವಶಕ್ತಿ ಹೇಗೆ ದಾರ್ಶನಿಕ ಕಲ್ಪನೆ. ಇಲ್ಲಿ ಪ್ಲೋಟೋನ ಸಂವಾದಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿದ್ದಾನೆ ೧. ಸೊಕ್ರಾಟಿಕ್ ಇದು ಸೋಫಿಸ್ಟರನ್ನು ಖಂಡಿಸುವ ಸಲುವಾಗಿ ರೂಪುಗೊಂಡದ್ದು ೨. ಮೆಗಾರಿಕ್ ಇಲ್ಲಿ ಸಾಮಾನ್ಯ ಸ್ವರೂಪ ಅದರ ರಚನೆಯ ಬಗ್ಗೆ ಸಾಮಾನ್ಯಗಳೇ ಸಮಸ್ಥ ಚಿಂತನೆಯ ಮೂಲರೂಪಗಳು. ಸಾರ್ವತ್ರಿಕ ಭಾವಗಳಿಂದ ಜ್ಞಾನ ಮತ್ತು ಕರ್ಮ ಲಭಿಸುವದು ೩. ಪೈಥಾಗೊರಿಯನ್ ಇಲ್ಲಿ ಮನಃಶಾಸ್ತ್ರ, ನೀತಿಶಾಸ್ತ್ರ ಮುಂತಾದವುಗಳಿಗೆ ಅನ್ವಯಿಸಿ ಹೇಳುವನು. ಸಮಯದ ವೇಳೆಗೆ ನಾನಾ ದೇಶವನ್ನು ಸುತ್ತಿ ಗ್ರೀಸಿಗೆ ಹಿಂತಿರುಗಿದ್ದರಿಂದ ಇದರಲ್ಲಿ ಪೈಥಾಗೊರಿಯನ್ ಸಂಸ್ಕಾರವು ಗೋಚರವಾಗುವದು. ಇಲ್ಲಿ ಗೂಢಾರ್ಥ ಅಥವಾ ಪುರಾಣ ಪ್ರಸಂಗದಂತೆ ರಹಸ್ಯವಾಣಿ ಇದರಲ್ಲಿದೆ. ಸಾಮಾನ್ಯ ಭಕ್ತಿಯಿಲ್ಲದೆ ಜ್ಞಾನದಲ್ಲಿ ಶಾಸ್ತ್ರೀಯವು ದೊರೆಯಲಾಗದು ಅಷ್ಟಲ್ಲದೇ

ದುರಾಗ್ರಹ, ದುರ್‌ನಿರ್ಣಯ ಹೋಗಲಾಗದು, 'ಶ್ರೇಯ', 'ಪ್ರೇಯ'ಗಳನ್ನು ಕೂಡಾ ದರ್ಶನದ ಉದಾತ್ತ ತ್ಯಾಗಗಳ ಮೂಲಕ (ತತ್ವಗಳ ಮೂಲಕ) ವಿಚಾರ ಮಾಡುವನು. ಈ ರೀತಿಯ ಸಂವಾದವನ್ನು ಬರೆದು ಮುಗಿಸಲು ಆತ ಬಹಳ ವರ್ಷದಿಂದ ಬರೆಯಲು ಪ್ರಾರಂಭಿಸಿ ಬಹಳ ಸಮಯದ ನಂತರ ಅದನ್ನು ಬರೆದು ಮುಗಿಸಿರಬಹುದು. ಆದ್ದರಿಂದ ಇದು ಒಂದು ಮಹಾತ್ವೀಕ ಆಧ್ಯಾತ್ಮಗ್ರಂಥ. ಮಾನವನ ಆಧ್ಯಾತ್ಮಿಕ ಜೀವನದಲ್ಲಿ ಪ್ಲೋಟೋವಿನ ಸಂವಾದಗಳು ಕ್ರೈಸ್ತರ ಒಡಂಬಡಿಕೆ, ಹಿಂದೂಗಳ ಉಪನಿಷತ್ತುಗಳು ಮತ್ತು ಗೀತೆ ಇವು ನಾಲ್ಕು ಬಹುಮುಖ್ಯವಾದ ಗ್ರಂಥರೂಪಗಳು.

ಯಾವಾಗಲೂ ಸತ್ಯ ಜ್ಞಾನವನ್ನು ಪಡೆಯಬೇಕಾದರೆ ಅದನ್ನು ಪಡೆಯಬೇಕೆಂಬ ಆಕಾಂಕ್ಷೆ ಇರಬೇಕಾಗುವದು. ಇದು ತತ್ವ ಪರಿಕಲ್ಪನೆಯ ಮೂಲ ಸೌಂದರ್ಯ ಅವಲೋಕನದಿಂದ ಸತ್ಯಾನ್ವೇಷಣಾ ಇಂದ್ರಿಯ ಪ್ರಪಂಚವನ್ನು ಬದಿಗಿಟ್ಟು ವಸ್ತು ಸ್ವರೂಪ ಭಾವವನ್ನು ಪಡೆಯುವದು. ಆ ಸತ್ಯ ಸಂಶೋಧನೆಯ ಮೊದಲ ಹೆಜ್ಜೆ. ಸಾಮಾನ್ಯವೆಂದರೆ ಎಲ್ಲ ಮನುಷ್ಯರ ಸಾಮಾನ್ಯ ಒಂದು ಆಕಾರ. ಆ ಕಲ್ಪನೆ ಎಲ್ಲಿಂದ ಬಂದಿತು? ಅದು ನಮ್ಮ ಆತ್ಮನಲ್ಲಿಯೇ ಅಸ್ಪಷ್ಟವಾಗಿ ಅಡಗಿತ್ತು ಅದು ಅನುಭವದ ಮುಖಾಂತರ ಬಾಹ್ಯ ಚಕ್ಷುವಿಗೆ ಅಂದರೆ ಜ್ಞಾನಚಕ್ಷುವಿಗೆ ಗೋಚರವಾಗುವದು. ಸಾಮಾನ್ಯ ಅನ್ನುವದು ಜನ್ಮಪೂರಕ ಬುದ್ಧ್ಯಾರೂಢ, ಅನುಭವ ಪೂರ್ವಕವಾದವುಗಳು, ಆದ್ದರಿಂದಲೇ ಈ ಜ್ಞಾನಕ್ಕೆ ಇನ್ನೊಂದು ಅರ್ಥ ಸ್ಮೃತಿ. ಇವೆಲ್ಲ ಸ್ಮೃತಿವಾದಕ್ಕೆ ಉಳಿದ ಪ್ರಾಣಿಗಳು ಅಳತೆಗೋಲಾಗಲಾರವು. ಮಾನವನೇ ಎಲ್ಲದಕ್ಕೂ ಅಳತೆಯ ಸಾಧನ (Man is the measure all things) ಯಾವಾಗಲೂ ಸಾಮಾನ್ಯಗಳು ನಮ್ಮ ಅಂತರಂಗದಲ್ಲಿ ಹುದುಗಿರುತ್ತವೆ. ಅವುಗಳನ್ನು ಅರಿಯಬೇಕಾದಲ್ಲಿ ಬಾಹ್ಯ ಪ್ರಪಂಚದ ವಿಷಯಗಳ ಅನ್ವೇಷಣೆಯಲ್ಲಿರುವದಾಗಿದೆ. ಸತ್, ಅಸತ್, ಏಕತ್ವ, ಬಹುತ್ವ, ವೈವಿಧ್ಯ ಇವೆಲ್ಲ ಸಾಮಾನ್ಯಗಳೆಂದೇ ಆತನ ಅಭಿಪ್ರಾಯ.

ನಮ್ಮ ಭಾವಜ್ಞಾನವೇ ನಿಜವಾದ ಅರಿವನ್ನು ಕೊಡುವಂಥದ್ದು ಇಂದ್ರಿಯ ಜ್ಞಾನವಾದರೂ ಕ್ಷಣಿಕ. ಯಾವುದು ಶಾಶ್ವತವಾದದ್ದು, ಸ್ಥಿತವಾದದು ಅಂತಹದ್ದರದ ಜ್ಞಾನವೇ ಸತ್ಯಜ್ಞಾನ. ಹಾಗೆ ಪ್ರಪಂಚದ ವಸ್ತುಗಳು ಕ್ಷಣಿಕ ಆದ್ದರಿಂದ ಇಂದ್ರಿಯ ಗೋಚರವೆಲ್ಲವೂ ಕ್ಷಣಿಕ. ಆದರೆ ಸತ್ಯವಾದುದೆಂದರೆ ಅದು ತೋರಿಕೆ ಪ್ರಪಂಚಕ್ಕೆ ಆಧಾರ ಭೂತವಾದುದು. ಇಂದ್ರಿಯ ಜ್ಞಾನದಿಂದ ಸತ್ಯದ ಸ್ವರೂಪ ಜ್ಞಾನವನ್ನು ತಿಳಿಯಲಾಗುವದಿಲ್ಲ. ಅದರ ಅರಿವಿಕೆಗೆ ವಸ್ತುಗಳ ಅಂತರ್ಗತವಾದ, ಆಧಾರಭೂತವಾದ ಸಾಮಾನ್ಯ ಅಂಶವನ್ನು ತಿಳಿಸುವುದು ತತ್ವಶಾಸ್ತ್ರವೆಂದರೆ ಅಸತ್ಯದ ಬಗ್ಗೆ ತಿಳುವಳಿಕೆ ಅದನ್ನು ತಿಳಿಯಲ್ಪಡುವ ಸಾಮಾನ್ಯಗಳು ತತ್ವಶಾಸ್ತ್ರಕ್ಕೆ ಮೂಲಗಳು. ಸೂರ್ಯ ಈ ಜಗತ್ತಿನ ಉತ್ಪತ್ತಿಗೆ ಹಾಗೂ ಸಮಸ್ತ ಪದಾರ್ಥಗಳಿಗೆ ಹೇಗೆ ಕಾರಣನೋ ಹಾಗೆ ಶ್ರೇಯವೆಂಬುದು ಸ್ವಯಂಪ್ರಭೆಯಾಗಿ ಎಲ್ಲ ಸಾಮಾನ್ಯಕ್ಕೂ, ಸರ್ವಸತ್ಯಕ್ಕೂ ಮೂಲಸ್ಥಾನವಾಗಿ ಶಕ್ತಿ ಜ್ಯೋತಿ ಪ್ರಧಾನವಾಗಿದೆ. ಆ ಸತ್ಯದ ಜ್ಞಾನವಾಗಬೇಕಾದರೆ ಒಂದು ವಸ್ತುವಿನ ಉದ್ದೇಶವೆ, ಪ್ರಯೋಜನವೆ, ಅದರ ನಿಜವಾದ ಶ್ರೇಯ ಅಥವಾ ಪರಿಪೂರ್ಣತೆ ಶ್ರೇಷ್ಠತಮ ಧರ್ಮಸಾಧನೆಯನ್ನು ಸಾಧ್ಯಹೇಳುವದು. ಈ ವಿಶ್ವದ ಉದ್ದೇಶ ನಮ್ಮ ದುರ್ಬಲ ಇಂದ್ರಿಯದ ಮೂಲಕ ಸತ್ಯವನ್ನು ಅನುಭವಿಸಲಾಗದು. ಆ ಪೂರ್ಣಜ್ಞಾನದ ಸೌಂದರ್ಯ ಸೊಬಗನ್ನು ಅನುಭವಿಸಲು ಭಾವಗಳ ಅವಶ್ಯಕತೆಯಿದೆ. ಹಾಗೆಯೇ ತತ್ವಜ್ಞಾನ ಮಾತ್ರದಿಂದ ಆ ಸೊಬಗನ್ನು ತಿಳಿದು ಆನಂದಿಸಬಹುದು. ಆ ಪರಮಶ್ರೇಯದ ಸ್ವರೂಪ ಅರಿಯುವುದೇ ಪ್ರಪಂಚದಲ್ಲಿ

ನಿಜವಾದ ವಿದ್ಯೆ ಇದನ್ನು ಅರಿಯದ ಉಳಿದ ಜ್ಞಾನ ನಿಷ್ಫಲ. ಇಂದ್ರಿಯ ಸುಖವನ್ನು ಪಡೆದು ಪರಮ ಸುಖವನ್ನು ಪಡೆಯದಿದ್ದರೆ ಅದರಿಂದ ಲಾಭವಿಲ್ಲ. ನಮ್ಮ ಇಂದ್ರಿಯ ಸೀಮೆಗೆ ಒಳಪಟ್ಟು ತಾತ್ವಿಕತೆ ಅಥವಾ ಜ್ಞಾನದ ದೃಷ್ಟಿ ಬಹು ಸಂಕುಚಿತವಾದದ್ದು. ಕಾಲಾತೀತವಾದ, ಇಂದ್ರಿಯಾತೀತವಾದ ಅದನ್ನು ಅರಿದಂತೆ ಜೀವನ, ಜ್ಞಾನ ವಿಸ್ತಾರವಾಗಿ ಪೂರ್ಣರೂಪ ತಾಳಿ ಅನುಕೂಲವಾಗುವದು. ಈ ಪ್ರಪಂಚ ಆ ಮೂಲ ಸತ್ಯದ ಪ್ರತಿಬಿಂಬ ಇಂದ್ರಿಯ ಗಮ್ಯತೆಗೆ ಮಹತ್ವಕೊಟ್ಟಂತೆ ಅದಕ್ಕಿಂತ ಹೆಚ್ಚಿಗೆ ಬಾವಾತ್ಮಕ್ಕೆ ಮಹತ್ವವನ್ನು ಕೊಟ್ಟಿರುವನು. ಈತ ಅನುಭಾವವಾದಿ ಇಂದ್ರಿಯ ಎಲ್ಲೆಗೆ ಮೀರಿದುದನ್ನು ಕಾಣುವ ಯೋಗಿಕ ದೃಷ್ಟಿ, ಅಂದರೆ ಅನುಭಾವಿ. ಇಂದ್ರಿಯಾತೀತ ಸತ್ಯ ಇರುವದನ್ನು ಗುರುತಿಸುವದು ಪ್ಲೋಟೋ ದರ್ಶನ ಆಂತರಂಗಿಕ ಅನುಭಾವ ವಾದವಾಗಿದೆ. ಸಾಕ್ರೇಟಿಸ್‌ನು ಕೂಡಾ ಒಂದು ದೃಷ್ಟಿಯಿಂದ ನೋಡಿದಾಗ ಧ್ಯಾನ, ದಾನ ಸಮಾಧಿಯನ್ನೊಳಗೊಂಡ ಯೋಗಿ, ವೈಜ್ಞಾನಿಕ ಬುದ್ಧಿಬದ್ದ ಇಬ್ಬರು ಅನುಭಾವಿಗಳೆ. ಪುರುಷ - ಪ್ರಕೃತಿಗಳ ವಿವರಣೆ, ಚೇತನ - ಜಡಗಳ ಸಮ್ಮಿಶ್ರಣ ಇಲ್ಲಿ ದ್ವೈತವಾದವನ್ನು ಕಾಣಬಹುದು. ಗಾಜಿನ ಹರಳಿನಲ್ಲಿ ಸೂರ್ಯನ ಕಿರಣಬಿದ್ದಾಗ ಅದು ಅನೇಕ ಕಿರಣಗಳಾಗಿ ಚಿತ್ರಿಸಲ್ಪಡುವಂತೆ ಪ್ರಧಾನವಾದ ಬಲದಿಂದ ಸಾಮಾನ್ಯ ಅನೇಕ ವಸ್ತುಗಳಾಗಿ ಪರಿಣಮಿಸುತ್ತದೆ.

ಸೃಷ್ಟಿ ಸಿದ್ಧಾಂತವನ್ನು ಪರಿಶೀಲಿಸುವ ಪ್ಲೋಟೋ ಈಶ್ವರನನ್ನು ಒಪ್ಪುತ್ತಾನೆ. ಸೃಷ್ಟಿಯನ್ನು ಅವನೇ ಮಾಡಿದರೂ ನೇರವಾಗಿ ಮಾಡಲಾರ. ಇಲ್ಲಿ ಚಿತ್ತತ್ವವು ಪ್ರಧಾನತ್ವ ಇವೆರಡನ್ನು ಒಂದುಗೂಡಿಸಿ ಫಲಪ್ರದವಾಗುವಂತೆ ಮಾಡುವ ಕೃರ್ತ್ಯ ಆತ. ಚತುರ್ಭುಜಗಳಿಂದ ಕೂಡಿದ ಈ ಪ್ರಪಂಚಕ್ಕೆ ಆತ್ಮ ಶಕ್ತಿಯನ್ನು - ಪ್ರಾಣಶಕ್ತಿಯನ್ನು ತುಂಬುವನು. ಇದುವೇ ಲೋಕಾತ್ಮ ಅಥವಾ ಸೂತ್ರಾತ್ಮ (World Soul) ಸೂತ್ರಾತ್ಮ ಈ ಸ್ಥೂಲ ಪ್ರಪಂಚವನ್ನು ನಿರ್ಮಿಸುವದು. ತಾನೂ ಕೂಡಾ ಚಲನಶಕ್ತಿಯಿಂದ ಎಲ್ಲವನ್ನು ಚಲಿಸುವಂತೆ ಮಾಡುವನು. ಆತ ತನ್ನ ಸ್ವಭಾವಕ್ಕೆ ಅನುಸಾರವಾಗಿ ಚಲಿಸುವನು ಮಾನವನ ಪ್ರಯೋಜನಕ್ಕೆ ಸಹಕಾರಿಯಾಗಿಯೇ ಕೈ ಸೃಷ್ಟಿಯನ್ನು ಸೃಷ್ಟಿಸಿದ್ದಾನೆ. ಪರಿಣಾಮವಾದಿಗಳು ಹೇಳುವಂತೆ ಈ ಜಗತ್ತು ಗೊತ್ತುಗುರಿಗಳಿಲ್ಲದ ಪರಮಾಣುಗಳಿಂದ ಆಕಸ್ಮಿಕವಾಗಿ ಸಂಯೋಗದಿಂದ ಹುಟ್ಟಿದ ಜಡಸೃಷ್ಟಿ. ಇಲ್ಲಿ ಜಗತ್ತು ಪರಿಣಾಮ ಪೂರಕವಾದದು. ಅದಕ್ಕೆ ಒಂದು ನಿರ್ದಿಷ್ಟವಾದ ಗುರಿಯಿದೆ. ಪರಮಶ್ರೇಯುವಾದ ಧ್ಯೆರ್ಯ ಸಾಧನೆಗೆ ಅದು ಹುಟ್ಟಿದೆ. ಈ ಪ್ರಯೋಜನ ಸಿದ್ಧಾಂತವನ್ನು ಹೇಳುವನು. ಶುಭಕರವಾದ, ಮಾನಬದ್ಧವಾದ, ಫಲಪೂರ್ವಕವಾದ ಚಿದ್ವಿಷೇಶಕ್ಕೆ ಸಂಬಂಧ. ಜಡಭರಿತವಾದದದ್ದು ಭೌತಿಕ ಆಶಕ್ಕೆ ಸಂಬಂಧ. ಇಲ್ಲಿ ಮಾನವನ ಪರಮ ಧ್ಯೇಯವನ್ನು ಕಂಡುಹಿಡಿಯವುದೇ ಆತನ ತತ್ವಶಾಸ್ತ್ರದ ಗುರಿ. ಪರಮಶ್ರೇಯವನ್ನು ನಿರ್ಧರಿಸಬೇಕಾದರೆ ಸಮ್ಯಕ್ಯಜ್ಞಾನದ ಅವಶ್ಯಕತೆಯಿದೆ. ಸಮ್ಯಕ್‌ಜ್ಞಾನ ಈ ಶಬ್ದ ಬೌದ್ಧರಲ್ಲಿ ಬಳಕೆಯಾಗಿ ಮಾನವ ಜೀವನ ತ್ರಿವಿಧವಾಗಿದೆ. ಜ್ಞಾನವೇ ಪ್ರಧಾನವಾಗಿ ಹೊಂದಿ ಸಾಮಾನ್ಯಗಳ ಸ್ಮರಣೆಯಲ್ಲಿ ಮಗ್ನನಾಗಿರಬೇಕಾದಾಗ ಅದು ಸತ್ವಗುಣ ಹೊಂದಿದಂತೆ. ಪುರುಷ ಪ್ರಯತ್ನದಲ್ಲಿ ಪ್ರವೃತ್ತನಾಗಿ ಉದ್ಯೋಗಿಯಾಗುವಂತೆ ಮಾಡುವ ಗುಣ. ಅದು ರಜೋಗುಣ ಮದಾಂದತೆಯಿಂದ ತನ್ನ ವಿಶಾಲತ್ವವನ್ನು ಪ್ರಕಾಶಪಡಿಸಲಾಗುವ ಇದು ತಮೋಗುಣ ಸಂಬಂಧ. ಈ ಗುಣತ್ರಯಗಳ ಸ್ವಾಭಾವಿಕ ಪ್ರವೃತ್ತಿ ಅದು ಮಾನವ ಜೀವನದ ರೀತಿ ತನ್ನ ಜೀವನ ನಿರ್ದಿಷ್ಟ ಗುರಿಯ ನಿಯಮಿತ ಕೆಲಸಗಳನ್ನು ಮಾಡಲು ಇರುವ ಬಲವೇ ಸದ್ಗುಣ ಆ ಗುಣದಿಂದ ಗುರಿಯನ್ನು

ಸಾಧಿಸುವುದೇ ಅದರ ಪರಮಶ್ರೇಯ. ವಿವೇಕ, ಧೈರ್ಯ, ಆತ್ಮಸಂಯಮ ಇವುಗಳ ಸಮ್ಮಿಲನ ರೂಪ ಧರ್ಮಸ್ವಭಾವ ಇವು ನಾಲ್ಕನ್ನು ಹೊಂದಿರುವುದೇ, ಜ್ಞಾನ ವಿಮರ್ಶೆಯಿಂದ ಬಾಳುವುದೇ ಸದ್ಗುಣ ಸಂಪತ್ತನ್ನು ಪಡೆದಂತೆ ಇವೆ ಪರಮಶ್ರೇಯ. ಸದಾಚಾರವನ್ನು ಹೊಂದಿದ ವ್ಯಕ್ತಿ ಪುರುಷಾರ್ಥವನ್ನು ಸಾಧಿಸಿದಂತೆ ಸೌಖ್ಯವಂತ ಕೂಡಾ ಇಲ್ಲಿ ಸುಖವೆಂದರೆ ಭೋಗವಲ್ಲ, ಭೋಗ ಪುರುಷಾರ್ಥವೂ ಅಲ್ಲ. ಸಾಧನ ಚತುಷ್ಟಗಳಾದ ವಿವೇಕ, ಧೈರ್ಯ, ದಮ, ಧರ್ಮಸ್ವಭಾವ ಇವುಗಳಲ್ಲಿ ಸುಖವೆಂಬುದು ಇಲ್ಲವೆ ಇಲ್ಲ. ಯುಕ್ತನಾಗಿ ತಿಳುವಳಿಕೆವುಳ್ಳದ್ದು ಮೊದಲನೆಯದು ಸಮಗುಣಗಳುಳ್ಳದ್ದು ಸುಂದರವಾದದ್ದು. ಪರಿಪೂರ್ಣಯೋಗ್ಯಗಳು, ಅಭಿಮತಗಳು ಅದು ನಾಲ್ಕನೆಯದು. ಭೋಗ, ನೋವು, ನಲಿವು ಆತ್ಮನಿಗೆ ಜ್ಞಾನ ಜನ್ಯವಾದ, ಇಂದ್ರಿಯ ಜನ್ಯವಾದ ಸುಖಗಳಿಗೆ ಐದನೇ ಸ್ಥಾನವನ್ನು ಕೊಡಲಾಗಿದೆ. ಆತ್ಮ ಸಾಮರಸ್ಯವಾದ ಸುಖವೇ ಅತಿಶಯವಾದ ಪರಮಸುಖ. ಈ ಸುಖವನ್ನು ಅನುಭವಿಸುವಾತ ಅನುಭಾವಿ.

ಸೋಫಿಸ್ಟರು ನಿಜಜ್ಞಾನ ಅಸಾಧ್ಯವೆಂದರೆ ಸಾಕ್ರೇಟಿಸ್ ಯಥಾರ್ಥ ಜ್ಞಾನವೆಂದರೆ, ವರ್ಗೀಯಭಾವ ಜ್ಞಾನವೆಂದೂ, ಇಂದ್ರಿಯ ಗೋಚರ ಪ್ರಪಂಚವೆಲ್ಲವೂ ಕ್ಷಣಿಕವೆಂದೂ, ಹೆರಾಕ್ಲಿಟಸ್ ಹೇಳುವನು. ಶುದ್ಧ ತತ್ವ ವಿಕಾರಹೊಂದಲಾರದು ಅದು ನಿಶ್ರೇಯವಾಗಿ, ಸತ್ಯವಾಗಿ ಇರತಕ್ಕದ್ದು ಎಂದು ಪಾರ್ಮಿನೈಡಿಸ್ ಹೇಳುವನು. ಅದು ಏಕೆ, ಅದ್ವಿತೀಯ ಎನ್ನುವ ಇಲಿಯಾಟಿಕ್‌ರು. ಸಾಮಾನ್ಯಗಳು ಅನಾಕ್ರಯ ಮಾಡಲ್ಪಟ್ಟು ಒಂದೇ ವಿಧವಾದ ಶ್ರೇಯದಿಂದ ಆಳಲ್ಪಡುವರು. ಪ್ಲೋಟೋ ಹೇಳುವನು. ಸತ್ಯ - ನಿತ್ಯ ಚೈತನ್ಯಮಯವಾದ ಮತ್ತು ಭಾವಪೂರಿತವಾದದ್ದು ಎಂದು ಗ್ರೀಕ್ ತತ್ವಶಾಸ್ತ್ರಜ್ಞರೆಲ್ಲರ ಅಭಿಪ್ರಾಯ. ಪ್ಲೋಟೊವಿನ ಸಿದ್ಧಾಂತ ಶಂಕರಾಚಾರ್ಯರ ಅದ್ವೈತ ಸಿದ್ಧಾಂತವನ್ನು ಹೋಲುವದು. ಅದರಂತೆ ಸಾಂಖ್ಯರೊಂದಿಗೆ ಹೋಲಿಕೆಯಿದೆ. ಅಲ್ಲಿ ಪುರುಷ ಸ್ವಯಂ ಪ್ರತಿಭೆಯುಳ್ಳವ ಚೈತನ್ಯನಾಗಿ, ಪ್ರಕೃತಿ, ಜಡ ಆ ಚೈತನ್ಯಮಯ. ಇಲ್ಲಿ ಪುರುಷನೇ ಪ್ರಧಾನ ಕಾರಣ. ಪ್ರಕೃತಿಯು ಉಪಾಧಾನ ಕಾರಣ 'ಪುರುಷ ಕರ್ತೃತ್ವವುಳ್ಳವ, ಪ್ರಕೃತಿ ಪುರುಷನ ಕರ್ತೃತ್ವಕ್ಕೆ ಅವಶ್ಯಕ ವಸ್ತುಗಳನ್ನು ಒದಗಿಸುವುದು. ಪ್ಲೋಟೊವಿನಲ್ಲಿ ಪುರುಷ ಕರ್ತೃತ್ವವುಳ್ಳವನಾದರೆ, ಸಾಂಖ್ಯರಲ್ಲಿ ಕರ್ತೃತ್ವಹೀನ, ಪ್ರಕೃತಿ ಜಡವಾಗಿದ್ದರೂ ಶಕ್ತಿಯುತ ಪುರುಷನು ಕುಂಟ, ಪ್ರಕೃತಿಯು ಕುರುಡಿ ಇವೆರಡರ ಕೂಟದಿಂದ ಜಗತ್ತ್ ಸೃಷ್ಟಿ. ಪ್ಲೋಟೊವಿನ ಪ್ರಧಾನವನ್ನು ಮಾಯೆಯೆಂದು ಅದಕ್ಕೆ ಸಂಬಂಧಿಸಿದ ಸಿದ್ಧಾಂತಕ್ಕೆ ಮಾಯಾವಾದ ವೆನ್ನಬಹುದು. ಪ್ಲೋಟೊ ಮತದ ಸಾರ ಹಿಂದೂ ವೇದಾಂತ ದರ್ಶನ ಅವಲಂಬಿಸಿದೆ ಎನ್ನಬಹುದು. ಇದನ್ನು ಜ್ಞಾನದ ಮೂಲೆಲ್ಲಾ ಚಿತ್ತಿನಲ್ಲಿ ವಿವೇಚನಾ ಶಕ್ತಿಯಿಲ್ಲದೇ ಇಂದ್ರಿಯಾಲೋಕಕ್ಕೆ ಸಂಬಂಧಿಸಿದ್ದಲ್ಲ. ಅನ್ನುವ ತತ್ವಕ್ಕೆ ಬುದ್ಧಿ ಪ್ರಮಾಣವಾದ (Rationlisam) ಅನ್ನುವರು. ಆತ್ಮನಲ್ಲಿ ಅಡಗಿರುವ ಸಾಮಾನ್ಯಜ್ಞಾನ ಅಂಕುರಿಸಬೇಕಾದರೆ ಅನುಭವ ಅವಶ್ಯಕ ಅನ್ನುವದಾದಲ್ಲಿ ಅದಕ್ಕೆ Mysticism ಎನ್ನಬಹುದು. ಸತ್ಯ ಪ್ರಪಂಚವಿದೆಯೆಂದು ಹೇಳುವಲ್ಲಿ ಆ ದರ್ಶನವನ್ನು ವಸ್ತು ಸತ್ಯವಾದವೆಂದು (ಸತ್ಯಾತ್ಮಕವಾದ) ಕರೆಯಬಹುದು. ಈ ಪ್ರಪಂಚ ಚಿನ್ಮಯವಾದದು. ಚಿತ್ ಪ್ರಧಾನವಾದ ಅಥವಾ ವಸ್ತು ಚಿನ್ಮಯವಾದ (Idealism) ಎಂದು ಕರೆಯಲಾಗಿದೆ. ದೃಶ್ಯಪ್ರಪಂಚ ತೋರಿಕೆಯ ಪ್ರಪಂಚ ಮಾತ್ರ ಅಥವಾ ಸತ್ಯ ಪ್ರಪಂಚದ ರೂಪಾಂತರ. ಅದು ಭಾವಾತ್ಮಕವಾದ (Phelominalsim) ಆಗಿದೆ. ಸರ್ವವನ್ನು ಒಟ್ಟುಗೂಡಿಸುವ ಲೋಕಾತ್ಮವನ್ನು ಅಂಗೀಕರಿಸುವದರಿಂದ (Pantheism) ವಿಶ್ವಬ್ರಹ್ಮವಾಗಿಯೂ, ಈಶ್ವರನನ್ನು ಒಪ್ಪುವದರಿಂದ

ಕೇಶ್ವರ (Theism) ಕೂಡಾ ಆಗಿದೆ. ಇಲ್ಲಿ ಪ್ರಾಕೃತಿಕ ಸಂಬಂಧವನ್ನು ನಿರಾಕರಿಸಿ ಲೋಕೋತ್ತರವಾದವನ್ನು ಹೇಳುತ್ತದೆ. (Tramsceendentlasim). ಇಂದ್ರಿಯಲೋಕದ ಮಿಥ್ಯ, ವಿಷಯ ಭೋಗಹೇಯ, ಅದಕ್ಕೆ ತೋರಿದ ಇಹಲೋಕದ ತಿರಸ್ಕಾರ, ಆತ್ಮ ಸತ್ಯವಾಗಿದೆ. ಮಾನವನು ಪತನವಾಗುತ್ತಾನೆ, ಎನ್ನುವ ಆತನ ಭವ್ಯಸಿದ್ಧಾಂತ ಇವು ಕ್ರೈಸ್ತಮತದ ತಾತ್ವಿಕನೆಲೆಗೆ ತಳಹದಿಯಾದಂತೆ ಭಾಸವಾಗುವದು. ಕ್ರೈಸ್ತರ ಹಲ ಕೆಲವು ತಾತ್ವಿಕ ರೂಪಗಳು ಪ್ಲೋಟೋನಲ್ಲಿ ದೊರೆಯುತ್ತವೆ.

ಅರಿಸ್ಟಾಟಲ್ - ಈ ಪ್ರಪಂಚ ಚಿತ್ ಪ್ರಧಾನಾತ್ಮಕವೆನ್ನುವನು. ನಮ್ಮ ಅನುಭವ ಪ್ರಪಂಚವೇ ನಿಜವಾದ ಲೋಕ, ಇದರ ಯಥಾರ್ಥ ಜ್ಞಾನವನ್ನು ತಿಳಿಯಬೇಕಾಗುವದು. ಸಮ್ಯಗ್ ಜ್ಞಾನವೆಂದರೆ ನಮ್ಮ ಅನುಭವವನ್ನೇ ಆಧಾರವಾಗಿಟ್ಟು ಅದರ ಮೂಲತತ್ವ ಶೋಧನೆಯೆಡೆಗೆ ಸಾಗಬೇಕಾಗುವದು. 'ಸಮ್ಯಗ್‌ಜ್ಞಾನವೆಂದರೇ ಪ್ರತ್ಯೇಕ ಸಂಗತಿಗಳನ್ನು ಪ್ರಾಕೃತಿಕ ಕಾವ್ಯಗಳನ್ನು ತಿಳಿದುಕೊಳ್ಳುವದು ಮಾತ್ರವಲ್ಲ ಈ ಕಾರ್ಯಗಳ ಘಟನೆಗೆ ಕಾರಣವೇನು? ಸಂಭವಗಳುಂಟಾಗುವಂತೆ ಮಾಡಿದ ಮೂಲತತ್ವಗಳಾವವು ಎಂಬ ಈ ರೀತಿಯಾದ ಯಾವ ಕಾರ್ಯ ಕಾರಣವನ್ನು ಪಡೆಯುವುದೇ ನಮ್ಮ ಗುರಿಯಾಗಿರಬೇಕು' ಹೀಗೆ ಸಾಗುವ ರೀತಿಯೇ ತತ್ವಶಾಸ್ತ್ರೀಯ ಮಾರ್ಗ. ಸಕಲವಸ್ತುಗಳ ಮೂಲಕಾರಣವನ್ನು ತಿಳಿಯುವ ಶಾಸ್ತ್ರವೇ ಪ್ರಥಮ ತತ್ವಶಾಸ್ತ್ರವೆನ್ನುತ್ತಾರೆ. ಅನುಭವದಿಂದ ದೊರೆಯುವ ಚಿತ್ ಪ್ರಪಂಚದಲ್ಲಿರುವ ಬುದ್ಧ್ಯಾರೂಢ ತತ್ವಗಳು ಅವುಗಳಿಗೆ ಅನುಭವ ಪೂರ್ವಗಳೆಂದೇ ಕರೆಯುವನು. ಅವುಗಳ ಸ್ಥಿತಿತ್ವ ಮನಸ್ಸಿನಲ್ಲಿ ಹೊಳೆಯಬೇಕಾದರೆ ಅನುಭವ ಬಹಳ ಮುಖ್ಯ. ಮನಸ್ಸಿನಲ್ಲಿ ಹುದುಗಿರುವ ತತ್ವಗಳನ್ನು ಅನುಭವದಿಂದ ವ್ಯಕ್ತಗೊಳಿಸಬಹುದು. ಪರತತ್ವವೆನ್ನುವದು ನಿತ್ಯ ಸತ್ಯವಿದ್ದಂತೆ. ಚಿಂತನೆ ರೂಪವು ಕೂಡಾ ಚಿಂತನೆ ಸತ್ಯದೊಡನೆ ಬಂದಾಗ ಸತ್ಯವೆನಿಸುವುದು. 'ಸತ್'ನ ಬಗ್ಗೆ ಅದರ ಸುತ್ತ ಮುತ್ತಲಿನ ಭಾವದ ಬಗ್ಗೆ ಹೇಳುವ ಶಾಸ್ತ್ರಕ್ಕೆ ಆಧ್ಯಾತ್ಮಶಾಸ್ತ್ರವೆಂದೂ ಕರೆಯುವರು. 'ಸುಂದರವಾದ ಚಿತ್ರ ನಮ್ಮ ಹೃದಯವನ್ನು ಹೇಗೆ ಸೆಳೆಯುವುದೋ, ಉತ್ಕೃಷ್ಟವಾದದೊಂದು ದೇಹ ನಮ್ಮ ಆತ್ಮವನ್ನು ಹೇಗೆ ಆಕ್ರಮಿಸುವುದೋ ಹಾಗೆ ಪರಮ ಸೌಂದರ್ಯ - ಶ್ರೇಯ ದೇಹಗಳ ಮೂಲಪರಮಾತ್ಮ ತನ್ನ ಕಾರಣಶಕ್ತಿಯಿಂದಲೇ ಸಮಸ್ತ ಭೂತಗಳು ತಮ್ಮ ಪರಮಶ್ರೇಯಸ್ಸನ್ನು ಹಾತೊರೆಯುವಂತೆ ಮಾಡುವನು' ಸ್ವಾಭಾವಿಕದಿಂದ ತಮ್ಮ ಗುರಿಯಕಡೆಗೆ ಸಾಗುವುದೇ ಧ್ಯೇಯ ದೇವರು ಚಿದ್ರೂಪಿ, ಆತನ ಚಿತ್ತವು ಜ್ಞಾನರೂಪವಾದದ್ದು, ಸಮಸ್ತ ವಸ್ತುಗಳನ್ನು ಆತನು ಗ್ರಹಿಸಲು ಏಕಕಾಲದಲ್ಲಿ ಸಮರ್ಥ, ಸರ್ವದಕ್ಕೂ ಕಾರಣಕರ್ತ, ಆನಂದ ಮುಕ್ತಿ. ಇಲ್ಲಿ ಅರಿಸ್ಟಾಟಲ್‌ನ ದೇವರು ಹಾಗೂ ವೇದದ ಬ್ರಹ್ಮ ಎರಡರ ವಿವರಣೆಯೂ ಒಂದೇ ರೀತಿಯಿದೆ. ಸಚ್ಚಿದಾನಂದ ಅಂದರೆ ಸತ್ - ಚಿತ್ - ಆನಂದಮಯ. ಆತ ದೇಶ ಕಾಲಾತೀತ ವೈಶೇಶಿಕರು - ಪ್ರಪಂಚದಲ್ಲಿ ಇರತಕ್ಕ ಚಟುವಟಿಕೆಗಳು ಯಂತ್ರದಂತೆ ಕೆಲಸ ಮಾಡುತ್ತವೆಂದು ಹೇಳಿದರೆ, ಇಲ್ಲಿ ಪ್ರತಿಯೊಂದು ವ್ಯಾಪಾರವು ಚೈತನ್ಯಮುಖ ಪ್ರತಿ ಕೆಲಸದಲ್ಲಿ ಉದ್ದೇಶವಿದೆ. ಉದ್ದೇಶವಿಲ್ಲದೇ ಯಾವುದೂ ಪ್ರಕಟವಾಗುವದಿಲ್ಲ. ಎಲ್ಲವೂ ಉಪಯುಕ್ತ ವಸ್ತುವೆ ಹೊರತು, ನಿರರ್ತಕತೆಯಿಲ್ಲ. ಬಾಹ್ಯ ವಸ್ತುಗಳು ಜ್ಞಾನೇಂದ್ರಿಯ ಮೂಲಕ ಆತ್ಮನಲ್ಲಾಗುವ ಬದಲಾವಣೆಯೇ ಇಂದ್ರಿಯ ದರ್ಶನ (Sense Perception). ಸುಖ - ದುಃಖ ಭಾವಗಳು ಪ್ರತ್ಯಕ್ಷ ಜನ್ಯ ಪ್ರಾಣದ ಸ್ವಾಭಾವಿಕ ವ್ಯಾಪಾರಗಳು ಸುಸೂತ್ರವಾಗಿ ನಡೆಯುವ ಭಾವ - ಸುಖಭಾವ, ಅದರಂತೆ ವ್ಯಾಪಾರಗಳಿಗೆ ಅಡ್ಡಿಯುಂಟಾದರೇ ಅದಕ್ಕೆ ದುಃಖ ಭಾವವೆನ್ನಬಹುದು.

ಸುಖ ಇಚ್ಛೆಯನ್ನು ಹುಟ್ಟಿಸಿದರೆ ದು:ಖ ದ್ವೇಷವನ್ನು ಹುಟ್ಟಿಸುವಂತದ್ದು. ಇಚ್ಛೆಯ ಜೊತೆಗೆ ಗುಣಾವಗುಣಗಳ ವಿಮರ್ಶೆ ಮಾಡುವ ವಿಚಾರ ಕೂಡಿದಾಗ ಸಂಕಲ್ಪ - ವಿಕಲ್ಪ ಶಕ್ತಿಗಳು ಜನಿಸುವವು. ಇದಲ್ಲದೇ ಮಾನವನಲ್ಲಿ ಸತ್ವಗಳ ಬಗ್ಗೆ ಅಭ್ಯಾಸಮಾಡುವ ಅದರ ಬಗ್ಗೆ ತಿಳಿಯುವ ಭಾವಚಿಂತನಾ ಶಕ್ತಿಯೂ ಕೂಡಾ ಇದೆ. ಮಾನವನು ಇಂದ್ರಿಯ ಲೋಕವನ್ನು ಹೊಂದಿದಂತೆ ಚಿದ್ರೂಪದಲ್ಲಿ ಸತ್ ತತ್ವಗಳನ್ನು ಕೂಡಾ ದರ್ಶಿಸಬಲ್ಲನು. ಆ ಕುರಿತು ಚಿಂತಿಸುವ ಶಕ್ತಿ ಅದು ಚಿತ್. ಆ ಚಿತ್‌ನ ವ್ಯಾಪಾರ ಸೂತ್ರಗಳೇ ಅಥವಾ ಫಲಗಳೇ ಭಾವಗಳು. ಭಾವಗಳನ್ನು ಕುರಿತು ಚಿಂತಿಸುವುದೇ ಆತ್ಮನು ಪಡೆಯುವ ಭಾವಾನಂದ. ಇಲ್ಲಿ ಆತ್ಮನು ಸತ್ಯ ಸಾಮಾನ್ಯ ರೂಪದ ಲೋಕಾತ್ಮವಾದ, ಆ ಬ್ರಹ್ಮನ ಚಿತ್ತಾಂಶವೇ ಮಿಥ್ಯ. ಇಲ್ಲಿ ಮನುಷ್ಯ ಮತ್ತು ಪ್ರಾಣಿಗಳಿಗೆ ಇಂದ್ರಿಯ ವ್ಯಾಪಾರಗಳೆಲ್ಲವೂ ಸಮವಾಗಿಯೇ ಇವೆ. ಜ್ಞಾನವೆಂಬುದು ಮಾತ್ರ ಮಾನವನ ವಿಶೇಷ. ಜ್ಞಾನ ಪೂರ್ವಕವಾದ ಜೀವನವೇ ಮಾನವನ ರೀತಿ. ಹಾಗೆಯೇ ಯಾವುದರಿಂದ ಇತರ ಪ್ರಾಣಿಗಳಿಂದ ಶ್ರೇಷ್ಠನಾಗಿರುವನೋ ಯಾವುದು ತನ್ನ ಜೀವನದ ಗುರಿಯೋ, ಅಂತಹ ಜ್ಞಾನ ಸಂಪಾದನೆಯೇ ಜೀವನದ ಮೂಲಸೂತ್ರ. ಅಂತಹ ಜೀವನವನ್ನು ಸಾಧಿಸುವುದೇ ಮನುಷ್ಯನ ಪರಮಶ್ರೇಯ. ಅದಕ್ಕೆ ಅರಿಸ್ಟಾಟಲ್ ಆನಂದವೆನ್ನುವನು. ಆನಂದ ಜೀವನವೇ ಮಾನವನ ಜೀವನ ಸಾರ್ಥಕ. ಇದಕ್ಕೆ ಸುಖವೆನ್ನಲಾಗದು. ಧರ್ಮ ಜೀವನದಲ್ಲಿ ಸುಖವೂ ಕೂಡಾ ದೊರೆಯುವುದರಿಂದ ಆನಂದ ಎಂಬ ಪರಮಶ್ರೇಯದಲ್ಲಿ ಸುಖವೂ ಕೂಡಾ ಸೇರಿದೆ. ಅರಿಸ್ಟಾಟಲ್ ಧರ್ಮಾತ್ಮ ಎಂಬ ಪದವನ್ನು ಯಾವ ಮನುಷ್ಯನಲ್ಲಿ ಜ್ಞಾನಚೇತನ (Cognition Reasion) + ಭಾವ ಚೇತನ (F eeling) + ಕರ್ಮಚೇತನ (Conationbesire) ಇವು ಮೂರು ಕೂಡಿದ ಪದವೇ ಧರ್ಮಾತ್ಮ ಅನ್ನುವ ಪದದಲ್ಲಿ ಉಪಯೋಗಿಸಿದ್ದಾನೆ. ಮನುಷ್ಯ ದೀರ್ಘಕಾಲದ ಅಲ್ಪಸುಖವನ್ನು ಬಯಸುವದಕ್ಕಿಂತ ಸ್ವಲ್ಪ ಸಮಯದಲ್ಲೇ ಅತ್ಯಂತ ಸುಖವನ್ನು ಅನುಭವಿಸುವನು ಆಧ್ಯಾತ್ಮಿಕ ಜೀವಿ. ಈ ಪುರುಷ ಶತಮಾನಗಟ್ಟಲೇ ಬದುಕಿ, ಅನರ್ಥ ಕಾಲಹರಣವನ್ನು ಬಯಸಲಾರನು. ಯಶೋದಭರಿತ ಒಂದು ವರ್ಷ ಬದುಕಿದ್ದರೆ ಸಾಕೆನ್ನುವ ಅಪೇಕ್ಷ ಉಪಯೋಗವಿಲ್ಲದ ಸಾವಿರ ಕೆಲಸಮಾಡಿದರೇ ಏನು ಪ್ರಯೋಜನ. ಪ್ರಯೋಜನಕರವಾದ ಒಂದು ಕೆಲಸಮಾಡಿದರೇ ಸಾಕು ಇಲ್ಲಿ ಆನಂದವೇ ಪರಮ ಗುರಿ. ಸುಖ ನಮ್ಮ ಪ್ರವೃತ್ತಿ ಮಾರ್ಗವನ್ನು ಪೂರ್ಣವಾಗಿಸುವುದು. ಧರ್ಮ ಜೀವನದ ತಕ್ಷಣ ಫಲವೆಂದರೆ ಸುಖ. ಜೀವನ ಪರ್ಯಂತರ ಕಷ್ಟದಲ್ಲಿ ಕಳೆಯುವುದೇ ಧರ್ಮ ಜೀವನಲ್ಲ. ಪುಣ್ಯ ಜೀವಿಯಾಗಬಹುದಾದರೇ ಸತ್ಯಸುಖವನ್ನು ಅನುಭವಿಸಬೇಕಾಗುವುದು. ಕರ್ಮವಿದ್ದರೇನೇ ಧರ್ಮಪುರುಷವಾಗುವದು. ಧರ್ಮ ಮತ್ತು ಕರ್ಮ ಒಂದಕ್ಕೊಂದು ಅನ್ಯೋನ್ಯವಾದವುಗಳು. ಸುಖ ಧರ್ಮ ಫಲವೇ ಹೊರತು ಅದೇ ಜೀವನ ಪರಮ ಗುರಿಯಲ್ಲ. ಇಲ್ಲಿ ವಿವೇಕ ಪೂರ್ಣ ಚಿತ್ತ ಪ್ರವೃತ್ತಿಯೇ ಪೂರ್ಣಾನಂದ ಇರುವ ಪರಮ ಶ್ರೇಯ. ಇಲ್ಲಿ ಮನುಷ್ಯನಲ್ಲಿ ಮಾತ್ರ ದೊರೆಯುವುದು. ಆನಂದದಿಂದ ಮಾನವನ ಆತ್ಮ ಪರವಶಗೊಳ್ಳುವದು. ಕರ್ಮ ಭಾವದಿಂದ ಆತ್ಮನಲ್ಲಿ ಉಂಟಾದ ಪರಿಣಾಮಕ್ಕೆ ಭಾವ ಸ್ವತಶುದ್ಧಿ ಎಂದು ಕರೆಯುವರು. ಅನುಭವ ಸತ್ಯದ ಬಗ್ಗೆ ಬೆನ್ನು ಹತ್ತುವದಕ್ಕಿಂತ ಸುಲಭವಾದ ಮಿಥ್ಯವನ್ನೇ ಉತ್ತಮವೆಂದು ಏಕೆ ಆರಿಸಿಕೊಳ್ಳಬಾರದು ಎನ್ನುವನು. ಸುಖವು ನಾನಾ ತೆರನಾಗಿದೆ. ಸಂಗೀತ ಮತ್ತು ಕಾವ್ಯಗಳನ್ನು ಎಣಿಸುವಾಗ ಕಾವ್ಯಕ್ಕೆ ಹೆಚ್ಚು ಮಹತ್ವ ಕೊಟ್ಟಿರುವನು. ಇವುಗಳಿಂದ ದೊರೆಯುವ ಸುಖ ದೀರ್ಘಕಾಲ ನಿಲ್ಲುವುದಿಲ್ಲ. ಸುಖ ಅನ್ನುವದಾದರೇ ಭೌತಿಕವಾದುದ್ದಲ್ಲ. ಶಾಂತಿ ಮತ್ತು ಚೈತನ್ಯಗಳು

ಸಮ್ಮಿಳಿತ ಸ್ಥಿತಿ ವಾಸ್ತುಶಿಲ್ಪ, ಚಿತ್ರಕಲೆ ಇವುಗಳನ್ನು ವಿವರಿಸುವಾಗ ಅರಿಸ್ಟಾಟಲ್ ಆನಂದದ ಜ್ಞಾನಸಂಬಂಧವೇ ಪ್ರಧಾನ ಕಾವ್ಯವಿಮರ್ಶೆ ಮಾಡುವಾಗ ಜ್ಞಾನಕ್ಕಿಂತಲೂ ಭಾವ ಬಲವೇ ಹೆಚ್ಚು. ಕಾವ್ಯದಿಂದುಂಟಾದ ಆನಂದವು ತತ್ವಶಾಸ್ತ್ರದ ಆನಂದೊಡನೆ ಹೋಲಿಸಬಹುದಾದರೆ, ಎರಡು ಆನಂದವು ಬೇರೆಬೇರೆಯಾಗಿವೆ. ಶಾಶ್ವತವಾದ ಜ್ಞಾನ ಪೂರಕವಾದ ಬಲವೇ ಆವೇಶ. ಇದು ಕ್ಷಣಿಕದಲ್ಲಿ ಬಂದುಹೋಗುವದು. ಪ್ರಜ್ಞಾಪೂರ್ವಕವಾಗಿದ್ದರೂ ಅಲ್ಲಿ ಬುದ್ಧಿ ಮತ್ತೆಗೆ ಅವಕಾಶ ಕಡಿಮೆ. ಆದರೆ ಅಲ್ಲಿ ಅನುಭವಿಸುತ್ತಿರವದಂತೂ ನಿಜ. ಆವೇಶ ಪರಮಶ್ರೇಯದ ಮಾರ್ಗದಲ್ಲಿ ದೊರೆಯುವುದೇ ಹೊರತು ಅದೇ ಶ್ರೇಯವಲ್ಲ. ಒಟ್ಟಿನ ಮೇಲೆ ಅರಿಸ್ಟಾಟಲ್, ಸಾಕ್ರೇಟಿಸ್ ಮತ್ತು ಪ್ಲೇಟೋವಿನ ಪೂರ್ಣ ಜೀವನದ ಆಧ್ಯಾತ್ಮ ಸಬಲೀಕರಣ ಮಾಡಿದ. ಅವರ ತಾತ್ವಿಕವನ್ನು ಉನ್ನತೀಕರಣಗೊಳಿಸಿದ ಇತನೂ ಕೂಡಾ ಅನುಭಾವಿ. ಏಕೆಂದರೆ ಭಾವಗಳ ಜ್ಞಾನದೊಂದಿಗೆ ಅದು ಇಂದ್ರಿಯ ಜ್ಞಾನಕ್ಕಿಂತಲೂ ಭಿನ್ನ ಇಂದ್ರಿಯಗಳಿಂದ ಪರಮ ಸತ್ಯವನ್ನು ಕಾಣಲಾಗುವದಿಲ್ಲ. ಆದರೆ ಭಾವಗಳಿಂದ ಇಂದ್ರಿಯಾತೀತ ಪರಮ ಸತ್ಯವನ್ನು ದೊರಕಿಸಬಹುದು. ಈತನ ಮೊದಲ ಪ್ರಶ್ನೆಗಳೆಂದರೆ ಈ ದೃಶ್ಯ ಪ್ರಪಂಚವೆಂದರೇನು? ಇಲ್ಲಿಯ ಅಂತರಾತ್ಮ ಯಾವುದು? ಯಾವ ತತ್ವಗಳಿಂದ ಸೃಷ್ಟಿಸಲ್ಪಟ್ಟಿದೆ. ಇವು ಆಧ್ಯಾತ್ಮಜೀವನದ ಮೊದಲ ಪ್ರಶ್ನೆಗಳು ಮನುಷ್ಯ ಅಭೌತಿಕವಾಗಿ ತನಗೆ ಮೀರಿದ ಪರಮಸತ್ಯವೆಂಬ ಆನಂದ ಲೋಕದಲ್ಲಿ ತೇಲಾಡುವಾಗ ಅಂದರೆ ಅನುಭವಿಸುವ ಆ ಪರಿ. ಅದನ್ನು ಪಡೆಯುವದಕ್ಕಾಗಿ ಇವೆಲ್ಲ ಶಾಸ್ತ್ರಗಳು. ಆಧ್ಯಾತ್ಮವೆಂದರೆ, ಇದನ್ನು ಕುರಿತದ್ದೆ ಇತ್ತ ಚಿತ್ತಪ್ರಧಾನವಾಗಿ ಪ್ಲೇಟೋವಿನ ಶಾಸ್ತ್ರದಲ್ಲಿರುವ ನ್ಯೂನ್ಯತೆ ರೇಖೆಗಳನ್ನು ತೆಗೆದು ಶುದ್ಧೀಕರಿಸುವಲ್ಲಿ ಈತನ ಪಾತ್ರ ಬಹುಮುಖ್ಯ. ಇಲ್ಲಿ ಅತೀಂದ್ರಿಯಗಳಾದ ಸಾಮಾನ್ಯಗಳ ವಿಮರ್ಶೆ ಅರಿಸ್ಟಾಟಲ್ ಗುರುವಿನ ನಿತ್ಯ ನಿರ್ವಿಕಾರ ರೂಪಗಳನ್ನು ಉಳಿಸಿಕೊಂಡಂತೆ ಲೋಕಾತೀತವಾದುದನ್ನು ದೃಢಮಾಡುವನು.

### ಪ್ಲೋಟೈನಸ್

ಪೌರ್ವಾತ್ಯರ ಅನುಭಾವ ಪದದ ಅರ್ಥ ಇಲ್ಲಿ ವಿಶೇಷವಾಗಿ ಕಾಣಬಹುದು. ಈತನು ಕ್ರಿ.ಶ. ೨೦೫ - ೨೭೦ರಲ್ಲಿ ಬದುಕಿದವನು. ಪುರಾತನ ಗ್ರೀಕ್‌ರ ಕೊನೆಯ ಚಿಂತಕ. ಈತನ ಪ್ರಕಾರ ದೇವರು ಅಂತಿಮ ಸತ್ಯನಾಗಿದ್ದಾನೆ. ಅವನು ಏಕೆ, ಎಲ್ಲಾ ನಾನಾತ್ವದಿಂದ, ಭೇದದಿಂದ ವಿಮುಖನಾಗಿದ್ದಾನೆ. ಅದ್ವಯ ಅಭೇಧ ತತ್ವ, ಅಚಲ, ಅಪರಿಗಾವಿ, ಅಕ್ಷರ, ನಿರ್ವಿಷಯಿಕ, ಶುದ್ಧಚೇತನ, ಜ್ಞಾತೃ ಜ್ಞೇಯಾತೀತ, ಭಾವಾತೀತ ಬುದ್ಧ್ಯಾತೀತ, ಅನಂತ, ಅನಿಧೇಶ, ಅನಿರ್ವಚನೀಯ, ನಿರ್ವಿಶೇಷ, ಸೃಷ್ಟಿಕರ್ತ, ಬುದ್ಧಿ ಅವನನ್ನು ತಲುಪಲಾರದು ಬುದ್ಧಿ ಯೋಚನಾಮಯಿ, ಯೋಜಿಸಲ್ಪಡುವ ವಸ್ತು ಇವುಗಳ ಬೇಧಗಳನ್ನು ಒಳಗೊಂಡಿರುತ್ತದೆ. ದೇವರು ಅಬೇಧನಾಗಿರುವದರಿಂದ ಅವನ ಚಿಂತನೆ ಹಾಗೂ ಭಾವನೆಯನ್ನು ಹಿಡಿಯಲಾರದು. ಅದು ಸತ್‌ತತ್ವ. ಈತನು ಒಬ್ಬ ಮಹಾ ಅನುಭಾವಿ, ತಾರ್ಕಿಕಕ್ಕೆ ಅಷ್ಟೇನು ಮಹತ್ವಕೊಟ್ಟಿಲ್ಲ. ಅನುಭವ ದಿವ್ಯಾನಂದ ಮುಖ್ಯ ಇಲ್ಲಿ. ಅಗ್ನಿಯಿಂದ ಕಿಡಿಗಳು ಹೊರಬರುತ್ತಿವೆ. ಅದರಂತೆ ಪರಿಪೂರ್ಣ ದೇವರಿಂದ ಈ ವಿಶ್ವ ಹೊರಬರುತ್ತದೆ.[೧೮] ಈ ಜೀವನದ ಮುಖ್ಯಗುರಿ ಆಧ್ಯಾತ್ಮಿಕ ಸ್ವಾತಂತ್ರವನ್ನು ಕೊಡುವದು. ಆತ್ಮವನ್ನು ಈ ದೇಹದಿಂದ ಸ್ವಾತಂತ್ರೀಕರಿಸುವದು. ಇದಕ್ಕಾಗಿ ಮುಖ್ಯವಾದ ಮೂರು ಅಂಶಗಳನ್ನು ಹೇಳುತ್ತಾರೆ. ೧. ಮನಸ್ಸನ್ನು ನಿರ್ಮಲಗೊಳಿಸುವದು. ೨. ನಿರ್ಮಲ ಮನಸ್ಸಿನ ಜೊತೆಗೆ ಬುದ್ಧಿಯನ್ನು

ಉಪಯೋಗಿಸುವದು. ೩. ಆತ್ಮ ಭಾವಾತೀತವಾಗಿ ಅಪರೋಕ್ಷ ಜ್ಞಾನವನ್ನು ಪಡೆಯುವದು. ಇಲ್ಲಿ ಮನಸ್ಸು ಪರಿಪೂರ್ಣವಾದ ದೇವರೊಡನೆ ಒಂದಾಗುತ್ತದೆ. ಕೆಲವು ಹೊತ್ತು ಆನಂದದಲ್ಲಿ ಲೀನವಾಗಿ ಮತ್ತೆ ವ್ಯವಹಾರಸ್ಥಿತಿಗೆ ಮರಳಬಹುದು. ಈ ರೀತಿಯ ಆನಂದವೇ ಗುರಿ. ಪಾಶ್ಚಾತ್ಯ ತಾತ್ವಿಕರಲ್ಲಿ ಇವನೊಬ್ಬ ಮಾತ್ರ ಅನುಭಾವಿ. ನಾವು ದರ್ಶನಕಲ್ಪನೆಯಲ್ಲಿ ಅನುಭಾವದ ಈತನನ್ನು ತೆಗೆದುಕೊಂಡು ಸಾಗಿದರೆ ಅನುಭಾವದ ಹಿನ್ನಲೆಯಲ್ಲಿ ಪಾಶ್ಚಾತ್ಯದರ್ಶನ ಅಧ್ಯಯನ ಮಾಡಿದಂತಾಗುವದು. ದರ್ಶನ ಕಲ್ಪನೆ ಪಾಶ್ಚಾತ್ಯರಲ್ಲಿ ಪ್ಲೋಟೊನಸ್ ಪೌರ್ವಾತ್ಯರ ಭಕ್ತಿಪಂಥದ, ಅನುಭಾವ ಪಂಥದ ಮಾರ್ಗಕ್ಕೆ ಹೊಂದಿಕೆಯಾಗಿದೆ. ಪ್ಲೋಟೊನಸ್‌ನ ಚಿಂತನೆ ಅದ್ವೈತ ವೇದಾಂತಕ್ಕೆ ತೀರ ಹತ್ತಿರ. ಒಂದು ಉಪನಿಷತ್ತುಗಳಂತೆಯೇ ದೇವರು ಅಂತಿಮ ಸತ್ಯ, ಅಖಂಡ, ಅನಂತನು, ಭಾವಾತೀತ, ಎರಡು ಉಪನಿಷತ್ತಿನ ಋಷಿಗಳಂತೆ ಇತನು ಅನುಭಾವಿ ಮೂರು ಬ್ರಹ್ಮಕ್ಕೆ ಜ್ಞಾನವೇ ಜೀವನ ಗುರಿ ಈ ದರ್ಶನ ಪ್ರಾಶ್ಚ್ಯ ಮತ್ತು ಪಾಶ್ಚಾತ್ಯ ಚಿಂತನೆಗಳ ಸಂಗಮ. ಅನುಭಾವ ಶಬ್ದಕ್ಕೆ ಸಂವಾದಿಯಾಗಿ ಇಂಗ್ಲೀಷಿನ "Mysticisim" ಬಳಕೆಯಾಗಿದೆ. ಆದರೆ ಬಹಳ ಕಡೆ ಇದಕ್ಕೆ ತಪ್ಪಾಗಿ ಅರ್ಥವನ್ನು ಕಲ್ಪಿಸಲಾಗುತ್ತದೆ. ಮಾಯಮಂತ್ರ, ಮಾಟ, ಮೋಹಿನಿ ವಿದ್ಯೆ ಇತ್ಯಾದಿಯಾಗಿ. ಆದರೆ ಇದು ತಪ್ಪು. ಇಲ್ಲಿ ಅನುಭಾವ ಅನ್ನುವ ಅರ್ಥ ತಿಳಿಯುವಲ್ಲಿ 'ಅಂಡರ್ ಹಿಲ್' ಎಂಬ ಲೇಖಕಿಯನ್ನು ನೋಡಬಹುದು "ಈ ಜಗತ್ತಿನಲ್ಲಿ ಮೈದಾಳಿರುವ ದೈವಿಕ ನಿಯಮಗಳನ್ನು ಶ್ರದ್ಧಾ ಭಕ್ತಿಗಳಿಂದ ಮನನಮಾಡಿ ಅದನ್ನು ಮಿಥ್ಯಾಜೀವನ ಆಧಾರ ಸೂತ್ರಗಳನ್ನಾಗಿ ಮಾಡಿಕೊಂಡು ತನ್ಮೂಲಕ ಆ ವಿರ್ಭಸುವ ದಿವ್ಯಾನಂದದಲ್ಲಿ ಮುಳುಗಿ ತನ್ನ ಅಲ್ಪತನವನ್ನು ಮರೆತು ಪರಮಾತ್ಮ ಸಾಯುಜ್ಯ ಪಡೆಯುವದೇ ಅನುಭಾವ. ಶುದ್ಧ ಆಧ್ಯಾತ್ಮಿಕ ಜೀವನ ಶಾಸ್ತ್ರವೇ ಅನುಭಾವ. ಇದೇ ಅನುಭಾವದ ಯುಕ್ತ ಅರ್ಥ."[೨] ಈ ಅರ್ಥವನ್ನು ಇತರ ಸಾಮಾನ್ಯ ಹಾಗೂ ತಪ್ಪು ಅರ್ಥಗಳಿಂದ ಪ್ರತ್ಯೇಕಿಸಿಕೊಳ್ಳಬೇಕು. ಹೀಗೆ ಸರ್ವಶಕ್ತನೂ, ಸರ್ವಜ್ಞನೂ ಮಹಾಚೇತನ್ಯನಾದ ದೇವರೇ ಅನುಭಾವಿಯ ಸ್ಫೂರ್ತಿಯನೆಲೆ; ಪ್ರೇಮತತ್ವದ ಮಹಾಮೇರು, ಪ್ರೇಮವೇ ಅನುಭಾವಿಯ ಜೀವನ ಸರ್ವಸ್ವ ಭಗವಂತ ಏಕ, ಪ್ರೇಮಪೂರಿತ, ಕೃಪಾಪೂರಿತ, ಜಾತಿ, ಕಾಲ - ಲಿಂಗಬೇಧವಿಲ್ಲದೆ ಎಲ್ಲರಿಗೂ ಒಲಿಯುವನು. ಪ್ರೇಮ ಸ್ವರೂಪಿಯಾದ ಪರಮಾತ್ಮನಲ್ಲಿ ತನ್ಮಂಗುರಾಗಿ ತಮ್ಮ ಅಲ್ಪತನವನ್ನು ಮರೆತು ಅನಂತಸಾಗರದ ಆಳದಲ್ಲಿ ಮುಳುಗಿ ಅದರಿಂದ ಉಂಟಾಗುವ ಮಹಾದಾನಂದವನ್ನು ಆಸ್ವಾದಿಸುವದು, ಜೀವನದ ಹಾದಿಯನ್ನು ತಿದ್ದಿಕೊಳ್ಳಿ, ಲೌಕಿಕ ಪ್ರೇಮವನ್ನು ದೈವೀ ಪ್ರೇಮವನ್ನಾಗಿ ಉದಾತ್ತೀಕರಿಸಿ, ಸಕಲ ಕಲ್ಯಾಣಗಳ ಪರಿಪೂರ್ಣನೂ ಆನಂದ ಸ್ವರೂಪಿಯೂ ದೈಯಾರ್ದ್ರ ಹೃದಯನೂ, ಕೋಮಲನೂ, ಸುಂದರನೂ, ಸತ್ಯಜ್ಞಾನ ಸ್ವರೂಪಿಯೂ ಆತ ಪರಮಾತ್ಮನ ಪಾದಪದ್ಮಗಳ ಆಶ್ರಯದಲ್ಲಿ ಬದುಕಿ ಕೈವಲ್ಯಕ್ಕೆ ನುಡಿ ಎಂಬುದು ಪ್ಲೋಟೋನಸ್ ಮುಂತಾದ ಅನುಭಾವಿಗಳ ವಿದ್ಯಬೋಧನೇ ಈ ಪರಮ ಪ್ರೀತಿಯ ವಸ್ತು ಕ್ರೈಸ್ತಧರ್ಮದ ದೇವರಾಗಿರಬಹುದು. ವಿಶ್ವಾತ್ಮಕನಾದ ವಿಶ್ವಾತ್ಮಕನಾಗಿರಬಹುದು. ಅಥವಾ ತತ್ವಶಾಸ್ತ್ರದ ಪರಬ್ರಹ್ಮನಾಗಿರಬಹುದು. ನಾಮ ಏನು ಬೇಕಾದರೂ ಇರಬಹುದು. ಇಂತಹ ದೇವರೊಡನೆ ಭಾವಾತ್ಮಕವಾದ ಐಕ್ಯವೆ 'ಅನುಭಾವ'[೩]

ಅನುಭಾವ, ತಾರ್ಕಿಕತೆ, ಬುದ್ಧಿಯತೆ, ಇಂದ್ರಿಯ ಜ್ಞಾನತೆ ಇವುಗಳಲ್ಲಿ ವಿಶೇಷವಾದ ವ್ಯತ್ಯಾಸವಿದೆ. ತಾರ್ಕಿಕತೆಯಲ್ಲಿ ತರ್ಕ ಮಾಡುವುದೇ ಆಗಿದೆ. ಬುದ್ಧಿಯ ಜ್ಞಾನದಲ್ಲಿ ಶುಷ್ಕಚರ್ಚೆ ಇಂದ್ರಿಯಗಳ ಜ್ಞಾನದಲ್ಲಿ

ಕಣ್ಣಿಗೆ ಕಂಡದ್ದೇ ಸತ್ಯ. ಆದರೆ ಅನುಭಾವದಲ್ಲಿ ದೇವರಲ್ಲಿಯ ಐಕ್ಯಭಾವವನ್ನು ಇಂದ್ರಿಯ ಬುದ್ಧಿಯ ಸ್ತರಗಳನ್ನು ಮೀರಿ ಅನುಭಾವದಲ್ಲಿ ಹುಡುಕುವದು. ಇದೇ ಅನುಭಾವದ ಮುಖ್ಯ ವಿಷಯ. ಉಳಿದೆಲ್ಲವುಗಳಿಂದ ಭಿನ್ನವಾದರೂ ಅನುಭಾವ ಇಲ್ಲಿಯೇ. ಇದನ್ನೇ ಪ್ಲೋಟೋನಸ್ ಹೇಳುವನು. ಎಲ್ಲದರಲ್ಲಿ ಸೋದರರಂತೆ ಕಾಣುವ ನಿಸ್ವಾರ್ಥ ಪ್ರೇಮ ಶಾಂತ ಚಿತ್ತವಾದರೆ ಅಲ್ಲಿ ದೇವರನ್ನು ನಂಬುವದು ಬಂಧನವನ್ನು ಮುರಿದು ಹೊರಬರುವಂತಾಗಲು ಅದೇ ಪ್ರಜ್ಞಾ ಅನುಭಾವಿಯ ಸ್ಥಿತಿ ಮುಖ್ಯ. ಇದರ ಗುಣಲಕ್ಷಣಗಳನ್ನು ಪ್ಲೋಟೋನಸ್ ವೀರಶೈವರ ಅನುಭಾವಿಗಳಂತೆ ಅನುಭಾವವನ್ನು ಅರ್ಥೈಸುವನು.

೧. **ಅನಿರ್ವಚನೀಯತೆ** - ದೇವರನ್ನು ಸಾಕ್ಷಾತ್ಕರಿಸಿಕೊಂಡ ಅನುಭಾವಿ ಅದನ್ನು ಅರಿತು ಆನಂದಿಸುತ್ತಾನೆ. ಆನಂದಿಸಿದ ಈ ಸುಖವನ್ನು ಮತ್ತೊಬ್ಬರಿಗೆ ಹೇಳಲಿಕ್ಕೆ ಬರುವದಿಲ್ಲ. ಅದನ್ನು ಅನುಭವಿಸಿದರೇನೆ ಮತ್ತೊಬ್ಬರಿಗೆ ಗೊತ್ತಾಗುವದು. ಹೇಳಿದರೆ ಕೇಳಿದರೆ ತಿಳಿಯುವ ಪರಿ ಅಲ್ಲ, ಲೌಕಿಕದ ಉದಾಹರಣೆ ಕೊಟ್ಟು 'ಪ್ರಣಯ' ಅನ್ನುವದು ಪ್ರಣಯಿಗೆ ತಿಳಿಯುವದಲ್ಲದೇ ಸಣ್ಣಕೂಸಿಗೆ ಗೊತ್ತಾಗುವುದಿಲ್ಲ. ಅದರಂತೆ ಮಾವಿನಹಣ್ಣಿನ ರುಚಿ ಕೂಡಾ ತಿಂದಾಗಲೇ ಹಾಗೆ ಹೀಗೆ ಹೇಳಬಹುದೆ ವಿನಹ ರುಚಿ ಅನುಭವ ವೇದ್ಯ, ಶಬ್ದವೇದ್ಯವಲ್ಲ. ಈ ರೀತಿ ಹೇಳುವುದು ಕುರುಡನಿಗೆ ಬಣ್ಣವನ್ನು ಪರಿಚಯಿಸಿದ ಹಾಗೆ ಸರಿ.

೨. **ಪ್ರಜ್ಞಾಸ್ಥಿತಿ** - ತಾನರಿತ ಸ್ಥಿತಿಯು ಕೇವಲ ಭ್ರಮೆಯಲ್ಲ, ಅದು ನೈಜ ಸತ್ಯ. ಜ್ಞಾನ ಅದು ಕೂಡಾ ದೇವರಿಂದಲೇ ಬಂದುದು. ಪ್ರತಿಯೊಂದರ ತಿಳುವಳಿಕೆಗೂ ಆ ದೇವರೇ ಕಾರಣ ಅವನಿಂದಲೇ ಈ ದೇಹದ ಚಲನೆ ಸಾಧ್ಯ. ಈ ಶಕ್ತಿಯ ಅಧಿಕಾರ ವಾಣಿಯನ್ನು ನಿರಾಕರಿಸಲು ಅಸಮರ್ಥವಾದ ಸ್ಥಿತಿಗೆ ಪ್ರಜ್ಞಾಸ್ಥಿತಿ ಎಂದು ವಿಲಿಯಂ ಜೇಮ್ಸ್ ಅನ್ನುವನು.[೧೪]

೩. **ಕ್ಷಣಿಕತೆ** - ತಾನು ಅನುಭವಿಸಿದ ಆನಂದ ಅದು ಬಹಳ ಹೊತ್ತಿನವರೆಗೆ ಇರಲಾರದು ಬಹಳವೆಂದರೆ ಎರಡು - ಮೂರು ತಾಸು ಇರಬಹುದಷ್ಟೇ. ನಂತರ ಅದು ಮಾಯವಾಗುವದು. ಆದರೆ ತಾನು ಅನುಭವಿಸಿದ ಅನುಭಾವದ ಪ್ರಭಾವ ಮಾತ್ರ ಕೊನೆಯುವರೆಗೆ ಜೀವಿತದ ಅವಧಿವರೆಗೆ ಉಳಿಯುವದು. ಅದರಿಂದ ತನ್ನ ಜೀವನವನ್ನು ರೂಪಿಸಿಕೊಳ್ಳುವನು.

೪. **ಆ ಪ್ರವರ್ತತೆ** - ಆ ರೀತಿಯ ಆನಂದವನ್ನು ಪಡೆಯಲು ತಾನು ಆಯಾ ಧರ್ಮದ ಕಟ್ಟಳೆಯಂತೆ ಅನುಷ್ಠಾನ, ಜಪ ತಪಗಳನ್ನು ಮಾಡಿದ್ದಾಗ್ಗೆ ಸಹಿತ ಆತನ ಮೇಲೆ ಆ ದೈವೀಶಕ್ತಿಯ ಕೃಪೆಬೀಳದೆ ಕೂಡಾ ಹೋಗಬಹುದು. ಆದರೂ ಕೂಡಾ ಆ ಕೃಪೆ ಆಗಲೂ, ಆಗದಿರಲೂ ದೈವೀಶಕ್ತಿಯೇ ಕಾರಣ. ಒಂದು ವೇಳೆ ತೀರವಾಗಿ ಆಗದೇ ಹೋದರೂ ಸಹಿತ ತಡವಾಗಿಯಾದರೂ ಆಗಬಹುದು. ಆ ದೈವೀ ಪ್ರೇರಣೆಯಿಲ್ಲದೇ ಯಾವದೊಂದು ಕೆಲಸ ಕೂಡಾ ಆಗಲಾರದು 'ತೇನ ವಿನಹ ತೃಣಮಪೀ ನಾಚಲತೆ' ಅನ್ನುವ ಹಾಗೆ.

೫. **ಐಕ್ಯಭಾವ** - ಅಂದರೆ ಮನುಷ್ಯ - ಮನುಷ್ಯರಲ್ಲಿಯೇ ಭೇದಭಾವ ಆತ ಬೇರೆ, ಈತ ಬೇರೆ, ಅನ್ನುವದನ್ನು ತೊಲಗಿಸಬೇಕಾಗುತ್ತದೆ. ಯಾಕೆಂದರೆ ಎಲ್ಲರಲ್ಲಿಯೂ ಆ ದೇವರೆ ಇರುವಾಗ

ಆ ದೇವರ ಪ್ರತಿರೂಪವೇ ಎಲ್ಲರೂ ಆಗಿರುವಾಗ ಒಂದೇವಸ್ತು ಎಲ್ಲ ತತ್ವಗಳಲ್ಲಿ ಇರುವಾಗ ಬೇರೆ ಎನ್ನುವ ಶಬ್ದಕ್ಕೆ ಇಂಬಿಲ್ಲ. ಇದೇ ಅದ್ವೈತಭಾವ.

೬. **ಕಾಲಪ್ರಜ್ಞೆ ಇಲ್ಲದಿರುವಿಕೆ** - ಕಾಲಪ್ರಜ್ಞೆ ಇಲ್ಲಿ ಕಳೆದುಕೊಂಡಿರುವದು ಸ್ವಾಭಾವಿಕ.

೭. **ಅಹಂಭಾವ** - ನಿಜವಾದ ಆತ್ಮವಲ್ಲ (Ego is not the true self)

ಸಾಮಾನ್ಯವಾಗಿ ಲೌಕಿಕವಾಗಿ ವ್ಯವಹಾರ ಮಾಡುವಾಗ ನಾನು ನನ್ನದು ಎನ್ನುತ್ತೇವೆ. ಇದನ್ನು, ನಾನು ಮಾಡಿದ್ದು, ನೀನು ಮಾಡಿದ್ದು ಎನ್ನುತ್ತೇವೆ. ಆದರೆ ಈ ರೀತಿಯದ್ದು, ಕೇವಲ ಅಹಂಭಾವವಾದರೂ ಸಹಿತ ಇದನ್ನು ಮೀರಿದ ಒಂದು ಸ್ಥಿತಿ, ಇವೆಲ್ಲವೂ ಕೇವಲ ಸ್ವಾರ್ಥಪರವಾದವುಗಳು. ಇವುಗಳನ್ನು ದಾಟಿದ ಸ್ಥಿತಿ ಅನುಭಾವಿಯದ್ದು.

೮. **ಆಂತರಿಕ ಬೋಧೆ - (Intusation)** ಇದು ಅಂತರಂಗದಿಂದ ಬಂದ ತಿಳುವಳಿಕೆ ಬುದ್ಧಿಯ ವ್ಯಾಪ್ತಿಯನ್ನು ಮೀರಿಸುವಂತದ್ದು. ಬುದ್ಧಿಯು ಭಾಗ ಭಾಗವಾಗಿ ವಿಷಯವನ್ನು ತೆಗೆದುಕೊಂಡು ತಿಳಿಯುವುದೇ ಹೊರತು, ಆ ವಸ್ತುವಿನ ಅಂತರಾಳಕ್ಕೆ ಮುಟ್ಟುವದು ಅನ್ನುವ ಹಾಗಿಲ್ಲ. ಈ ರೀತಿಯ ಪ್ರತಿಭಾನವನ್ನು ತಿಳಿಯುವುದೆಂದರೆ ಬುದ್ಧಿಯ ಸಾಮರ್ಥ್ಯ ಸೋಲುವದು. ಇದು ಆಧ್ಯಾತ್ಮಿಕ ಸಮ್ಮತವಾದದ್ದು. ಇದೊಂದು ರೀತಿಯ ಜ್ಞಾನ. ಇದು ತನ್ನಿಂದ ತಾನೇ ಆಗುವ ಪ್ರತ್ಯಕ್ಷ ತಿಳುವಳಿಕೆ. ತರ್ಕ ಬುದ್ಧಿಗಿಂತಲೂ ವಿಲಕ್ಷಣವಾದದ್ದು. ಬುದ್ಧಿವಾದಿಗಳನ್ನು 'ಉಮರ್ ಖಯ್ಯಾಂ' ಅನ್ನುವನೊಬ್ಬ ಒಂದು ದಾರಿಯಿಂದ ಬಂದು ಅದೇ ದಾರಿಯಿಂದ ಮರಳಿಹೋಗುವ ಮೂರ್ಖರು ಎನ್ನುವನು.

೯. **ಅನಿಷ್ಟ ನಿರಾಕರಣೆ** - ಜಗತ್ತೆಲ್ಲವೂ ದೈವೀಶಕ್ತಿಯಿಂದ ತುಂಬಿರುವದು ಎಂದು ಅನುಭಾವಿ ನಂಬುವನು. ಇದರಲ್ಲಿ ಅನಿಷ್ಟವಿದೆ ಎನ್ನುವದಾದಲ್ಲಿ ಅದು ಭ್ರಮೆಯಾದೀತು. ಬುದ್ಧಿಯ ಚಿದ್ರಶಕ್ತಿಯನ್ನು ನಿಯಂತ್ರಿಸಿದಾಗ ಅನಿಷ್ಟವೇ ಇಲ್ಲವೆಂದು ಆಂತರಿಕವಾಗಿ ಗೋಚರಿಸುವದು.

೧೦. **ಅನುಭಾವ ಮೂಲತಃ** - ಅನುಷ್ಠಾನ ಯೋಗ್ಯ ಕ್ರಿಯಾತ್ಮಕ. ಜೇಮ್ಸ್ ಹೇಳಿದಂತೆ ಇದು ನಿಷ್ಕ್ರಿಯವಾದದ್ದಲ್ಲಿ ಅದು ನಿಷ್ಕ್ರಿಯವಾದದ್ದಲ್ಲ. ಅನುಭಾವ ಬರೀ ಮಾತಿನ ಅಥವಾ ವಿಚಾರ ಇಂದ್ರಜಾಲವಲ್ಲ. ಅದು ಒಣಚರ್ಚೆ ಅಲ್ಲ, ಕೆಲಸಕ್ಕೆ ಬಾರದ ಹರಟೆಯಲ್ಲ. ಅದು ಪರಿಪೂರ್ಣ ಜೀವನದ ಆನಂದದ ಬುಗ್ಗೆ ಸ್ಫೂರ್ತಿಯನೆಲೆ, ಉಗಮಸ್ಥಾನ.[೧೫]

೧೧. **ಅನುಭಾವ ಅತೀತವಾದದ್ದು ಹಾಗೂ ಆಧ್ಯಾತ್ಮಿಕವಾದದ್ದು** - ಅನುಭಾವ ಅಭಿಮತವಲ್ಲ; ತತ್ವಜ್ಞಾನವಲ್ಲ; ಅನುಷ್ಠಾನ ಯೋಗ್ಯವು ಪ್ರಾಯೋಗಿಕವು ಆದದ್ದು, ಅಪರೋಕ್ಷ ಜ್ಞಾನ; ಊಹೆ ಅಥವಾ ಅನುಮಾನವಲ್ಲ.[೧೬]

೧೨. **ಅನುಭಾವದ ಬಹುಮುಖ್ಯ ಲಕ್ಷಣ ಹಾಗೂ ಮಾರ್ಗ ಪ್ರೇಮ** - ಪ್ರೇಮ ಇಲ್ಲಿ ಸಾರ್ಥಕವಲ್ಲ, ದಿವ್ಯಪ್ರೇಮದೆಡೆಗೆ ನಮ್ಮನ್ನು ನಡೆಸುವದು ಹೃದಯ ಹೊರತು ಬುದ್ಧಿ ಅಲ್ಲ. ಅನುಭಾವಿ ಯಾವ ಆಸೆ ಆಮಿಷಗಳನ್ನು ಮುಂದೊಡ್ಡುವದಿಲ್ಲ; ಯಾವ ಭೌತಿಕ ಸುಖ ಸಾಧನಗಳನ್ನು

ಪಡೆಯಲೆತ್ನಿಸುವದಿಲ್ಲ. ದೈವೀಶಕ್ತಿ ಒಂದು ಬಗೆಯ ಅತಿಮಾನುಷಶಕ್ತಿ ಕಲೆಯ ರಸಪೂರ್ಣ ಜೀವನದ ಮೂಲಶಕ್ತಿ.[೮]

ಅನುಭಾವಿ ತನ್ನದೇ ಆದ ಒಂದೊಂದು ಮಾರ್ಗವನ್ನು ಆಯ್ದುಕೊಳ್ಳುವನು. ಯಾವುದೇ ಅನುಭಾವಿಯಾದರೂ ಕೂಡಾ ಅಲ್ಲಿ ಅವನನ್ನು ಹುಡುಕುವದು ಪರಮ ಆನಂದ ಮಾರ್ಗವನ್ನು. ಅದನ್ನೇ ಪರಿಪೂರ್ಣ ಸುಖ, ಆತ್ಮಸುಖ, ನಿತ್ಯಾನಂದಸುಖ ಅನ್ನಬಹುದು. ಪ್ರತಿಯೊಂದು ಮಾರ್ಗವು ಕೂಡಾ ಅನುಭಾವದಂತೆ ಕಂಡರೆ ಅದೇ ಉಳಿದವರೆಲ್ಲರಿಗೂ ದರ್ಶನವಾಗಿ ದೊರೆಯುವದು. ಉದಾಹರಣೆಗೆ ವೀರಶೈವದ ಷಟಸ್ಥಲಮಾರ್ಗ, (ಅನುಭಾವಮಾರ್ಗ) ವೈದಿಕ ದರ್ಶನದ ಯೋಗ, ಇಸ್ಲಾಂ ಧರ್ಮದ ಫೇನಾ, ಕ್ರೈಸ್ತಧರ್ಮದ 'ಶೋಧನ - ದರ್ಶನ - ಸಂಗಮ'. ಕ್ರೈಸ್ತಧರ್ಮವನ್ನೇ ತೆಗೆದುಕೊಂಡಾಗ ಮೊದಲನೆಯದು ಶೋಧನೆ ಅಂದರೆ ಮನಸ್ಸು ಏನನ್ನು ತುಂಬಿಕೊಂಡಿದೆ. ಅಶಾಂತಿ, ಅಸೂಯೆ, ದಯೆ, ಮೋಸ, ಕಪಟ, ವಂಚನೆ ಇತ್ಯಾದಿಯಾಗಿ ಇರುವ ಈ ಅವಗುಣಗಳನ್ನು ತೆಗೆದೊಗೆದು ನಿರ್ಮಲ ಮನಸ್ಸಿನವನಾಗುವದೇ ಶೋಧನೆ ಎನ್ನಬಹುದು. ದರ್ಶನ ಬಾಹ್ಯ ಇಂದ್ರಿಯಗಳಿಂದ ನೋಡಿದ್ದಲ್ಲ ಅದು ಅಂತಃಚಕ್ಷುವಿನಿಂದ ಅಥವಾ ಅಂತರಾಳದಿಂದ ತಿಳಿಯುವದು. ನಿರ್ಮಲ ಮನಸ್ಸನ್ನು ಪ್ರಪಂಚದ ಕಡೆ ತಗ್ಗಿಸಿ, ಪರಮಸತ್ಯದ ಕಡೆ ನಡೆಯುವಂತೆಮಾಡಿ, ಇಂದ್ರಿಯಗಳ ನಿಗ್ರಹಮಾಡಿ, ಮುಂದೆ ಸಾಗುವದು. ಅಂತ್ಯವಾಗಿ ಅಲ್ಲಿ ಸೂಕ್ಷ್ಮರೀತಿಯ ಆನಂದ ಸಾಗರ ಸ್ಥಿತಿ ಅದುವೇ ದರ್ಶನ ಸ್ಥಿತಿ. ಸಂಗಮವೆಂದರೆ ಐಕ್ಯ. ಬಹುಕಾಲದವರೆಗೆ ಸಾಧನಮಾಡಿ ಅದರ ಪ್ರತಿಫಲ ಪಡೆಯುವುದೇ ಅದ್ವೈತ ಸ್ಥಿತಿಯಂತೆ ಆ ಭಗವಂತನಲ್ಲಿ ಐಕ್ಯನಾಗುವನು. ಅಲ್ಲಿ ಮೊದಲಿನ ಅನುಭಾವಿಯನ್ನು ನಿದ್ರೆಗೆಡಿಸುವ ಸಂಗತಿಗಳು ಏನಿದ್ದರೂ ಸಮೀಪ ಸುಳಿಯುವುದಿಲ್ಲ. ಈ ಅನುಭಾವ ಸ್ಥಿತಿ ಎಲ್ಲ ಧರ್ಮಕ್ಕೂ ಅಷ್ಟೇ, ಅದು ಯಾವುದೇ ಧರ್ಮದ ಸೊತ್ತಲ್ಲ. ಅನುಭಾವಿಯ ಸಾಗುವಿಕೆಯೇ ಇತರರಿಗೆ ದರ್ಶನ ಕನ್ನಡಿ. ಇದನ್ನು ಅನೇಕ ರೀತಿಯಲ್ಲಿ ಕಾಣಬಹುದು.

೧. ದಾಸಭಾವ - ರಾಮ ಹನುಮರ ಸಂಬಂಧ
೨. ಸಖ್ಯಭಾವ - ಕೃಷ್ಣ - ಸುಧಾಮರ ಸ್ನೇಹ ಭಾವ ಸಂಬಂಧ
೩. ವಾತ್ಸಲ್ಯಭಾವ - ಯಶೋಧಾ - ಕೃಷ್ಣರ ಸಂಬಂಧ
೪. ಮಧುರಭಾವ - ರಾಧಾ - ಕೃಷ್ಣ, ಅಕ್ಕಮಹಾದೇವಿ - ಮಲ್ಲಿಕಾರ್ಜುನರ ಸಂಬಂಧ

ಇವೆಲ್ಲಾ ಅನುಭಾವ ಆನಂದ ತುಂದಿಲನಗಳು. ಯಾವ ರೀತಿಯ ಜ್ಞಾನದ ಹೊಳೆ ಹೊಳೆಯುವದೋ ಅದೇ ರೀತಿಯ ಸಾಹಿತ್ಯ ಸಂಪದವನ್ನು ಪಡೆಯುವದು. ಅಲ್ಲಿ ಸಹಜವಾಗಿ ಆದರೆ ಮುಂದೆ ಅದು ಒಂದು ಮಾರ್ಗ ಶ್ರೀ ಆಗುವದು. ಮೀರಿದ ಶ್ರೀ ಆಗಬಹುದು. ಅದು ಭಾವದ ಆ ಸ್ಥಿತಿಯನ್ನು ಸಂಶಯವಾದಕ್ಕೆ ಹಚ್ಚಿದಾಗ, ಅಂತಹ ಸ್ಥಿತಿಯನ್ನು ರಾಸಾಯನಿಕ ವಸ್ತುವನ್ನಾಗಲೀ ಮಾದಕವಸ್ತುವನ್ನಾಗಲೀ ಸೇವಿಸಿದಾಗ ಪಡೆಯಬಹುದೇನೋ ಎಂದರೆ ಆಗ ಉದಾಹರಣೆಗೆ ನೈಟ್ರಸ್ ಆಕ್ಸೈಡ್ ಅಥವಾ ದಾರು ಅಥವಾ ಬ್ರೌನ್ ಸುಗರ್ ಇತ್ಯಾದಿಗಳನ್ನು ಸೇವಿಸಿದಾಗ ಅಲ್ಲಿಯೂ ಅನುಭಾವಿಯ ಸ್ಥಿತಿ ಕಾಣುವದಾದರೆ ಸ್ವಲ್ಪಸಮಯದಲ್ಲಿ ಈ ವಾಮಮಾರ್ಗವನ್ನು ಹಿಡಿದು ಪಡೆಯಬಹುದಾದ ಆ ಸ್ಥಿತಿಗೆ ಸಾಯುವವರೆಗೆ ಸಾಧನ ಹಾಕಿ? ಮಾಡಬೇಕುಎನ್ನಬೇಕಾಗುವುದು. ಆದರೆ ಅದರ ನೈಜಸ್ಥಿತಿ ಎಂದರೆ ಹಾಗಲ್ಲ. ಅನುಭಾವಿ ಸ್ಥಿತಿ ಹಾಗು

ನೈಸರ್ಗಿಕವಲ್ಲದ ಕೃತ್ರಿಮ ಸ್ಥಿತಿಗಳನ್ನು ನೋಡಿದಾಗ ಬಹಳಷ್ಟು ವ್ಯತ್ಯಾಸ. ಆ ಸ್ಥಿತಿಯನ್ನು ಅನುಭವಿಸಿದಾಗ ಆಗುವ ಆನಂದದ ಭಾವುಕತೆ ಅದು ತೀರಿದಮೇಲೆ ಒಂದು ರೀತಿಯ ಸಾರ್ಥಕ ಮನೋಭಾವ ದೈನ್ಯತಾಭಾವ ಆತನಲ್ಲಿ ಸುಳಿಯುವದು. ಆದರೆ ಕೃತ್ರಿಮತೆಯಲ್ಲಿ ಅನುಭವಿಸಿದ ನಂತರ ಆ ಸ್ಥಿತಿ ಉಳಿಯಲಾರದು. ನಂತರದಲ್ಲಿ ಆ ದಾರಿ ಕಷ್ಟದೆಡೆ ಸಾಗುವದು. ಅನಾರೋಗ್ಯ ಉಂಟಾಗುವದು. ಸಮಾಜ ಕಂಟಕ, ನರಸತ್ತ ಬದುಕು ಅನ್ನಬಹುದು. ಆದರೆ ಅನುಭಾವಿ ಅನುಭಾವದಲ್ಲಿ ಶರೀರ ಭಾಗ್ಯ ದೊರೆಯುವದು. ಈ ಸ್ಥಿತಿಯೇ ಬೇರೆ ಆ ಕೃತ್ರಿಮತೆಯೇ ವಿಷಯಸ್ಥಿತಿಯೇ ಬೇರೆ, ಆತ ದೇವಮಾನವ, ಈತ ಅಪಾಯಕಾರಿ ಮಾನವ, ಅನುಭಾವವನ್ನು ಅನುಭಾವಿಸಿ ಆದ ಮೇಲೆ ತಮಗೆ ಸರಿಕಂಡ ವಿಚಾರಗಳನ್ನು ಮತ್ತೊಬ್ಬರ ಮೇಲೆ ಜೋರಾಗಿ ಹೇರಲಾಗದು. ಅದು ಬಾಯಿಯಿಂದ ಬಾರದ ಅನುಭವ ಅಂದಮೇಲೆ ಅದನ್ನು ಮಾತಿನಲ್ಲಿ ಹೇಳಿ ಅಸಮಂಜಸವಾದ, ಪರಸ್ಪರ ವಿರುದ್ಧವಾದ ಮಾತುಗಳನ್ನು ಏಕೆ ಹೇಳಬೇಕು. ಅದು ವಚನಿಸಬಾರದು - ನಿರ್ವಚನವೆಂದು ಹೇಳಿ ಮತ್ತೆ ಮಾತನಾಡುವುದು ಹೇಗೆ ಆನಂದವನ್ನು ಅನುಭವಿಸಲಿಕ್ಕೆ ಬರುತ್ತದೆ. ಆದರೆ ಅದನ್ನು ಹೇಳಲಿಕ್ಕೆ ಬರುವದಿಲ್ಲ. ಇದಕ್ಕೆ ಕಾಂಟ್ -

"Human reason has this peculiar fate that in one species of its knowledge it is burdened by questions which as prescribed by the very nature of reason itself, it is not able to ignore, but which as transcending all its powers it is also not able to answer" [೧೮]

ಇಲ್ಲಿ ಉತ್ತರಿಸಲಿಕ್ಕೆ ಆಗದ ಮತ್ತು ಪ್ರಶ್ನೆಯಿಂದ ಮೀರಿದ ಜ್ಞಾನದ ಭಾಗ ಅದು ತನ್ನ ಶಕ್ತಿಯನ್ನು ಪ್ರವಹಿಸಬಲ್ಲದು. ಬರ್ಟ್ರೆಂಡ್ ರಸೆಲ್ -

"The possibility of this universal love and join all that exists is of supreme importance for the conduct and happiness of life and gives instimable value to the mystic emotion, apart from any creeds which may be built upon it." [೧೯]

ಜೀವನವನ್ನು ಸುಖಸಂತೋಷಗಳಲ್ಲಿ ಹಿಡಿದಿಡುವ ಸಾರ್ವತ್ರಿಕ ಪ್ರೇಮ ಅದು. 'ಥಾಲ್ಸ' -

"Our valuation of it (Mysticism) must depend entirely on our attitude towards religion as a whole. If we judge it from a this world point of view we must remember that for the mystic the alternative is probably mental ill-health; even if we donot like mystics, we certainly prefer them to luntics. It is true that mysticism tends often to incapacitate its subject for activity in this world, but even on this score it may be justified if we look to the life of guided actvity, which is its end, and not to the stage of turning away from the world which is only preparatory to that end..... If man's highest activity is to love God, mysticism may have a value of its own entirely independent of any usefulness it is found to have in this world." [೨೦]

ಮನುಷ್ಯನ ಅತಿ ಹೆಚ್ಚಿನ ಚಟುವಟಿಕೆ ಅಂದರೆ ದೇವರನ್ನು ಪ್ರೀತಿಸುವುದೇ ಆಗಿದೆ. ಅನುಭಾವ ಅದು ತನ್ನ ಸಾಮರ್ಥ್ಯವನ್ನು ಮೀರಿ ಜಗತ್ತಿನಲ್ಲಿ ಚಟುವಟಿಕೆ ಉಂಟುಮಾಡಲು ಸಾಧ್ಯವಾಗಬಹುದಾಗಿದೆ. ಅದು ಮಾತಿನಿಂದ ಜನಿತವಾದುದಲ್ಲ ಬಾಹ್ಯ ಜಗತ್ತಿನಲ್ಲಿ ಹುಡುಕಿದರೆ ಸಿಗುವದಿಲ್ಲ. ವಚನ ಶಬ್ದಗಳಿಂದ ದೊರಕುವ

ದೊರೆಯಲ್ಲ. ಅಂತರಂಗದಲ್ಲಿದ್ದು ತನ್ನಿಂದ ತಾನೆ ಹೊಡೆಯುವ ಸ್ಫೂರ್ತಿ. ಬದುಕುವ ಅನೇಕಾನೇಕ ಮಾನವರಿಗೆ ನಿಜವಾಗಿ ಬದುಕಲು ದಾರಿಯನ್ನು ಹೇಳುವವರಾಗುವರು. 'ಯಾವುದೇ ದೇಶದ ಹಿರಿಮೆ ಗರಿಮೆಗಳು ಆ ದೇಶದ ಧಾರ್ಮಿಕ ಪುರುಷರನ್ನು ಸಂತ - ಶ್ರೇಷ್ಠರನ್ನು ಅವಲಂಬಿಸಿರುತ್ತದೆ. ಈ ಸಾಧು - ಸಂತರ, ಅನುಭಾವಿಗಳ ಆಧ್ಯಾತ್ಮಿಕ ಗಣನೆಯೇ ಅನುಭಾವ'[೨೦]

ಅನುಭಾವ ಉಗಮದ ಹಿಂದೆ ಒಂದು ಪ್ರಬಲವಾದ ಮನೋವೈಜ್ಞಾನಿಕ ಕಾರಣವನ್ನು ಪ್ಲೋಟೈನಸ್ ಸೂಚಿಸುತ್ತಾನೆ. ಮಾನವ ಮೂಲತಃ ಪರಿಪೂರ್ಣತೆ ಎಂಬ ಆದರ್ಶದಿಂದ ಆಕರ್ಷಿತನಾಗಿದ್ದಾನೆ. ಇಂದಲ್ಲ ನಾಳೆ ಆ ಪರಿಪೂರ್ಣತೆಯನ್ನು ಪಡೆದೇತೀರುವನೆಂಬ ಆಶಾಭಾವನೆ ಅವನದು. ಪರಿಪೂರ್ಣತೆಯ ಸಂಕೇತವೆ ಅನುಭಾವಿಯ ಪ್ರೇಮತತ್ವ ಅಥವಾ ದೇವರು, ಪರಮಶ್ರೇಯದ ದ್ಯೋತಕ. ಪ್ಲೋಟೈನಸ್ ಅದನ್ನು ಉಪಮೇಯ ರೂಪದಲ್ಲಿ ಇಟ್ಟಿದ್ದಾನೆ. ಹೇಗೆ ಒಂದು ಬುಗ್ಗೆಯಿಂದ ಸ್ವಾಭಾವಿಕವಾಗಿ ನೀರು ನಿರರ್ಗಳವಾಗಿ ಹರಿಯುತ್ತದೆಯೋ, ನೀರು ಸದಾ ಹರಿಯುತ್ತಿದ್ದರೂ ಆ ಬುಗ್ಗೆ ಮಾತ್ರ ಸ್ವಲ್ಪವೂ ಖಾಲಿಯಾಗಿ ಬರಡಾಗುವದಿಲ್ಲವೋ ಹಾಗೆ, ಅಂತಿಮ ಸತ್ಯವಾದ ದೇವರಿಂದ ಈ ವಿಶ್ವ ಹೊರಸೂಸುತ್ತದೆ. ಪ್ರೇಮ ಸ್ವರೂಪವಾದ ದೇವರಿಂದ ಈ ವಿಶ್ವ ನಿರಂತರವಾಗಿ ಹೊರಸೂಸುತ್ತಿದ್ದರೂ ದೇವರು ಎಂದೆಂದಿಗೂ ಅವ್ಯಯನಾಗಿಯೇ ಉಳಿಯುತ್ತಾನೆ ಎಂದು ಪ್ಲೋಟೈನಸ್ ಉಪನಿಷತ್ತಿನ ಋಷಿಗಳ ಜೊತೆ ಧನಿಗೂಡಿಸುತ್ತಾನೆ.[೨೧] ಅನುಭಾವ ಅನ್ನುವಲ್ಲಿ ಉಪನಿಷತ್ತು ಪೌರ್ವಾತ್ಯರ ಅನುಭಾವ ಪಂಥ ಅರವಿಂದರ ಅನುಭಾವ ದರ್ಶನ ಇವೆಲ್ಲವೂಗಳು ಕೂಡಾ ಪ್ಲೋಟೈನಸ್‌ನ ಅನುಭಾವ ಒಂದನ್ನೊಂದು ಹೋಲುತ್ತವೆ. ಅನುಭಾವದ ಹಿನ್ನಲೆ ಪಾಶ್ಚಾತ್ಯ ಪೌರಾತ್ಯಗಳಲ್ಲಿ ಒಂದೇ ಅರ್ಥವನ್ನು ಕಲ್ಪಿಸಿದೆ. ಈ ತುಲನಾತ್ಮಕ ಅಧ್ಯಯನ ಸ್ವರೂಪವೇ ಅಧ್ಯಾಯ ಎರಡರ ಉದ್ದೇಶ.

ಪ್ಲೋಟೋವಿನ ಹಾಗೂ ಅರಿಸ್ಟಾಟಲ್‌ನ ಸಿದ್ಧಾಂತ ಮುಂದೆ ಪೈಥಾಗೋರಿಯನ್ ಆಚರಣೆಯನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ ಎನ್ನಬಹುದು. ಒಂದು ಅರ್ಥದಲ್ಲಿ ಅರಿಸ್ಟಾಟಲ್ ಮತ್ತು ಸ್ಟೋಯಿಕ್ ಸಿದ್ಧಾಂತಗಳು ಬೇರೆ ಬೇರೆಯೆಂದು ಗುರಿತಿಸಲಾರದಷ್ಟು ಕೂಡಿಕೊಂಡವು. ಪರಮಾತ್ಮನೆ ಸರ್ವ ಪ್ರಪಂಚಕ್ಕೆ ಮೂಲ ಆಧಾರ. ಪರಮಾತ್ಮನಲ್ಲಿ ಎಲ್ಲವೂ ಹಿಂತಿರುಗುವದು. ಸರ್ವಕ್ಕೂ ಆತನೆ ಆದಿ, ಮಧ್ಯ ಮತ್ತು ಅಂತ್ಯ ಆತನು ನುಡಿದ ವಸ್ತುವೇ ಇಲ್ಲ ಆತನ ಸಂಗವೇ ಆತನೊಡನೆ ಬಳಸುವ ವ್ಯವಹಾರವೇ ಅತನಲ್ಲಿ ಲಯವಾಗುವ ಸಾಯುಜ್ಯವೇ, ಸರ್ವಮತ ಧರ್ಮಗಳ, ಸಕಲ ಕರ್ಮಾಚರಣೆಗಳ ಅಂತ್ಯ ಗುರಿ. ಇಂತಹ ಮೋಕ್ಷ, ಪರಮ ಸಾಧನಗಳಿಂದಲ್ಲದೇ ಕೇವಲ ಜ್ಞಾನದಿಂದ ಸಿಗಲಾರದು. ಇವರಿಗೆ ನವ್ಯ ಪ್ಲೋಟೋ ಸಿದ್ಧಾಂತಿಗಳೆನ್ನುವರು. ಅಲ್ಲಿ ಮುಖ್ಯವಾಗಿ ಪ್ಲೋಟೈನಸ್, ಇತನ ಅನುಭವಯೋಗಿ ಕ್ರಿ.ಶ. ೨೭೦ರಲ್ಲಿ ಮರಣ ಹೊಂದಿದ ಈತನು ಕೃತಿಯನ್ನು ರಚಿಸಲಿಲ್ಲ. ಆದರೆ ಅವನ ವಿಚಾರಗಳನ್ನು ಶಿಷ್ಯರು ಬರೆದರು.

ಬ್ರಹ್ಮನೂ ಚೇತನಾಚೇತನಿಗೆಲ್ಲಾ ಮೂಲ, ಸರ್ವವೈವಿಧ್ಯರೂಪವಾದ ಅದ್ವೈತನೂ, ಅದ್ವೀತಿ, ಸರ್ವ ಗುಣಾತೀತ, ನಿರಾಖ್ಯಾತ, ಪ್ರಪಂಚವೆಲ್ಲಾ ಬ್ರಹ್ಮಸಮುದ್ಭವ ಹೌದಾದರೂ ಅವನು ಅದನ್ನು ಸೃಷ್ಟಿಸಲಿಲ್ಲ. ಪ್ರಪಂಚ ಬ್ರಹ್ಮಶಕ್ತಿಯಿಂದ ನೈಸರ್ಗಿಕವಾಗಿ ಹೊರ ಹೊರಟ ವಿಶೇಷಣೆ, ಬ್ರಹ್ಮನಿಂದ ದೂರ ಸರಿವಷ್ಟು ಅಂಧಕಾರದೆಡೆಗೆ ಹೋದಂತೆ, ಆತನ ಸಮೀಪ ಬಂದಂತೆ ಬೆಳಕು ಪ್ರಾಪ್ತಿ ಬ್ರಹ್ಮನನ್ನು ಬಿಟ್ಟು ಪ್ರಪಂಚ

ಅಧೋಗತಿಗೆ ಕಾರಣ. ಬ್ರಹ್ಮನಿಂದ ಹುಟ್ಟಿಬಂದ ಮಾನವ ಎಷ್ಟೇ ಅಧೋಗತಿ ಹೊಂದಿದರೂ ಸಹಿತ ಪುನಃ ತನ್ನ ಸ್ವಸ್ಥಾನಿ ಪ್ರಾಪ್ತಿಗೋಸ್ಕರವಾಗಿ ಪ್ರಯತ್ನವನ್ನು ಮಾಡುವನು. ಪ್ರಸ್ಥಾನತ್ರಯಗಳನ್ನು ಹೇಳುವ ಈತ ಶುದ್ಧ ಚಿತ್ತ, ಆತ್ಮ ಮತ್ತು ಪ್ರಧಾನವೆಂದೂ, ಮೊದಲಿನ ಪ್ರಸ್ಥಾನದಲ್ಲಿ ಬ್ರಹ್ಮನೂ, ದೇಶ ಕಾಲಾತೀತ ಆದುದರಿಂದ ಆತನಲ್ಲಿ ಚಿಂತಕನೂ, ಚಿಂತನೆಯೂ, ಕರ್ತವ್ಯ, ಕರ್ಮವೂ ಒಂದೇ. ಬ್ರಹ್ಮನು ಪರಿಪೂರ್ಣನು ಸಿದ್ಧಕಾಮನೂ ಆಗಿ ಸ್ವ ವಿಷಯಿಕನಾದ ಚಿಂತನೆಯುಳ್ಳವನೇ ಹೊರತು, ಮತ್ತೊಂದು ಪರ ವಿಷಯವನ್ನು ಚಿಂತಿಸಲು ಅವಕಾಶವಿಲ್ಲ. ಶುದ್ಧತತ್ವ - ಇದರ ಅರ್ಥ ನಿರತಿಶಯ ಚೇತನ, ಮಹಾಚೇತನ ಅಥವಾ ದೇವರು ಎಂದು. ಇಲ್ಲಿ ಸಾಮಾನ್ಯ ಅನ್ನುವದನ್ನು ಪ್ಲೋಟೋನಂತೆ ಹೋಲಿಸಬಹುದು. ಸಾಮಾನ್ಯ ಪ್ರತ್ಯೇಕಗಳ ವಿಷಯ ಚರ್ಚಿಸುವಾಗ ಸಾಮಾನ್ಯವೆಂದರೆ ದೇವರು, ಎರಡನೆಯದು ಆತ್ಮ ಅಂದರೆ ಇದು ಶುದ್ಧ ಚಿತ್ತದ ಪ್ರತಿಬಿಂಬ, ಶುದ್ಧ ಚಿತ್ತಕ್ಕಿಂತಲೂ ಪರಿಪೂರ್ಣತೆಯಲ್ಲಿ ಕೆಳಸ್ತರದ್ದು ಆತ್ಮ ಅತೀಂದ್ರಿಯವಾಗಿ ಜ್ಞಾನ ಮೇಲು, ಚೇತನಯುತ, ಕೃರ್ತೃತ್ವ ಭಾವನೆ ಕೂಡ ಪಡೆದಿದೆ. ಶುದ್ಧಚಿತ್ತದ ಪರಿಪೂರ್ಣ ಚಿಂತನೆಯನ್ನು ಪಡೆದುದಿಲ್ಲ. ಚೇತನಾಭಾವ ಮುಖ್ಯವಾದಾಗ ಲೋಕಾತ್ಮವೆಂದು ಪ್ರಧಾನ ಮುಖವಾದಾಗ ಪ್ರಕೃತಿ ಎಂದು ಕರೆಯುವನು. ಪ್ಲೋಟೊನಸ್ ಚೇತನ ಲೋಕಾತ್ಮ ಮತ್ತು ಪ್ರಕೃತಿ ಲೋಕಾತ್ಮ ಎಂಬುದಾಗಿ ಹೇಳುತ್ತಾನೆ. ಈ ಎರಡೂ ಆತ್ಮ ವಿವೇಧಗಳನ್ನು ಹೇಳುವನು. ಪ್ರಕೃತಿ ಲೋಕಾತ್ಮ, ಚೇತನ ಲೋಕಾತ್ಮನಿಂದ ಕಿರಣರೂಪದಲ್ಲಿ ಹೊರ ಹೊರಡುವದೆಂದು ಹೇಳುವ. ಆತ್ಮಕ್ಕೆ ಕರ್ತೃತ್ವಶಕ್ತಿ ಇದ್ದರೂ ಕೂಡಾ ಅದನ್ನು ಪ್ರಯೋಗಿಸಲು ವಸ್ತುವೊಂದು ಅವಶ್ಯವಿದೆ. ಅದು ಇಲ್ಲದಿದ್ದರೆ ಕರ್ತೃತ್ವ ನಿಷ್ಫಲ. ಇಲ್ಲಿ ಪ್ರಧಾನವೆಂದು ಮೂರನೆ ಪ್ರಸ್ಥಾನವನ್ನು ಹೇಳುವನು. ಇದು ರೂಪ ರಹಿತ, ಗುಣ ರಹಿತ, ಶಕ್ತಿ ರಹಿತ, ಶುದ್ಧ ಶೂನ್ಯ, ನಿರ್ಜೀವ, ದುರ್ಬಲ, ಇಲ್ಲಿ ಸ್ವಲ್ಪವೂ ಕೂಡಾ ಬ್ರಹ್ಮನ ಸಂಸ್ಕಾರವಿಲ್ಲ. ಬ್ರಹ್ಮ ತತ್ವಕ್ಕೂ ಇದಕ್ಕೂ ಬಹುದೂರ. ಇದು ಸಂಪೂರ್ಣ ಅಂಧಕಾರ ಪೂರಿತವಾದುದು. ಈ ಪ್ರಧಾನದ ಮೇಲೆ ಆತ್ಮ ತತ್ವಗಳು ತಮ್ಮ ಶಕ್ತಿಯನ್ನು ಪ್ರಯೋಗಿಸಿ ದೈವಚಿತ್ತದ ಸಾಮಾನ್ಯದಂತೆ ಸಾಗುವವನಾಗಿ ಪ್ರಕೃತಿರೂಪ ಇಂದ್ರಿಯ ಲೋಕ ಪ್ರತ್ಯೇಕವನ್ನು ಸೃಷ್ಟಿಸುವವು. ಪ್ರತ್ಯೇಕಗಳು ದೇಶ ಕಾಲಬದ್ಧ ಇವುಗಳ ಚಿತ್ರಿಸುವ ಸಾಮಾನ್ಯಗಳು ಕಾಲಾತೀತವಾದವುಗಳು. ದೇಶ ಕಾಲಗಳ ಉತ್ಪತ್ತಿಗೆ ಪ್ರಧಾನವೇ ಆಶ್ರಯ. ನಮ್ಮ ಸುತ್ತಮುತ್ತ ತೋರುವ ಸೌಂದರ್ಯ ಸಮತೆಗಳಿಗೆಲ್ಲಾ ಬ್ರಹ್ಮ ಸಮುದ್ಭವವಾದ ಲೋಕಾತ್ಮಾನೇ ಮೂಲ. ಇದುವೇ ಸೃಷ್ಟಿ ಕಾರ್ಯ, ಸೃಷ್ಟಿ ಕಾರ್ಯ ಅಖಂಡವಾದದ್ದು ಸತ್ಯವಾದದ್ದು ಆಗಿದೆ. ಅರಿಸ್ಟಾಟಲ್‌ರಂತೆ ಪ್ಲೋಟೋನಸ್ ಜಗತ್ತು ಮಿಥ್ಯನೆನ್ನುವನು. ಲೋಕಾತ್ಮ ದೇಶಕಾಲಾತೀತವಾದದು. ಪ್ಲೋಟೋನಸ್, ಕಾಲ ಲೋಕಾತ್ಮನಿಂದ ಉತ್ಪತ್ತಿಯಾಯಿತೆನ್ನುವನು. ಅಂದರೆ ಲೋಕಾತ್ಮ - ಕಾಲ - ಜಗತ್ತು ಸೃಷ್ಟಿಯಾಯಿತೆನ್ನುವನು. ಸ್ಟೋಯಿಕ್‌ರ ಮತದಂತೆ ಪ್ರಳಯ ಸತ್ಯಗಳ ಜಗತ್ತು ಒಂದರಿಂದ ಒಂದು ಘಟಿಸಿದರೂ ಕೂಡಾ ಪ್ರಪಂಚದ ಭಾಗಗಳು ಪರಿಣಾಮವನ್ನು ಹೊಂದಿದರೂ ಅದು ಅನಾದಿ, ಹಿಂದೆಯಾಯಿತ್ತು ಈಗಲೂ ಇದೆ, ಮುಂದೆಯೂ ಇರುವದು ಎನ್ನುವನು.

ಪರಮಾತ್ಮ ಲೋಕಾತ್ಮದ ಒಂದು ಅಂಶ. ಅದು ಬ್ರಹ್ಮನ ಕಡೆ ದೃಷ್ಟಿಯಿದ್ದಾಗ ಧ್ಯಾನದಿಂದ ಮುಕ್ತವಾಗಿತ್ತು. ಪ್ರಪಂಚದ ಕಡೆ ತಿರುಗಿದಾಗ ಅದು ಪತನ ಹೊಂದಿತು. ದೇಹಿಯಾದೊಡನೆ ಆತ್ಮದ ಸ್ವಾತಂತ್ರ್ಯ ತಪ್ಪಿತು. ಅದು ಕಾಮ ಪಾಶಗಳಿಂದ ಬಿಡುಗಡೆ ಹೊಂದಿ ಊರ್ಧ್ವಮುಖವಾಗಿ ಬ್ರಹ್ಮತತ್ವವನ್ನು ನಿಧಿದ್ಯಾಸ

ಮಾಡುವುದೇ ಆತ್ಮಸ್ವಾತಂತ್ರ್ಯದ ಕುರುಹು. ಅದುವೇ ಆತ್ಮದ ಪರಮಶ್ರೇಯ. ಇಂದ್ರಿಯಾತೀತ ಭೋಗದಲ್ಲಿ ನೆಟ್ಟ ಮನುಸ್ಸುಳ್ಳವನಿದ್ದು ಆತ್ಮ ದೇಹದ ಅವಧಿ ಮೀರಿದೊಡನೆ ಮರಳಿ ಪ್ರತ್ಯೇಕ ಮಾನವ ದೇಹವನ್ನೋ ಅಥವಾ ಪಾಪ ಕರ್ಮಕ್ಕನುಗುಣವಾಗಿ ಬೇರೆ ಪ್ರಾಣಿಯ ಸ್ವರೂಪವನ್ನು, ಸಸ್ಯವರ್ಗಕ್ಕೆ ಸೇರಿದ ದೇಹವನ್ನು ಧರಿಸುವುದು. ಶುದ್ಧಚಿತ್ತ ಸ್ವರೂಪವೆಂದರೆ ಆತ್ಮನು ಚೇತನ ಮುಖಾಂತರ ಬ್ರಹ್ಮನನ್ನು ಅರಿತು ನಿಧಿಧ್ಯಾಸದ ಮೂಲಕ ಬ್ರಹ್ಮನನ್ನು ಸೇರುವುದೇ ನಿಜಾತ್ಮಕ ಕಲ್ಯಾಣವೆನಿಸುವದಾಗಿದೆ.

ಪ್ಲೋಟೋನಸ್‌ನ ಬಗ್ಗೆ ಏಕೆ ಇಷ್ಟು ವಿಶೇಷವಾಗಿ ಅಧ್ಯಯನವೆಂದರೆ ಈತನು ಪೌರ್ವಾತ್ಯ ತಾತ್ವಿಕ ಚಿಂತಕರಾಗಿರುವ ಅನುಭಾವಿಗಳೊಡನೆ ಕೂಡಿಕೊಳ್ಳುವ ಮಹಾನುಭಾವಿ. ಈತನ ಕಲ್ಪನೆ ಅನುಭಾವ ಪೂರಿತ. ಈತನ ಮುಕ್ತಿ ಚಿಂತನೆಯನ್ನು ನೋಡಿದರೆ ಪೌರಾತ್ಯ ಮುಕ್ತಿಗೂ ಇದಕ್ಕೂ ಸ್ವಲ್ಪವೂ ಭೇದವಿಲ್ಲ. ಭಾವಾನಂದವೇ, ತೂರ್ಯಾತೀತ ಆವಸ್ಥೆಯೇ ಆ ಅತೀಂದ್ರಿಯ ಶಕ್ತಿಯ ದರ್ಶನಕ್ಕೆ ಕಾರಣವೆನ್ನುವನು. "ಮುಕ್ತಿಯನ್ನು ಹೊಂದಲು ಹಲವು ಮಾರ್ಗಗಳುಂಟು. ಪ್ರಥಮದಲ್ಲಿ ಮಾನವ ತನ್ನ ಶರೀರವನ್ನು, ಇಂದ್ರಿಯಗಳನ್ನು ವಶಪಡಿಸಿಕೊಂಡು ಕಾಮರಾಗಾದಿಗಳ ಸಂಸ್ಕಾರದಿಂದ ಸಂಪೂರ್ಣವಾಗಿ ನಿವೃತ್ತನಾಗಿ ಜಿತೇಂದ್ರಿಯ ಎನಿಸಿಕೊಳ್ಳಬೇಕು. ಜೀತೆಂದ್ರಿಯತ್ವದಿಂದ ದೇಹವು, ಮನಸ್ಸು, ಪರಿಶುದ್ಧವಾಗುವವು. ದೇಹಕ್ಕೆ ಪರಿಶುದ್ಧ ಲಭಿಸಿದ ಬಳಿಕ ಮನೋಪರಿಹಾರಕ್ಕೆ ಪ್ರಯತ್ನ ಪಡಬೇಕು. ಜಿಜ್ಞಾಸೆಯಿಂದಲೂ, ಮನನದಿಂದ ಯಥಾರ್ಥ ತತ್ವವನ್ನು ಗ್ರಹಿಸಲೂ ಪ್ರಯತ್ನಪಟ್ಟು ಸಾಮಾನ್ಯಗಳನ್ನು ಕುರಿತು ಚಿಂತಿಸಬೇಕು. ಸಾಮಾನ್ಯಲೋಕ, ಬ್ರಹ್ಮಸಾನಿಧ್ಯವನ್ನು ತರುವದರಿಂದ ಸಾಮಾನ್ಯಗಳ ಚಿಂತನೆ ಬಹು ಶ್ರೇಯಸ್ಕರವಾದುದು. ಈ ವಿಧವಾದ ಜ್ಞಾನಕ್ಕಿಂತಲೂ ಅತಿಶಯತರವಾದ ಪ್ರಸ್ಥಾನವದುಂಟು. ಇದೇ ಸಮಾಧಿ. (Ecstasy)" ಸಮಾಧಿ ಸ್ಥಿತಿಯಲ್ಲಿ ಆತ್ಮನೂ ಧ್ಯಾನ ಲೋಕವನ್ನು ದಾಟಿದವನಾಗಿ ಸಮಸ್ತ ವಿಧವಾದ ಚಿತ್ತವೃತ್ತಿಗಳನ್ನು ನಿಲ್ಲಿಸಿದವನಾಗಿ, ಅಂಶಬೇಧಗಳನ್ನೆಲ್ಲಾ ಮರೆತವನಾಗಿ ಅನಿರ್ವಚನೀಯ ಆನಂದಸಾಗರದಲ್ಲಿ ಮುಳುಗಿದವನಾಗಿ, ಸರ್ವ - ಶುಭಂ - ಶಾಂತಂ ಎನಿಸಿಕೊಂಡ ಆ ಬ್ರಹ್ಮನಲ್ಲಿ ಐಕ್ಯವಾಗಿ ಬ್ರಹ್ಮಸಾಯುಜ್ಯವನ್ನು ಪಡೆಯುವನು. ಇದುವೇ ಆತ್ಮಕಲ್ಯಾಣದ ಪರಮಾವಧಿ. ಇದನ್ನು ಪಡೆಯುವದಕ್ಕೋಸ್ಕರವಾಗಿಯೇ ಜೀವನ ಸಂಸಾರ ಸಾಗರದಲ್ಲಿ ಮುಳುಗಿ ತೇಲಿ, ಒದ್ದಾಡಿ ಶ್ರಮಪಡುವನು. ಈ ಸಮಾಧಿ ಯೋಗವೇ ಸಕಲ ಸದ್ಗುಣ ಸದಾಚಾರಗಳ ಅಂತ್ಯಫಲ. ಯಮ ನಿಯಮಗಳಿಂದ ಶಮೆ - ಧಮೆಗಳನ್ನು ಸಂಪಾದಿಸಿ ದೈಹಿಕ - ಪ್ರಾಪಂಚಿಕ ವಿಷಯ ಲಾಲಸೆಗಳಿಂದ ಬಿಡುಗಡೆ ಹೊಂದಿ, ಮುಕ್ತಿಹೊಂದಲು ಅಧಿಕಾರಿಯಾಗುವನು. ಪ್ರತ್ಯಾಹಾರ ಧಾರಣಗಳಿಂದ ಚಿತ್ತವನ್ನು ಒಮ್ಮುಖಕ್ಕೆ ತಂದು, ಬ್ರಹ್ಮನ ಕಲ್ಯಾಣಗುಣ ಕಥನದಿಂದ ಅದನ್ನು ಪರಿಶುದ್ಧಗೊಳಿಸುವನು. ಸಮಾಧಿ ಅಥವಾ ತೂರ್ಯಾವಸ್ಥೆಯಲ್ಲಿ ಬ್ರಹ್ಮ ಸಾಕ್ಷಾತ್ಕಾರ ಹೊಂದಿ ಸತ್ಯವೆನಿಸಿಕೊಂಡ ಆ ತತ್ವಿನಲ್ಲಿಯೇ ಸೇರಿಹೋಗುವ"[೨] ಇಲ್ಲಿ ಇರುವ ಕ್ರಿಯೆ ಭಾವ ಚಿಂತಾರತ್ನವೆನ್ನಬಹುದು. ಹಿಂದೂ ಧರ್ಮದ ಸಾರವು ಕೂಡಾ ಹೀಗೆ ಅನುಭಾವಿಯ ಯೋಗ, ಸಮಾಧಿ ಇವೆಲ್ಲಾ ಸದೇಹ ಮುಕ್ತಿಗಳು. ವಿದೇಹ ಮುಕ್ತಿಯಲ್ಲ. ಆದರೆ ಸದೇಹ ಮುಕ್ತಿ ಪಡೆಯಬಹುದಾದರೇ ಭಾವ, ಆತ್ಮಗಳು, ಆನಂದಭಾವ ಸಾಗರವೇ ಆತ್ಮಕಲ್ಯಾಣದ ಧ್ಯೇಯ. ಪ್ಲೋಟೈನಸ್‌ನು ಪಾಶ್ಚಾತ್ಯ ಪೌರಾತ್ಯ ದರ್ಶನಕಾರರ ಸಂಗಮೀಕೃತ ಶಾಸ್ತ್ರಾದಿ ಚಿಂತಕ ಎನ್ನಬಹುದು. ಇವನು ಉಪಯೋಗಿಸುವ ಸಮಾಧಿ ಎನ್ನುವ ಪದ ಪ್ರಾಚೀನ ಗ್ರೀಕರಲ್ಲಿ ಅಥವಾ ನವೀನ ಪಾಶ್ಚಾತ್ಯ ಚಿಂತಕರಲ್ಲಿ

ಕಾಣಬರುವದಿಲ್ಲ. ಪೈಥಾಗೋರಿಯನ್‌ರನ್ನು ಅನುಸರಿಸಿದ ಸಾಕ್ರೇಟಿಸ್‌ನನ್ನು ಬಿಟ್ಟರೆ ಮತ್ತೆಲ್ಲಿಯೂ ಈ ಪದದ ಬಳಕೆ ಕಂಡುಬರುವುದಿಲ್ಲ. ಮತ್ತೆಲ್ಲಿಯಾದರೂ ಪಾಶ್ಚಾತ್ಯರಲ್ಲಿ ಇದರ ಬಳಕೆ ಕಂಡುಬಂದರೆ ಅದು ಪೌರಾತ್ಯ ಹಿಂದೂ ದರ್ಶನದಿಂದ ತೆಗೆದುಕೊಂಡ ತತ್ವವೇ ಹೊರತು ಸ್ವಯಂ ಸಿದ್ಧವಲ್ಲ. ನವೀನ ಪ್ಲೇಟೋ ಸಿದ್ಧಾಂತದಲ್ಲಿಯ ವಿಷಯಗಳು ಅನೇಕವು ಹಿಂದೂ ವೇದಾಂತ ದರ್ಶನದಿಂದ ಪ್ರಭಾವಿತಗೊಂಡಿವೆ ಎನ್ನಬಹುದು. ಪ್ಲೋಟೆನಸ್‌ನ ಸಿದ್ಧಾಂತ ಪೌರಾತ್ಯ ಹಾಗೂ ಗ್ರೀಕ್ ತತ್ವಶಾಸ್ತ್ರದ ಸಮ್ಮಿಶ್ರಣ. ಇಲ್ಲಿ ಈಶ್ವರರನ್ನು ಸ್ತುತಿಸುವದರಿಂದ ಇದಕ್ಕೆ ವಿಶ್ವೇಶ್ವರವಾದ, ಬ್ರಹ್ಮ ಸಾಕ್ಷಾತ್ಕಾರವನ್ನು ಹೇಳುವದರಿಂದ ವಿಶ್ವಬ್ರಹ್ಮವಾದವೆಂದು ಕರೆಯುವರು. ಅನುಭಾವ ದೃಷ್ಟಿಯಲ್ಲಿ ಪಾಶ್ಚಾತ್ಯ ಪೌರ್ವಾತ್ಯ ತತ್ವಶಾಸ್ತ್ರದ ಕೊಂಡಿ ಈತನು ಎನ್ನಬಹುದು.

ಪ್ಲೋಟೈನಸ್‌ನ ನಂತರ ತಾತ್ವಿಕ ಚಿಂತನೆಗೆ ಮಧ್ಯಕಾಲೀನ ಚಿಂತನೆ ಎನ್ನುವರು. ಇಲ್ಲಿ ತಾತ್ವಿಕತೆ ಕೇವಲ ಕ್ರೈಸ್ತಧರ್ಮದ ಬೆಳವಣಿಗೆಗೆ ಸಹಕಾರಿಯಾಗುವಂತೆ ಹೊಂದಿಕೊಂಡಿದೆ. ಇಲ್ಲಿ ಚಿಂತನೆ ಧರ್ಮದ ನೆರಳಿನಲ್ಲಿ ಬೆಳೆಯಿತು.

ದೇವರು ಅಪರಿಮಿತ ಸ್ವಯಂಭು ಈ ಜಗತ್ತನ್ನು ಸೃಷ್ಟಿಸಿದಾತ. ಎಲ್ಲದಕ್ಕೂ ಒಡೆಯ ಆತನೇ. ಕೊನೆಯ ತತ್ತ್ವ, ಪ್ರತಿಯೊಂದು ಜೀವಿಯಲ್ಲಿಯು ಅಭೌತಿಕವಾದ ತತ್ವವೇ ದೇವರು. ಆತನ ಕೃಪೆಯಿಂದ ವಿನಹ ಏನನ್ನು ತಿಳಿಯಲಾಗದು. ಆತನ ಕಲ್ಪನೆಗಳು ಭಾವನೆಗಳ ರೂಪವನ್ನು ಮಾನವ ಮನಸ್ಸಿನ ಮೇಲೆ ಮುದ್ರೆ ಒತ್ತುವದು. ಹೀಗೆ ಮಾನವ ಮನಸ್ಸು ದೇವರೊಡನೆ ಭಾಗವಹಿಸುವದು ಇದೆ ದೈವೀದ್ವೀಪನವಾದ (Doctorina divinave Illumination).

ದೇವರು ಮಾನವಪ್ರೇಮಿ, ಕರುಣಾಮಯಿ, ಭಕ್ತಿಪ್ರೇಮಿ. ಈ ಸಮಾಜದ ಬಾಂಧವ್ಯವನ್ನು ಪ್ರೀತಿಯಲ್ಲಿ ಬೆರೆಸುವುದರ ಮೂಲಕ ದೇವರನ್ನು ನಾವು ಸೇರಬಹುದಾಗಿದೆ. ಕೆಲವು ಕಲ್ಪನೆಗಳನ್ನು ಮಾನವರಲ್ಲಿ ತಾನೆ ತುಂಬಿರುವನು. ಬುದ್ಧಿಯ ಪ್ರ - ಕಲ್ಪನೆಗಳು ಯಾವ ಮೂಲದಿಂದ ಬರುತ್ತವೆಯೋ ಅವುಗಳಿಗಿಂತ ಆ ಮೂಲ ಅತ್ಯಾವಶ್ಯ. ಅವಶ್ಯಕತೆ ತತ್ವದ ಅಸ್ತಿತ್ವ ಇದ್ದಿರಲೇಬೇಕು. ಆ ಅವಶ್ಯಕವೆ ಈಶ್ವರ, ದೇವರು - ಪರಮಶ್ರೇಯ ಸರ್ವಶಕ್ತಿತ್ವ - ಸರ್ವಕತೃತ್ವ, ನ್ಯಾಯಘನತೆ, ಇವೆ ದೇವರ ಹತ್ತಿರದ ವಿಚಾರಗಳು. ಕಾರ್ಯ - ಕಾರಣವಾದವುಗಳನ್ನು ಅಗಸ್ಟೀನ್ ಉಪಯೋಗಿಸುವನು. ಪ್ರತಿಯೊಂದು ಕಾರ್ಯಕ್ಕೂ ಕಾರಣವಿರಲೇಬೇಕು. ಕಾರಣವಿರದೇ ಕಾರ್ಯವಿರುವುದಿಲ್ಲ. ಈ ಪ್ರಪಂಚಕ್ಕೂ ಒಂದು ಕಾರಣವಿರಲೇಬೇಕು. ಅದು ದೇವರು. ದೇವರಿಗೂ ಒಂದು ಕಾರಣವಿರಬೇಕೆನ್ನುವ ಹಾಗಿಲ್ಲ. ಯಾಕೆಂದರೆ ಅದೇ ಮೊದಲು ಕಾರಣ ಒಂದು ವೇಳೆ ಹಾಗೆ ಹೇಳಲು ಹೊರಟರು ಆವಸ್ಥಾ ದೋಷಕ್ಕೆ ಗುರಿಯಾಗಬೇಕಾಗುವದು. ಈಗ ಮೊದಲು ಕಾರಣವೇ ದೇವರು.

ಆತ್ಮವನ್ನು ಭಗವಂತ ಸೃಷ್ಟಿಸಿದನು. ಆತ್ಮ ಭೌತಿಕವಲ್ಲದಿದ್ದರೂ ಅದು ಅಭೌತಿಕವೆಂದು. ಅಭೌತಿಕ ಸತ್ಯಗಳನ್ನು ಗ್ರಹಿಸುವ ಸ್ನೇಹ ಹೊಂದಿದೆ. ಅವುಗಳ ಸಂಖ್ಯೆಯಲ್ಲಿ ಬಹಳ, ಅವನ್ನು ಬುದ್ಧಿ (Intellett), ಇಚ್ಛಾ (Will) ಸ್ಮೃತಿ (Memory) ಹೀಗೆ ಮೂರು ಭಾಗಮಾಡುತ್ತಾರೆ. ಅಗಸ್ಟೀನ್ ಆತ್ಮದ ಅಸ್ತಿತ್ವವನ್ನು ಈ ರೀತಿಯಲ್ಲಿ ಸಿದ್ಧಪಡಿಸಿರುವನು. ಚಿಂತನೆ ಮಾಡಲಿಕ್ಕೆ ಹಚ್ಚುವದು ಮನಸ್ಸು, ಸಂದೇಹಪಡುವ ಸ್ವಭಾವದ್ದು

ಸಂದೇಹವೂ ಕೂಡಾ ಚಿಂತನೆಯ ಪ್ರತಿಫಲ ಚಿಂತನೆ ಮಾಡುವ ಕ್ರಿಯೆ, ಸಂದೇಹ ಪಡುವ ಕ್ರಿಯೆ, ಸಂದೇಹ ಮಾಡುವವನ ಅಸ್ತಿತ್ವವನ್ನು ಸಿದ್ಧಪಡಿಸುವನು. ಸಂದೇಹ ಇದು ಆತ್ಮನಕ್ರಿಯೆ. ಒಂದುವೇಳೆ ಆತ್ಮ ಅಸ್ತಿತ್ವದಲ್ಲಿ ಇಲ್ಲದಿದ್ದರೆ ಅದು ಚಿಂತಿಸಲಾರದು. ಅದು ಚಿಂತಿಸುವದರಿಂದ ಅಸ್ತಿತ್ವದಲ್ಲಿದೆ. ಅದರ ಅಸ್ತಿತ್ವವನ್ನು ಸಂದೇಹಪಡಿಸಲು ಸಾಧ್ಯವೆ ಇಲ್ಲ. ಇದನ್ನು ಡೆಕಾರ್ಟರ ಮುಂದೆ ಪ್ರಸ್ತಾಪಿಸಿ ಇದಕ್ಕೆ Cogito ergor sum (ನಾನು ಆಲೋಚಿಸುತ್ತೇನೆ ಆದ್ದರಿಂದ ನಾನು ಅಸ್ತಿತ್ವದಲ್ಲಿದ್ದೇನೆ)[೨೪] ಕ್ರೈಸ್ತಧರ್ಮದ ಭಾವನೆಗಳನ್ನು ತಾತ್ವಿಕ ನೆಲೆಗಟ್ಟಿನ ಮೇಲೆ ನಿಲ್ಲುವ ಶಕ್ತಿಯನ್ನು ಈತ ಮಾಡಿದ.

**ಸೆಂಟ್ ಅಕ್ವಿನಾಸ್**

ಇವನು ಮೊದಲು ಧರ್ಮಶಾಸ್ತ್ರ ಮತ್ತು ತತ್ವಶಾಸ್ತ್ರಗಳನ್ನು ವಿಂಗಡಿಸಿದನು. ಧರ್ಮಶಾಸ್ತ್ರದಲ್ಲಿ ದೈವಿಕ ಸತ್ಯಗಳಾದ ಶ್ರದ್ಧೆ, ನಂಬಿಕೆಗಳು ತತ್ವಶಾಸ್ತ್ರದಲ್ಲಿ ಬುದ್ಧಿಯು ಸಾಧಿಸಬಹುದಾದ ಸತ್ಯ ವಿಚಾರಗಳ ಕ್ಷೇತ್ರ. ಅಕ್ವಿನಾಸ್‌ನ ಪ್ರಕಾರ ಧರ್ಮಶಾಸ್ತ್ರ ಮೂಲದಿಂದಲೇ ನಮಗೆ ದೈವಿಕ ಜ್ಞಾನವನ್ನು ನೀಡುತ್ತದೆ. ಅದು ಕಾರಣ (Cause)ದಿಂದ ಕಾರ್ಯಕ್ಕೆ (Effect) ಹರೆಯುವ ಜ್ಞಾನವಾಗಿದೆ. ಆದರೆ ತತ್ವಜ್ಞಾನದಲ್ಲಿ ಬುದ್ಧಿ, ಕಾರ್ಯದಿಂದ ಪ್ರಾರಂಭಿಸಿ ಕಾರಣವನ್ನು ಹುಡುಕುವದು. ತತ್ವಜ್ಞಾನ ಹೀಗೆ ಕಾರ್ಯದಿಂದ ಕಾರಣಕ್ಕೆ ಹರಿಯುವ ಜ್ಞಾನವಾಗಿದೆ.[೨೫] ಧರ್ಮ ಮತ್ತು ತತ್ವಶಾಸ್ತ್ರಗಳ ಸಮೀಕರಣವೇ ಈತನ ದೃಷ್ಟಿ. ಧರ್ಮದ ದೃಷ್ಟಿಯಲ್ಲಿರುವ ಕೆಲವು ಸತ್ಯಗಳು ತತ್ವಶಾಸ್ತ್ರಕ್ಕೆ ವಿರೋಧವನಲ್ಲ. ಅವು ಬುದ್ಧಿಗೆ ಸಿಗದ ಅಂದರೆ ಬುದ್ಧಿಗೆ ಮೀರಿದ ದೋಷರಹಿತ ಸತ್ಯಗಳು ಆದ್ದರಿಂದ ಅವುಗಳನ್ನು ನಂಬಲೇಬೇಕಾಗುವದು. ಎರಡು ಶಾಸ್ತ್ರಗಳ ಅಂತಿಮಗುರಿ ದೇವರೆ ಆಗಿರುವಾಗ ಇವೆರಡು ಪರಸ್ಪರ ಪೂರಕವೆನ್ನಬಹುದು. ಎಲ್ಲಾ ಜ್ಞಾನ ದೇವರನ್ನು ತಿಳಿಯುವುದೇ ಆಗಿದೆ. ಅದರಂತೆ ದೇವರನ್ನು ತಿಳಿಯುವ ಪ್ರಜ್ಞೆ ಆದರೆ ಎಲ್ಲವನ್ನು ತಿಳಿದಂತೆ ಸರಿ. 'All knowledge is knowledge of god' 'All consesious things Implicitly know god in everthing they know."[೨೬] ಹೀಗೆ ಇವೆರಡು ಸಮೀಕರಣವನ್ನು ಇಲ್ಲಿ ಸಾಧಿಸಲಾಗಿದೆ. ಧರ್ಮ ಕಟ್ಟುವ ಸಾಮಗ್ರಿ ತತ್ವಶಾಸ್ತ್ರವಾಗಿದೆ. ನಾವು ಪ್ರತಿಭಾ ಹಾಗೂ ಬುದ್ಧಿಗಳಲ್ಲಿ ಒಂದನ್ನು ನಂಬುತ್ತೇವೆ ಎಂದುಕೊಂಡಾಗ ಅವನ್ನು ಬೌದ್ಧಿಕವಾಗಿ ಸಮರ್ಥಿಸಲು ಸಾಧ್ಯವಾದರೆ ಅದಕ್ಕೆ ಪ್ರತಿಭಾನ ಅಥವಾ ಶ್ರದ್ಧೆ ಎಂದು ಕರೆಯಬಹುದು. ಒಂದುವೇಳೆ ಅದು ಸಂಶಯಕ್ಕೆ ಎಡೆಮಾಡುವಂತಿದ್ದರೆ ಅದು 'ಅಭಿಮತ'ವೆಂದು ಕರೆಸಿಕೊಳ್ಳುವದು. ನಿಸ್ಸಂದೇಹವಾಗಿದ್ದರೆ ಅದು ಶ್ರದ್ಧೆ. ಅವನು ಎರಡು ರೀತಿಯ ದೈವದ ಸತ್ಯಗಳನ್ನು ಹೇಳುತ್ತಾನೆ. ಒಂದು ಸಾಧಿಸಲಾಗದ ಕೇವಲ ಗ್ರಹಿಸುವ ಸಾಮರ್ಥ್ಯ ಹೊಂದಿದ ಸತ್ಯ. ಎರಡು ಬುದ್ಧಿಗೆ ನಿಲುಕದ ಸತ್ಯ. ಬುದ್ಧಿಗೆ ಒಂದು ಮಿತಿಯಿದೆ. ಆ ಮಿತಿಯ ಪರಿಧಿ ಎಲ್ಲಿಯವರೆಗೆ ಸಾಧ್ಯವೋ ಅಲ್ಲಿಯವರೆಗೆ ದೈವೀಶಕ್ತಿಯನ್ನು ಸಮರ್ಥಿಸಲು ಸಾಧ್ಯವಾಗುವದು. ಎಲ್ಲಿಯವರೆಗೆ ಅದರ ಸಾಮರ್ಥ್ಯ ಮೀರುತ್ತದೆಯೋ ಅದಕ್ಕಿಂತ ಹೆಚ್ಚಾಗಿ ಸಾಮರ್ಥ್ಯಕ್ಕೆ ಮಿಕ್ಕ ಬುದ್ಧಿಯು ಸತ್ಯ ಪರೀಕ್ಷೆಗೆ ಒಳಗಾಗುವದನ್ನು ಆತ ನಿರಾಕರಿಸುತ್ತಾನೆ. ಅವು ಅಲ್ಲಿ ಶ್ರದ್ಧೆಯಾಗಿ ಪರಿಣಮಿಸದೆ ಅವು ದೋಷರಹಿತವಾದ ಬುದ್ಧಿಗೆ ನಿಲುಕುವ ಸತ್ಯವದು.

'ಈ ಜಗತ್ತು ಸತ್ಯ ಮಿಥ್ಯವಲ್ಲ. ಇಂದ್ರಿಯ ಅನುಭವಕ್ಕೆ ಬಂದಿರುವ ಈ ದೃಶ್ಯ ಜಗತ್ತು ಸತ್ಯದ ಪರಮ ಸಾಕ್ಷಿಯಾಗಿದೆ. ಇಂದ್ರಿಯಗಳಲ್ಲಿ ಇಲ್ಲದ್ದು ಬುದ್ಧಿಯಲ್ಲಿರುತ್ತದೆ ಎಂದು ಹೇಳುವುದು

ಅಸಮಂಜಸವೆಂದು ಅರ್ವೆನಾಸ್ ಅಭಿಪ್ರಾಯ ಪಡುತ್ತಾನೆ. ಸೃಷ್ಟಿಯಿಂದ ಪ್ರಾರಂಭಿಸಿ ಅದರ ಕಾರಣವಾದ ದೇವರೆಡೆಗೆ ಸಾಗುವುದೇ ಜೀವನದ ಪರಮೋತ್ಕೃಷ್ಟ ಗುರಿಯೆಂದು ಅರ್ವೆನಾಸ್ ಸಾರುತ್ತಾನೆ.[೨೨]

ಮಧ್ಯಕಾಲೀನ ಪಾಶ್ಚಾತ್ಯ ತತ್ವಶಾಸ್ತ್ರದ ನಂತರ ಇನ್ನೂ ಆಧುನಿಕ ಪಾಶ್ಚಾತ್ಯ ತತ್ವಶಾಸ್ತ್ರವನ್ನು ನೋಡಲಾಗಿದೆ. ಒಟ್ಟಿನಲ್ಲಿ ಪಾಶ್ಚಾತ್ಯ ತಾತ್ವಿಕ ಕಲ್ಪನೆಗಳನ್ನು ನೋಡುತ್ತಾ ಸಾಗಿ ತದನಂತರದಲ್ಲಿ ಪೌರಾತ್ಯ ತತ್ವಗಳನ್ನು ನೋಡುವುದೇ ಇಲ್ಲಿಯ ಉದ್ದೇಶ. ಆಧುನಿಕ ತಾತ್ವಿಕ ಚಿಂತನೆ ಇದು ಸಾಂಪ್ರದಾಯಿಕವಾದ ಮಧ್ಯಕಾಲೀನ ತಾತ್ವಿಕ ಚಿಂತನೆಯ ಪ್ರತಿಭಟನಾ ರೂಪವಾಗಿ ಹುಟ್ಟಿತು. ಮಧ್ಯಕಾಲೀನದಲ್ಲಿ ಜ್ಞಾನ ಎಂಬುವ ಪದಕ್ಕೆ ಸಂಕುಚಿತ ಅರ್ಥವನ್ನು ಕೊಟ್ಟಿದೆ. ಕ್ರೈಸ್ತ ಬೈಬಲ್ ನ್ನು ಬೋಧಿಸುವುದೇ ಜ್ಞಾನ, ಅದಕ್ಕೆ ವಿರುದ್ಧವಾದುದು ಅಜ್ಞಾನ ಅನ್ನುವ ತಿಳುವಳಿಕೆಯಿದೆ. ಕ್ರೈಸ್ತಧರ್ಮದಲ್ಲಿನ ನಂಬಿಕೆಯೇ ಜ್ಞಾನ ಸ್ವತಂತ್ರ ವೈಜ್ಞಾನಿಕ ವಿಚಾರಗಳಿಗೆ ಅಲ್ಲಿ ಆಸ್ಪದವಿಲ್ಲ. ವಿಚಾರಮಾಡಿದರೆ ಪಾದ್ರಿಯ ಕೋಪಕ್ಕೆ ಗುರಿಯಾಗಬೇಕಷ್ಟೇ: ಆದರೆ ಆಧುನಿಕ ತತ್ವಚಿಂತನೆ ಮತಶಾಸ್ತ್ರದ ಅಡಿಯಾಳಾಗದೆ ಸ್ವತಂತ್ರವಾಗಿದೆ. ಸತ್ಯಕ್ಕೆ ಸಾಕ್ಷಿ ಬೈಬಲ್ ಅಂತು ಅಲ್ಲೆ ಅಲ್ಲ ಬುದ್ಧಿ, ಇಂದ್ರಿಯಾನುಭವ ವಿಮರ್ಶೆಗಳೇ ಇಲ್ಲಿ ಪ್ರಮಾಣಗಳು. ಯಾವ ದಾರಿ ಫಲಪ್ರದವಾದ ಪ್ರಾರಂಭ ಮತ್ತು ಕ್ರಿಯೆಗಳನ್ನು ನಿರ್ಧರಿಸುವುದೋ ಅದೇ ತತ್ವಾನ್ವೇಷಣೆಯ ವಿಧಾನ.[೨೩]

ಆಧುನಿಕ ತತ್ವಶಾಸ್ತ್ರದಲ್ಲಿ ಮೂರು ಭಾಗಗಳು

೧. ಬುದ್ಧಿಪ್ರಧಾನವಾದ (Rationalism)

೨. ಇಂದ್ರಿಯ ಪ್ರಾಧಾನ್ಯವಾದ (Emphirisism)

೩. ವಿಮರ್ಶಾವಾದ (Critic of Philosophy)

R- ಸ್ಪಿನೋಸ್ ಮತ್ತು ಲೆಬ್ನಿಸ್

E- ಲಾಕ್, ಬಾರಕ್ಲೇ ಮತ್ತು ಹ್ಯೂಮ

C - ಇಮ್ಯಾನ್ಯೊವೆಲ್ ಕಾಂಟ್

ಬುದ್ಧಿಯೇ ತಾತ್ವಿಕ ಜ್ಞಾನದ ಮೂಲ ಜ್ಞಾನವು ಸ್ಪಷ್ಟ, ಸಾರ್ವತ್ರಿಕ, ನಿಸ್ಸಂದೇಹ, ನಿಖರ, ಆವಶ್ಯಕವು ಆಗಿರಬೇಕಾದರೆ ಅದು ಬುದ್ಧಿಗೆ ಒಳಪಟ್ಟಾಗ ಮಾತ್ರ ಸಾಧ್ಯ. ಬುದ್ಧಿತನವನ್ನು ಉಪಯೋಗಿಸುವುದರಿಂದಲೇ ಗಣಿತಶಾಸ್ತ್ರವು ನಿರ್ದಿಷ್ಟವೂ ಖಚಿತತೆಯಿಂದ ಕೂಡಿದೆ. ಹಾಗೆ ಶುದ್ಧ ಬುದ್ಧಿಯನ್ನು ತತ್ವಶಾಸ್ತ್ರಕ್ಕೆ ಅನ್ವಯಿಸಿದಾಗ ತತ್ವಜ್ಞಾನ ನಿರ್ದಿಷ್ಟ, ನಿಖರ, ನಿಸ್ಸಂದೇಹವಾದ ಜ್ಞಾನವನ್ನು ಕೊಡುವದು. ಆದ್ದರಿಂದ ಶುದ್ಧ ಬುದ್ಧಿ ತತ್ವಜ್ಞಾನದ ಮೂಲ, ಇಂದ್ರಿಯಗಳಿಂದ ದೊರಕಿದ ಜ್ಞಾನ ಅದು ನಮಗೆ ಪರಿಪೂರ್ಣ ಜ್ಞಾನವನ್ನು ಕೊಡಲು ಅಸಮರ್ಥ. ಯಾಕೆಂದರೆ ಅದು ದ್ವೇಷ ಅಸೂಯೆಗಳಿಂದ ಕೂಡಿದೆ ಆದ್ದರಿಂದ ತಾತ್ವಿಕ ಜ್ಞಾನಕ್ಕೆ ಇದು ಒರೆಗಲ್ಲಲ್ಲ. ಜ್ಞಾನ ಇಂದ್ರಿಯಾನುಭವದ ಮೇಲೆ ಆಧರಿತವಾಗದೇ ಅಂತರ್ಗತ ತತ್ವಗಳಿಂದ ಹೊರಹೊಮ್ಮುವದು. ಅವು ಸ್ವತಃ ಉತ್ಪತ್ತಿ ತತ್ವ ಆದ್ದರಿಂದ ಇಂದ್ರಿಯಾನುಭವ ಅನಾವಶ್ಯಕ. ಜ್ಞಾನ ಸತ್ಯವೆಂದು ನಿರ್ಧರಿಸುವದು ಬಾಹ್ಯವಸ್ತುಗಳಿಂದಲ್ಲ ಭಾವ ಹಾಗೂ ಭಾವನೆಗಳ ಸಾಂಗತ್ಯದಿಂದ ಮಾತ್ರ.

ಒಂದು ಭಾವನೆ ವಿಶಾಲವಾದ ಮತ್ತೊಂದು ಭಾವದೊಡನೆ ಸಾಮರಸ್ಯ ಹೊಂದುವ ಭಾವನೆಗಳ ಸುವ್ಯವಸ್ಥಿತ ಸಾಮರಸ್ಯ ಅದು.

**ಡೇಕಾರ್ಟ್**

ಈತ ಆಧುನಿಕ ಪಾಶ್ಚಾತ್ಯ ತತ್ವಶಾಸ್ತ್ರದ ಜನಕ ಮತ್ತು ಬುದ್ಧಿ ಪ್ರಧಾನವಾದದ ಮೊದಲ ಚಿಂತಕ. ಅವನು ೧. ಅವನ ದೃಷ್ಟಿಯಲ್ಲಿ ನಿರ್ವಿಚಾರ ಮೌಢ್ಯದ ಪರಮಾವಧಿ, ಇಂದ್ರಿಯಗಳ ಜ್ಞಾನದ ಬಾಗಿಲುಗಳು ಮಾತ್ರ ೨. ಮತಧರ್ಮದ ಬಗ್ಗೆ ಪ್ರಮಾಣೀಕರಿಸಿದ ಧರ್ಮದ ನಂಬಿಕೆಗಳನ್ನು ಢಂಬಾಚಾರವೆಂದು ಜರೆಯುವನು. ತತ್ವಶಾಸ್ತ್ರದ ಗುರಿ ಸರಳ, ಸ್ವತಃ ಸಿದ್ಧವಾದ ತತ್ವಗಳಿಂದ ಪ್ರಾರಂಭಿಸಿ ಅವುಗಳನ್ನು ತತ್ವಶಾಸ್ತ್ರಕ್ಕೆ ಒಳಪಡಿಸಿ ಸಂಕೀರ್ಣವಾದ ವಿಶಾಲ ಭಾವನೆಗಳನ್ನು ಕ್ರಮವಾಗಿ ಪಡೆಯುವದು. ಪ್ರತಿಯೊಂದು ಭಾವನೆಗಳು ತಾರ್ಕಿಕ ಸಮಂಜಸ ಇರುವವೋ ಇಲ್ಲವೊ ಎಂಬುದನ್ನು ಪರೀಕ್ಷಿಸುವುದು. ಅದೇ ರೀತಿ ಆತ್ಮ, ಪ್ರಕೃತಿ, ದೇವರುಗಳನ್ನು ಈ ರೀತಿಯ ಗಣಿತ ತಾತ್ವಿಕಕ್ಕೆ ಅನ್ವಯಿಸುವನು. ಸಂಶಯಕ್ಕೆ ಇಡದೇ ಯಾವುದನ್ನು ಕೂಡಾ ನಂಬಲಾಗದು. ಪ್ರತಿಯೊಂದನ್ನು ಸಂಶಯಕ್ಕೆ ಒಳಪಡಿಸಿದಾಗ ಮಾತ್ರ ಪ್ರಾಮಾಣಿಕ ತತ್ವ ಸಿಗಲು ಸಾಧ್ಯ. ಆದರೆ ಸಂಶಯ ಪಡುವವನ ಅಸ್ತಿತ್ವದ ಬಗ್ಗೆ ಮಾತ್ರ ಸಂಶಯ ಪಡುವುದಕ್ಕೆ ಸಾಧ್ಯವಿಲ್ಲ. ಯಾಕೆಂದರೆ ಸಂದೇಹಪಡಬೇಕಾದಾಗ, ಆ ವ್ಯಕ್ತಿ ಅಸ್ತಿತ್ವದಲ್ಲಿರಲೇಬೇಕಾಗುತ್ತದೆ. ಆದ್ದರಿಂದ ಆತ ಸ್ವಯಂ ಸಿದ್ಧ. ತತ್ವಸಂಶಯ ಪಡುವವನ (ಆತ್ಮ) ಅಸ್ತಿತ್ವವನ್ನು ಸಂಶಯಪಡುವ ಕ್ರಿಯೆಯೇ ಹೇಳುತ್ತದೆ. 'ನಾನು ಆಲೋಚಿಸುತ್ತೇನೆ. ಆದ್ದರಿಂದ ನಾನು ಇದ್ದೇನೆ' (Cogito ergo sum) ಇದಕ್ಕೂ ಮೊದಲು ಸೇಂಟ್ ಅಗೆಸ್ಟಾಯಿನ್ ೪ನೇ ಶತಮಾನದಲ್ಲಿ ಈ ಅಂಶವನ್ನು ಸಿದ್ಧಮಾಡಿದ್ದ. ಆದರೆ ಇದರ ಆಧಾರದ ಮೇಲೆ ಅವನು ತತ್ವಚಿಂತನೆಯನ್ನು ಕಟ್ಟಲಿಲ್ಲ. ಆತ್ಮ ಅಸ್ತಿತ್ವದಲ್ಲಿ ಇದ್ದೆ ಇದೆ ಅಷ್ಟೇ ಏಕೆ ಅವು ಅಸ್ತಿತ್ವದಲ್ಲಿ ಇದ್ದೆನೆಂಬ ಭಾವನೆಯನ್ನು ಕೂಡಾ ಹೊಂದಿದೆ. ಅದರಲ್ಲಿ ಇರುವು (Existance) ಅರಿವು (Knowledge) ಸಂಗಮಗಳಾದವು. ದೇವರು ಪರಿಪೂರ್ಣ ಅನ್ನುವದು ಆತ್ಮನ ಅನಿಸಿಕೆ. ಪರಿಪೂರ್ಣ ಅರ್ಥದಲ್ಲಿ ಅಸ್ತಿತ್ವವೂ ಕೂಡಾ ಒಂದು. ಆದ್ದರಿಂದ ದೇವರು ಅಸ್ತಿತ್ವದಲ್ಲಿದ್ದಾನೆ. ದೇವರು ಪರಿಪೂರ್ಣನಾಗಿರುವವನು ಅಸ್ತಿತ್ವದಲ್ಲಿರುವದರಿಂದಲೆ ಆತ್ಮನಲ್ಲಿ ಆತನು ಪರಿಪೂರ್ಣ ಎಂಬ ಕಲ್ಪನೆ ಇರಲು ಸಾಧ್ಯ. ಇಲ್ಲದಿದ್ದರೆ ಹೇಗೆ ಕಲ್ಪನೆಯಿರುತ್ತಿತ್ತು. ಆದುದರಿಂದ ದೇವರು ವಾಸ್ತವವಾಗಿಯೂ ಅಸ್ತಿತ್ವದಲ್ಲಿದ್ದಾನೆ. ಇದಕ್ಕೇನೇ ಪರಿಪೂರ್ಣವಾದ (Ontological Argument) ಅನ್ನುವರು. ಪರಿಪೂರ್ಣ ವಾದದಂತೆ ದೇವರ ಅಸ್ತಿತ್ವವನ್ನು ಸಿದ್ಧಪಡಿಸಲು ಕಾರ್ಯಕಾರಣ ವಾದವನ್ನು ಉಪಯೋಗಿಸುವಾಗ, ಬುದ್ಧಿಯನ್ನು, ತಾರ್ಕಿಕವನ್ನು ಉಪಯೋಗಿಸುತ್ತಾನೆ. ಪ್ರತಿಯೊಂದು ಕಾರ್ಯಕ್ಕೂ ಕಾರಣ ಇರಲೇಬೇಕು. ಕಾರ್ಯ ಅಷ್ಟೇ ಕಾರಣ ಬೆಲೆಯುಳ್ಳದ್ದು ಅಥವಾ ಯೋಗ್ಯವಾದದ್ದು ಆಗಿರಲೇಬೇಕು. ಅಂತರ್ಗತ ದೇವರ ಕಲ್ಪನೆಗೆ ಕೂಡಾ ಕಾರಣವಿರಲೇಬೇಕು. ಈ ಕಲ್ಪನೆಗೆ ಮನುಷ್ಯರಾಗಲೀ ಇತರ ಯಾವುದೇ ವಸ್ತುವಾಗಲೀ ಕಾರಣವಿರಲಾರದು. ಏಕೆಂದರೆ ಇವೆಲ್ಲವೂ ಅಪರಿಪೂರ್ಣವಾದವುಗಳು. ಪರಿಪೂರ್ಣ ಕಲ್ಪನೆಗೆ ಪರಿಪೂರ್ಣ ವಸ್ತುವೇಕಾರಣ ಹಾಗಾದರೆ ಪರಿಪೂರ್ಣ ದೇವರ ಕಲ್ಪನೆಗೆ ಪರಿಪೂರ್ಣ ದೇವರೇ ಕಾರಣ ಇದೇ 'Cousale Argument' ಕಾರ್ಯ - ಕಾರಣವಾದ. ಈ ಡೆಕಾರ್ಟ ಬುದ್ಧಿ ಪ್ರಧಾನವಾಗಿ ಬುದ್ಧಿಯಿಂದ ದೇವರ ಅಸ್ತಿತ್ವವನ್ನು ಸಾಧಿಸುವ

ಈತನ ದಾರಿ, ಬುದ್ಧಿ ಹಾಗೂ ಅನುಭವ, ದರ್ಶನ ಶಬ್ದಗಳಲ್ಲಿ ಕಾರಣವು ವಿಶೇಷತೆ ದರ್ಶನ ಕಣ್ಣಿಗೆ ಕಾಣಿಸುವದು, ನೋಡುವದು, ನೋಡಿದ ಅನುಭವವನ್ನು ಅಳವಡಿಸಿಕೊಳ್ಳುವದು. ಆದರೆ ಅನುಭವ ಇದು ಇಂದ್ರಿಯಗಮ್ಯ, ಇಂದ್ರಿಯಗಳಿಂದ ಪಡೆದ ವಸ್ತು ಸ್ಥಿತಿಗಳನ್ನು ಅನುಭವ ಅನ್ನಬಹುದು. ಬೆಂಕಿ ಸುಡುವದು, ಬೆಂಕಿಯಲ್ಲಿ ಕೈಯಿಟ್ಟರೆ ಕೈ ಸುಡುವದು ಹೀಗೆ ಇಂದ್ರಿಯ ಗ್ರಾಹ್ಯ ಅನುಭವ. ದರ್ಶನ ಇದು ಒಂದು ಅನುಭವದ ಹೆಜ್ಜೆ ಮುಂದೆ ಸಾಗಿದ್ದು, ಇದು 'Ratinul' ಅಲ್ಲ, ಅದರಂತೆ 'Empricism' ಕೂಡಾ ಅಲ್ಲ. ಬುದ್ಧಿ ಎಲ್ಲರಿಗೂ ಕೂಡಾ ಹೊಳೆಯುವ, ಅರಿತ ಬುದ್ಧಿಯಿಂದ ವಿಚಾರಮಾಡುವ ಪದ್ಧತಿ, ನಾವು ತೆಗೆದುಕೊಂಡ ಅರಿತ ಬುದ್ಧಿಯ ವಿಚಾರವಾದ ಅನುಭಾವದ ಹಿನ್ನಲೆಯಲ್ಲಿ. ಇಲ್ಲಿ ದರ್ಶನವೆಂದರೆ ಒಂದು ಆಧ್ಯಾತ್ಮಿಕ ದಾರಿಯಂತಲೂ ಅರ್ಥೈಸಲಾಗಿದೆ. ಜೀವ - ಜಗತ್ತು - ಈಶ್ವರ ಇವು ಮೂರರ ಅಸ್ತಿತ್ವ ಹಾಗೂ ಪರಸ್ಪರ ಹೊಂದಾಣಿಕೆ, ಅವುಗಳ ನಡುವಿನ ಸಂಬಂಧವೇನು? ಅನ್ನುವುದೇ ಆಯಾ ದರ್ಶನದ ಸ್ಪಷ್ಟೀಕರಣವಾಗಿದೆ. ದೇವರು ಪರಿಪೂರ್ಣವಾದ್ದರಿಂದ ಆತ ಪ್ರಾಮಾಣಿಕನೂ ಕೂಡಾ ಸತ್ಯವು ಮಿಥ್ಯವು ಆಗಿದ್ದಾನೆ. ಆದ್ದರಿಂದ ಅವನಿಂದ ಉದಯಿಸಿದ ಜಗತ್ತು ಸತ್ಯವು ಮಿಥ್ಯವೂ ಕೂಡಾ ಆಗಿದೆ. ಇಲ್ಲಿ ಬುದ್ಧಿಯನ್ನು ಅನ್ವಯಿಸುವುದರ ಮೂಲಕ ಚಿಂತನೆಯನ್ನು ಮಾಡಿದ್ದಾನೆ.

ಡೆಕಾರ್ಟನ ಚಿಂತನೆ ದ್ವೈತವಾದದಂತೆ ಗೋಚರವಾಗುತ್ತದೆ. 'ದ್ವೈತ' ಇದರ ನಿಜವಾದ ಅರ್ಥ ಜೀವ ಎಂದು ಶಿವನಾಗಲಾರ. ಜೀವ - ಈಶ್ವರ ಎಂದೂ ಕೂಡಿಕೊಳ್ಳದ ಸ್ಥಿತಿ. ಡೆಕಾರ್ಟನ ಪ್ರಕಾರ ಮನಸ್ಸು - ಚೇತನ ಆತ್ಮ ಇವು ಮೂರು ಒಂದೇ ಅರ್ಥವನ್ನು ಪಡೆದಿವೆ. ಆತ್ಮ ಎಂದೆಂದಿಗೂ ಪರಮಾತ್ಮನನ್ನು ಸೇರಲಾರದು. ಇಲ್ಲಿ ದೈವ ಎನ್ನುವ ಪದದ ಬಳಕೆಯಿಲ್ಲ, ಅನ್ವಯ ಸಮಂಜಸವೂ ಇಲ್ಲ. ಜ್ಞಾನಶಕ್ತಿ (Thought) ಮತ್ತು ಭೌತವಸ್ತುವನ್ನು ಆವರಿಸುವ ಶಕ್ತಿ (Extension) ಇವೆರಡಕ್ಕೂ ಸಂಬಂಧವಿಲ್ಲ ಎಂದು ಅನ್ನಲಿಕ್ಕೆ ಬರುವದಿಲ್ಲ. ಮನಸ್ಸಿಗೆ ಹಿಗ್ಗಾದಾಗ ದೇಹ ಉಲ್ಲಸಿತವಾಗುವದು. ಅದರಂತೆ ದುಃಖವಾದಾಗ ದೇಹವೂ ಕೂಡಾ ತೊಂದರೆಯನ್ನು ಅನುಭವಿಸುತ್ತದೆ. ಶರೀರ ಸದೃಢವಾದಾಗ ಮನಸ್ಸು ಆಹ್ಲಾದಕರವೂ - ಸುಖಿ ಪ್ರಕಾಶನವಾದಂತೆ ತೋರುವದು. ಈತನ ಪ್ರಕಾರ ಮನಸ್ಸಿನಲ್ಲಿ ಎರಡು ರೀತಿಯ ಕ್ರಿಯೆಗಳಿವೆ. ೧. "ಅಂತರ್ ದೃಷ್ಟಿಯ ತಿಳಿವು" ಅಥವಾ ಅದಕ್ಕೆ ಪ್ರತಿಭಾನ (Impustron) ಮತ್ತು ನಿರ್ಗಮನ (Ocouetion). ಪ್ರತಿಭಾನವೆಂದರೆ ಬುದ್ಧಿಯ ಮೂಲದಿಂದ ನಿಸ್ಸಂದೇಹವಾಗಿ ಸ್ವತಃ ಸಿದ್ಧವಾದ ಕಲ್ಪನೆಗಳು. ಇವು ಕ್ರಿಯಾತ್ಮಕ ಮನಸ್ಸಿನಿಂದ ಮಾತ್ರ ಹೊರಬರುತ್ತವೆ. ಸ್ಪಷ್ಟ ಸರಳ ಶುದ್ಧ ಬುದ್ಧಿಯ ಕಲ್ಪನೆಗಳನ್ನು, ವಸ್ತುಗಳನ್ನು ದರ್ಶಿಸುವುದೇ ಪ್ರತಿಭಾವ. ಕ್ಷಣಕ್ಷಣಕ್ಕೂ ಬದಲಾಯಿಸುವ ಇಂದ್ರಿಯಗಳ ಊಹಾತ್ಮಕ ಅನಿಸಿಕೆಯಲ್ಲಿ ಭಾವೋದ್ವೇಷವಿಲ್ಲದ ಆಸೆ-ಆಮಿಶೆಗಳಿಲ್ಲದ, ದ್ವೇಷಾಸೂಯಿಗಳಿಂದ ಹೊರತಾದ ನಿಷ್ಕಲ್ಮಶ ಸತ್ಯಬುದ್ಧಿಯ ದರ್ಶನವದು. ಪ್ರತಿಭಾನದಿಂದ ಬಂದ ವಿಷಯಗಳನ್ನು ನಿರ್ದಿಷ್ಟವಾಗಿ ಸ್ಪಷ್ಟೀಕರಿಸುವುದೇ ಆಗಿದೆ. ಈ ತತ್ವಚಿಂತನೆಯನ್ನು ಕುರಿತು ವಿಮರ್ಶಿಸುವದೆಂದರೆ, ನಾನು ಆಲೋಚಿಸುತ್ತೇನೆ ಆದ್ದರಿಂದ ನಾನು ಇದ್ದೇನೆ ಇಲ್ಲಿ ಎರಡು ಮುಖಗಳು ಒಂದು ಚಿಂತಕ ಇನ್ನೊಂದು ಚಿಂತಿಸುವ ವಸ್ತು ಇಲ್ಲಿ ಇದ್ದವನು ಚಿಂತಿಸದೇ ಇರಲು ಸಾಧ್ಯವಾಗದು. ಅದು ವಿಫಲವಾಗುವದು ಕೇವಲ ಆತ್ಮನ ಅಸ್ತಿತ್ವವನ್ನು ಸಿದ್ಧಗೊಳಿಸುವದಕ್ಕಾಗಿ ಮಾತ್ರ ಏಕೆ? ಉಪಯೋಗಿಸಬೇಕು, ಇದನ್ನು ಬೌದ್ಧಿಕ ಶರೀರದ ಅಸ್ತಿತ್ವಕ್ಕೂ ಅನ್ವಯಿಸುವದು. ದೇವರ

ಬಗ್ಗೆ ಮಾತನಾಡುವಾಗ ಅದು ಒಮ್ಮಿಂದೊಮ್ಮೆಲೆ ಸ್ವತಃಸಿದ್ಧವಾದ ತತ್ವವೆಂದು ಅಭಿಪ್ರಾಯ. ಅಲ್ಲಿ ಚಿಂತನೆಯೇ ಇಲ್ಲ Radimed ಇಲ್ಲಿ ಒಂದು ಚಿಂತನೆ ದೇವರು ಆತ್ಮಾಂತರ್ಗತ ತತ್ವವಾಗಲಿಕ್ಕೆ ಹೇಗೆ ಸಾಧ್ಯ? ಮತ್ತು ಹಾಗಿರಲು ಕಾರಣ ಅಂತರ್ಗತವೇ ಅಥವಾ ಬಾಹ್ಯವೆ? ಇವೆಲ್ಲವುಗಳ ಚಿಂತನೆಗಳನ್ನು ಪೂರೈಸಿದಾಗ ಮಾತ್ರ ಅದು ಸದ್‌ವಿಚಾರ ಎನ್ನಬಹುದು. ನಿರ್ವಿಚಾರವೆಂದರೆ ವಿಚಾರನೀಯವಾದವರು ಇದನ್ನು ಸಿದ್ಧಮಾಡಲಿಕ್ಕೆ ಏನೇನು ಮಾರ್ಗಗಳಿವೆ ಅದನ್ನು ಹುಡುಕಬೇಕಾದ ಪ್ರಚೋದನೆ ಈತನಿಂದಲೇ ಪ್ರಾರಂಭವಾಯಿತು. ಇಲ್ಲಿ ಆತ್ಮ ಮತ್ತು ದೇಹಗಳು ಬೇರೆಬೇರೆಯಾಗಿದ್ದರೂ ಒಂದಕ್ಕೊಂದು ಹೊಂದಿಕೊಂಡೇ ಇವೆ. ಇವೆರಡು ಬೇರೆ ಅಂದ ಮಾತ್ರಕ್ಕೆ ದ್ವೈತವಾದವಾಗಲು ಸಾಧ್ಯವಿಲ್ಲ ಇವೆರಡು ದೇವರಿಂದ ಹೊರಟ ಕವಲುದಾರಿ. ತತ್ವಶಾಸ್ತ್ರವೆಂದರೆ ನಿರ್ವಿಚಾರ ವಾದದಲ್ಲಿ ಅದು ವಿಚಾರ ತೀರ್ಮಾನದಿಂದ ಬಂದದ್ದು ದೇಹವಿದ್ದಾಗ ಮಾತ್ರ ಆತ್ಮವಿರಲು ಸಾಧ್ಯ. ತತ್ವಶಾಸ್ತ್ರ ನಿರ್ವಿಚಾರ ಮತಧರ್ಮ ಅನ್ನುವದನ್ನು ಬಿಡಿಸುತ್ತೇನೆಂದು ಹೇಳಿ ಕೊನೆಗೆ ನಿರ್ವಿಚಾರದಲ್ಲಿಯೇ ಕೊನೆಗೊಳ್ಳುವಂತೆ ಮಾಡಿರುವನು. ಈತ ತತ್ವಚಿಂತನೆಯ ಆಧುನಿಕರಲ್ಲಿ ಮೊದಲನೆಯವನು. ಪ್ರತಿಭಾನವನ್ನು ವಿವರಿಸುವಾಗ ಮಾತ್ರ ಅನುಭಾವ ಅರ್ಥಕ್ಕೆ ಸಮೀಪವರ್ತಿಯಾಗಿದೆ ಎನ್ನಬಹುದು.

### ಸ್ಪಿನೋಜ

ಮನುಷ್ಯ ಸ್ವತಂತ್ರಮಯ ಅಲ್ಲ. ಅವನ ಆಗು ಹೋಗುಗಳು ಎಲ್ಲವೂ ದೇವರ ಕೈಯಲ್ಲಿದೆ. ಅವನು ಪರತಂತ್ರ ಚೈತನ್ಯ ಹಾಗೂ ಭೌತಿಕ ವಸ್ತುಗಳು ಡೆಕಾರ್ಟ್‌ನಂತೆ ವಿರುದ್ಧ ತತ್ವಗಳಲ್ಲ, ಒಂದೇ ಸತ್ಯದ (ದೇವರ) ಎರಡು ಭಾಗಗಳು. "All things in god an every things that happenss dos so only by the lawgs of the infinte Nature of god"[೧] ಎಲ್ಲವೂ ದೇವರಿಂದಲೇ ನಡೆಯುವದು, ಪ್ರತಿಯೊಂದು ವಸ್ತುವಿನ ಮೂಲ ಕಾರಣ ದೇವರು. "Whatever is; is in god an Nathing c or beconeved without god"[೨೮] ದೇವರು ಎಲ್ಲ ವಸ್ತು ಅಂತರ್ಗತ ಸರ್ವಾಂತರ್ಯಾಮಿ ಇವನ ಪ್ರಕಾರ ದೇವರು ಅತೀತನಲ್ಲ ವಿಶ್ವದ ಚಲನಶಕ್ತಿ ಬಾಹ್ಯದಿಂದ ಪ್ರಯೋಗಿಸಲ್ಪಟ್ಟ ಬಲವಲ್ಲ. ಅದು ಆಂತರಿಕವಾಗಿ ಇರುವಂತದ್ದು, ವಿಶ್ವವನ್ನು ಬಿಟ್ಟು ಹೊರಗೇನು ಇಲ್ಲ ಈ ಪ್ರಕೃತಿಯೇ ದೇವರು ಇದಕ್ಕೆ ವಿಶ್ವಾತ್ಮಕವಾದ (Pantheism) ಅನ್ನುವರು. ಇದರ ಪ್ರಕಾರ ಪ್ರತಿವಸ್ತುವಿನಲ್ಲೂ ದೇವರು ಇದ್ದಾನೆ ಅವನನ್ನು ಸಾಕ್ಷಾತ್ಕಾರಕರಿಸಿಕೊಳ್ಳಬಹುದಾಗಿದೆ. ಎಲ್ಲವೂ ಒಂದೇ ಅನ್ನುವದು ಮನಸ್ಸಿನಲ್ಲಿ ಮೂಡಿ ಕರಗತವಾಗುವುದೇ 'ದೈವ ಸಾಕ್ಷಾತ್ಕಾರ' ಇವನು ಮೂರುವರ್ಗದ ಜ್ಞಾನವನ್ನು ಹೇಳುತ್ತಾನೆ. ಕೆಳವರ್ಗ, ಮಧ್ಯಮವರ್ಗ, ಉತ್ತಮವರ್ಗ ಧ್ಯಾನ ಎಂದು

೧. ಇಂದ್ರಿಯ ಸಂವೇದನೆ, ಇಂದ್ರಿಯ ವ್ಯಾಪಾರ ಇದು ದೋಷಯುಕ್ತವಾಗಿರುತ್ತದೆ.

೨. ಶುದ್ಧ ಬುದ್ಧಿಯಿಂದ ಆ ಸ್ವತ ಸಿದ್ಧ ತತ್ವಗಳಿಗೆ ಆರೋಪಿಸಿ ಪಡೆಯುವ ನಿಜವಾದ ಜ್ಞಾನವೇ ಮಧ್ಯಮವರ್ಗದ್ದು.

೩. ಪ್ರತಿಭಾನದಿಂದ ಪಡೆದ ಉತ್ಕೃಷ್ಟ ಜ್ಞಾನ. ಅಪರೋಕ್ಷವೂ, ನೇರವೂ, ಕಡಾಖಂಡಿತವೂ ಆದ ಜ್ಞಾನ, ದೇವರ ಪೂರ್ಣ ಜ್ಞಾನವನ್ನು ಹೊಂದುವಂತೆ ಮಾಡುವ ವಿಧಾನವೇ 'ಪ್ರತಿಭಾನ' ಪ್ರಕೃತಿಗೆ ಪ್ರತಿಯೊಂದು ವ್ಯಾಪಾರದಲ್ಲಿಯೂ ದೇವರ ಕೈವಾಡವನ್ನು ಕಾಣುವದು ಪ್ರತಿಭಾನ[೩೦]

ದೇವರ ಮೇಲಿನ ಜ್ಞಾನ ಹೆಚ್ಚಾದಂತೆಲ್ಲಾ ಅವನ ಮೇಲಿನ ಪ್ರೀತಿಯು ಹೆಚ್ಚಾಗುತ್ತದೆ. ಜ್ಞಾನ ಹೆಚ್ಚಾದರೆ ಪ್ರೀತಿಯು ಹೆಚ್ಚು. ಪ್ರೀತಿ ಕಡಿಮೆಯಾದರೆ ಜ್ಞಾನವೂ ಕಡಿಮೆ. ಆ ಪ್ರೇಮವನ್ನು ಅಳವಡಿಸಿಕೊಳ್ಳುವದನ್ನೇ 'Intellectueol love of god' ಬೌದ್ಧಿಕ ಪ್ರೀತಿ ಎನ್ನುವನು ಇದುವೇ ದಿವ್ಯಾನಂದ. ಇಲ್ಲಿ ಒಂದು ಬೇಧವನ್ನು ಕಾಣುತ್ತೇವೆ. ಸಾಮಾನ್ಯ ಮನಸ್ಸು ಹಾಗೂ ಸಾರ ರೂಪವಾದ ಮನಸ್ಸು The Essecense of in ಇವೆರಡಕ್ಕೂ ವ್ಯತ್ಯಾಸವಿದೆ. ಸಾಮಾನ್ಯ ಮನಸ್ಸಿನಿಂದ ದೇವರನ್ನು ಅಳೆಯಲಾಗದು. ಸಾರ ರೂಪ ಮನಸ್ಸಿನಿಂದ ದೇವರನ್ನು ಕಾಣುವದು. ಈತನು ಅದ್ವೈತವಾದಿಯಂತೆ ಗೋಚರವಾಗುತ್ತಾನೆ. ಸಾಮಾನ್ಯವಾಗಿ ರಾಮಾನುಜರ ವಿಶಿಷ್ಟಾದ್ವೈತಕ್ಕೂ ಇವನ ಚಿಂತನೆಗೂ ಸಾಮ್ಯವಿದೆ.

ರಾಮಾನುಜರ ಪ್ರಕಾರ ಚಿತ್ (ಜೀವಾತ್ಮ) ಮತ್ತು ಅಚಿತ್ (ಜಗತ್ತು) ಎಂಬ ವಿಶೇಷಣಗಳಿಂದ ಕೂಡಿದ್ದೆ ಬ್ರಹ್ಮ. (ದೇವರು) ಎಂದು ಕರೆದರೆ ಇಲ್ಲಿ ಜ್ಞಾನಶಕ್ತಿ ಮತ್ತು ಆವರಿಸುವಿಕೆಯ ಅನಂತ ಗುಣಗಳ ವಿಶಿಷ್ಟ ಸ್ವರೂಪ. ವ್ಯವಹಾರಾ ವಸ್ಥೆಯ ಜೀವಾತ್ಮನಲ್ಲಿ ಸಂಕುಚಿತವಾದ ಜ್ಞಾನಶಕ್ತಿ, ಜೀವಾತ್ಮ ಕರ್ಮ - ಭಕ್ತಿ - ಜ್ಞಾನಗಳಿಂದ ವಿಕಾಸವಾಗುತ್ತಾ ಹೋಗಿ ಕೊನೆಯಲ್ಲಿ ಪೂರ್ಣವಾಗಿ ವಿಕಾಸವಾಗುವದು ಎಂದು ರಾಮಾನುಜರು ಹೇಳಿದರೆ ಸ್ಪಿನೋಜನ ಪ್ರಕಾರ ಮನಸ್ಸು ದೇವರೆ ಹೆಚ್ಚು ಹೆಚ್ಚು ತಿಳಿದಂತೆಲ್ಲಾ ದೇವರ ಮೇಲೆ ಪ್ರೀತಿ ಹೆಚ್ಚಾಗುತ್ತಾ ಸಾಗುತ್ತದೆ. ಕೊನೆಗೆ ದಿವ್ಯಾನಂದದಲ್ಲಿ ಕೂಡುವದು ಅದೇ ಜೀವಾತ್ಮದ ಅಂತಿಮ ಗುರಿ. ಇವರಿಬ್ಬರ ಪ್ರಕಾರ ದೇವರು ಜೀವಾತ್ಮ ಮತ್ತು ಪ್ರಕೃತಿಗಳ ಮಿಶ್ರಣ. ರಾಮಾನುಜರ ಪ್ರಕಾರ ಜೀವಾತ್ಮನಿಗೆ ಪ್ರತ್ಯೇಕ ಸ್ಥಾನ ಕೊನೆಯ ತನಕ ಅದರ ಅಸ್ತಿತ್ವವನ್ನು ಉಳಿಸಿಕೊಡುತ್ತದೆ. ಸ್ಪಿನೋಜ ಜೀವಾತ್ಮ ಅಂದರೆ ಏನು? ಅನ್ನುವುದರ ಬಗ್ಗೆ ಅರ್ಥೈಸಲು ಕೂಡಾ ಹೋಗದೆ ಮನಸ್ಸು - ದೇಹಗಳ ಸಮಾನ ಅಂತರಗಳನ್ನು ಹೇಳುತ್ತಾನೆ. 'ರಾಮಾನುಜರದು ಪ್ರಧಾನತ: ದೈವಾಸ್ತಿಕ್ಯವಾದ (Theism) ವಾದರೆ ಸ್ಪಿನೋಜನದು ವಿಶ್ವಾತ್ಮಕವಾದ (Panthesm) ವಾಗಿದೆ. ಸೃಷ್ಟಿಕ್ರಿಯೆ ಒಪ್ಪಿಕೊಳ್ಳುವುದರ ಮೂಲಕ ದೇವರು ಮತ್ತು ವಿಶ್ವದ ಅಸ್ತಿತ್ವ ಬೇಧವನ್ನು ರಾಮಾನುಜರು ಹೇಳಿದರೂ ಜೀವ - ಜಗತ್ತುಗಳ ಪ್ರತ್ಯೇಕವಾದರೂ ಅವು ದೇವರ ಮೇಲೆ ಸಂಪೂರ್ಣವಾಗಿ ಅವಲಂಬಿತವಾಗಿರುವದರಿಂದ ಅವರ ಚಿಂತನೆ ಅಂತಿಮಾರ್ಥದಲ್ಲಿ ಅದ್ವೈತವಾಗಿದೆ. ಸ್ಪಿನೋಜನಲ್ಲಿ ಸೃಷ್ಟಿಕ್ರಿಯೆಯಲ್ಲಿ ದೇವರು ವಿಶ್ವವನ್ನು ಸೃಷ್ಟಿಸುತ್ತಾನೆ ಎಂದು ಹೇಳುವದು ಸರಿಯಲ್ಲ ದೇವರೆ ವಿಶ್ವವಾಗಿದ್ದನೆ'[೩೦] ಎನ್ನುವದು ಈತನ ಅಭಿಪ್ರಾಯವಾಗಿದೆ. ಸ್ಪಿನೋಜನ ಮೂರನೇ ವರ್ಗದ ಜ್ಞಾನ "ಪ್ರತಿಭಾನ" ಅದನ್ನು ಮಾತ್ರ ನಾವು ಇಲ್ಲಿ ಅರ್ಥೈಸುತ್ತಾ ಸಾಗಬಹುದು. ಇದು ಒಂದೇ ವಿಷಯ ಇಲ್ಲಿ ಹೆಚ್ಚು ಪ್ರಸ್ತುತ. ಅವನ ಸಮಾನಾಂತರವಾದ ಮನಸ್ಸು ದೇಹ ಇವೆರಡೂ ಒಂದಕ್ಕೊಂದು ಸಂಬಂಧವಿಲ್ಲ. ಅವು ಹಾಗೆಯೇ ಸಮಾನಾಂತರವಾಗಿ ಮುಂದುವರೆಯುತ್ತವೆ. ಹೀಗೆ ಆತ ಹೇಳುವುದೇ ಸಮಂಜಸ ಎನಿಸುವದಿಲ್ಲ. ಒಂದಕ್ಕೊಂದು ಸಂಬಂಧವಿದೆಯೆಂದು ಅನುಭವದಿಂದ ಗೊತ್ತಾಗುತ್ತದೆ. ಉದಾಹರಣೆಗಾಗಿ - ಮಾನಸಿಕವಾಗಿ ಒಬ್ಬ ವ್ಯಕ್ತಿ ಹಿಂಸೆಗೆ ಒಳಗಾದರೆ ಅವನ ಜೀರ್ಣಿಸುವ ಶಕ್ತಿ ಕಡಿಮೆಯಾಗುತ್ತದೆ. ಕಡಿಮೆಯಾದಂತೆಲ್ಲಾ ದೇಹವೆಲ್ಲಾ ಬಡವಾಗುತ್ತದೆ. ಇಲ್ಲಿ ಪ್ರತಿಭಾನ ಅನ್ನುವ ಪದವನ್ನು ಮಾತ್ರ ಅನುಭಾವದ ಜೊತೆ ಜೊತೆಯಾಗಿ ಅಧ್ಯಯನ ಮಾಡಲಿಕ್ಕೆ ಅನುಕೂಲವಾದುದು.

ಲ್ಯಾಬ್ನಿಸ್

ಈತನು ಬುದ್ಧಿವಾದಿ, ಪ್ರಪಂಚದಲ್ಲೆ ಯಾವುದೇ ಸತ್ಯವನ್ನು ಅರಿಯಲು ಇಂದ್ರಿಯಜ್ಞಾನ ಆವಶ್ಯಕತೆಯಿಲ್ಲ. ಬುದ್ಧಿಯ ಮುಂದೆ ಇಂದ್ರಿಯ ಜ್ಞಾನ ಬಹಳ ಕೆಳಮಟ್ಟದ್ದು. ಸತ್ಯ ಅದು ಏಕವಲ್ಲ, ಅದು ಬಹುವಿಧವಾದದ್ದು, ಏಕವಾದರೆ ಎಲ್ಲ ಮನುಷ್ಯರು ಒಂದೇ ರೀತಿ ಇರಬೇಕಾಗಿತ್ತು. ಆದರೆ ಇಲ್ಲಿ ಒಬ್ಬರ ವಿಚಾರ ಮತ್ತೊಬ್ಬರ ವಿಚಾರಕ್ಕೆ ಭಿನ್ನವಾಗಿದೆ. ಅದು ಕೇವಲ ಅದ್ವೈತವೂ ಅಲ್ಲ, ಆದರೆ ಅಂತ್ಯದಲ್ಲಿ ಏಕತ್ವವಿದೆ. ಇದು ಈತನ ಮಾರ್ಗ. ಸತ್ಯ ಅನ್ನುವದು ಏಕವಲ್ಲ ಬಹುವಿಧವಾದದು ಭೌತಿಕವಲ್ಲದ್ದು, ಚೇತನಾತ್ಮಕವಾದದ್ದು, ಕ್ರಿಯಾತ್ಮಕವೂ, ಆದ ಸ್ವತಂತ್ರ ತತ್ವಕ್ಕೆ 'ಮೌನಾಡ್' ಎಂದು ಹೆಸರು ಕೊಡುತ್ತಾನೆ. ಈ ಸ್ವತಂತ್ರ ಸತ್ಯಗಳನ್ನು ಮೂರು ವಿಧಗಳಾಗಿ ವಿಂಗಡಿಸಿರುವನು.

೧. ಸಾಧಾರಣ ಮೊನಾಡ್ - ಇವು ಪ್ರಜ್ಞಾಹೀನ, ಮೂರ್ಛೆ ಹೋದ ಸ್ಥಿತಿ

೨. ಆತ್ಮಗಳು - ಇದು ಎಚ್ಚೆತ್ತ ಜೀವ

೩. ಜೀವಾತ್ಮಕಗಳು - ಇವು ಪ್ರಜ್ಞಾಪೂರ್ವಕ ಮತ್ತು ಸ್ವಪ್ರಜ್ಞಾಸ್ಥಿತಿ ಹೊಂದಿವೆ.

ಈ ಮೂರು ಭಾಗಗಳಲ್ಲಿ ಒಂದು ಪ್ರಜ್ಞಾರಹಿತ ಸ್ಥಿತಿ. ಇನ್ನೊಂದು ಪ್ರಜ್ಞಾಪೂರ್ವಕ ಸ್ಥಿತಿ ಇಲ್ಲಿ ಭೌತವ್ಯದ ಪ್ರಮಾಣದಲ್ಲಿ ಏರು ಪೇರುಗಳಿವೆ. ಸ್ವರೂಪ ಮಾತ್ರ ಒಂದೆ. ಸಾಧಾರಣಕ್ಕಿಂತ ಆತ್ಮಗಳಲ್ಲಿ ಆತ್ಮಕ್ಕಿಂತ ಜೀವಾತ್ಮದಲ್ಲಿ ಚೈತನ್ಯದ ಪ್ರಮಾಣ ಹೆಚ್ಚಾಗಿ ಇರುವದು.

ಉತ್ಕೃಷ್ಟ ಮೊನಾಡ್ ರ ಮನಸ್ಸಿನೊಡನೆ ಉಳಿದೆಲ್ಲಾ ಮೊನಾಡುಗಳು ಸಂಗಾತವಾಗಿರುವದನ್ನೇ ಮಾನವ ಶರೀರ ಎಂದು ಕರೆಯುವನು. ಒಂದಲ್ಲ ಒಂದು ಕಾರಣದಿಂದ ಮನಸ್ಸು ಮಾನವನ ಶರೀರದಲ್ಲಿ ಇಲ್ಲವಾದಾಗ ಸಂಗಾತವಾಗಿದ್ದ ಶರೀರ ಮೊನಾಡುಗಳು ಚದುರಿಹೋಗುತ್ತವೆ. ಇದಕ್ಕೆ ಶರೀರದ ಅವಸಾನ ಎಂದು ಕರೆಯುವರು.[೨] ಇವನ ಪ್ರಕಾರ ದೇವರು ಸ್ವಯಂಸಿದ್ಧ ತತ್ವ, ಈ ಶರೀರ ಮೊನಾಡುಗಳು ಸಂಗಾತ ಅಂದಾಗ ಮೊನಾಡುಗಳು ಸ್ವತಂತ್ರ ಆಧ್ಯಾತ್ಮಿಕ ಸತ್ಯಗಳು, ಅವುಗಳಿಗೆ ಸ್ಥಳವನ್ನು ಆಕ್ರಮಿಸದ ಗುಣವಿದೆ. ಅವುಗಳು ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಒಂದುಗೂಡಿದಾಗ ದೇಹವಾಗುತ್ತದೆ. ಅಂದಾಗ ತಾರ್ಕಿಕವಾಗಿ ಅಸಂಬದ್ಧತೆಯಾಗುತ್ತದೆ. ಏಕೆಂದರೆ ಮೊದಲು ಇಲ್ಲದ ಸ್ಥಳ ಕ್ರಮಿಸುವ ಗುಣ ನಂತರದಲ್ಲಿ ಎಲ್ಲಿಂದ ಬರುತ್ತದೆ ಅನ್ನುವದು. ಇವನ ವಾದ ಏಕತೆ ಮತ್ತು ಅನೇಕತೆಗಳ ಸಂಗಮ ಬಹುತ್ವವನ್ನು ಬಿಟ್ಟು ಏಕತ್ವವಾಗಲೀ, ಏಕತ್ವವನ್ನು ಬಿಟ್ಟು ಬಹುತ್ವವಾಗಲೀ, ಸಾಮಾನ್ಯವನ್ನು ಬಿಟ್ಟು ಪ್ರತ್ಯೇಕವಾಗಲೀ ಪ್ರತ್ಯೇಕವನ್ನು ಬಿಟ್ಟು ಸಾಮಾನ್ಯವಾಗಲೀ ಇರಲು ಸಾಧ್ಯವಿಲ್ಲ. ಇದರಂತೆ ರಾಮಾನುಜ ದರ್ಶನ ಮತ್ತು ಜೈನ ದರ್ಶನಗಳೊಂದಿಗೆ ಈ ಅರ್ಥದಲ್ಲಿ ಹೋಲಿಕೆಯಿದೆ. ಭೌತಶಾಸ್ತ್ರದ ಪ್ರಕಾರ (ಆಧುನಿಕ) ಭೌತವಸ್ತುವೆಂಬುದು ಅದು ಕೇವಲ ಶಕ್ತಿ ವಸ್ತುವೆ ಅಲ್ಲ. ಒಂದೊಂದು ವಸ್ತುವು ಶಕ್ತಿಗಳ ಅಲೆ, ಅವು ಘನರೂಪವು ಅಲ್ಲ, ದ್ರವರೂಪವು ಅಲ್ಲ. ಅವಿನಾಶಿಯಾದುವು, ಜೈನ ದರ್ಶನದಂತೆ ಜೀವಾತ್ಮ (= ಮೊನಾಡು) ಅಸ್ತಿತ್ವವನ್ನು ಹೊಂದಿದ್ದರು ದೇವರ ನಿಯಂತ್ರಣಕ್ಕೆ ಸಂಬಂಧ ಪಟ್ಟಿವೆ. ಪ್ರತಿಯೊಂದು ಜೀವಾತ್ಮನು ತನ್ನಲ್ಲಿ ಹುದುಗಿರುವ ಧರ್ಮಬೂತ ಜ್ಞಾನವನ್ನು ವಿಕಸಿಸಿಕೊಳ್ಳುತ್ತಾ ಈ ಪ್ರಪಂಚವನ್ನು, ದೇವರನ್ನು ಪ್ರತಿಫಲಿಸುತ್ತವೆ. ಅದರಂತೆ ಇಲ್ಲಿ ಮೊನಾಡುಗಳು ಕೂಡಾ ವಿಶ್ವವನ್ನು, ದೇವರನ್ನು ಪ್ರತಿಫಲಿಸುತ್ತವೆ. ಆದರೆ ದೇವರಾಗಲಿಕ್ಕೆ ಬರುವದಿಲ್ಲ.

ಮೋಕ್ಷವನ್ನು ಪಡೆದ ಜೀವಾತ್ಮ ಎಂದೆಂದಿಗೂ ಕೂಡಾ ದೇವರ ಸಮವಾಗಲಾರದು. ಎಲ್ಲ ಅಂಶಗಳಲ್ಲಿ ಸಮವಾದರೂ ಎರಡು ಅಂಶಗಳಲ್ಲಿ ಮಾತ್ರ ಕಡಿಮೆಯಾಗಿರುವದು. ೧. ಲಕ್ಷ್ಮೀಪತಿಯಾಗಲಾರದು ೨. ಜಗತ್ತ್ ಉತ್ಪತ್ತಿಮಾಡಲಾರರು ಆದ್ದರಿಂದ ದೇವರೊಬ್ಬನೆ ಈ ಜಗತ್ತು ಸೃಷ್ಟಿಸಿರುವನು. ಆ ಜೀವಾತ್ಮ ಇಲ್ಲಿ ಮೊನಾಡುಗಳಾಗಿವೆ. ಅವು ಅವಿನಾಶಿಯಾದರೂ ದೇವರಿಂದ ಮಾತ್ರ ನಾಶಹೊಂದುವುವು. ಈ ಬುದ್ಧ್ಯಾರೂಢವಾದಿಗಳಲ್ಲಿ ಡೆಕಾರ್ಟ್-ದ್ವೈತಿ, ಸ್ಪಿನೋಜ-ಅದ್ವೈತಿ-ಲೈಬ್ನಿಸ್-ಅನೇಕಾಂತವಾದಿ ಈ ಮೂವರಲ್ಲಿ ಗುಣಾಂಶವಿರುವಂತೆ ಅವಗುಣಗಳು ಇವೆ. ಜ್ಞಾನ, ಖಚಿತ, ನಿರ್ಧಾರ, ಅವಶ್ಯ, ಸಾರ್ವತ್ರಿಕ ಇರಬೇಕೆನ್ನುವಲ್ಲಿ ಗುಣಾಂಶಗಳನ್ನು ಕಂಡುಕೊಂಡರೆ ಇಂದ್ರಿಯಜ್ಞಾನ ಇದು ಜ್ಞಾನಕ್ಕೆ ಮೂಲ ಎನ್ನುವಲ್ಲಿ ಬುದ್ಧಿಯನ್ನು ಅತೀಯವಾಗಿ ಹೇಳಲು ಹೋಗಿ ಆ ವಿಚಾರಕ್ಕೆ ದಾರಿಯಾದಂತಾಗಿದೆ, ಯಾಕೆಂದರೆ ಬುದ್ಧಿಯು ಕೂಡಾ ನಿರ್ಧರಿತವಾಗುವಾಗ ಇಂದ್ರಿಯ ಸಂವಹನ ಆಧಾರಿತ ಅಂತರದಲ್ಲಿ ನಿರ್ಧರಿತವಾಗುವ ಸಂಭವ ಉಂಟು. ಜ್ಞಾನ ಯಾವುದೇ ವಸ್ತುವನ್ನು ಅವಲಂಬಿಸದೇ ಹೋದರೆ ಅದು ಹೇಗೆ ಪಡೆಯಲು ಸಾಧ್ಯವಾದೀತು. ಹೀಗೆ ಬುದ್ಧಿ ಪ್ರಧಾನವಾದಿಗಳಲ್ಲಿ ಪೂರ್ವ ನಿರ್ಧರಿತ ಕಂಡುಬಂದಂತೆ ಕೇವಲ ಬುದ್ಧಿಯೇ ಎಲ್ಲದಕ್ಕೂ ಮೂಲ ಅನ್ನುವದು ಅಷ್ಟೇನು ಸಮಂಜಸವಲ್ಲ.

### ಅನುಭವ ಪ್ರಾಧಾನ್ಯವಾದ

ಸತ್ಯವನ್ನು ಕುರಿತು ಹೇಳುವಾಗ ಯಾವುದೇ ಜ್ಞಾನವು ಇಂದ್ರಿಯವನ್ನೇ ಅವಲಂಬಿಸಿದೆ ಎಂದು ಹೇಳುವದಕ್ಕೆ 'ಇಂದ್ರಿಯಪ್ರಧಾನವಾದ', 'ಅನುಭಾವ ಪ್ರಾಧಾನ್ಯವಾದ' ಎನ್ನಬಹುದು. ಅನುಭವವು ಇಂದ್ರಿಯಗಳಿಂದಲೇ ಬರುವಜ್ಞಾನ, ಇಂದ್ರಿಯಗಳ ಜನ್ಯವಾದಾಗ ಅದರ ಆಧಾರದಿಂದ ಉಂಟಾಗುವ ಪರಿಣಾಮವೇ ಅನುಭವ. ಅನುಭವ ಇದು ಬಾಹೇಂದ್ರಿಯ ಗೋಚರ ಎನ್ನುವದಾದರೆ ಅನುಭಾವ ಇದು ಅಂತಚಕ್ಷುವಿಗೆ ದೊರೆಯುವ ಪರಿಣಾಮ. ಇಲ್ಲಿ ಸ್ವಲ್ಪಮಾತ್ರ ವ್ಯತ್ಯಾಸವಿದೆ. ಒಂದರ್ಥದಲ್ಲಿ ಪ್ರಾರಂಭಕ್ಕೆ ಭಾವ ಭವಕ್ಕೆ ಸಮೀಪವಾಗಿದೆ. ಯಾವುದೇ ಜ್ಞಾನ ತನ್ನಿಂದತಾನೆ ಉತ್ಪತ್ತಿಯಾಗಲು ಸಾಧ್ಯವಿಲ್ಲ. ಇಂದ್ರಿಯ ಸಂವೇದನೆಯಿಂದ ಉಂಟಾಗುವದು. ಇದರ ಪ್ರವರ್ತಕರು ಲಾಕ್, ಬಾರ್ಕ್ಲೆ ಮತ್ತು ಹ್ಯೂಮ್ .

### ಲಾಕ್

ಬುದ್ಧಿವಾದವನ್ನು ತಿರಸ್ಕರಿಸುವದರ ಮೂಲಕ ತನ್ನ ವಾದವನ್ನು ಪ್ರಾರಂಭಿಸುತ್ತಾನೆ. ನಾವು ಹುಟ್ಟುವಾಗ ನಮ್ಮ ಮನಸ್ಸು ಬರಿಯ ಹಲಿಗೆ (Tabularase) ಆಗಿತ್ತು. ಇಂದ್ರಿಯಾನುಭವವಿಲ್ಲದೆ ಯಾವುದೂ ಮನಸ್ಸಿನೊಳಗೆ ಪ್ರವೇಶಿಸುವದಿಲ್ಲ ವಸ್ತುಗಳು ಇಂದ್ರಿಯಗಳ ಮೂಲಕ ಮನಸ್ಸನ್ನು ಪ್ರವೇಶಿಸಿ ತಮ್ಮ ಮುದ್ರೆಯನ್ನು ನಮ್ಮ ಮನಸ್ಸಿನ ಮೇಲೆ ಒತ್ತಿದಾಗ ಜ್ಞಾನ ಉತ್ಪತ್ತಿಯಾಗುತ್ತದೆ. ಈ ಮುದ್ರೆಗಳು ಹೆಚ್ಚಿದಂತೆಲ್ಲಾ ನಮ್ಮ ಜ್ಞಾನವೂ ಹೆಚ್ಚು ಹೆಚ್ಚು ಬೆಳೆಯುತ್ತದೆ, ಆದುದರಿಂದ ಇಂದ್ರಿಯಾನುಭವವೇ ಜ್ಞಾನೋತ್ಪತ್ತಿಗೆ ಮೂಲಕಾರಣ ಎಂದು ಹೇಳುತ್ತಾನೆ.[೨೬] ಇಂದ್ರಿಯಾನುಭವದಲ್ಲಿ ಎರಡುವಿಧ

೧. ಪ್ರತ್ಯಕ್ಷ ಅಥವಾ ಸಂವೇದನೆ (Perception)

೨. ಪುನರಾಲೋಚನೆ (Reflection)

ಜ್ಞಾನವನ್ನು ಪಡೆಯುವ ವಿಧಾನಗಳು ಅದು ಸಂವೇದನೆ. ಈ ನಿವೇದನೆ ಅದು ಪ್ರತ್ಯಕ್ಷ ಬಾಹ್ಯ ವಸ್ತುಗಳಿಗೆ ಸಂಬಂಧ ಪಟ್ಟುದುದಾದರೆ ಅಂತರಂಗದ ಸುಖ, ದು:ಖ, ರಾಗ, ಸಂಶಯ, ದ್ವೇಷ, ನಂಬಿಕೆ ಮುಂತಾದವುಗಳನ್ನು ಕುರಿತು ಚಿಂತಿಸಬೇಕಾಗಿರುವುದರಿಂದ ಜ್ಞಾನ ಪ್ರತ್ಯಕ್ಷದಿಂದಲೆ ಇಲ್ಲವೆ ಪುನರಾಲೋಚನೆ ಇವೆರಡು ಮಾರ್ಗಗಳಿಂದಲೆ ಸಾಗಬೇಕಾಗುವದು. ಈ ಮಾರ್ಗಗಳನ್ನು ಬಿಟ್ಟು ಉಪಾಯವಿಲ್ಲ. ಪ್ರತ್ಯಕ್ಷ ಮುಖ್ಯ ಇದಿಲ್ಲದೆ ಪುನರಾಲೋಚನೆ ಇಲ್ಲವೆ ಇಲ್ಲ. ಇಲ್ಲಿ ಮನಸ್ಸಿನ ಕೆಲಸ ಹೇಗೆಂದರೆ ಯಾವುದೇ ಒಂದು ಬಾಹ್ಯ ಸ್ಥಿತಿಯನ್ನೇ ನೋಡಿದಾಗ ಆ ಸ್ಥಿತಿಯನ್ನು ಅಂತರಂಗಕ್ಕೆ ಮುಟ್ಟಿಸುವ ಕೆಲಸ ಸಾಗುತ್ತದೆ. ಆ ವಸ್ತುವಿಗನುಗುಣವಾಗಿ ಮುಟ್ಟಿಸುವ ವಾಸ್ತವವೇ ಭಾವನೆ. (Idea) ಎನ್ನಬಹುದು. ಕೇವಲ ಸಂವಹನ ಕೆಲಸ ಮಾತ್ರ ಮನಸ್ಸಿನದು. ಈ ಭಾವನೆಗಳು ಪುನರಾಲೋಚನೆಗಿಳಿದಾಗ ಅಲ್ಲಿ ಮಾನಸಿಕ ಕ್ರಿಯೆಗಳಾದ ಸುಖ, ದು:ಖ, ಹಿಂಸೆ, ಮತ್ಸರ, ದ್ವೇಷ ಇತ್ಯಾದಿಗಳು ಇಲ್ಲಿಯ ಭಾವನೆಗಳು ಕೇವಲ ಅನುಭವಿಸಲಿಕ್ಕೆ ಮಾತ್ರ ಬರುತ್ತದೆ. ಹೀಗೆ ಅನುಭವಕ್ಕೆ ಬರುವ ಅನುಭವಿಕ ಭಾವನೆಯೇ 'ಅನುಭವ' ಎಂದು ಕರೆಯಬಹುದು. ಇಲ್ಲಿಯ ಅನುಭವವನ್ನು ವಿಸ್ತರಿಸುವಾಗ ಸುಖ, ದು:ಖ, ಸಮಾನಸ್ಥಿತಿಯಲ್ಲಿ ಹೋಗುವ ಅತೀಂದ್ರಿಯ ವಸ್ತುಗಳನ್ನು ಅನುಸರಿಸುವಾಗ ಕಾಣುವ ಅಥವಾ ಕಂಡುಕೊಳ್ಳುವ ಆ ಅನುಭವಕ್ಕೆ ಅನುಭಾವ ಸ್ಥಿತಿ ಎನ್ನಬಹುದು. ಹೀಗೆ ಇಂದ್ರಿಯವಾದದಿಂದ ಪ್ರಾರಂಭಿಸಿದಾಗ ಕೊನೆಯಲ್ಲಿ ಅನುಭಾವ ಅರ್ಥಕ್ಕೆ ಸಾಗಬಹುದಾಗಿದೆ. ಅನುಭವವೇ ಮುಂದೆ ಅನುಭಾವಕ್ಕೆ ಮುಟ್ಟುತ್ತದೆ. ಭಾವನೆಗಳಲ್ಲಿ ಎರಡು ವಿಧ

೧. ಸರಳ ಭಾವನೆಗಳು (Simple Ideas)

೨. ಸಂಕೀರ್ಣ ಭಾವನೆಗಳು (Complex Ideas)

ಸಮಾನ ಗುಣಲಕ್ಷಣಗಳನ್ನು ಹೊಂದಿದ ಇಂದ್ರಿಯ ಸಂವೇದನೆಗಳು, ಬಣ್ಣ, ವ್ಯಾಪಿಸುವ ಗುಣ, ಕಾಲ, ಉಷ್ಣ, ಶೀತ, ಗಂಧ, ಶಬ್ದ, ನೇರವಾಗಿ ಅನುಭವಕ್ಕೆ ಬರುವ ಇಂದ್ರಿಯ ಸಂವೇದಗಳೆ ಸರಳಭಾವನೆಗಳು. ಇವುಗಳೇ ಒಂದುಗೂಡಿಸಲ್ಪಟ್ಟಾಗ ಸಂಕೀರ್ಣ ಭಾವನೆಗಳು. ವಸ್ತುಗಳ ಗುಣಗಳ ಸಂವೇದನೆಗಳನ್ನು ಇಂದ್ರಿಯಗಳ ಮೂಲಕ ಪಡೆದಾಗ ಅದನ್ನೇ 'ಭಾವನೆ' ಅಥವಾ 'ಕಲ್ಪನೆ' ಎಂದು ಕರೆಯಲಾಗುತ್ತದೆ. ಮನಸ್ಸು ಆಂತರಿಕವಾದದ್ದು, ಅದು ಬಾಹ್ಯವಾದುದಲ್ಲ. ಕ್ರಿಯಾತ್ಮಕವಲ್ಲದ ಅದು ವಸ್ತುವಿದ್ದೆಡೆಗೆ ಹೋಗಿ ವಸ್ತುವನ್ನು ಮುಟ್ಟಲಾರದು. ಆದರೆ ವಸ್ತುವು ಕೂಡಾ ಭೌತಿಕವಾದರೂ ಅದು ಮನಸ್ಸನ್ನು ಮುಟ್ಟಲಾರದು ಯಾಕೆಂದರೆ ಅದಕ್ಕೆ ಚಲನೆಯಿಲ್ಲ. ಆದರೂ ಕೂಡಾ ವಸ್ತು ಮನಸ್ಸಿನೆಡೆಗೆ ಬರದೇ ಹೋದರು ಸಹಿತ ತನ್ನ ಪ್ರತಿಬಿಂಬವನ್ನು ಮನಸ್ಸಿನೆಡೆಗೆ ಎಸೆಯಬಲ್ಲದು. ವಸ್ತುವಿನಿಂದ ಎಸೆಯಲ್ಪಟ್ಟ ಪ್ರತಿಬಿಂಬಕ್ಕೂ, ಮನಸ್ಸಿಗೂ ಸಂಬಂಧವೇರ್ಪಟ್ಟಾಗ ನಮಗೆ ಆ ವಸ್ತುವಿನ ಅನುಭವವಾಗುತ್ತದೆ. ನಮ್ಮ ಅಂದಾಜಿನ ಪ್ರಕಾರ ವಸ್ತುವಿನ ಗಾತ್ರ ಅದರ ಸ್ವರೂಪವನ್ನು ಮನಸ್ಸೇ ಗ್ರಹಿಸುವುದೇ ಹೊರತು ವಸ್ತು ಪ್ರತಿಬಿಂಬವನ್ನು ಗ್ರಹಿಸಲಾರದು. ಇಲ್ಲಿ ನೇರವಾಗಿ ವಸ್ತುವಿಗೂ ಮನಸ್ಸಿಗೂ ಸಂಪರ್ಕ ಏರ್ಪಡುವದಿಲ್ಲ. ಸಂಪರ್ಕ ವಸ್ತುವಿನ ಪ್ರತಿಬಿಂಬ ಮತ್ತು ಮನಸ್ಸಿಗೆ ಮಾತ್ರ. ಇಲ್ಲಿ ಪ್ರತ್ಯಕ್ಷವೆಂಬುದು ವಸ್ತು ರೂಪವಲ್ಲ, ವಸ್ತು ಪ್ರತಿನಿಧಿಕ, ಪ್ರತ್ಯಕ್ಷ ನೇರವಾಗಿರದೇ ಪರೋಕ್ಷವಾಗಿದೆ. ಇವನ ಪ್ರಕಾರ ಸಂಕೀರ್ಣ ಭಾವನೆಗಳಲ್ಲಿ ಒಂದು. ೧. Substance ೨. Mode ೩. Ideas of Relations (ಸಂಬಂಧ ಭಾವನೆಗಳು)

೧. ಕಲ್ಲು, ಮಣ್ಣು ಇತ್ಯಾದಿಗಳು. ೨. ಕೃತಜ್ಞತೆ, ಕೊಲೆ, ಕಳ್ಳತನ ಇತ್ಯಾದಿಗಳು ೩. ತೌಲನಿಕ ಸಂಕೀರ್ಣ ಭಾವನೆಗಳು ಇವನ ಪ್ರಕಾರ ವಸ್ತುಗಳಲ್ಲಿ ಎರಡು ವಿಧ ೧. ಆಧ್ಯಾತ್ಮಿಕ ವಸ್ತು ಅಥವಾ ಆತ್ಮ ೨. ಭೌತಿಕ ವಸ್ತು. ಆಧ್ಯಾತ್ಮಿಕ ವಸ್ತುವನ್ನು ಅವನು ಮನಸ್ಸು ಎನ್ನುವನು. ಮನಸ್ಸು ಎಲ್ಲ ಭಾವನೆಗಳನ್ನು ಹಿಡಿದಿಡುತ್ತದೆ. ಭೌತಿಕವಾದವುಗಳ ಭಾರ, ಹಗುರ, ಉದ್ದ, ದಪ್ಪ ಇತ್ಯಾದಿಗಳಾಗಿ ಇದ್ದೆ ಇರುತ್ತವೆ. ವಸ್ತುವಿನಲ್ಲಿ ಮತ್ತೆ ಎರಡು ಗುಣಗಳು. ೧. Primary Qulitials ೨. Secendary Qulitis ಇಂದ್ರಿಯಗಳು ಸಂವೇದಿಸಿವೆ. ವಸ್ತು ಯಾವ ಗುಣಗಳ ವಸ್ತುವಿನೊಡನೆ ಬೇರ್ಪಡಿಸಲಾಗದ ಸಂಬಂಧ ಹೊಂದಿದೆಯೋ ಅವುಗಳನ್ನು ಪ್ರಾಥಮಿಕ ಗುಣಗಳೆನ್ನಬಹುದು. ಉದಾಹರಣೆ ಚಲನೆ, ನಿಶ್ಚಲತೆ, ದೃಢತೆ ಇತ್ಯಾದಿ. ದ್ವಿತೀಯ ಗುಣಗಳು ಆ ವಸ್ತುವಿನಲ್ಲಿ ಇರುತ್ತವೆ ಎನ್ನಲಾಗದು. ಉಷ್ಣ, ಶೀತ, ರಸ, ಶಬ್ದ, ಗಂಧ, ಸ್ಪರ್ಷ ಇವು ವಸ್ತುವಿನಲ್ಲಿ ಇಲ್ಲ. ಅನುಭವಿಸುವ ವ್ಯಕ್ತಿಯಲ್ಲಿವೆ. ಹಳದಿಯಾದ ಬಂಗಾರ ಗುಣದಲ್ಲಿ ನೋಡುವ ವ್ಯಕ್ತಿಯಲ್ಲಿ ಹಳದಿಬಣ್ಣದ ಸಂವೇದನೆಯನ್ನು ಉತ್ಪತ್ತಿಮಾಡವ ಶಕ್ತಿಯೇ ದ್ವಿತೀಯ ಗುಣ. ಪ್ರಥಮಗುಣಗಳು ವಸ್ತುನಿಷ್ಠ ದ್ವಿತೀಯ ಗುಣಗಳು ವ್ಯಕ್ತಿನಿಷ್ಠ. ಇವನ ಚಿಂತನೆಯೂ ಸ್ವವಿರೋಧದಿಂದ ಕೂಡಿದುದಾಗಿದೆ. ವಸ್ತುವಿಗೆ ಮೀರಿದ ಆಧಾರವೆನಿಸಿಕೊಳ್ಳುವ 'ವಸ್ತು' ಅನುಭವಕ್ಕೆ ಸಿಕ್ಕಿಲ್ಲ. ಆದ್ದರಿಂದ ಅದನ್ನು ತಿಳಿಯಲು ಸಾಧ್ಯವಿಲ್ಲ ಆದರೆ ಅಂತಹ ಆಧಾರ ಇದ್ದೇ ಇರಬೇಕೆನ್ನುವುದು ಅರ್ಥವಿಲ್ಲದ ಮಾತಾಗುವದು. ಧರ್ಮ ಹಾಗೂ ಮತ ವಿಚಾರಗಳ ಜ್ಞಾನ ಹೇಗೆ ಹುಟ್ಟುವದಂದಾಗ, ಆತ ಬುದ್ಧಿಜನ್ಯ ಎನ್ನುವನು. ಇಲ್ಲಿ ಅವನು ಬುದ್ಧ್ಯಾವಾದಿ ಎನಿಸುವನು, ಜಡವಸ್ತುವಿದೆ ಆದರೆ ಅದನ್ನು ತಿಳಿಯಲಾಗುವದಿಲ್ಲ. ಅಂದರೆ ಸ್ವವಿರೋಧವಾದಂತೆ ಸರಿ. ಈ ವಸ್ತು ಸ್ಥಿತಿಗಳಲ್ಲಿ ಆಗಲಾರ ಅದರಂತೆ ವ್ಯಕ್ತಿಸ್ಥಿತಿಯು ಅಲ್ಲ ಅಂದಾಗ ಜ್ಞಾನ ಸತ್ಯವೋ ಅಥವಾ ಭ್ರಮೆಯೋ, ಎಲ್ಲವೂ ಭ್ರಮೆಯಾದರೆ ನಿಜವಾದದ್ದಾವುದು. ಈ ಗೊಂದಲದ ಗೂಡು ಈತನ ವಾದ.

**ಬಾರ್ಕ್ಲೆ**

ಇಂದ್ರಿಯಾನುಭವ ಎಲ್ಲ ಜ್ಞಾನದ ಮೂಲ ಆದರೆ ಇಂದ್ರಿಯ ಗೋಚರವಾಗದ ವಸ್ತು ಇದೆ ಎಂದು ಹೇಳಲಾಗುವದಿಲ್ಲ. ಯಾವುದನ್ನು ದರ್ಶಿಸುತ್ತವೆ ಆ ವಸ್ತು ಇದೆ. ದರ್ಶಿಸಲಾರದ್ದು ಇಲ್ಲವೆ ಇಲ್ಲ. ಇದಕ್ಕೆ Esse- Est Percipie (To be is to be Percived) ಇವನ ಪ್ರಕಾರ ಭಾವವೆಲ್ಲಾ ಭಾವ ರೂಪವಾಗಿದೆ. ಭೌತ ವಸ್ತುವೆಂಬುದು ಭಾವನೆಗಳ ಕೇವಲ ಸಂಗಾತ. ಜಡವಸ್ತುವೆಂಬುದಿಲ್ಲ ಅವನ ಭಾವನೆಗಳನ್ನಲ್ಲದೇ ಆತ್ಮದ ಅಸ್ತಿತ್ವವನ್ನು ಪ್ರತಿಪಾದಿಸುತ್ತಾನೆ. ಭಾವಗಳು ಒಂದನ್ನೊಂದು ದೃಷ್ಟಿಸಲಾರದ್ದರಿಂದ, ಅವುಗಳನ್ನು ದರ್ಶಿಸಲು ಭಾವರೂಪಗಳ ಚೇತನವಿರಬೇಕು. ಆ ಚೇತನ ತತ್ವಗಳು ಮಾನವ ಆತ್ಮಗಳು;[೮] ಅನ್ನುವನು ಚೇತನ = ಆತ್ಮ ವಿಶ್ವದಲ್ಲಿನ ಕ್ರಿಯಾಬದ್ಧ ಭಾವಗಳ ಪ್ರವಾಹಕ್ಕೆ ದೇವರೆ ಕಾರಣ. ಒಂದು ಭಾವ ಮತ್ತೊಂದು ಭಾವಗಳನ್ನು ದರ್ಶಿಸಲಾರದ್ದರಿಂದ ಭಾವಗಳನ್ನು ದರ್ಶಿಸಲು ಆತ್ಮ ತತ್ವವಿರಬೇಕಾಗುವದು ಇದೆ ಅಭೌತಿಕವಾದ. ಎಲ್ಲಾ ಗುಣಗಳು ಮನಸ್ಸಿನ ಆಧಾರದ ಮೇಲೆ ನಿಂತಿವೆ. ಆದುದರಿಂದ ಅವು ಅನುಭವಕ್ಕೆ ಬರುವವು. ಮನಸ್ಸಿನಲ್ಲಿರುವ ಗುಣಗಳಿಗೆ ಮತ್ತೊಂದೇ ಭಾವ (Idea). ವಸ್ತು ಎಂಬುದು ಮಾನವ ವಸ್ತುವಿನಲ್ಲಿರುವ ಸಂಘಾತ. ಮನಸ್ಸಿನ ಮೇಲೆ ಆಧರಿತವಲ್ಲದ, ಸ್ವತಂತ್ರವಾದ ಅಸ್ತಿತ್ವವನ್ನುಳ್ಳ ಭೌತವಸ್ತು ಎಂಬುದಿಲ್ಲ. ಇದಕ್ಕೆ ವ್ಯಕ್ತಿ ನಿಷ್ಠ ಚಿತ್ ಪ್ರಧಾನವಾದ (Subjective Idialism) ಅನ್ನುವರು. ಒಂದು

ಭೌತವಸ್ತುವಿನ ಅಸ್ತಿತ್ವ ಅದರ ಭಾವರೂಪ ಅನುಭವವನ್ನು ಪಡೆಯುವದರಲ್ಲಿದೆ. ಅದನ್ನು ಅನುಭವಿಸದೆ ಹೋದರೆ ಅದು ಅಸ್ತಿತ್ವದಲ್ಲಿ ಇಲ್ಲವೆ ಇಲ್ಲ. ಮನಸ್ಸಿನಿಂದ ಸ್ವತಂತ್ರವಾಗಿ ಭೌತವಸ್ತು ಇರಲು ಸಾಧ್ಯವಿಲ್ಲ. ಹಾಗಾದರೆ ಕಲ್ಲು, ಗಿಡ, ಮಣ್ಣು ಇಲ್ಲವೇ? ಅವು ವಸ್ತುಗಳು ಅಲ್ಲವೇನು? ಅಂದಾಗ ಅವನು ಜಡವಸ್ತುವೆಂಬುದು ಕೇವಲ ನಾಮಮಾತ್ರ ಆದರೆ ಇರುವದೆಲ್ಲಾ ಅದರ ಭಾವನೆಗಳು ಮತ್ತು ಅದನ್ನು ತಿಳಿಯುವ ಆತ್ಮಗಳು ಮಾತ್ರ ಈ ಚಿಂತನೆ ಆಧ್ಯಾತ್ಮಿಕ, ಅಭೌತಿಕ. 'ವಸ್ತುಗಳ ಇರುವಿಕೆ ಅವುಗಳನ್ನು ವೀಕ್ಷಿಸುವದರಲ್ಲಿದೆ' ಎಂಬ ಅವನ ಸೂತ್ರಕ್ಕನುಸಾರವಾಗಿ ಅವನ ಚಿಂತನೆ ಖಂಡಿತವಾಗಿಯು ವ್ಯಕ್ತಿನಿಷ್ಠ (Subjective) ವಾದವಾಗಿದೆ. ಆದರೆ ತನ್ನ ಚಿಂತನೆ ವ್ಯಕ್ತಿ ನಿಷ್ಠವಾದುದಲ್ಲವೆಂದು ತೋರಿಸಲು ದೇವರ ಮತ್ತು ಇತರ ಆತ್ಮರುಗಳ ಅಸ್ತಿತ್ವವನ್ನು ಪ್ರತಿಪಾದಿಸುತ್ತಾನೆ."** ಆದರೆ ದೇವರಾಗಲೀ ಆತ್ಮವಾಗಲೀ ಇಂದ್ರಿಯ ಗೋಚರವಲ್ಲದಿದ್ದರೂ ಏಕೆ? ಇವೆ ಅಸ್ತಿತ್ವವಿದೆಯೆಂದು ಒಪ್ಪಿಕೊಂಡು ಇಲ್ಲಿ ತನ್ನ ಸೂತ್ರವು ತನ್ನಿಂದಲೇ ಅಲ್ಲಗಳೆಯಲ್ಪಡುವದು.

**ಹ್ಯೂಮ್**

ಇವನು ಕಡೆಯ ಇಂದ್ರಿಯವಾದಿ. ತನ್ನ ವಾದವನ್ನು ಧರ್ಮದೊಡನೆ ಎಂದಿಗೂ ಕೂಡಿಸಿಕೊಳ್ಳದೆ ಅಂದದ್ದನ್ನು ಸರಿಯಾಗಿಯೇ ವಾದಿಸಿದ್ದಾನೆ. ದೇವರ ಅಸ್ತಿತ್ವವನ್ನಾಗಲೀ ಆತ್ಮದ ಅಸ್ತಿತ್ವವನ್ನಾಗಲೀ ಇಂದ್ರಿಯ ಅನುಭವದಿಂದ ಸಾಧಿಸಲು ಸಾಧ್ಯವಿಲ್ಲ. ಇವನಿಗೆ ಕ್ರೈಸ್ತಧರ್ಮ ವಿರೋಧಿಸಿತು. ಇಂದ್ರಿಯಗಳಿಗೆ ಗೋಚರವಾದದ್ದೇ ಸತ್ಯ ಅವುಗಳಿಗೆ ಅಸ್ತಿತ್ವವಿದೆ. ಅವುಗಳಿಗೆ ಗೋಚರವಿಲ್ಲದಿದ್ದರೆ ಅಸ್ತಿತ್ವವಿಲ್ಲ. 'ಇಂದ್ರಿಯ ಸಂವೇದನೆಗಳು ಎಲ್ಲ ಜ್ಞಾನದ ಮೂಲ, ಸಂವೇದನೆಗಳಲ್ಲಿ ಎರಡು ವಿಧ 'ಗಾಢ ಭಾವನೆಗಳು (Impression) ಮತ್ತು 'ಕಲ್ಪನಾ' ಬಿಂಬಗಳು (Ideas). ಇವುಗಳ ಮೂಲಕವೆ ಏನನ್ನಾದರೂ ತಿಳಿಯಬೇಕು. ಗಾಢಭಾವನೆಗಳು ಮೂಲಭೂತವಾದವುಗಳು. ಕಲ್ಪನಾ ಬಿಂಬಗಳು ಅವುಗಳ ನಕಲುಗಳು ಗಾಢವಾದ ಭಾವನೆಗಳಿಲ್ಲದೆ ಕಲ್ಪನಾ ಬಿಂಬಗಳಿರುವದಿಲ್ಲ. ಗಾಢಭಾವನೆ ಅಂದರೆ - ರಾಗ, ದ್ವೇಷ, ಇಚ್ಛೆ, ಸಂಕಲ್ಪ ಇವು ಈ ಸಂವೇದನೆಗಳ ನೆನಪಿನ ರೂಪವೇ ಕಲ್ಪನಾ ಬಿಂಬಗಳು. ಉದಯಿಸುತ್ತಿರುವ ಸೂರ್ಯ ಕಿರಣಗಳು ಗಾಢ ಭಾವನೆಯಾಗಿದ್ದರೆ ಅದರ ನೆನಪು ಚಿತ್ರಣ ಬಿಂಬವೆನಿಸುವದು. ನೋಡಿದ ಚಿತ್ರ ಗಾಢಭಾವನೆ, ಅದನ್ನು ನೆನಪಿಸಿಕೊಂಡಾಗ ಅದು ಬಿಂಬವಾಗುವದು. ಗಾಢ ಭಾವನೆ ಸರಳವಾಗಿ ನೇರವಾಗಿ ಇರುತ್ತದೆ. ಆದರೆ ಕಲ್ಪನೆಗಳು ಸಂಕೀರ್ಣ ನಮ್ಮ ಇಂದ್ರಿಯ ಗೋಚರವಾಗದ ಹೊರತು ಏನನ್ನು ಕಲ್ಪಿಸಿಕೊಳ್ಳಲಾಗುವದಿಲ್ಲ. ಕೇಳಿರದ ಮಾಸೀಸದ ನೋಡಿರದ ಶಬ್ದ, ವಾಸನೆ, ದೃಶ್ಯವನ್ನು ಕಲ್ಪಿಸಿಕೊಳ್ಳಲಾಗುವದಿಲ್ಲ. ಈ ಗಾಢ ಭಾವನೆಗಳ ಸಂಗಾತವೇ ವಿಶ್ವ. ಇಲ್ಲಿ ಇಂದ್ರಿಯಗಳಿಗೆ ಸಿಲುಕದ ವಸ್ತು ಇರಲು ಸಾಧ್ಯವಿಲ್ಲವಾದರೂ ಇಂದ್ರಿಯಗಳಿಗೆ ಸಿಲುಕದ ಸಂವೇದನೆಗಳು ಶಬ್ದ, ಸಂಕಲ್ಪ, ಭಾವನೆಗಳು ಇವು ಮಾತ್ರ ಸತ್ಯವಾಗಿವೆ ಎನ್ನಬಹುದು. ಮನಸ್ಸು ಮತ್ತು ಆತ್ಮ ಇಂದ್ರಿಯಕ್ಕೆ ಬಂದಿಲ್ಲವಾದ್ದರಿಂದ ಅವು ಕೇವಲ ಸಂವೇದನೆಗಳು ಇಲ್ಲಿ ಭೌತವಸ್ತುವೆಂಬುದು ಇಲ್ಲ. ಮನಸ್ಸು (ಆತ್ಮ) ಎಂಬ ಆಧ್ಯಾತ್ಮಿಕ ವಸ್ತುವಿಲ್ಲ. ದೇವರು ಇಲ್ಲ ಹೀಗೆ ಎಲ್ಲವನ್ನು ಸಂದೇಹಿಸುತ್ತಾನೆ. ಇರುವದೆಲ್ಲಾ ಸಂವೇದನೆಗಳು ಮಾತ್ರ. ಇವನೊಬ್ಬ ಸಂದೇಹವಾದಿ ಎನ್ನಬಹುದು. ಸಂವೇದನೆಗಳು ಭೌತಿಕವೂ ಅಲ್ಲ ಆಧ್ಯಾತ್ಮಿಕವೂ ಅಲ್ಲ ತಟಸ್ಥವಾದವುಗಳು.

ಇವನು ಎರಡು ತರಹದ ವ್ಯಾಖ್ಯೆಗಳನ್ನು ಕೊಡುತ್ತಾನೆ.

೧. ವಿಶ್ಲೇಷಣಾತ್ಮಕ = **Eanalitic = A Prtori (ಅನುಭವಪೂರ್ವ ವ್ಯಾಖ್ಯಾ)**

ಇಲ್ಲಿ ಪ್ರಕೃತಿಯ ಅರ್ಥ ವಿಷಯ ಪದದಲ್ಲಿ ಸೇರಿ ಹೋಗಿದೆ.

<u>ಸಮಕೋನ ತ್ರಿಕೋನ</u> ಒಂದು <u>ಕೋನವಾಗಿದೆ.</u>
Subject = Pradicate

ಇಲ್ಲಿ Subject ಗಿಂತ Predicate ಹೆಚ್ಚಿನ ಅರ್ಥವೇನು ಕೊಡುವುದಿಲ್ಲ. Subject ವೇ Predicate ಆಗಿದೆ. ಇದಕ್ಕೆ ಅನುಭವ ಪೂರ್ವ ವ್ಯಾಖ್ಯಾ ಎನ್ನುವರು.

**೨. ಸಂಶ್ಲೇಷಣಾತ್ಮಕ ವ್ಯಾಖ್ಯೆ**

Subject = Predicate ಎಲ್ಲ ಕಾಗೆಗಳು ಕಪ್ಪು ಆದರೆ ಬಿಳಿಬಣ್ಣದ ಕಾಗೆಗಳು ಇರಬಾರದೆಂದೇನು ಅನಿವಾರ್ಯತೆ ಇಲ್ಲ ಇದ್ದರೂ ಇರಬಹುದು. ಇವನ ಪ್ರಕಾರ 'ಜ್ಞಾನ ಎನ್ನುವದು ಎರಡು ಪರಿಗಳನ್ನು ಒಳಗೊಂಡಿದೆ. ಜ್ಞಾನವೆಂದು ಕರೆಸಿಕೊಳ್ಳಬೇಕಾದರೆ ೧. ಅದು ಭಾವನೆಗಳ ಸಂಬಂಧ ಕುರಿತದ್ದಿರಬೇಕು. ೨. ವಸ್ತು ಸಂಗತಿಯನ್ನು ಕುರಿತದ್ದು ಇರಬೇಕು. ಅಂದರೆ ವಿಶ್ಲೇಷಣಾತ್ಮಕ ವ್ಯಾಖ್ಯಾನಗಳನ್ನು ಒಳಗೊಂಡಿರಬೇಕು. ಇಲ್ಲವೆ ಸಂಶ್ಲೇಷಣಾತ್ಮಕ ವ್ಯಾಖ್ಯೆಗಳನ್ನು ಹೊಂದಿರಬೇಕು. ಇವೆರಡನ್ನು ಬಿಟ್ಟು ಜ್ಞಾನವೆಂಬುದಿಲ್ಲ. ಧರ್ಮ, ದೇವರುಗಳು ಇತ್ಯಾದಿಗಳು ಈವೆರಡೂ ಕಡೆ ಸಂಬಂಧವಿಲ್ಲದ್ದರಿಂದ ಇವು ನಿಜ ಜ್ಞಾನವನ್ನು ಕೊಡಲಾರದೆಂಬುದೇ ಆತನ ವಿಚಾರ.

ಕಾರ್ಯ - ಕಾರಣಗಳನ್ನು ತೆಗೆದುಕೊಂಡಾಗ, ಒಂದು ಕಾರ್ಯಕ್ಕೆ ಕಾರಣವಿದ್ದೇ ಇರಬೇಕು. ಕಾರಣವಿಲ್ಲದೇ ಕಾರ್ಯವಿರಲಾರದು ಎಂಬುದನ್ನು, (ಕಾರ್ಯ - ಕಾರಣ ವಾದವನ್ನು) ಹ್ಯೂಮನು ಅಲ್ಲಗಳೆಯುವನು. ಈ ಸಂಬಂಧ ಇಂದ್ರಿಯಗಳಿಗೆ ಅಗೋಚರವಾದ್ದರಿಂದ ಅಂತಹ ಸಂಬಂಧವೇನು ಇಲ್ಲ. ಅಂತಹ ಸಂಬಂಧವಿದೆಯೆಂದು ಬುದ್ಧಿಯಿಂದಾಗಲೀ, ಅನುಭವದಿಂದಾಗಲೀ ಸಾಧಿಸಲಾಗದು. ಕಾರ್ಯಕಾರಣಗಳ ನಡುವೆ ಅನಿವಾರ್ಯ ಸಂಬಂಧವಿದೆಯೆಂದರೆ ಅದನ್ನು ಬುದ್ಧಿಯಿಂದ ಸಾಧಿಸಬೇಕು. ಆ ವ್ಯಾಖ್ಯೆ ವಿಶ್ಲೇಷಣಾತ್ಮಕವಾಗಿರಬೇಕು. ಹಾಗೆ ಆದರೆ ಅದು ಕಾರ್ಯ - ಕಾರಣದಲ್ಲಿ ಆಗದೇ ಒಳಗೊಂಡಿರಬೇಕು, ಒಳಗೊಂಡರೂ ಬುದ್ಧಿಯಿಂದ ತೋರಿಸಲು ಸಾಧ್ಯವಿಲ್ಲ. ಕಾರ್ಯ - ಕಾರಣಗಳ ಸಂಬಂಧ ಅನಿವಾರ್ಯವೆಂದು ಒಪ್ಪಿಕೊಳ್ಳಬಹುದಾದರೆ ಅದನ್ನು ಅನುಭವದಿಂದ ಸಾಧಿಸಬೇಕಾಗಿದೆ. ಅಂದರೆ ಆ ವ್ಯಾಖ್ಯೆ ಸಂಶ್ಲೇಷಣಾತ್ಮಕ (Sinthetic Aposterior) ಆಗಿರಬೇಕು ಆದರೆ ಹಾಗೆ ಆಗಲಾರದು ಇಂದ್ರಿಯ ಪ್ರಪಂಚದಲ್ಲಿ ಘಟನೆಗಳು ಮೇಲಿಂದ ಮೇಲೆ ನಡದೆ ಇರುತ್ತವೆ. ಆದರೆ ಈ ಘಟನೆಗಳು ಮೊದಲು, ನಂತರ ಅನ್ನಲಾಗುತ್ತದೆ. ಘಟನೆಗಳ ಸಂತತಿಯೇ ಜರುಗುತ್ತವೆ. ಈ ಘಟನೆಗಳ ಸಂತತಿಗೆ ಅನುಭವ ಸಾಕ್ಷಿಯೇ ಅಹುದು. ಆದರೆ ಮೊದಲು ಪಡೆದ ಘಟನೆಗೂ ನಂತರ ಘಟನೆಗೂ ಯಾವುದೇ ಸಂಬಂಧವಿಲ್ಲ. ಮೊದಲು ಸಂಭವಿಸಿದ ಘಟನೆ ಆನಂತರ ಸಂಭವಿಸಿದ ಘಟನೆಗೆ ಸಂಬಂಧವಿಲ್ಲ. ಮೊದಲು ಘಟನೆ ಸಂಭವಿಸಿದಾಗ ನಂತರ ಮತ್ತೆ ಮತ್ತೆ ಯಾವುದೇ ಘಟನೆ ಸಂಭವಿಸಬಹುದು. ಆದರೆ ಅದಕ್ಕೆ ಕಾರ್ಯ - ಕಾರಣ ಸಂಬಂಧವನ್ನು ಏಕೆ ಕಲ್ಪಿಸಬೇಕು. ಏಕೆಂದರೆ, ಅಂತಹದೇ ಘಟನೆ ಮತ್ತೆ ಸಂಭವಿಸಬಹುದು. ಆದರೆ ಸಂಭವಿಸಿಯೇತೀರುತ್ತದೆ

ಎಂಬ ಅನಿವಾರ್ಯ ಸಂಬಂಧವಿಲ್ಲ. ಹೀಗೆ ಕಾರ್ಯ - ಕಾರಣ ಸಂಬಂಧ ಅನಿವಾರ್ಯವೆಂದು ತಾತ್ವಿಕವಾಗಿ ಅನ್ನಲಾಗುವದಿಲ್ಲ. ಒಂದರನಂತರ ಅಂತಹದೇ ಘಟನೆ ಸಂಭವಿಸಿದಾಗ ಅನುಭವದಿಂದ ಒಂದಕ್ಕೊಂದು ಸಂಬಂಧವಿದೆ ಅನ್ನಿಸುತ್ತದೆ. ಅದಕ್ಕೆ ಮನಸ್ಸು ಹರಿಯುವದು ಆದರೂ ಕೂಡಾ ಅದನ್ನು ಅಭ್ಯಾಸ, ಸಂಪ್ರದಾಯ, ರೂಢಿ, ನಂಬಿಕೆ, (Animal Truth) ಅನ್ನುತ್ತಾನೆ. ಅಂತಹದುರಲ್ಲಿಯೂ ಕೂಡಾ ಕಾರ್ಯ ಕಾರಣಗಳ ನಡುವೆ ಅನಿವಾರ್ಯ ಸಂಬಂಧವಿದೆಯೆಂಬುದಕ್ಕೆ ತಾತ್ವಿಕ ಆದರವೇನಿಲ್ಲ. ಇರುವದೆಲ್ಲ ಬರೆ ಸಂವೇದನೆ ಮಾತ್ರ. ವೈಜ್ಞಾನಿಕ ಸತ್ಯ ಸಂಭವನೀಯ ಹೋಗಿ ಆದರೆ ನಿರಪೇಕ್ಷ ಅನ್ನಲಾಗುವದಿಲ್ಲ. ಹ್ಯೂಮ್ ಮತ್ತು ಭೌದ್ಧರಲ್ಲಿ ಅನೇಕ ಹೋಲಿಕೆಗಳು ಸ್ವತಂತ್ರವಾಗಿ ಚಿಂತಿಸಿವೆಯಾದರೂ ಕೂಡಾ ಪ್ರತ್ಯೇಕ ಗೋಚರವಲ್ಲದುದಕ್ಕೆ ತಲೆ ಕೆಡಿಸಿಕೊಳ್ಳುವರಲ್ಲ ಅವನ ಆತ್ಮನ ಇರುವಿಕೆಯನ್ನು ಅಲ್ಲಗಳೆಯುವರು. ಸಂವೇದನೆಗಳು, ಭಾವನೆಗಳು ಮುಂತಾದ ಒಕ್ಕೂಟವೇ "ಆತ್ಮ" ಅನ್ನುವನು. ಬುದ್ಧಿ, ದೇಹ, ಮನಸ್ಸುಗಳ ಕೂಟವೇ ಆತ್ಮ ಅನ್ನುವುದಾದರೆ ಹ್ಯೂಮ್ ಸಂವೇದನೆಗಳ ಕೂಟವೇ ಆತ್ಮ ಎನ್ನುವನು. ವಿಶ್ವ ಅಂದರೆ ಗಾಢ ಭಾವನೆಗಳ ಕೂಟ, ಬೌದ್ಧ-ವಿಜ್ಞಾನ (ಭವ)ಗಳ ಸಂತತಿಯೇ ವಿಶ್ವ ಅನ್ನುವನು. ಹೀಗೆ ಇವೆರಡು ಬಹಳ ಹತ್ತಿರ ಇವೆ. ಅದರಂತೆ ಕಾರ್ಯ-ಕಾರಣ-ಸಂಬಂಧದಲ್ಲಿ ಭೌದ್ಧರು ಒಂದು ರೀತಿಯಲ್ಲಿ ಅರ್ಥೈಸುವರು. ಕಾರ್ಯ-ಕಾರಣ ಸಂಬಂಧಗಳು ಇದ್ದರೂ ಅವು ಕೆಲವು ನಿಬಂಧನೆಗಳನ್ನು ಒಳಗೊಂಡಿರುವವು. ಈ ನಿಬಂಧನೆಗಳನ್ನು ಹಿಡಿತದಲ್ಲಿ ದೀಪದ ಉರಿವಿಕೆ ಭತ್ತಿ, ಎಣ್ಣೆ, ಗಾಳಿ, ಬೆಂಕಿ ಮುಂತಾದ ಅಂಶಗಳನ್ನು ಅವಲಂಬಿಸಿದೆ. ಇವುಗಳಲ್ಲಿ ಯಾವುದೇ ಒಂದು ಸಂಬಂಧ ಕಡಿಮೆ ಮಾಡಿದರೂ ಬೆಂಕಿ ಆಗುತ್ತೆ. ಇಲ್ಲಿ ಸಂಬಂಧದ ಹಿಡಿತವೇ ಕಾರ್ಯದ ಹಿಡಿತ ಆದರೆ ಕೊನೆಯ ಕಾರಣವೆಂಬುದು ಮಾತ್ರವಿಲ್ಲ. ಆಸೆಯೇ ದುಃಖಕ್ಕೆ ಕಾರಣ. ಆಶೆಯನ್ನು ನಿಯಂತ್ರಣ ಮಾಡಿದರೆ ದು:ಖವನ್ನು ನಿಯಂತ್ರಣ ಮಾಡಬಹುದು. ಇದು ಬೌದ್ಧರ ಕಾರ್ಯ-ಕಾರಣವಾದಂತಿದೆ. ಆದರೆ ಹ್ಯೂಮನು "ಕಾರ್ಯ-ಕಾರಣಗಳ ನಡುವೆ ಅನಿವಾರ್ಯ ಸಂಬಂಧವಿದೆಯೆಂದು ಒಪ್ಪಿಕೊಳ್ಳಲು ಆಗುವದಿಲ್ಲ" ಯಾಕೆಂದರೆ ಅಂತಹ ಸಂಬಂಧ ಇಂದ್ರಿಯಾನುಭವಕ್ಕೆ ಸಿಕ್ಕಿಲ್ಲ. ಅವನ ಪ್ರಕಾರ ಕಾರ್ಯವೂ ಇಲ್ಲ ಕರ್ತವ್ಯವೂ ಇಲ್ಲ. ಇರುವುದೆಲ್ಲಾ ಸಂವೇದನೆಗಳು ಮಾತ್ರ"[೬೬] ಹ್ಯೂಮ - ಭೌತವಸ್ತು, ಆತ್ನ, ದೇವರು ಮತ್ತು ಕಾರ್ಯ ಕಾರಣ ಸಂಬಂಧ ಅಲ್ಲಗಳೆಯಬೇಕೆನ್ನುವದಿಲ್ಲ ಆದರೆ ಅವು ಇಂದ್ರಿಯಾನುಭವದ ಮೂಲಕ ಸಾಗಿದರೆ ಅವನ್ನೆಲ್ಲಾ ನಂಬಲಾಗುವದಿಲ್ಲ. ಆ ಮಾರ್ಗವೇ ಅಂತಹದ್ದು ಕಾರ್ಯ-ಕಾರಣ ಸಂಬಂಧವಿಲ್ಲವೆನ್ನುವು ದಾದರೆ ವ್ಯವಹಾರದಲ್ಲಿ ಅದು ಒಂದು ಅಸತ್ಯವೆಸಗಿದಂತೆ ಆದರೆ ಹ್ಯೂಮ ತಾತ್ವಿಕವಾಗಿ ಈ ಸಂಬಂಧವನ್ನು ನಿರಾಕರಿಸುತ್ತಾನೆ ಆದರೆ ವ್ಯಾವಹಾರಿಕವಾಗಿ ಅಲ್ಲ. "I never asserted so absurd a proposition as that anything might arise without a cause. I only maintained that our certainty of the falsehood of that Proposition, Proceeded neither from intution nor demonstration, but from another Source"[೬೭]

ಇಲ್ಲಿ ಸತ್ಯ ತಾತ್ವಿಕವಾಗಿ ಬೇರೆ, ವ್ಯಾವಹಾರಿಕವಾಗಿ ಬೇರೆ. ಸತ್ಯವು ಬೇರೆ ವ್ಯವಹಾರ ಅನ್ನುವುದಾದರೆ ಅದು ವಿಪರ್ಯಾಸವಾಗುವದು. ಆಚಾರ - ವಿಚಾರಗಳಿಗೆ ಹೊಂದಿಕೆಯಿಲ್ಲದಂತಾಗುವದು ಇದೇ ಅವನಲ್ಲಿ ಕಾಣುವ ದೋಷ. ಇಂದ್ರಿಯ ಪ್ರಾಧಾನ್ಯವಾದ ದೋಷಪೂರಿತವೆಂದು ಹೇಳಬಹುದು. ಯಾಕೆಂದರೆ ಇಂದ್ರಿಯ ಗೋಚರವಲ್ಲದ ವ್ಯವಹಾರಕ್ಕೆ ನಿಲುಕದ ಅಂಶಗಳು ಕೂಡ ಈ ವಿಶ್ವದಲ್ಲಿವೆ. ಅಲ್ಲಿ ಇಂದ್ರಿಯ ಸಂವೇದನೆ

ಅವಶ್ಯಕತೆ ಇಲ್ಲ. ಗಣಿತಶಾಸ್ತ್ರ, ತರ್ಕಶಾಸ್ತ್ರಗಳಿಗೆ ಇಂದ್ರಿಯ ಸಂವೇದನೆಯ ಅವಶ್ಯವಿಲ್ಲದ ಕೇವಲ ಬೌದ್ಧಿಕ ವಿಚಾರವೇ ಅಲ್ಲಿ ಪ್ರಧಾನ. ಇವು ಕೂಡಾ ಜ್ಞಾನಕ್ಕೆ ಮೂಲಗಳು ಇವನ ಪ್ರಕಾರ ಯಾವುದು ಸತ್ಯವನ್ನುತ್ತೇವೆಯೋ ಅದು ಇಂದ್ರಿಯ ಗೋಚರವಾಗಲು ಅನುಭಾವ ಪ್ರಾಧಾನ್ಯವಾದಿಗಳು ತರ್ಕವನ್ನು ಕಡೆಗಣಿಸುತ್ತಾರೆ ಎಂದು ತಿಳಿದಿರುವ ಆಧಾರವಿಲ್ಲ "ಇಂದ್ರಿಯಾನುಭವ ಜ್ಞಾನದ ಮುಖ್ಯ ಸಾಧನ ಅದರಂತೆ ತರ್ಕ ಒಂದು ಉಪಾದೀನ ಮಾತ್ರ. ತರ್ಕದ ಆದಿ ಪ್ರತ್ಯಕ್ಷ - ಅಂತ್ಯವು ಪ್ರತ್ಯಕ್ಷ" ಹೀಗೆ ಇಂದ್ರಿಯಾನುಭವಕ್ಕೆ ಗೋಚರಾಗುವದೆಲ್ಲಾ ಸತ್ಯವೆನ್ನುವದು ಈ ಅರ್ಥದಲ್ಲಿಯೇ.

ಲಾಕ್ - ಆತ್ಮ, ಸಂವೇದನೆಗಳು, ಜಡವಸ್ತು, ದೇವರು ಇವುಗಳ ಅಸ್ತಿತ್ವವನ್ನು ಒಪ್ಪಿಕೊಳ್ಳವರು.

ಬಾರ್ಕ್ಲೆ - ಆತ್ನ, ಸಂವೇದನೆಗಳು, ದೇವರು, ಇವುಗಳ ಅಸ್ತಿತ್ವ ಒಪ್ಪಿ ಜಡವಸ್ತುವಿಗೆ ಅಸ್ತಿತ್ವವಿಲ್ಲ ಎನ್ನುವನು.

ಹ್ಯೂಮ್ - ಸಂವೇದನೆಗಳು ಮಾತ್ರ ಇವೆ, ಆತ್ಮ, ದೇವರು, ಜಡವಸ್ತುಗಳು ಇಲ್ಲವೆ ಇಲ್ಲ. ಈತ ಕೇವಲ ಸಂವೇದವಾದಿ, ಇಂದ್ರಿಯಾನುಭವವಾದಿ, ಇಂದ್ರಿಯವಾದಿಗಳಲ್ಲಿ ಈತ ಕೊನೆಯವನು.

ಇಂದ್ರಿಯ ಅನುಭವ - ಇಂದ್ರಿಯ + ಅನುಭವ - ಅನು + ಭವ + Idea - ಭಾವ - ಸಂವೇದನೆ. ಯಾವುದೇ ವಸ್ತುವಿನ ಸಂವೇದನೆ ವಸ್ತುವಿನ ಅನುಭವ, ಇಂದ್ರಿಯಗೋಚರ ವಸ್ತುವಿನ ಸಂವೇದನೆ ಅದು ಅನುಭವ ಇಂದ್ರಿಯಾತೀತ ವಸ್ತುವಿನ ಸಂವೇದನೆ ಅದಕ್ಕೆ ಅನುಭಾವವೆನ್ನಬಹುದು. ಇಂದ್ರಿಯಾನುಭವವೇ ಅನುಭಾವದ ಅರ್ಥಕ್ಕೆ ತಳಹದಿಯಾಗಿ ನಿಲ್ಲುವದು.

**ಕ್ಯಾಂಟ್**

ಈತ ಜರ್ಮನ್ ತತ್ವಜ್ಞಾನಿ. ಇವನ ಗುರಿ ಜ್ಞಾನದ ಸ್ವರೂಪ, ರಚನೆ, ಅದರ ಇತಿಮಿತಿಗಳು. ಬುದ್ಧಿಯ ಶಕ್ತಿಸಾಮರ್ಥ್ಯಗಳನ್ನು ಪರಿಶೀಲಿಸುವದು ಕೂಡಾ ಅದರಲ್ಲೊಂದು, ನೈತಿಕ ಮತ್ತು ವೈಜ್ಞಾನಿಕ ಜ್ಞಾನವನ್ನು ಒಪ್ಪುವನು. ಇಲ್ಲಿ ಜ್ಞಾನವೆಂದರೆ ಖಚಿತವಾದ, ಅವಶ್ಯ, ನಿರ್ದಿಷ್ಟ, ಸಾರ್ವತ್ರಿಕವಾದದ್ದು. ಈತನ ವಾದವೆಂದರೆ - ಅನುಭವ ಪ್ರಾಧಾನ್ಯವಾದ + ಬುದ್ಧಿ ಪ್ರಾಧಾನ್ಯವಾದ. ಇವೆರಡು ಅಂಶಗಳ ಗುಣಾಂಶಗಳನ್ನು ಒಪ್ಪಿಕೊಂಡು ಎರಡರಲ್ಲಿ ಅವಗುಣಗಳನ್ನು ತಿರಸ್ಕರಿಸಲಾಗಿದೆ. ಈ ತತ್ವ ಚಿಂತನೆಗೆ ವಿಮರ್ಶಾತ್ಮಕ ತತ್ವ ಅನ್ನಬಹುದು. Critical Philosophy ಮಾರ್ಗವೇ ನಿಜವಾದ ಜ್ಞಾನವನ್ನು ಪಡೆಯುವ ಮಾರ್ಗ, ಕಾಂಟ್‌ನಿಗಿಂತ ಹಿಂದೆ ಜ್ಞಾನದ ಮೂಲ ಬಾಹ್ಯವಸ್ತು, ಮನಸ್ಸು ಬಾಹ್ಯವಸ್ತುವಿನೆಡೆಗೆ ಹೋಗಿ ಅದನ್ನು ಗ್ರಹಿಸುವುದರ ಮೂಲಕ ಜ್ಞಾನ ಉಂಟಾಗುತ್ತದೆ ಎನ್ನಲಾಗುತ್ತಿತ್ತು. ಇದನ್ನು ಕಾಂಟ್ ತಿರಸ್ಕರಿಸಿ, ಬಾಹ್ಯವಸ್ತು ತನ್ನನ್ನು ಜ್ಞೇಯ ವಸ್ತುವನ್ನಾಗಿಸಲು ಕೆಲವು ನಿಯಮಗಳಿಗೆ ಒಳಪಡಬೇಕಾಗುವದು. ಅದು ದೇಶ ಕಾಲ (Space, Time) ಗಳಲ್ಲಿದ್ದು, ದರ್ಶನ (Percept) ಆಗಿ ಪರಿವರ್ತಿತವಾಗಬೇಕು.

ದರ್ಶನ - Perception ಯಾವುದನ್ನು ದರ್ಶಿಸಲಾಗುತ್ತದೆಯೋ ಅದು ಇಂದ್ರಿಯದರ್ಶನ ಅಥವಾ ಭೌತಿಕ ದರ್ಶನವಾಗಿರಬಹುದು. ಇಂದ್ರಿಯದರ್ಶನ ಅದು ಇಂದ್ರಿಯವಾದಿ, ಭೌದ್ಧಿಕ ದರ್ಶನ ಅದು ಅತೀಂದ್ರಿಯವಾದಿ. ಇಲ್ಲಿ ದರ್ಶನವೆನ್ನುವ ಪದ ಎರಡು ತೆರನಾಗಿದೆ. ಮೊದಲನೆಯದಾಗಿ ಅಂತಃಚಕ್ಷು ದರ್ಶನವೇ ನಾವು ತೆಗೆದುಕೊಂಡಿರುವ 'ಅನುಭಾವ' ಅನ್ನುವ ಅರ್ಥದ ದರ್ಶನವಾಗಿದೆ. ಇಲ್ಲಿ ಜ್ಞಾನದ ಕೇಂದ್ರ ಮನಸ್ಸೇ ಹೊರತು ವಸ್ತುವಲ್ಲ. ಮನಸ್ಸು ವಸ್ತುವಿನೆಡೆಗೆ ಹೋಗುವದು ಅನ್ನುವದಕ್ಕಿಂತ ಆ ವಸ್ತು ದೇಶ ಮತ್ತು ಕಾಲದಲ್ಲಿದ್ದು, "ದರ್ಶನ" ಎನಿಸಿಕೊಂಡು ತಿಳಿಯುತ್ತದೆ ಅನ್ನುವನು. ಮನಸ್ಸಿನ ರಚನೆಯಲ್ಲಿ ಹುದುಗಿರುವ ದೇಶ, ಕಾಲ, ಪರಿಮಾಣ, ಗುಣ, ಕಾರ್ಯಕಾರಣ ಮುಂತಾಗಿ ಹನ್ನೆರಡು ನಿಬಂಧನೆಗಳನ್ನು ಹೇಳುತ್ತಾನೆ. ಹೀಗೆ ಈತ ಜ್ಞಾನದ ಕೇಂದ್ರ ಮನಸ್ಸೇ ವಿನಹ ಬಾಹ್ಯ ವಸ್ತುವಲ್ಲ ಅನ್ನುವನು. ಬುದ್ಧಿ ಪ್ರಧಾನವಾದ ಮತ್ತು ಇಂದ್ರಿಯವಾದ ಎರಡನ್ನು ವಿಮರ್ಶೆಗೆ ಒಳಪಡಿಸಿ ಅವುಗಳಲ್ಲಿಯ ಗುಣಾಂಶಗಳನ್ನು ಒಪ್ಪಿ ಅವಗುಣಗಳನ್ನು ತಿರಸ್ಕರಿಸಿದ. ಎರಡು ಚಿಂತನೆಗಳು ಏನನ್ನು ಸಾಧಿಸುತ್ತಿವೆ ಅವೆರಡೂ ಸತ್ಯಗಳು ಆದರೆ ಎರಡು ಏನನ್ನು ಅಲ್ಲಗಳೆಯುತ್ತವೆಯೋ ಅವು ತಪ್ಪು. ಬುದ್ಧಿ ಪ್ರಾಧಾನ್ಯವಾದ (Apriorielement), ಜ್ಞಾನ ಅನುಭವ ಪೂರ್ವವಾದುದು. ಇಂದ್ರಿಯ ಪ್ರಾಧಾನ್ಯವಾದ ಸಂವೇದನೆಗಳೇ ಜ್ಞಾನದ ಸಾರ, ಇದು ಸರಿ ಆದರೆ ಜ್ಞಾನ ಬುದ್ಧಿ ಜನ್ಯ ಇಂದ್ರಿಯಜನ್ಯ ಅಲ್ಲ ಅಥವಾ ಜ್ಞಾನ ಇಂದ್ರಿಯ ಜನ್ಯ, ಬುದ್ಧಿಯ ಜನ್ಯವಲ್ಲ ಅನ್ನುವದು ಮಾತ್ರ ತಪ್ಪು.

ಇಂದ್ರಿಯ ಸಂವೇದನೆಗಳಿಲ್ಲದಿದ್ದರೆ ಜ್ಞಾನ ಗಾಳಿಯಗೋಪುರವಾಗಿ ತನ್ನ ಸತ್ಯಗಳನ್ನು ಕಳೆದುಕೊಂಡು ಬಿಡುತ್ತದೆ. ಹಾಗೆಯೇ ಜ್ಞಾನ ಕೇವಲ ಇಂದ್ರಿಯ ಜನ್ಯವಾದುದು. ಎಂದರೆ ಅದು ಸಾರ್ವತ್ರಿಕವಲ್ಲ ಒಂದೇ ತೆರನಾಗಿ ಆದುದು ವ್ಯಕ್ತಿ ನಿಷ್ಠವಾಗಿ ಭ್ರಮೆ ಎನಿಸುತ್ತದೆ. ಜ್ಞಾನ ಇಂದ್ರಿಯಾನುಭವದಲ್ಲಿ ಪ್ರಾರಂಭವಾಗುತ್ತದೆ ಏನೋ ನಿಜ, ಇಂದ್ರಿಯ ಸಂವೇದನೆಗಳು ಜ್ಞಾನದ ಮೂಲ ಸರಕುಗಳು ನಿಜ ಆದರೆ ಜ್ಞಾನ ಇಂದ್ರಿಯಾನುಭವದಲ್ಲಿ ಪರ್ಯಾಯವಸಾನ ಹೊಂದುವದು ಎಂದರೆ ತಪ್ಪು. ಇಂದ್ರಿಯ ಸಂವೇದನೆಯೇ ಜ್ಞಾನ ಅಲ್ಲ. ಅನುಭವವೆನಿಸಿಕೊಳ್ಳಬೇಕಾದರೆ, ಅನುಭವ ಪೂರ್ವರೂಪ ಅಥವಾ ಅಂಶಗಳ ಮೂಲಕ ನೋಡಲ್ಪಡಬೇಕು. (Precived) ಮತ್ತು ಪರಿಮಾಣ ಗುಣ, ಕಾರ್ಯ - ಕಾರಣ ಮುಂತಾದ ಹನ್ನೆರಡು ಅನುಭವ ಪೂರ್ವ ಅರ್ಥೈಸುವ ರೂಪಗಳ ಮೂಲಕ ಭಾವಿಸಲ್ಪಡಬೇಕು.

ದೇಶ, ಕಾಲಗಳು - ಅನುಭವ ಪೂರ್ವ ಪ್ರತ್ಯಕ್ಷ ರೂಪಗಳು
(Apriori forms or Perception)

ಪರಿಮಾಣಗುಣ, ಕಾರ್ಯ - ಕಾರಣ - ಅರ್ಥೈಸುವ ರೂಪ
(Contegencias of understanding)

ದರ್ಶನಗಳನ್ನು ಸಾರ್ವತ್ರಿಕ ನಿಯಮಗಳನ್ನಾಗಿ ಪರಿವರ್ತಿಸುವ ನಿರ್ದಿಷ್ಟ ನಿಯಮಗಳೇ ಪದಾರ್ಥಗಳೆನ್ನಲಾಗುತ್ತದೆ. ಜ್ಞಾನ ಕೇವಲ ಇಂದ್ರಿಯದಲ್ಲಿ ಪ್ರಾರಂಭವಾಗಿ ಅದು ಅರ್ಥೈಸುವ ರೂಪಗಳೆಡೆಗೆ ಸಾಗಿ ಬುದ್ಧಿಯಲ್ಲಿ ಕೊನೆಯಾಗುವದು. ಸಂವೇದನೆಗಳು ಜ್ಞೇಯ ವಸ್ತುಗಳಾಗಲು ಪ್ರಾರಂಭಿಸಿದಾಗ ಮನಸ್ಸು ಚಟುವಟಿಕೆಗೆ ಒಂದುಗೂಡಿ ಸಂವೇದನೆಯಲ್ಲಿ ಅರ್ಥೈಸಿದಾಗ ಜ್ಞಾನ ಉತ್ಪತ್ತಿಯಾಗುವದು.

ನಿಜವಾದ ಜ್ಞಾನ - ದರ್ಶನ (Parcept) + ಮನನ (Concept) ಇಲ್ಲಿ ಜ್ಞಾನವು ಇಂದ್ರಿಯಗಳ ಗ್ರಾಹ್ಯದಿಂದ ಅದಕ್ಕೆ ಸಂಬಂಧಪಟ್ಟ ರೂಪಗಳಿಂದ ಹಿಡಿದುಕೊಂಡು ಗ್ರಾಹ್ಯ, ಗ್ರಾಹಕ ಪ್ರಯೋಗಗಳನ್ನು ಕೂಡಿಕೊಂಡು ಅದನ್ನು ಸರಿಯಾಗಿ ಅರ್ಥೈಸುವ ಕ್ರಮವೇ, ಬುದ್ಧಿ ಗ್ರಾಹ್ಯದೊಡಗೂಡಿ ಸಾಗಿದಾಗ ಅದು ಜ್ಞಾನದ ಮೆಟ್ಟಿಲಾಗುವದು. ಇದು ಕಾಂಟ್ ವಾದ. - ಇಲ್ಲಿ ಅನುಭವ - ತಿಳಿಯುವ ಮನಸ್ಸು + ತಿಳಿಯಲ್ಪಡುವ ವಸ್ತು. ಹೀಗೆ ಎರಡು ಸೇರಿದಾಗ ಅನುಭವ ವೇದ್ಯವಾಗುವದು. ಮನಸ್ಸಿನ ಕ್ರಿಯಾ ಸಂಪರ್ಕವಿಲ್ಲದೇ ಕೇವಲ ಇಂದ್ರಿಯ ಸಂವೇದನೆಗಳಿಂದ ವಸ್ತುಗಳನ್ನು ತಿಳಿಯಲಾಗುವುದಿಲ್ಲ. ಹಾಗೆಯೇ ಇಂದ್ರಿಯ ಸನ್ನಿಕರ್ಷವಿಲ್ಲದೇ ಬುದ್ಧಿಯಿಂದ ಜ್ಞಾನ ಸಿಗುವದಿಲ್ಲ. ಎರಡು ಅವಶ್ಯಕವಾದವುಗಳೆ. ಇಂದ್ರಿಯವಾದಿ ಹಾಗೂ ಬುದ್ಧ್ಯಾವಾದಿಗಳನ್ನು ನೋಡಿದಾಗ ಅವೆರಡು ಅಪೂರ್ಣಗಳೇ ಅನ್ನಿಸುವದು. ಜ್ಞಾನಕ್ಕೆ ನಿಜವಾದ ಅರ್ಥವನ್ನು ಕೊಟ್ಟವನು ಕಾಂಟ್ ಎನ್ನಬಹುದು. "ಮನನವಿಲ್ಲದ ದರ್ಶನ ಕುರುಡು, ದರ್ಶನವಿಲ್ಲದ ಮನನ ಬರಡು" (Percepet without concept in blind and concept without percepterempty)[೬೮]

ಜ್ಞಾನ ಇಂದ್ರಿಯ ಸನ್ನಿಕರ್ಷದಿಂದ ಪ್ರಾರಂಭಿಸಿ ಬುದ್ಧಿ ಭಾವದಲ್ಲಿ ಬೆಳೆಯುವದು. ಜ್ಞಾನ - ಇಂದ್ರಿಯಾನುಭವ + ಬುದ್ಧಿಯ ಚರಮತೆ ಇಲ್ಲಿ ದರ್ಶನ ಪದದ ಅರ್ಥ ಒಂದು ಇಂದ್ರಿಯ ಗ್ರಾಹ್ಯವೆಂತಲೂ, ಅನುಭಾವಗಳ ಒಳಗೂಡಿದ ಇವುಗಳ ಸಂಯಮದಿಂದ ಅಂತಃಚಕ್ಷು ಗೋಚರ ಭಾವನೆಯೇ ಇಲ್ಲಿ ದರ್ಶನವಾಗಿದೆ. ದರ್ಶನ - (Perepet) ಆದಂತೆ ಅದು ಕೇವಲ ಗ್ರಾಹ್ಯವಲ್ಲ, ಅತೀಂದ್ರಿಯ ಅನುಭವ ಕೂಡಾ ಆಗಿದೆ. ಸಂವೇದನೆ ಮತ್ತು ಬುದ್ಧಿಯ ಚಟುವಟಿಕೆ ಕೂಡಿದಾಗ ಜ್ಞಾನವಾಗುವದಾದರೆ, ದೇವರು, ಆತ್ಮ ಇತ್ಯಾದಿಗಳನ್ನು ಅರ್ಥೈಸಬೇಕಾದರೆ ಇಂದ್ರಿಯ ಸಂವೇದನೆ ಇರುವದಿಲ್ಲ. ಇಂದ್ರಿಯ ಸಂವೇದನೆ ಇಲ್ಲದೆ ಹೊರತು ಜ್ಞಾನ ಸಿದ್ಧವಾಗುವದಿಲ್ಲ. ಆದರೆ ಬುದ್ಧಿಯ ಮನೋಗ್ರಹ ಚಟುವಟಿಕೆ ಫಲಿಸಬಹುದು. ಅದನ್ನು ಕುರಿತು ಚಿಂತಿಸಲುಬಹುದಾಗಿದೆ. ಆದರೆ ಅದು ಜ್ಞಾನ ಎನಿಸಿಕೊಳ್ಳಲಾರದು. ಇಂದ್ರಿಯ ಗ್ರಾಹ್ಯತೆ ಅಲ್ಲದ ಬುದ್ಧಿ ಕ್ರಿಯೆ ಮಾತ್ರವೇ ಜ್ಞಾನವಲ್ಲ, ಜ್ಞಾನವಲ್ಲವಾದರೆ ನೈಜ ಜ್ಞಾನವೆ ಸಿಗುವದಿಲ್ಲವೆಂದೇ ಅರ್ಥೈಸಲಾಗುತ್ತದೆ. ಇಲ್ಲಿ ಅವುಗಳನ್ನು ಅಲ್ಲಗಳೆಯಲಾಗುವದಿಲ್ಲ. ಅವು ಇಂದ್ರಿಯಾತೀತ ವಸ್ತುಗಳು ಆಗಬಹುದು ಅನುಭವ ಅಗಮ್ಯವಾದರೂ ಸಹಿತ ಅನುಭಾವ ಗಮ್ಯಗಳಿರಬಹುದು. ಅಲ್ಲಿ ನಂಬಿಕೆಯಿಡಬಹುದು ಇವು ನಂಬಿಕೆಗೆ ಯೋಗ್ಯವಾದವುಗಳೇ ಹೊರತು ಜ್ಞಾನಕ್ಕೆ ಅಲ್ಲವೆಂದು ಅವನ ಭಾವನೆ. ಅದರಂತೆ ಅವು ಸಂವೇದನೆಗಳಲ್ಲದ ಮನಸ್ಸಿನ ಅಂತರ್ಗತ ರೂಪಗಳಾದ್ದರಿಂದ ನಂಬಿಕೆಯೊಂದಿಗೆ ಕಲ್ಪನಾತೀತವಾದ ಅತೀಂದ್ರಿಯ ವಸ್ತುಗಳೇನಾದರೂ ದೊರೆಯುವದರಲ್ಲಿ ಇವುಗಳನ್ನು ಸೇರಿಸಬಹುದು. ಸಾಮಾನ್ಯ ದೃಷ್ಟಿಯಿಂದ ನೋಡಿದರೆ ಭ್ರಾಂತಿಯಂತೆ ಭಾಸವಾಗಬಹುದು. ಇಲ್ಲಿ ಎರಡು ಭೇದಗಳನ್ನು ಮಾಡುತ್ತಾನೆ. 'ತಿಳಿಯಲರ್ಹವಾದ ಅನುಭವಲೋಕ' - (Phenomenon) ಇನ್ನೊಂದು ನಂಬಿಕೆಯ ವಸ್ತು (Noumenon). ಇದು ಅನುಭವಾತೀತ ಲೋಕ ಇದಕ್ಕೆ 'ವಸ್ತುತ್ವ'ವೆಂದು (Thing- in- Itself) ಕರೆಯುವನು. ಇಂದ್ರಿಯಲೋಕ ಜ್ಞಾನಕ್ಕೆ ಸಂಬಂಧ ಪಟ್ಟಿದೆ ಭೌತವಿಜ್ಞಾನ. ಗಣಿತ ಇತ್ಯಾದಿಗಳು. ನಂಬಿಕೆಯ ಲೋಕ, ಆಧ್ಯಾತ್ಮ, ದೇವರು, ಶಾಸ್ತ್ರ, ಆತ್ಮ, ವಿದ್ಯೆ ಇತ್ಯಾದಿಗಳು. ಈ ನಂಬಿಕೆಯ ಲೋಕ ಕೇವಲ ಊಹೆ ಅಲ್ಲ ಅದು ಆತ್ಯಂತಿಕ ಸತ್ಯ. (Ultimate Relity) ಆದರೆ ಅದನ್ನು ತಿಳಿಯಲು ಬರುವದಿಲ್ಲ. ಆ ದಿಶೆಯಲ್ಲಿ ಪ್ರಯತ್ನಿಸಬಹುದು. ಅಲ್ಲಿ ಕಾರ್ಯ -

ಕಾರಣವಿಲ್ಲ ಅಲ್ಲಿ ಅದಕ್ಕೆ ಅದೇ ಕಾರಣ ಇಂದ್ರಿಯ ಜ್ಞಾನ ಎಲ್ಲಿಗೆ ನಿಲ್ಲುತ್ತದೆಯೋ ಅಲ್ಲಿಗೆ ಇದು ಪ್ರಾರಂಭವಾಗುವದು. ಅನುಭಾವತೀತ ಲೋಕ ತಿಳುವಳಿಕೆಯ ವಲಯದಿಂದ ಹೊರಗೆ ಇರುವದು. ಅವನ ಜ್ಞಾನವನ್ನು ಮೂರು ವಿಭಾಗಗಳಾಗಿ ವಿಂಗಡಿಸಿದ್ದಾನೆ.



೧. ಅನುಭವಪೂರ್ವ ಪ್ರತ್ಯಕ್ಷ (Transeendental Aesthetic) ಜ್ಞಾನೋತ್ಪತ್ತಿಯೆಂದರೆ ಇಂದ್ರಿಯಾನುಭವದ ಸಂವೇದನೆಗಳಿಗೆ ಪದಾರ್ಥಗಳ ಅನ್ವಯರೂಪ ಅವೇ ಭಾವನೆಗಳಾಗುತ್ತವೆ. ಇದಕ್ಕೆ ಅರ್ಥೈಸುವ ಪೂರ್ವಭಾವಿ ರೂಪಗಳೆನ್ನಬಹುದು.

೨. ಇಂದ್ರಿಯಾನುಭವದಿಂದ ಉಂಟಾದ ಸಂವೇದನೆಗೆ ಅನುಗುಣವಾಗಿ ಪದಾರ್ಥಗಳನ್ನು ಅನ್ವಯಿಸಿದಾಗ ಅವುಗಳ ಭಾವನೆ ಉಂಟಾಗುತ್ತದೆ. ಆಗ ಅದಕ್ಕೆ ಜ್ಞಾನೋತ್ಪತ್ತಿ ಎನ್ನಬಹುದು. ಅರ್ಥೈಸುವಿಕೆ ಎಂದರೆ ವಸ್ತುಗಳನ್ನು ತಿಳಿಯುವದು, ಬಿಡುವದು, ವಸ್ತುಗಳಲ್ಲಿದೆ.

೩. ಇದರಂತೆ ಇಂದ್ರಿಯ ವೇದನೆ ಇಲ್ಲದೇ ಹೋದರೆ ಪದಾರ್ಥಗಳು ಇದ್ದರೂ ಇಲ್ಲದಂತೆ ಅಲ್ಲಿ ನಿಜಜ್ಞಾನ ಉತ್ಪತ್ತಿಯಿಲ್ಲ, ಇಂದ್ರಿಯಾತೀತ ತತ್ವ ಅಲ್ಲಿ ತರ್ಕಾಭಾಸ ಉಂಟಾಗುವದು.

ಪ್ರತಿಯೊಂದು ವಸ್ತು ದೇಶ, ಕಾಲಗಳ ವ್ಯಾಪ್ತಿಯಲ್ಲಿದೆ. ಇವೆರಡಲ್ಲದ ಇಂದ್ರಿಯ ಸಂವೇದನೆ ಉಂಟಾಗಲಾರದು. ಯಾಕೆಂದರೆ ಇವೆರಡನ್ನು ಬಿಟ್ಟು ವಸ್ತು ಇರಲು ಸಾಧ್ಯವಿಲ್ಲ. ಇವೆರಡು ಸ್ವತಂತ್ರ ಅಸ್ತಿತ್ವ ಕೂಡ ಹೊಂದಿಲ್ಲ. ಅವು ಮಾನವ ಮನಸ್ಸನ್ನು ಅವಲಂಬಿಸಿವೆ. ವ್ಯಕ್ತಿ ನಿಷ್ಠವಾದವುಗಳು, ಆದರೆ ವಸ್ತುನಿಷ್ಠಗಳಲ್ಲ. ದೇಶ ಮತ್ತು ಕಾಲಗಳು ಇವೆರಡು ಇಂದ್ರಿಯ ಪೂರ್ವಭಾವಿಯಾಗಿ ಇರುವಂತವು. ಇವುಗಳನ್ನು ಪೂರ್ವಭಾವಿಯಾಗಿ ಪರಿಭಾವಿಸದಿದ್ದರೆ ಇಂದ್ರಿಯಾನುಭವ ಸಾಧ್ಯವಿಲ್ಲ. ಇದಕ್ಕೆ 'ಪ್ರತ್ಯಕ್ಷದ ಪೂರ್ವಭಾವಿ ರೂಪಗಳು' Apriavi forms of perseption ಅಂತ ಕರೆಯುವರು. ವಸ್ತುವಿಗನುಗುಣವಾಗಿ ಇಂದ್ರಿಯ ಸಂವೇದನೆಗಳು ಆ ವಸ್ತುವಿನ ದರ್ಶನ (Persept)ವನ್ನಾಗಿ ಸ್ವೀಕರಿಸುವ ಜ್ಞಾನ ಭಾಗವೆ (Sense) ಅನ್ನುವನು. ಮೊದಲನೆಯದು ಇಂದ್ರಿಯ ಸಂವೇದನೆ ವಸ್ತುಗಳೊಡನೆ ದರ್ಶಿಸುವಿಕೆ ಅದಕ್ಕೆ ಪ್ರತ್ಯಕ್ಷ ದರ್ಶನ ಅಥವಾ ಆ ವಸ್ತುವಿನ ದರ್ಶನ, ಆ ವಸ್ತುವಿನ ಭಾವನೆಯನ್ನು ಹೊಂದುವಿಕೆ. ಎರಡನೆಯದಾಗಿ ದರ್ಶಿಸಿದಂತೆ ಅದರ ಭಾವನೆಯನ್ನಾಗಿ ಮಾರ್ಪಾಡಿಸುವಿಕೆ. ಎರಡರಲ್ಲಿ ಸೂಕ್ಷ್ಮ ವ್ಯತ್ಯಾಸವಿದೆ. ಮೊದಲನೆಯದರಲ್ಲಿ ಕೇವಲ ದರ್ಶಿಸುವಿಕೆ ಮಾತ್ರವಿದೆ. ಅರ್ಥೈಸುವಿಕೆಯಿಲ್ಲ. ಆದರೆ ಎರಡನೆಯದರಲ್ಲಿ ಅರ್ಥೈಸುವಿಕೆಯಿದೆ ದರ್ಶಿಸುವಿಕೆಯಿಲ್ಲ. ಯಾವುದನ್ನು ಅರ್ಥೈಸುವದಾದರೂ ದೇಶ, ಕಾಲಗಳ ಪರಿವ್ಯಾಪ್ತಿಯಲ್ಲಿಯೆ, ಭಾವನೆಗಳು ದೇಶ ಕಾಲಾತೀತ ಅವು ಪ್ರತ್ಯಕ್ಷವಾದ ಇಂದ್ರಿಯ ಸಂವೇದನೆಗಳನ್ನು ಸಂಯೋಜಿಸುವವು ಹಾಗೆಯೇ ಭಾವನೆಗಳ ವರ್ಗೀಕರಣ ಅವಶ್ಯವಿದೆ. ಸಂಯೋಜಕ ಭಾವನೆಗಳನ್ನು ಅನ್ವಯಿಸಿಕೊಳ್ಳುವವನು ಮನುಷ್ಯ. ಇದಕ್ಕೆ ಮನಹಪ್ರಜ್ಞೆ (ಅನುಭೋದೆ) ಎಂದು ಕಾಂಟ್ ಕರೆಯುತ್ತಾನೆ.



ಕಾಂಟ್‌ನ ವಿಧಾನ ಮೂರು ಭಾಗವಾಗಿದೆ.

೧. ಇಂದ್ರಿಯ ಪೂರ್ವದ ವ್ಯಾಪ್ತಿಗಳಾದ ದೇಶ ಕಾಲಗಳ ವಿಚಾರ

೨. ಇಂದ್ರಿಯಾನುಭವದ ಪ್ರಕೂಪಗಳು - Emphiricism

೩. ಬುದ್ಧಿ ಪ್ರಾಧಾನ್ಯ - Rationalism

ಇಂದ್ರಿಯಾನುಭವ ಮತ್ತು ಬುದ್ಧ್ಯಾವಾದಗಳ ಸಮನ್ವಯತತ್ವ ಕಾಂಟ್‌ನದು. ಇವೆರಡನ್ನು ಸೇರಿಸಿ, ಮಾಡುವ ಅಧ್ಯಯನಕ್ಕೆ Critical Philosophy (ವಿಚಾರಾತ್ಮಕವಾದ ಅಥವಾ ವಿಮರ್ಶಾವಾದ) ಎನ್ನಬಹುದು. ಮಾನವನ ಅನುಭಾವದ ವ್ಯಾಪ್ತಿಯನ್ನು ಮೀರಿದ ವಸ್ತುಗಳ ಬಗೆಗಿನ ಜ್ಞಾನ ಅಂದರೆ ವಿಶ್ವ, ಆತ್ಮ, ದೇವರು ಇವುಗಳ ಚರ್ಚೆಯೇ Trancendenatal Dialaetic ಭಾಗದಲ್ಲಿ ಬರುವದು. ಯಾವ ವಿಚಾರ ಮಾನವನ ಮನಸ್ಸನ್ನು ಇಂದ್ರಿಯಾತೀತ ವಸ್ತುಗಳೊಡನೆ ಕೊಂಡೊಯ್ಯುವುದೋ ಅದನ್ನೇ ಬುದ್ಧಿ ಎನ್ನುವನು. ಮನಸ್ಸು ಇಂದ್ರಿಯಾತೀತ ವಸ್ತುಗಳನ್ನು ಹೇಗೆ ತಿಳಿಯುವದು? ಅದು ಇಂದ್ರಿಯಗಳಿಗೆ ಸಿಗಲಾರದು. ಅದು ಇಂದ್ರಿಯಾ ಸಂವೇದನಾ ರಹಿತವಾದದ್ದು, ಪೂರ್ತಿ ತಿಳಿಯದೇ ಹೋದರೂ ಸಹಿತ ತಿಳಿಯುವ ಪ್ರಯತ್ನ ಬುದ್ಧಿಯಲ್ಲಿದೆ. ತರ್ಕಾಭಾಸಗಳೇ ಸುಲಭ ಎನ್ನಿಸಬಹುದು. ಅದಕ್ಕೆ ಬುದ್ಧಿಯ ವ್ಯಾಪ್ತಿಯ ಮೀರಬಹುದು. ಆದರೆ ಆ ಕಲ್ಪನೆಗಳು ನಂಬಿಕೆಗೆ ಅರ್ಹವಾದವುಗಳು ಇಲ್ಲಿ ಆತ್ಮದ ಬಗೆಗಿನ ವಿಮರ್ಶೆ, ಆತ್ಮ ಯಾವಾಗಲೂ ದೇಹದಲ್ಲಿದೆ ಎಂದು ಅನುಭವಕ್ಕೆ ಬಂದುದಾಗಿದೆ. ಆದ್ದರಿಂದ ಅದು ಅನುಭಾವಾತೀತವೇ ಸರಿ. ಆತ್ಮ ಅವಿನಾಶಿ ಎಂದು ಅನ್ನುವದಾದರೆ (ದೈವಾಸ್ತಿಕರು), ಅದು ಅವಿನಾಶಿ ಅಲ್ಲ ಅನ್ನುವರು ಭೌತವಾದಿಗಳು, ಆದರೆ ಇವೆರಡು ವಿಚಾರ ತಪ್ಪು ಅನ್ನುವನು ಕಾಂಟ್. ಬುದ್ಧಿ ಸ್ವವಿರೋಧ ಕಲ್ಪನೆಗಳಿಂದ ಕೂಡಿದುದಾಗಿದೆ. ಅದು ಪರಸ್ಪರ ವಿರುದ್ಧವಾದ ತೀರ್ಮಾನಗಳನ್ನು ಮಾಡುವದು. ಅತೀಮಾನ ಬುದ್ಧಿಯಿಂದ ಸುಲಭವಾಗಿ ಸಿದ್ಧಪಡಿಸಲುಬಹುದು, ಅಸಿದ್ಧಪಡಿಸಲುಬಹುದು. ಇದಕ್ಕೆ ಭಾವ ವಿರೋಧಿ ಎನ್ನಬಹುದು. ಪರಸ್ಪರವಾದ ಜೋಡಿ ಅನುಭವಗಳನ್ನು ಬುದ್ಧಿಯಿಂದ ಸಿದ್ಧಪಡಿಸಬಹುದು. ಅದರಿಂದ ಅಸಿದ್ಧಪಡಿಸಲುಬಹುದು. ಆದ್ದರಿಂದ ಈ ಭಾವನೆಗಳಿಗೆ ಈ ನಿರ್ದಿಷ್ಟ ತೀರ್ಮಾನ ಅಸಾಧ್ಯ. ಇವನ ವಿಚಾರದಂತೆ ಜಗತ್ತಿನ ಅಸ್ತಿತ್ವದಿಂದ ದೇವರ ಅಸ್ತಿತ್ವ ಸಿದ್ಧಪಡಿಸುವದು ತಪ್ಪು. ಏಕೆಂದರೆ ದೇವರು ಸ್ವಯಂ ಸಿದ್ಧ ತತ್ವವಾದ್ದರಿಂದ, ಭೂಮಿಯು ಸ್ವಯಂ ಸಿದ್ಧ ತತ್ವವಾಗುವದಿಲ್ಲ. ಸಾಮಾನ್ಯವಾಗಿ ದೇವರನ್ನು ನಾವು ಸತ್ಯಂ - ಶಿವಂ - ಸುಂದರಂ ಅಂದಾಗ ದೇವರು ಸತ್ಯವಾದರೆ ಈ ವಿಶ್ವದಲ್ಲಿ ಅಸತ್ಯವೂ ಇದೆ, ಅಶುಭ ಸಂಕೇತಗಳು ಇವೆ. ದೇವರು ಇವೆಲ್ಲವುಗಳ ಸಂಗ್ರಹವಾದರೆ ಈ ಕುರೂಪ, ಅಸತ್ಯ, ಇವು ಅವನ ಅಂಶಗಳಿಂದಾಗುತ್ತವೆ. ಆದರೆ ದೇವರು ಸತ್ಯ ಹೀಗಾದಾಗ ಬುದ್ಧಿಯು ದೇವರನ್ನು ಕಾಣುವ ಸ್ಥಿತಿಯಲ್ಲಿ ಸೋಲುತ್ತದೆ. ದೇವರ ಅಸ್ತಿತ್ವವನ್ನು ಸಿದ್ಧಪಡಿಸಲು ಮೂರು ವಾದಗಳನ್ನು ಕಾಂಟ್ ಹೇಳುತ್ತಾನೆ.

೧. ಪರಿಪೂರ್ಣವಾದ (Ontalogical Argument)
೨. ಆಧಿಕಾರಣವಾದ (Cosmological Argument)
೩. ಉದ್ದೇಶವಾದ (Teleological Argument)

ಈ ವಾದಗಳನ್ನು ತನ್ನದೇ ಆದ ವಾದದಲ್ಲಿ ಚರ್ಚಿಸಿ ತಿರಸ್ಕರಿಸುವನು. ಪರಿಪೂರ್ಣವಾದವನ್ನು, ಪರಿಪೂರ್ಣ ಅಂದರೆ - ಅಸ್ತಿತ್ವವು ಪರಿಪೂರ್ಣ ಗುಣದಲ್ಲಿ ಒಂದು ಭಾಗ, ದೇವರು ಪರಿಪೂರ್ಣವಾದ್ದರಿಂದ ಆತ ಅಸ್ತಿತ್ವದಲ್ಲಿರಬೇಕು. ಅಸ್ತಿತ್ವವಿಲ್ಲದೇ ಪರಿಪೂರ್ಣತೆ ಇರಲು ಸಾಧ್ಯವಿಲ್ಲ. ಅಂದರೆ ಮಾನವನ ಮನಸ್ಸಿನಲ್ಲಿ ದೇವರು ಅನ್ನುವ ಭಾವನೆಯಿದೆ. ಆದ್ದರಿಂದ ದೇವರು ಇರಬೇಕು. ಇದಕ್ಕೆ ಕಾಂಟ್‌ನು ಜೇಬಿನಲ್ಲಿ ರೂಪಾಯಿಯಿದೆ ಎಂದು ಕಲ್ಪನೆ ಮಾಡಿದ ಮಾತ್ರಕ್ಕೆ ಜೇಬಿನಲ್ಲಿ ರೂಪಾಯಿಗಳು ಇರಲು ಸಾಧ್ಯವಿಲ್ಲ.

ಆದ್ದರಿಂದ ಅದು ಬರಿ ಭಾವನೆ. ಅದರಂತೆ ಆದಿಕಾರಣವಾದವನ್ನು ಪ್ಲೇಟೋ, ಅರಿಸ್ಟಾಟಲ್, ಥಾಮಸ್ ಅರ್ವೆನಾಸ್, ಡೆಕಾರ್ಟ್, ಸ್ಪಿನೋಜ್, ಲೆಬ್ನಿಸ್ ಇವರೆಲ್ಲರೂ ಇದನ್ನು ಒಪ್ಪಿಕೊಂಡಿದ್ದಾರೆ. ಈ ವಿಶ್ವದಲ್ಲಿರುವ ಪ್ರತಿಯೊಂದು ಕಾರ್ಯಕ್ಕೂ ಒಂದು ಕಾರಣ ಇರಲೇಬೇಕು. ಹೀಗೆ ಇರುವ ಕಾರಣ ಪರಂಪರೆಗೆ ಕೊನೆ ಎಂಬುದು ಇರಲೇಬೇಕು. ಇಲ್ಲವಾದರೆ ಅನವಸ್ಥಾ ದೋಷ ಉತ್ಪತ್ತಿಯಾಗುವದು. ಕಾರಣ ಪರಂಪರೆ ಒಂದರಲ್ಲಿ ಅಂತ್ಯವಾಗುತ್ತದೆ. ಅದೇ ಎಲ್ಲದಕ್ಕೂ ಕಾರಣ ಅದಕ್ಕೆ ಯಾವುದೇ ಕಾರಣವಿಲ್ಲ. ಎಲ್ಲದಕ್ಕೂ ಕಾರಣವಾಗಿ ತಾನು ಮಾತ್ರ ಕಾರಣವಲ್ಲದಿರುವ ಒಂದು ತತ್ವವಿರಬೇಕು. ಎಲ್ಲದಕ್ಕೂ ಕಾರಣ ಆ ಮೂಲದೇವರೇ ಅನ್ನುವದು. ಇದನ್ನು ಕಾಂಟ್ ತಿರಸ್ಕರಿಸುತ್ತಾನೆ. ಈ ರೀತಿಯಾಗಿ ಕಾರ್ಯ - ಕಾರಣ ಪರಂಪರೆಗೆ ಒಂದು ಮೂಲ ಕಾರಣವಿರಲೇ ಬೇಕೆಂಬುದು ತಪ್ಪು, ಯಾಕೆಂದರೆ ಆದಿ - ಅಂತ್ಯವಿಲ್ಲದ ಕಾರಣಪರಂಪರೆ ಇರಲು ಸಾಧ್ಯವಿದೆ. ಚಕ್ರಾಕಾರದ ಪರಂಪರೆಗೆ ಕೊನೆ ಮೊದಲಿಲ್ಲ. ತಾನು ಮಾತ್ರ ನಿಶ್ಚಲ ಸ್ಥಿತಿಯಲ್ಲಿದ್ದು ಇತರ ವಸ್ತುಗಳನ್ನು ಚಲಿಸುವಂತೆ ಮಾಡುವ ಕಾರಣವಿದೆ ಎಂದು ತಿಳಿಯುವುದೇ ಅಸಂಗತ ಉದ್ದೇಶವಾದವನ್ನು ಕೂಡಾ ತಿರಸ್ಕರಿಸುತ್ತಾನೆ. ಈ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತು ಒಂದು ಗುರಿಯಿದೆ, ತನ್ನ ಉದ್ದೇಶವಿದೆ, ಅರ್ಥವಿದೆ, - ಒಂದು ವಿಧವಾದ ಹೋಲಿಕೆಯಿದೆ, ಈ ರೀತಿಯ ಕ್ರಮಕ್ಕೆ ಪ್ರಜ್ಞಾವಂತ ಚಲನೆ ಕಾರಣ. ಆ ಪ್ರಜ್ಞಾವಂತ ಚೇತನ ದೇವರು ಇದನ್ನು ಕೂಡಾ ಕಾಂಟ್ ತಿರಸ್ಕರಿಸುತ್ತಾನೆ. ಇಲ್ಲಿ ಕಂಡುಬರುವ ತಾರತಮ್ಯ ಸ್ವಾಭಾವಿಕ ಏಕಿರಬಾರದು ಈ ವಾದ ದೇವರು ವಿಶ್ವದ ರಚನಾಕಾರನಾಗಿಬೇಕೆಂದು ಹೇಳುತ್ತದೆ. ಆದರೆ ಸೃಷ್ಟಿಕರ್ತನೆಂದು ಹೇಳುವದಿಲ್ಲವಲ್ಲ, ಅದರಂತೆ ದಯಾಮಯನಾದ ದೇವರು ಈ ವಿಶ್ವವನ್ನು ರಚಿಸಿದ್ದಾನೆ. ಆದರೆ ಇಲ್ಲೇಕೆ ದುಃಖವಿದೆ, ನೀತಿವಂತರಿಗೆ ಒಳ್ಳೆಯವರಿಗೆ ಏಕೆ ದುಃಖ ಬರುತ್ತದೆ. ದುಷ್ಟಶಕ್ತಿಗಳಿಗೆ ಸುಖ ಯಾಕೆ ಸಿಗುತ್ತದೆ. ಹಾಗಾದರೆ ಅವನು ದಯಾಮಯಿ ಅಲ್ಲ. ಇದಕ್ಕೆ ದೇವರ ಅಸ್ತಿತ್ವವನ್ನು ಬುದ್ಧಿಯಿಂದ ಸಿದ್ಧ - ಅಸಿದ್ಧಪಡಿಸಬಹುದು. ಆದರೆ ತನ್ನದೇ ಆದ ವಾದವನ್ನು ಮುಂದಿಟ್ಟಿದ್ದಾನೆ. ಅದು ನೈತಿಕವಾದ (Moral Argument) ಮಾನವನ ಬಗ್ಗೆ ದೇವರಲ್ಲಿ ನಂಬಿಕೆ ಇದ್ದರೆ ಅದಕ್ಕೆ ಯಾವುದೇ ವಾದಗಳು ಕಾರಣಗಳಲ್ಲ. ಅವನು ನೀತಿವಂತನಾಗಿರುವುದೇ ಕಾರಣ. ಮಾನವನಲ್ಲಿ ಕರ್ತವ್ಯ ನಿಯಮವಿದೆ. ಕರ್ತವ್ಯವನ್ನು ಮಾಡು ಆದರೆ ಫಲವನ್ನು ಅರಿಸಬೇಡ. ಇದಕ್ಕೇನೆ ಭಗವದ್ಗೀತೆಯಲ್ಲಿ ಸಕಾಮ ಭಕ್ತಿ, ನಿಷ್ಕಾಮಭಕ್ತಿ ಹೇಳಿ, ಕರ್ತವ್ಯವನ್ನು ಕೇವಲ ಕರ್ತವ್ಯಕ್ಕಾಗಿ ಮಾಡುವದನ್ನು ಕಾಂಟ್ ನೆನಪಿಗೆ ತರುತ್ತಾನೆ. ಕರ್ತವ್ಯವನ್ನು ಕರ್ತವ್ಯಕ್ಕಾಗಿ ಮಾಡುವದರಿಂದ ಅವನು ಸ್ವತಂತ್ರ, ನೀತಿ ಅಭೌತಿಕ ಶರೀರದೊಡನೆ ನಾಶವಿಲ್ಲದೇ ಪೂರ್ಣತ್ವ ಹೊಂದುವ ಅವಕಾಶವಿದೆ. ಇಲ್ಲಿ ವಿಶ್ವ ದೇವರ ಆಡಳಿತಕ್ಕೆ ಒಳಪಟ್ಟಿರಬೇಕು. ಇಲ್ಲದೇ ಹೋದರೆ ಕರ್ತವ್ಯ ಜ್ಞಾನಕ್ಕೆ ತಳಹದಿಯಾಗಿ ನಿಲ್ಲಲಾರದು ವಿಶ್ವದ ನೀತಿಪಾಲನಾಗಿ ದೇವರು ಅಸ್ತಿತ್ವದಲ್ಲಿರಬೇಕು. ಇವನ ಪ್ರಕಾರ ಆಧ್ಯಾತ್ಮಶಾಸ್ತ್ರ "ಶಾಸ್ತ್ರ"ವಲ್ಲ. ಏಕೆಂದರೆ ಅದರ ವಸ್ತು ವಿಷಯ ದೇವರು, ಆತ್ಮ, ಜಗತ್ತು. ಇವುಗಳನ್ನು ಕುರಿತು ಇಂದ್ರಿಯ ಸಂವೇದನೆಯಿಲ್ಲ. ಆದ್ದರಿಂದ ಅವುಗಳನ್ನು ಕುರಿತು ಜ್ಞಾನ ಸಾಧ್ಯವಿಲ್ಲ. ಆದ್ದರಿಂದ ಅದು ಶಾಸ್ತ್ರವಲ್ಲ ಆದರೆ ಅದರಲ್ಲಿ ನಂಬಿಕೆಯನ್ನು ಇಡಬಹುದು, ಯಾವುದು ಬೋಜನವನ್ನು ಒಳ್ಳೆಯದನ್ನುಂಟುಮಾಡುತ್ತಿದೆಯೋ ಅದು ಪರಮಶ್ರೇಯವಲ್ಲ, ಅದರಂತೆ ಮಾನವರ ಆಸೆ-ಆಮಿಶೆಗಳನ್ನು ಪೂರೈಸುತ್ತದೆಯೋ ಅದು ಪರಮ ಶ್ರೇಯವಲ್ಲ. ಅಂತಹ ಸಾಕ್ಷಿಗನುಗುಣವಾಗಿ ಹಾಗೂ ನಿರಪೇಕ್ಷೆಗನು ಗುಣವಾಗಿದೆಯೋ ಅದೇ ಪರಮಶ್ರೇಯ. ನೀತಿಗೋಸ್ಕರವಾಗಿ ನೀತಿವಂತನಾಗಿರಬೇಕು. ಕಾಂಟ್ ಮತ್ತು

ಶಂಕರರೊಡನೆ ಹೋಲಿಕೆ ಇದ್ದಂತೆ ವ್ಯತ್ಯಾಸವು ಕೂಡಾ ಇದೆ. ಅಂತಿಮ ಸತ್ಯ ಬ್ರಹ್ಮವೆಂದು ಶಂಕರರು ಹೇಳಿದರೆ, ಕಾಂಟ್ ಅದು ಅನುಭವಾತೀತ ಎಂದು ಹೇಳುವನು. ಅನುಭವಾತೀತ ಪ್ರಪಂಚವನ್ನು ಇಂದ್ರಿಯ ಲೋಕವೆಂದು ಕಾಂಟ್ ಹೇಳಿದರೆ, ಶಂಕರರು ಇದಕ್ಕೆ ಮಾಯಾ ಎನ್ನುವರು. ಶುದ್ಧ ಬುದ್ಧಿಯನ್ನು ಸಹಿತ ಅಂತಿಮ ಸತ್ಯವನ್ನು ಕಂಡು ಹಿಡಿಯಲಾರರು ಇಬ್ಬರಂತೆ ಇಲ್ಲಿ ಹೋಲಿಕೆಯಿದೆ.

ಇವರಿಬ್ಬರ ನಡುವೆ ಬಹುಮುಖ್ಯ ವ್ಯತ್ಯಾಸವುಂಟು, ಕಾಂಟ್‌ನ ಪ್ರಕಾರ ಅದು ಅನುಭವಾತೀತ, ಅದನ್ನು ತಿಳಿಯಲಾಗುವದಿಲ್ಲ. ಆದರೆ ಅದನ್ನು ಕುರಿತು ಚಿಂತಸಬಹುದು, ನಂಬಿಕೆಯಿಡಬಹುದು. ಆದರೆ ಸಾಕ್ಷಾತ್ಕರಿಸುವುದಂತೂ ಹಸಿ ಸುಳ್ಳು ಎನ್ನುವನು, ಶಂಕರರು ಇದನ್ನು ತಿರಸ್ಕರಿಸುತ್ತಾರೆ. ಶುದ್ಧ - ಬುದ್ಧಿ ಅಂತಿಮ ಸತ್ಯವನ್ನು ತಿಳಿಯುವಲ್ಲಿ ಸೋತರು ಸಹಿತ ಅಪರೋಕ್ಷ ಜ್ಞಾತೃ - ಜ್ಞೇಂಗುಗಳ ಐಕ್ಯವಾದ ಪ್ರತಿಭಾನದಿಂದ (Entitulron) ಬ್ರಹ್ಮಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳಬಹುದು[*] ಶಂಕರರಂತೆ ಅಂತಿಮ ಸತ್ಯ - ಕಾಂಟ್‌ನಂತೆ ಅನೇಕ ಇಲ್ಲಿ ನಂಬಿಕೆಗೆ ಅರ್ಹ, ನಂಬಿಕೆ ಮತ್ತು ಜ್ಞಾನವನ್ನು ಇವೆರಡನ್ನೆ ವಿಭಾಗಿಸಿರುವನು. ನಂಬಿಕೆ - ತಿಳುವಳಿಕೆ ಮೇಲೆ ನಿಂತಿದೆ. ಇಲ್ಲಿ ಸತ್ಯ ಬೇರೆ, ತಿಳುವಳಿಕೆ ಬೇರೆ ಎಂದು ತತ್ವಶಾಸ್ತ್ರವನ್ನು ಗೊಂದಲದಲ್ಲಿ ಮುಳುಗಿಸಿದ್ದಾನೆ. ಅದರಂತೆ ಕಾರ್ಯ - ಕಾರಣ ಸಂಬಂಧ ಇಂದ್ರಿಯ ಲೋಕಕ್ಕೆ ಮಾತ್ರ ಸೀಮಿತ. ಇಂದ್ರಿಯಾತೀತ ಲೋಕಕ್ಕೆ ಸಂಬಂಧವಿಲ್ಲವೆಂದು ಹೇಳಿ, ಅನುಭವ ಲೋಕದ ಮೂಲಕಾರಣವೇ ಇಂದ್ರಿಯಾಲೋಕ ಎಂದು ಹೇಳುವದರಲ್ಲಿ ಸ್ವವಿರೋಧತೆಗೆ ಅನುವು ಮಾಡಿಕೊಟ್ಟಂತಾಗಿದೆ. ಇಂದ್ರಿಯಾನುಭವವಾದ ಮತ್ತು ಬುದ್ಧ್ಯಾವಾದಗಳನ್ನು ಕುರಿತು ತನ್ನದೇ ಆದ ವಿಮರ್ಶಾತ್ಮಕ ಸಿದ್ಧಾಂತವನ್ನು ಕಟ್ಟಿ ಬೆಳೆಸಿದನು. ಇದನ್ನು ನಾವು ಪ್ರಭು ದರ್ಶನದಲ್ಲಿಯೂ ಕೂಡಾ ಇವೆರಡರ ಸಮನ್ವಯವನ್ನು ಕಾಣುತ್ತೇವೆ. ಬಹುತೇಕ ಇಲ್ಲಿ ಪ್ರತಿಭಾನ ಅನ್ನುವದು ಅನುಭಾವ ಶಬ್ದಕ್ಕೆ ಹೊಂದಿಕೆಯಾಗಿದೆ. ಎರಡರ ಅರ್ಥವೂ ಕೂಡಾ ಒಂದೇ ಎನ್ನಬಹುದು. ಶಂಕರರ ಅಭಿಪ್ರಾಯ ಹಾಗೂ ಪ್ರಭುವಿನ ಅಭಿಪ್ರಾಯ ಇವನ ವಿಮರ್ಶೆಗೆ ಹೊಂದುತ್ತದೆ.

**ಹೆಗಲ್**

ಇವನು ಆಧುನಿಕ ಪಾಶ್ಚಾತ್ಯ ಚಿಂತಕರಲ್ಲಿ ಕೊನೆಯವನು. ಇವನ ನಂತರ ಸಮಕಾಲೀನ ಪಾಶ್ಚಾತ್ಯ ತತ್ವಶಾಸ್ತ್ರ ಪ್ರಾರಂಭವಾಗುವದು. ಇವನಿಂದ ಪ್ರಭಾವಿತರಾದವರು ಬ್ರಾಡ್ಲೆ, ಬಿ.ಭೊಸಾಂಕೆ, ಟಿ.ಎಚ್.ಗ್ರೀನ್, ಅಮೇರಿಕಾದ ಜೋಷೆ ಯಾರಾಯ್ಸ, ಬೆನೆಡಿಟ್ಟೋ ಕ್ರೋಟೆ ಇಲ್ಲಿ ಷಿಲೀಂಗ್ ಅನ್ನುವ ಒಬ್ಬ ಕಾಂಟ್‌ನ ಅನುಯಾಯಿ, ದೃಶ್ಯ, ಆತ್ಮ, ಪ್ರಕೃತಿ, ಅದೃಶ್ಯ ಪ್ರಕೃತಿಯೇ ಆತ್ಮ ಅನ್ನುವನು. ಮಾನವ ಆತ್ಮ ಅದು ಪ್ರತ್ಯೇಕ ಅಸ್ತಿತ್ವ ಹೊಂದಿಲ್ಲ. ಅದು ಮಹಾ ಚೈತನ್ಯದ ಪ್ರಕೂಪ ಅಷ್ಟೇ. ಹೆಗಲ್ ಅನುಭವಗಳನ್ನು ವಿಮರ್ಶಿಸಿ ಎಲ್ಲವನ್ನು ಒಳಗೊಂಡು ವಿವರಿಸುವ ತತ್ವವನ್ನು ಕಂಡುಹಿಡಿಯುವದು, ಅದರ ಆಧಾರದಿಂದ ಜ್ಞಾನವನ್ನು ಬೆಳೆಸುವದು. ಅಂತಿಮ ಸತ್ಯ ಬುದ್ಧಿಗನುಸಾರವಿದೆ, ಇಲ್ಲಿ ಸತ್ಯ ಬುದ್ಧಿಗಮ್ಯ. ಅರ್ಥಾತ 'ಡೈಲೆಕ್ಟಿಕಲ್ ಮಾರ್ಗ' ಇಲ್ಲಿ ಸತ್ಯ ಬೇರೆ ಅಲ್ಲ ಜ್ಞಾನ ಬೇರೆಯಲ್ಲ. ಜ್ಞಾನ ಅಥವಾ ಬುದ್ಧಿಕ್ರಿಯೆಗನುಗುಣವಾಗಿರುವುದೇ ಸತ್ಯ. ಇವನ ಚಿಂತನೆ ''ಶುದ್ಧಬುದ್ಧಿಯದರ್ಶನ'' ಶುದ್ಧ ಭಾವನೆಗಳ ವ್ಯವಸ್ಥಾಬದ್ಧ ಜೋಡಣೆಯಿದೆ. ಬುದ್ಧಿ = ಶುದ್ಧ ಭಾವನೆಗಳ ವ್ಯವಸ್ಥಾಬದ್ಧಜೋಡಣೆ, ಅಂತಿಮ ಸತ್ಯಕ್ಕೆ ಪರಮ ಚೈತನ್ಯ (Absolute) ಅನ್ನುವನು.

Sprit = ಅಂತಿಮ ಸತ್ಯ = ಪರಮಚೈತನ್ಯ = Mind = ಇದು ಬುದ್ಧಿಗ್ರಾಹ್ಯ ಏಕ - ಅನೇಕ, ಜ್ಞಾತೃ, ಇವೆರಡರ ಬೇಧವಿದ್ದೆ ಇದೆ. ತತ್ವಶಾಸ್ತ್ರ ಯಾವಾಗಲೂ ಮೂರ್ತ ಚಿಂತನೆಯನ್ನು ಕುರಿತದ್ದು, ಅಮೂರ್ತ ಚಿಂತನೆ ಕುರಿತದ್ದಲ್ಲ. ಅದು ಭಾವರೂಪವಾದದ್ದು ಸರಿಯಾಗಿ ಭಾವಿಸಿದರೆ ದೊರೆಯುವದು ಭಾವನ, ಸರಿಯಾದ ಭಾವನೆ, ಅನುಭಾವ, ಪ್ರತಿಭಾವ - ಇವುಗಳ ವಿಮರ್ಶೆಯನ್ನು ಮಾಡುವದು. ಸರಿಯಾದ ಭಾವನೆಗಳ ಸಂಘಾತವೇ ಬುದ್ಧಿ ಎನ್ನುವನು (ಸರಿಯಾದ ಭಾವನೆಗಳ ಸಂಘಾತ = ಬುದ್ಧಿ). ಪ್ರತಿಭಾನ ಅದು ಅಪರೋಕ್ಷ, ಜ್ಞಾತೃ - ಜ್ಞೇಯಗಳ ಬೇಧವಿಲ್ಲ ತಾನೇ ಅದು, ಅದುತಾನೇ, ತಾನೇ ತಾನಾದ ಸ್ಥಿತಿ ಅಲ್ಲಿ ಹೊಳೆದದ್ದು ಅಂತಃಚಕ್ಷುವಿಗೆ ಗೋಚರವಾದದ್ದು ಅದಕ್ಕೆ ಅನುಭಾವವೆಂತಲೂ ಕರೆಯಬಹುದು. ಆ ಚೈತನ್ಯವನ್ನು ಸಾಕ್ಷಾತ್ಕಾರಗೊಳಿಸುವದೇ ಕೊನೆಯ ಕೆಲಸ ಅದೇ ಆತ್ಮ ಸಾಕ್ಷಾತ್ಕಾರ, ದೇವತಾ ಸಾಕ್ಷಾತ್ಕಾರವೆಂದು ಕರೆಯುವನು.

ದರ್ಶನ - Percept, ಭಾವನೆ - Notion, ಅನುಭವ - Sense- Exprence, ಪ್ರತ್ಯಕ್ಷ - Sense Perception, ಸಂವೇದನೆ - Sensetion, ಅನುಭಾವ - Mystic Experience- ಯೋಗಪ್ರತ್ಯಕ್ಷ - Misticism

Divine Revelation- ಪ್ರತಿಭಾನ - Intution (ಅಂತರ್ ಭೋದೆ) - ದಿವ್ಯಭೋಧೆ

ಅನುಭೂತಿ ಚಿತ್ ವೃತ್ತಿ Flleling ಮನಸ್ಸಿನ ಹೊಯ್ದಾಟದ ಪ್ರವೃತ್ತಿ

ಅನುಭಾವಿ - Mustic (ಯೋಗಿ), ಗಾಢಭಾವನೆ - Impressen, ಕಲ್ಪನೆ - Idea, ಹೀಗೆ ಒಂದಕ್ಕೊಂದು, ಸಮೀಪ ಅರ್ಥವಿರುವ ಶಬ್ದಗಳನ್ನು ಜೋಡಿಸಲಾಗಿದೆ. ಇವೆಲ್ಲವುಗಳು 'ಅನುಭಾವದ' ಸುತ್ತ ಮುತ್ತಲಿನ ರೂಪಾತ್ಮಕ ಶಬ್ದಗಳು. ಅನುಭಾವದ ಪ್ರಾರಂಭಕ್ಕೆ ಪ್ರತಿಭಾನವೆಂದು ಕರೆಯಬಹುದು.

೧. Dialectic Method- ೧. ಸಮರ್ಥಿಸುವ ವಿಷಯ ಅಥವಾ ಪ್ರಮೇಯ (Thesis)
೨. ಪ್ರತಿಬಂಧ ಅಥವಾ ವಿರೋಧ (Ant - Thesis)
೩. ಸಮನ್ವಯ (Synthesis)

ಹೀಗೆ Dialectic ವಿಧಾನ ಮೂರುಭಾಗಗಳನ್ನು ಹೊಂದಿದೆ. Dialectical Method = Thesis + Ant - Thisis + Synthesis ಈ ತತ್ವ ಚಿಂತನೆ ಒಂದು ತಾರ್ಕಿಕ ವಿಧಾನವೆನ್ನಬಹುದು. ಒಂದು ಮೂಲ ಕಲ್ಪನೆಯಿಂದ ಚಿಂತನೆಯನ್ನು ಪ್ರಾರಂಭಿಸುತ್ತೇವೆ ಎಂದು ಇಟ್ಟುಕೊಂಡಾಗ ಅದು ಪ್ರಮೇಯ, ಅದರಂತೆ ನಾವು ಮೂಲ ಕಲ್ಪನೆಯಲ್ಲಿದ್ದಾಗ ಅದರ ವಿರೋಧ ಕಲ್ಪನೆಯೂ ಇರುವದು. ಪ್ರತಿಕಲ್ಪನೆಗೂ ಅದರ ವಿರೋಧಿ ಕಲ್ಪನೆ ಇದ್ದೇ ಇರುವದು. ಅದಕ್ಕೆ 'ಪ್ರತಿಬಂಧ' ಅನ್ನುವನು. ಮೊದಲನೆಯದ್ದು 'ದೃಢ' ಹೇಳಿಕೆ, ಎರಡನೆಯದು 'ಋಣಾತ್ಮಕ' ಹೇಳಿಕೆ, ಋಣಾತ್ಮಕ ಕಲ್ಪನೆ ತಲುಪಿದಾಗ ನಾವು ಮಾಡುವ ಚಿಂತನೆ ಬಹಳ ವಿಶಾಲ ಏಕೆಂದರೆ ಅದು ನಮ್ಮ ಮೊದಲಿನ ಕಲ್ಪನೆಯಿಲ್ಲದ್ದು. ಇಲ್ಲದರ ಬಗ್ಗೆ ಇಲ್ಲವೆನ್ನುವದೆಂದರೆ - All Negation is Detemastion. ಅಂದರೆ ನಿಷೇಧಾತ್ಮಕದ ನಿಷೇಧಾತ್ಮಕ ಅದು ಅದರ ವಿವರಣೆಯೇ ಆಗಿದೆ. ದೃಢ ಹೇಳಿಕೆ (Affiramation) ಮತ್ತು ಅಲ್ಲಗಳೆಯುವಿಕೆ (Negestion) ಇವೆರಡರ ನಡುವೆ ವಿರೋಧವಾದಾಗ ಇವೆರಡನ್ನು ಬಿಟ್ಟು ಮತ್ತೊಂದು ಕಲ್ಪನೆ ಅದು ಎರಡನ್ನು ಒಳಗೊಂಡಿದ್ದು ಸಮನ್ವಯ ಕಲ್ಪನೆ.

ಹೆಗಲ್ ಸತ್ಯದ ಸ್ವರೂಪ ವಿವರಣೆಯನ್ನು ಒಂದು ಮರಕ್ಕೆ ಹೋಲಿಸಿದ್ದಾನೆ. ಬೇರಿನಿಂದ ಹಿಡಿದು ಹೂವಿನವರೆಗೆ ಮರ ಒಂದೇ ಆದರೂ ವ್ಯವಹಾರ ಸೌಕರ್ಯಕ್ಕೆ ಮರದಲ್ಲಿ ಬೇರು ಕೊಂಬೆ, ಎಲೆ, ಹೂ,

ಹಣ್ಣು ಎಂದು ವಿಭಾಗಿಸಲಾಗಿದೆ. ಆದರೆ ಇವೆಲ್ಲವೂ ಕೂಡಾ ಒಂದೇ ತಾಯಿ ಬೇರಿನಿಂದ ಹೊರ ಹೊರಟವುಗಳು. ಅದರಂತೆ ಅಂತಿಮ ಸತ್ಯವೆಂದರೆ ಪರಮಚೈತನ್ಯವೇ ಪ್ರಕೃತಿ, ವ್ಯಕ್ತಿ, ಜೀವಿಗಳೆಲ್ಲಾ ಅದರ ರೆಂಬೆ ಕೊಂಬೆಗಳು ಅವು ಆ ಪರಮಚೈತನ್ಯದಿಂದ ಉದ್ಭವಗೊಂಡು ಅಂತ್ಯದಲ್ಲಿ ಪರಮಚೈತನ್ಯವನ್ನೇ ಹೊಂದುತ್ತವೆಂದು ಹೆಗಲ್‌ನ ಪ್ರತಿಪಾದನೆಯಾಗಿದೆ. ಇಂದ್ರಿಯಜ್ಞಾನದಲ್ಲಿ ಸತ್ಯವಿದೆ. ಆದರೆ ಅದು ಕಡಿಮೆ ಪ್ರಮಾಣದಲ್ಲಿ ಇದೆ. ಭಾವನೆಯಲ್ಲಿ ಕೂಡಾ ಅಸತ್ಯವಿದೆ. ಸತ್ಯದ ಅಂಶ ಅಲ್ಲಿ ಇನ್ನೂ ಹೆಚ್ಚಾಗಿದೆ. ಸತ್ಯದ ಅಂಶ ಎಲ್ಲದಕ್ಕಿಂತ ಹೆಚ್ಚಿಗೆ ಅಂದರೆ ಪರಮಚೈತನ್ಯದಲ್ಲಿದೆ. ಆ ಪರಮ ಚೈತನ್ಯಗಳ ಭಾಗಗಳೇ ವ್ಯಕ್ತಿ ಮತ್ತು ಪ್ರಕೃತಿ.

'ಇಲ್ಲಿ ಸತ್ಯಕ್ಕೂ ಜ್ಞಾನಕ್ಕೂ ಯಾವುದೇ ಅಂತರವಿಲ್ಲ, ತಿಳಿಯುವ ಮಾನವ ಆತ್ಮ ಸ್ವರೂಪಿ, ಪರಮ ಚೈತನ್ಯದ ಸ್ವರೂಪ. ಪರಮಚೈತನ್ಯವು ಇದು ನಿಶ್ಚಲ ತತ್ವವಲ್ಲ. ಅದು ಸ್ವಾತ್ಮ ಪ್ರಜ್ಞೆಯ ತಡೆರಹಿತ ಬೆಳವಣಿಗೆಯ ನಿರಂತರ ಕ್ರಿಯೆ. ಈ ಸ್ವಾತ್ಮ ಪರಿಪೂರ್ಣತೆಯೇ, ಸ್ವಾತ್ಮ ಜ್ಞಾನವೇ ಅದರ ಅಂತಿಮ ಗುರಿಯಾಗುವದು.'[೪೦]

ಶಂಕರರ ಅದ್ವೈತಕ್ಕೂ ಹೆಗಲ್‌ನ ಚಿಂತನೆಗೂ ಸಾಮರಸ್ಯವಿದ್ದಂತೆ ವ್ಯತ್ಯಾಸವಿದೆ. ಹೆಗಲ್‌ನಂತೆ ಸತ್ಯವು ಏಕವು ಹೌದು ಅನೇಕವೂ ಹೌದು. ಪ್ರಾರಂಭದ ಅರ್ಥದಲ್ಲಿ ಅನೇಕ ಅಂತಿಮ ಅರ್ಥದಲ್ಲಿ ಏಕ. ಈ ವೈವಿಧ್ಯತೆ ಅದರ ಲೀಲಾ ವಿಲಾಸ ಈ ಅರ್ಥದಲ್ಲಿ ರಾಮಾನುಜರ ವಿಶಿಷ್ಟಾದ್ವೈತ ದರ್ಶನ, ರವೀಂದ್ರ, ನಿಂಬಾರ್ಕರ ದ್ವೈತಾದ್ವೈತದರ್ಶನಗಳು ಹಾಗೂ ಅರವಿಂದ ದರ್ಶನಗಳಿಗೆ ತೀರ ಹತ್ತಿರವಾಗಿವೆ. ಶಂಕರರಲ್ಲಿ ಸತ್ಯ ಸಂಬಂಧ ರಹಿತ ಇಲ್ಲಿ ಸತ್ಯಸಂಬಂಧ ಸಹಿತ, ಶಂಕರರಲ್ಲಿ ಇರುವ ಏಕ ಮೇವ ದ್ವಿತೀಯ ಬ್ರಹ್ಮವನ್ನು ಬಿಟ್ಟು ಹೊರಗೆ ಸತ್ಯವಾದದು ಯಾವುದೂ ಇಲ್ಲ, 'ಬ್ರಹ್ಮಸತ್ಯ ಜಗತ್ ಮಿಥ್ಯೇ' ಅಲ್ಲಿ ನಿಸ್ ಪ್ರಪಂಚ ಬ್ರಹ್ಮ. ಹೆಗಲ್‌ನಲ್ಲಿ ಸತ್ ಪ್ರಪಂಚ ಬ್ರಹ್ಮ, ಶಂಕರರಲ್ಲಿ ಜಗತ್ತು ಮಾಯೆ, ತೋರಿಕೆ ಬ್ರಹ್ಮನಿಂದ ಬೇರೆ ಅದಾವುದು ಇಲ್ಲ. ಸತ್ಯದ ಪ್ರಪಂಚ, ಅದು ಪರಮ ಚೈತನ್ಯ ತಾನೇ ಲೀಲೆಗಾಗಿ ಈ ಪ್ರಪಂಚದ ರೂಪಾಗಿದೆ. ಈ ಹೆಗಲ್ ದರ್ಶನ, 'ಲೀಲೆಯಾದರೆ ಉಮಾಪತಿ ಲೀಲೆ ತಪ್ಪಿದರೆ ಸ್ವಯಂಭು' ಅನ್ನುವ ಪ್ರಭುದರ್ಶನಕ್ಕೆ ಹೆಗಲ್ ತತ್ವ ಹೊಂದಿಕೊಂಡಂತಿದೆ. ಸೃಷ್ಟಿ ಪ್ರಪಂಚದ ಕಾರ್ಯದಲ್ಲಿ ಅದ್ವೈತದಲ್ಲಿ-ಬ್ರಹ್ಮ ಅಚಲ, ಅಪರಿಣಾಮಿ. ಹೆಗಲ್‌ನಲ್ಲಿ ಚಲನಾತ್ಮಕ ಪರಿಪೂರ್ಣತೆಯ ಸಲುವಾಗಿ ಪರಿಣಾಮ ಹೊಂದುವನು. ಇಲ್ಲಿ ಪ್ರಭುವಿನ ಹಾಗೂ ಹೆಗಲ್‌ನ ತತ್ವ ಒಂದೇ ಅರ್ಥವನ್ನು ಹೊಂದಿವೆ. ಹೆಗಲ್‌ನಲ್ಲಿ ಪರಸ್ಪರ ಸಂಬಂಧವಾದ ಚೈತನ್ಯದ ಸಮಗ್ರ ತಿಳುವಳಿಕೆಯೇ ಮೋಕ್ಷವಾದರೆ, ಶಂಕರರಲ್ಲಿ ಪ್ರಪಂಚರಹಿತ ತಾನೇ ತಾನಾದ ಬ್ರಹ್ಮಾವಸ್ಥೆಯೇ ಮೋಕ್ಷ. ಇದು ಪ್ರಭುವಿನಲ್ಲಿ ಕೂಡಾ ಕಾಣಬಹುದು. ತನ್ನನ್ನು ತಾನು ತಿಳಿಯುವದೆಂದರೆ ಅದೇ ಮೋಕ್ಷಸ್ಥಿತಿ, ಅಥವಾ ಸಾಮರಸ್ಯ ಸ್ಥಿತಿ. ಆನಂದ ಸ್ಥಿತಿಯನ್ನು ಮುಟ್ಟಿದಾಗ ಪರಮ ಚೈತನ್ಯದ ಅನುಭವ ತನ್ನಿಂದತಾನೆ ಆಗುತ್ತದೆ. ಮೋಕ್ಷದ ಅರ್ಥದಲ್ಲಿ ಹೆಗಲ್ ಮತ್ತು ಶಂಕರರ ರೂಪಗಳು ಎರಡು ಕೂಡಿಕೊಂಡು ಪ್ರಭು ದರ್ಶನವನ್ನು ಹೇಳಿದಂತಿದೆ. ಇಬ್ಬರಲ್ಲಿಯೂ ಮಾನವರ ಆತ್ಮ ಬ್ರಹ್ಮ ಸ್ವರೂಪವಾಗಿದೆ. ಬ್ರಹ್ಮ ಸ್ವರೂಪಿ ಮಾನವನ ಆತ್ಮವೆಂದು ಶಂಕರ, ಹೆಗಲ್, ಪ್ರಭು ಹೇಳುತ್ತಾರೆ. ಹೆಗಲ್‌ನ ದೃಷ್ಟಿ ತಾರ್ಕಿಕವಾದುದು. ಆದರೆ ಅರವಿಂದರದು ಆಧ್ಯಾತ್ಮಿಕವಾದುದು. ಹೆಗಲ್‌ನಲ್ಲಿ ಅನುಭವವೆಲ್ಲವನ್ನು ವಿಮರ್ಶೆ ಮಾಡಿ ಅಂತಿಮ

ಅರ್ಥವಲ್ಲಿ ಸ್ವಲ್ಪ ಸೋತಂತೆ ಕಂಡುಬರುವದು. ಇಂದ್ರಿಯವಾದ + ಬೌದ್ಧಿಕವಾದ ಇವೆರಡನ್ನು ವಿಮರ್ಶೆ ಮಾಡುವಾಗ ಈತ ಬೌದ್ಧಿಕ ತರ್ಕಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತಾನೆ. ಮತ್ತೊಂದು ಸಾರಿ ಮತಧರ್ಮದಲ್ಲಿಯ ಸೌಂದರ್ಯಕ್ಕೆ ಒತ್ತು ಕೊಡುವನು.

Hegul Philosphy = Empiricism + Rationolism + Butifuliesm Religiosnes + Still Mysticism ಆಧುನಿಕ ತತ್ವಶಾಸ್ತ್ರ ಹೆಗಲ್‌ನ ಪಾಶ್ಚಾತ್ಯ ತತ್ವಶಾಸ್ತ್ರದೊಂದಿಗೆ ಪ್ರಾರಂಭವಾಯಿತೆನ್ನಬಹುದು. ಪರಮ ಚೈತನ್ಯದ ಸಮಗ್ರ ಅರಿವೇ ಮೋಕ್ಷ ಅನ್ನುವಲ್ಲಿ 'ಒಂದೊಂದು ಜ್ಞಾನದಲ್ಲಿ ಸತ್ಯ ಒಂದೊಂದು ಪ್ರಮಾಣದಲ್ಲಿರುತ್ತದೆ. ಇಂದ್ರಿಯ ಜ್ಞಾನದಲ್ಲಿ ಸತ್ಯಾಂಶವಿದೆ. ಆದರೆ ಅದು ಕಡಿಮೆ. ಭಾವನೆಯಲ್ಲಿ ಅದರ ಪ್ರಮಾಣ ಹೆಚ್ಚು ಪರಮಚೈತನ್ಯದಲ್ಲಿ ಅದು ಪೂರ್ಣವಾಗಿದೆ. ಭಾವನೆ ಸತ್ಯವನ್ನು ಅರಿಯುವ ಸಂವೇದನೆ, ಸಂವೇದನೆ ಇಂದ್ರಿಯಾಂತ್ಯದಲ್ಲಿ ಸಿಗುವ ಸ್ಥಿತಿ.

Hegals Philosophy is such critical Philosophy which invalves Emprecism + Ratinalism + But fuliscism + Religousness + Still mysticism and also Kants moral Argument, Thus Derivesen is Specielity.

ಅನುಭಾವದ ಬಗ್ಗೆ ಒಂದಿಷ್ಟು ಮಾತುಗಳನ್ನು ಹೇಳಲಾಗಿದೆ. ಪಾಶ್ಚಾತ್ಯ ಮತ್ತು ಪೌರಾತ್ಯಗಳನ್ನು ತುಲನಾತ್ಮಕವಾಗಿ ತೆಗೆದುಕೊಂಡು ಅಂತಿಮಾರ್ಥದಲ್ಲಿ ಆಂತರಿಕ ಅನುಭಾವದ ಬಗ್ಗೆ ಹ್ಯಾಗೆ ಹೊಂದಿಕೆಯಾಗಿವೆ ಎಂಬುದನ್ನು ನೋಡುವದಾಗಿದೆ. ಪ್ರತಿಭಾನ, ಭಾವ, ಅನುಭಾವ, ಕಲ್ಪನೆ ಮುಂತಾದವುಗಳ ಬಗ್ಗೆ ಪಾಶ್ಚಾತ್ಯ ಪೌರಾತ್ಯ ವ್ಯಾಖ್ಯಾನಗಳನ್ನು ಒಟ್ಟಾರೆ ಹೇಳಲಾಗಿದೆ.

ಜಗತ್ತಿನಲ್ಲಿ ಮೈದಾಳಿರುವ ದೈವಿಕ ನಿಯಮಗಳಿಂದ ಶ್ರದ್ಧಾಭಕ್ತಿಯಿಂದ ಮನನಮಾಡಿ ಅದನ್ನು ನಿತ್ಯ ಜೀವನದ ಆಧಾರ ಸೂತ್ರಗಳನ್ನಾಗಿ ಮಾಡಿಕೊಂಡು ತನ್ಮೂಲಕ ಅನುಭವಿಸುವ, ದಿವ್ಯಾನಂದದಲ್ಲಿ ಮುಳುಗಿ ತನ್ನ ಅಲ್ಪತನವನ್ನು ಮರೆತು ಪರಮಾತ್ಮ ಸಾಯುಜ್ಯವನ್ನು ಪಡೆಯುವದೇ ಅನುಭಾವ. ಶುದ್ಧ ಆಧ್ಯಾತ್ಮಿಕ ಚೇತನಶಾಸ್ತ್ರವೇ ಅನುಭಾವ.[೪೧] (Under-Hill ಅಂಡರ್ ಹಿಲ್).

ಯಾವುದೇ ಧರ್ಮದ ದೇವರಾಗಿರಲಿ, ವಿಶ್ವಾತ್ಮಕವಾದ ವಿಶ್ವಾತ್ಮಕನಾಗಿರಲೀ ಅಥವಾ ತತ್ವಶಾಸ್ತ್ರದ ಪರಬ್ರಹ್ಮನಾಗಿರಲಿ ಅಂತಹ ದೇವರೊಡನೆ ಭಾವಾತ್ಮಕವಾದ ಐಕ್ಯವೇ 'ಅನುಭಾವ'[೪೨] (ಅಂಡರ್ ಹಿಲ್). ಸಾಧು ಸಂತರ, ಅನುಭಾವಿಗಳ ಆಧ್ಯಾತ್ಮಿಕ ಗಣಿಯೇ ಅನುಭಾವ.

Human reason has this peculiar fate that in one species of its knowledge it is burdened by questions. Which as prescribed by the very nature of reason itself, it is not able to ignore, but which as transcending all its powers it is also not able to answer.[೪೩]

**1. Bertrand Russel**

The possibility of this universal love and joy in all that exists is of supreme importance for the conduct and happiness of life and gives inestimable value to the mystic emotion, apart from any creeds which may be built upon it.

It man's highest activity is to love god, mysticism may have a value of its own entirely idependent of any usefulness it is found to have in this world.

**2. Encyclopedia of Britanica**

If (mysticism) appears in connection with the endeavour of human mind to grasp the divine if sence or the ultimate vealoty of things and to enjoy the blessendness of actual communication with the highest the first. The first of the philosophy side of mysticism. The second its religious side. The first is theoritical as speculty the second practical.

ಅದರಂತೆಯೇ ಎರಡು ರೀತಿಯಿಂದ ವಿವರಿಸಲಾಗಿದೆ. ತಾತ್ವಿಕ ಜಿಜ್ಞಾಸೆ ಎರಡನೆಯದು ಧಾರ್ಮಿಕ ಸತ್ಯ ಸಾಕ್ಷಾತ್ಕಾರದ ಅನುಭವ ಒಂದೇ ಮಾರ್ಗಕ್ಕೆ ಅನ್ವಯಿಸುವದರಲ್ಲಿ ಯಾವುದೇ ಮಾರ್ಗಗಳಿದ್ದರೂ ಸತ್ಯವನ್ನು ಕಂಡಿರುವ ಬೇರೆ ಬೇರೆ ಮಾರ್ಗಗಳ ಸಮೂಹ ಇದನ್ನೇ[೪೪] Encyclopadia Mysticism is not a name Aplicable ot any perticuler system, it may be the ou grouth of many Differing modus of thought and felling - ಮಾನವ ಆ ಜ್ಞಾನವನ್ನು ಪಡೆಯಲು ಹಲವು ದಾರಿಗಳನ್ನು ಹುಡುಕಲಿಕ್ಕೆ ಪ್ರಯತ್ನಿಸಿದಾಗ ಅವುಗಳಲ್ಲಿ ಎರಡು ನಿಖರವಾದ ದಾರಿಗಳನ್ನು ಕಂಡುಕೊಂಡ. ಒಂದು ಜ್ಞಾನವನ್ನು ಕಂಡುಹಿಡಿಯಲಿಕ್ಕೆ ಕೇವಲ ಬುದ್ಧಿ ಒಂದೇ ಸಾಕು. ಅರ್ಥಾರ್ಥ ತರ್ಕಕ್ಕೆ ಮಹತ್ವ ಅದರಿಂದ ಜ್ಞಾನವನ್ನು ಕಂಡುಕೊಳ್ಳಬಹುದೆಂದು ಇದರಂತೆ ಇನ್ನೊಂದು ವಾದ ಅದು ಕೇವಲ ಬುದ್ಧಿಗೆ ಪರಮರಹಸ್ಯದ ಜ್ಞಾನ ಸಿಗುವದಿಲ್ಲ. ಅದನ್ನು ಪ್ರಯೋಗ ಪರೀಕ್ಷೆಗಳಿಂದ ಪಡೆಯಬೇಕಾಗುತ್ತದೆ. ಅದು ಅನುಭವಜನ್ಯ ಇಂದ್ರಿಯವಾದ ಇಲ್ಲಿ ಬುದ್ಧಿ ಸೋತಾಗ ಇಂದ್ರಿಯಾತೀತ ಜ್ಞಾನವನ್ನೇ ಪಡೆಯುವಾಗ ಇಂದ್ರಿಯವಾದದಲ್ಲಿ ಸೋತಾಗ ಆ ಜ್ಞಾನವನ್ನು ಕಂಡುಕೊಳ್ಳಲು ಮಿಗಿಲಾದ ಅತೀತ ಜ್ಞಾನಬೇಕು. ಹಾಗಾದರೆ ಅದಕ್ಕೆನೆ ಇನ್ನೊಂದು ಆಧ್ಯಾತ್ಮಿಕ ಅನುಸಂಧಾನದ ಭಾವನೆಗಳ ಸಂಘಾತ ಅದು ಬುದ್ಧಿ - ಪ್ರಯೋಗಕ್ಕೆ ನಿಲುಕದ ಅಭಾವದ ಸ್ವಭಾವ ಅದು ಭಾವ. ಹೃದಯ ಮಿಡಿತವಾದದ್ದು ಆ ಭಾವದ ಅನುಸಂಧಾನ ಕ್ರಿಯೆಯೇ 'ಅನುಭಾವ'. ಇಲ್ಲಿ Mysticisim ಅನ್ನುವ ಅದುವೇ ಅನುಭಾವವೆಂದು ಇದರ ಬಗ್ಗೆ ಹೇಳಲಾಗಿದೆ.

Mysticism is the immediate feeling of the unity of the self with god. It is nothing therefore, but the fundamental feeling of the religion, the religious life at its very heart and centre - W.R. Inge

Mysticism is relegious in its most concentrated and exclusive form. It is that attude of mind in which all other relations are swallowed up in the relation of the soul with the God - R.D. Ranade

Mystician denotes that attitude of mind in which involves a direct, immediate first hand intiative apprehension of God.

ಅನುಭಾವ ಅದು ಮೂರು ವಿಚಾರಗಳನ್ನು ಒಳಗೊಂಡಿದೆ. ಆತ್ಮ, ಪರಮಾತ್ಮ ಮತ್ತು ಇವೆರಡರ ಸಂಬಂಧ ದೇಹ ಅಂದರೆ ಜೀವ ಅವನೊಡನೆ ಕೂಡಿಕೊಂಡು ಒಂದಾಗುವ ಸಾಮರಸ್ಯವನ್ನು ಪಡೆಯುವ ನಿರಂತರ ಹಂಬಲವನ್ನು ಪಡೆಯುವ ದಾರಿ. ಆತ್ಮ ಆನಂದರೂಪಿ ಆನಂದರೂಪವನ್ನು ತಂದುಕೊಡುವುದೇ

ಅನುಭಾವ ಅಂತ್ಯದ ಸ್ಥಿತಿ. ಅಂತರಂಗಗಳಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ, ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವದನ್ನು `ಅನುಭಾವ' ಎಂದು ಕರೆದರೆ, ಬುದ್ಧಿ ಮನಗಳಿಗೆ ನಿಲುಕದ ಆದರೆ ಅದನ್ನು ಮೀರಿದ ಅಂತರಂಗಿಕ `ಅಂತಃಸ್ವರೂಪದಿಂದ' ದೊರೆಯುವದು ಇದನ್ನೇ ಸ್ಪಷ್ಟವಾಗಿ ಹೇಳಲು ಇನ್ನೊಂದು ಶಬ್ದದ ಬಳಕೆ ಅದೇ Intution- ಡಾ.ರಾಧಾಕೃಷ್ಣನ್.[೭೪]

Intution is the extension of percetion to regain`s bedpend sense ಅಂದರೆ ಇಂದ್ರಿಯ ದರ್ಶಿತ ಲೋಕಗಳಾಚೆಗೆ ವ್ಯಾಪಿಸುವ ಕಾಣಿಕೆ. ಅನುಭಾವವನ್ನು ನಿರ್ದೇಶಿಸಲು ಇನ್ನೊಂದು ಶಬ್ದವೇ ಪ್ರತಿಭಾನ, ಪ್ರತಿಭಾನವೆ ಅನುಭಾವ ಅನ್ನುವಷ್ಟು ಸತ್ಯವಾದರೂ, ಪ್ರತಿಭಾನವೇ ಅನುಭಾವವಲ್ಲ ಆದರೆ ಅದನ್ನು ನಿರ್ದೇಶಿಸಲು ಹೇಳುವ ಶಬ್ದ ಆದರೂ ಸಾಮಾನ್ಯ ಅರ್ಥದಲ್ಲಿ ಎರಡು ಒಂದೇ ಆಗಿದೆ.

ಅರವಿಂದರ "life Divine" ಗ್ರಂಥದಲ್ಲಿ ಇದೇ ಅಭಿಪ್ರಾಯವನ್ನು ಕೊಡಲಾಗಿದೆ. ಸಾಮಾನ್ಯ ಮನಸ್ಸು ಮುಂದುವರೆದು ಸಾಧನೆಯಲ್ಲಿ ವಿಕಾಸಹೊಂದುತ್ತಾ ಅದು ಮಹಾ ಮನಸ್ಸಾಗಿ, ವಿಶ್ವ ಮನಸ್ಸಾಗಿ ಮೀರಿದ ಅತಿ ಮಾನಸ ಪ್ರಜ್ಞೆಯಾಗಿ ಆ ಪರಮಾತ್ಮನಲ್ಲಿ ಕೂಡಿಕೊಳ್ಳುವ ಸ್ಥಿತಿ. ಈ ಸೃಷ್ಟಿಗೆ ಮೂಲಕಾರಣವಾದದ್ದನ್ನೂ ಪ್ರತ್ಯಕ್ಷವಾಗಿ ಕಾಣುವ ಕೇಳುವ ಸ್ಪರ್ಶಿಸುವ ಶಕ್ತಿಯನ್ನು ಹೊಂದಿದೆ. ಅದನ್ನೇ 'ಅನುಭಾವ' ಸ್ಥಿತಿ ಎನ್ನುವರು. ನಿರಂತರ ಪ್ರವಾಹ, ಈ ಸೃಷ್ಟಿ ಪ್ರವಾಹದ ಜೊತೆಯಲ್ಲಿಯೇ ಸೇರಿಕೊಂಡು ಅದರ ಜೊತೆಜೊತೆಯಾಗಿದ್ದುಕೊಂಡು ಅದನ್ನು ಕಂಡುಕೊಳ್ಳುವ ಶಕ್ತಿ ಬುದ್ಧಿಯದು ಅದರಂತೆ ಅದರ ಹಿಂದೆ ಇರಬಹುದಾದ ಸೃಷ್ಟಿಕರ್ತನ ಸೌಂದರ್ಯ ಊಹಿಸುವ ಭಾವ ದೀಪ್ತಿ ಅದರಿಂದ ಉಂಟಾಗುವದು ಕಾವ್ಯ, ಅದಕ್ಕಿಂತ ಅನುಭವ ತೀವ್ರತರವಾದಾಗ ಪ್ರವಾಹ ರೂಪಿ ಪ್ರಪಂಚದ ಚಲನೆಯಲ್ಲಿಯೇ ಒಂದು ನಿಶ್ಚಲಸತ್ಯವನ್ನು ಕಂಡು ತಾನೇ ಅದು ಆಗುವ ಸ್ಥಿತಿ, ತಾನೇ ಅಪ್ಪು, ವಾಯು, ...... ತಾನೇ ಆಕಾಶಾತ್ಮ ಎಂದು ಶಂಕರರು ಹೇಳುವಂತೆ ತಾನೇ ಅದುವಾಗಿ ಪರಿಣಮಿಸುವ ಮಾನಸಿಕ ಮಹಾಮೇರು ಸ್ಥಿತಿ ಮಹಾಬೆಳಕು ಅತೀ ಸಂಪ್ರಜ್ಞಾನ ಸ್ಥಿತಿ ಅಲ್ಲಿಗಿಂತ ಮೇಲೆ ಸ್ಥಿತಿಗಳೇ ಇಲ್ಲಿ ಅದು ಕೊನೆಯದ್ದು ಆ ಸ್ಥಿತಿಯನ್ನು ಪಡೆಯಬೇಕಾದರೆ ಸಾಧನೆ ಅನುಸಂಧಾರಾಧನೆ ಅತ್ಯಾವಶ್ಯ ಅದಕ್ಕೆ ಅನುಭಾವ ಅಥವಾ ಅತಿಮಾನಸ ಪ್ರಜ್ಞೆ ಅನ್ನುವರು.

A State of being 'A Kind of Knowledge' ಸಾಕ್ಷಾತ್ಕಾರದ ಕೊನೆಯಸ್ಥಿತಿ ಅದನ್ನು ಪಡೆಯುವ ಮಾರ್ಗಗಳು ಇವು. ಅನುಭಾವವನ್ನು ಬುದ್ಧಿ ತರ್ಕಗಳಿಗೆ ಅತೀತವಾದ ಒಂದು ಶಕ್ತಿಯಿಂದ ಮಾತ್ರ ಸತ್ಯ ಸಾಕ್ಷಾತ್ಕಾರ ಪಡೆಯುವದು ಸಾಧ್ಯವೆಂದು ಹೇಳುವ ದಾರಿ. ಅದು 'ಅನುಭಾವ' ಮಾರ್ಗವಾಗಿದೆ. ದೇವರನ್ನು ಪ್ರೀತಿಸುವದೆಂದರೆ ಅದು ಅನುಭಾವವನ್ನು ಹೇಳುವ ಒಂದು ರೀತಿಯ ವ್ಯಾಖ್ಯೆ. The love is god of one legitinate made deffination of mysticisim- W.R.Inge.[೭೫] ಇಲ್ಲಿ ವಿಚಾರಶಕ್ತಿ ಬೇಕು ಅಂದರೆ ವಿಚಾರಶಕ್ತಿಯಿಂದ ಹೊರತುಪಡಿಸಿದ ಜ್ಞಾನವಿಲ್ಲ ಅದರ ದಾರಿಯಲ್ಲಿ ನಿಂತಾಗ ಹಾಗೆ ಮುಂದೆ ಮುಂದೆ ಸಾಗಬೇಕು. ಬುದ್ಧಿ ಎಲ್ಲೆ ಮೀರಿ ಮುಂದೆ ಸಾಗಬೇಕು. ತರ್ಕಕ್ಕೆ ಮೀರಿದ ಆಶೆಯ ರೂಪ.

Mysticisim is Reson above retioltionism Reason bing used for the affirmation of the whole. Persnality acting under the guidanec ofits highest F aculty- W.R.Inge.[೭೬]

ಅರವಿಂದರ ಭೌದ್ಧಿಕ ಜ್ಞಾನ, ಜೀವನ ಪರಿಪೂರ್ಣತೆಗೆ ಸಾಲಲಾರದು. ಅಲ್ಲಿ ಪ್ರಜ್ಞಾವಿಕಾಸ ನಿಲುವಿನ ಅವಶ್ಯವಿದೆ ಅದಕ್ಕೆ Supprime Reson ಎಂದು ಕರೆಯುವರು. ಅದು ಜೀವನದ ಅನಂತತೆಯನ್ನು ಹಿಗ್ಗಿಸುವದು ಮಾನವ ಜೀವನ ಗುರಿಯನ್ನು ತೋರಿಸುತ್ತಿದೆ. ಆ ಗುರಿ ಅನುಭವವನ್ನು ಸಾಕ್ಷಾತ್ತಾಗಿ ಜೀವನದಲ್ಲಿ ಅನುಭವಿಸಬಹುದು. ಚಲನೆಯಲ್ಲಿ ನಿಶ್ಚಲತೆ ಬಹುತ್ವದಲ್ಲಿ ಏಕತ್ವವನ್ನು ಕಾಣುವದು ಅದರಲ್ಲಿ ಲೀನವಾಗುವದು ಇದೇ ಅನುಭಾವ ಮಾರ್ಗ. ಬೇರೆ ಬೇರೆ ದೇಶ ಕಾಲಗಳಲ್ಲಿ ಸಾಗುವ ಸಾಧಕರು ತಮ್ಮ ತಮ್ಮ ದಾರಿಯಿಂದ ನಡೆದರೂ ಸಹಿತ ಅವರೆಲ್ಲರೂ ಹಿಡಿದ ಮಾರ್ಗ ಒಂದೇ. ತಿಪ್ಪೇರುದ್ರಸ್ವಾಮಿಯವರು ವೇದಗಳು ಸಹಿತ ಮೊಟ್ಟಮೊದಲನೆಯ ಅನುಭಾವ ಗ್ರಂಥಗಳು ಅನ್ನುವರು. ಅಂದರೆ ವೇದಾಂತ್ಯಭಾಗವಾದ ಉಪನಿಷತ್ತುಗಳು ಅನುಭಾವಿಕ ಗ್ರಂಥಗಳೆಂದು ಅವರ ಅಭಿಪ್ರಾಯ. ವೇದಗಳಲ್ಲಿಯ ಕರ್ಮಕಾಂಡ ಅವಶ್ಯವಿಲ್ಲ ಜ್ಞಾನ ಭಾಗ ಮಾತ್ರ ಅತ್ಯಾವಶ್ಯ. ಸಾಧನೆಯ ಮಾರ್ಗದಲ್ಲಿ ಇಂದ್ರಿಯ ಸಂವೇದನೆಯನ್ನು ಮೀರಿ ಮುಂದೆ ಸಾಗಿದಾಗ ಬುದ್ಧಿಯ ತರ್ಕಕ್ಕೆ ನಿಲುಕುವಂತದ್ದು ಅದಕ್ಕೂ ಮೀರಿ ಮುಂದೆ ಸಾಗಿದಾಗ ಅದುವೇ ಅತಿಮಾನಸ ಪ್ರಜ್ಞೆ ಅಲ್ಲಿ ಸಾಮಾನ್ಯ ಮನಸ್ಸು ಹೋಗಿ ಅತಿಮಾನಸವಾಗುವದು. ಅದು ವಿಶ್ವಾತ್ಮಕನೊಡನೆ ಕೂಡುವಂತಹದ್ದು. ಅದು ತಾನೇ ಆಗಿ ಪರಿಣಮಿಸುವದು. ಮನಸ್ಸಿನ ಕ್ರಿಯೆ ಆತ್ಮ ನಿಯಂತ್ರಿತ ಅನ್ನುವದಾದರೆ ಆತ್ಮದ ಸಂವೇದನೆಯ ಸಂಯಮವೇ ಆತ್ಮ ಪ್ರತ್ಯಕ್ಷಕ್ಕೆ ದಾರಿ. ಅತಿಮಾನಸ ಪ್ರಜ್ಞೆಯಲ್ಲಿ ಆತ್ಮಸ್ಥಿತಿ ಪರಮಾತ್ಮಸ್ಥಿತಿಯನ್ನು ಹೊಂದಿರುತ್ತದೆ ಇದಕ್ಕೆ ಸಂಪ್ರಜ್ಞಾತ ಸ್ಥಿತಿ ಎನ್ನಬಹುದು. ಇಲ್ಲಿ ಆತ್ಮವು ಪರಮಾತ್ಮನನ್ನು ಹುಡುಕ ಹೋಗಬೇಕಿಲ್ಲ ಅದು ತನ್ನಲ್ಲಿಯೇ ಇವೆ 'ನಿತ್ಯೋ ನಿತ್ಯಾನಾಂ ಚೇತನ ಚೇತನನಾಂ ಏಕೊಬಹುನಾಮ ವಿವಿಧತಾ ಕಾಮಾನ್'[೪೮] ಸತ್ಯದದಲ್ಲಿ ಸತ್ಯ ನಿತ್ಯದಲ್ಲಿ ನಿತ್ಯ, ಚೇತನದಲ್ಲಿ ಚೇತನ ಒಂದೇ ಪರಮಾತ್ಮ ಪ್ರಾಣಿಗಳಲ್ಲಿ ನಾನಾ ತರನಾಗಿದ್ದಾನೆ. ಆತ್ಮನ ಸ್ವರೂಪವನ್ನು ತಿಳಿಯಲು ಕಾತುರಗೊಂಡವರು ಋಷಿ ಮುನಿಗಳು. ಋಷಿಮುನಿಗಳೆಲ್ಲಾ ಅನುಭಾವಿಗಳೇ ಆಗಿದ್ದರು. ಉಪನಿಷತ್ತಿನ ನಂತರ ಭಗವದ್ಗೀತೆ ಗ್ರಂಥಕ್ಕೆ ಅನುಭಾವ ಗ್ರಂಥ ಎನ್ನಬಹುದು. ಕೃಷ್ಣ ಅರ್ಜುನನಿಗೆ ಅಂತ:ಚಕ್ಷುವನ್ನು ದಯಪಾಲಿಸಿದನು. ಇದುವೇ ಸತ್ಯ ಸಾಕ್ಷಾತ್ಕಾರದ ಸ್ಥಿತಿ.

ವಿಶ್ವದ ಪರಮಚೈತನ್ಯವನ್ನು ಅರಿತು ಅನುಭವಿಸುವ ಮಾರ್ಗ ಅದೇ ಅನುಭಾವ ಮಾರ್ಗ ಪಾಶ್ಚಾತ್ಯರಲ್ಲಿ ಸೇಂಟ್ ಫಾಲ ಅನ್ನುವನು ಕ್ರೈಸ್ತರಲ್ಲಿ ಮೊದಲನೆಯ ಕ್ರೈಸ್ತ ಅನುಭಾವಿ ಅನ್ನಬಹುದು. ಈತ ಕ್ರಿಶ್ಚಿಯನ್ ಧರ್ಮದ ಮೂಲಪುರುಷ. ಕ್ರಿಸ್ತ ಅತಿಮಾನಸ ಪ್ರಜ್ಞೆಯಲ್ಲಿ ತೊಡಗಿಸಿಕೊಂಡಿದ್ದರಿಂದ ಆತನ ಹೆಸರು ಬಂದಿತು. ನಮ್ಮ ಮೂಲ ಉದ್ದೇಶ ದರ್ಶನ ಅನ್ನುವ ಅರ್ಥ ಅನುಭಾವದ ಹಿನ್ನಲೆಯಲ್ಲಿ, ಪ್ರಭುದರ್ಶನ ಉಗಮ ಕೂಡಾ ಅನುಭಾವದ ಹಿನ್ನಲೆಯಲ್ಲಿಯೇ ಆಗಿದೆ. ಪಾಶ್ಚಾತ್ಯ ಮತ್ತು ಪೌರ್ವಾತ್ಯ ಎರಡರ ದರ್ಶನ ಪರಿಕಲ್ಪನೆಯನ್ನು ಸಿದ್ಧಮಾಡಿಕೊಂಡು ಅನುಭಾವದ ಹಿನ್ನಲೆಯಲ್ಲಿಯೇ ನೋಡಲಾಗಿದೆ. ಸೆಂಟಫಾಲನು ಎರಡು ರೀತಿಯಲ್ಲಿ ಚಿಂತಿಸುತ್ತಾನೆ. ೧. ಪ್ರಾಪಂಚಿಕ ಸುಖಗಳು - ಇವು ಅಶಾಶ್ವತ ೨. ಆಧ್ಯಾತ್ಮಿಕ ಸುಖಗಳು - ಯಾವಾಗಲೂ ಇವೆರಡರ ಮಧ್ಯೆ ಹೋರಾಟ ಇದ್ದೇ ಇದೆ. ಕೆಳಗೆ ಬೀಳಬಹುದಾದ ವಿನಾಶಕಾರಿ ಸುಖದಿಂದ ಆಧ್ಯಾತ್ಮಿಕ ಸುಖವನ್ನು ಪಡೆಯುವುದೇ ಆತ್ಯಂತಿಕ ಗುರಿ. ನಾನು ಅಲ್ಪ ವ್ಯಕ್ತಿತ್ವವನ್ನು ಉಪಯೋಗಿಸಿ ಅದನ್ನು ಮೀರಿ ವಿಶ್ವ ತತ್ವದಲ್ಲಿ ಒಂದಾಗುವದು ಕೊನೆಯ ಗುರಿಯಾಗಿದೆ. ಸೇಂಟ್ ಅಗಸ್ಟಿನ್, ಯೇಕಾರ್ಥ, ಭೋಹಿಮೆ

ಸೇಂಟ್ ಬರ್ನಾರ್ಡ್, ಸೇಂಟ್ ಜಾನ್ ಆಫ್ ದಿ ಕ್ರಾಸ್ ಇವರೆಲ್ಲಾ ಪಾಶ್ಚಾತ್ಯ ಅನುಭಾವಿಗಳಾಗಿದ್ದಾರೆ. ಪಾಶ್ಚಾತ್ಯದ ಪ್ರಾರಂಭಿಕ ಅನುಭಾವಿಯೆಂದರೆ ಪ್ಲೋಟೋವಿನ ಶಿಷ್ಯ ಪ್ಲೋಟಿನಸ್ ಅನುಭಾವದ ಬಗ್ಗೆ ಬಹುರೀತಿಯ ಚಿಂತನೆಯನ್ನು ಮಾಡಿರುವನು. ಪ್ರಾಯೋಗಿಕ ಆಧ್ಯಾತ್ಮಿಕ ಮತ್ತು ಸಾಧಕ ದರ್ಶನ ನಡುವೆ ಚಿಂತನೆಯನ್ನು ಪ್ರಾರಂಭಿಸಿದ 'His System is a synthesis of Perticuler Spiritualite and formal phiolosophy'[೪೯] ಇದರಿಂದ ಆತನ ವಾದ ತಾರ್ಕಿಕದಿಂದ ಕೂಡಿಲ್ಲ ಅನುಭಾವ ಪ್ರಧಾನವಾಗಿದೆ ಎನಿಸುವದು. ಅನಂತಶಕ್ತಿಯಿಂದ ಹೊರಗೆ ಸಿಡಿದಿದೆ ಈ ಸೃಷ್ಟಿ ಮರಳಿ ಅಶಕ್ತಿಯನ್ನು ಸೇರುವುದೇ ಇದರ ಕೊನೆಯ ಗುರಿ ಈ ಅರ್ಥದಲ್ಲಿ ಪ್ರಭುದರ್ಶನ ಕೂಡಾ ಹೋಲುತ್ತದೆ. ಅನುಭಾವ ಪದದ ಅಡಿಯಲ್ಲಿ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಪರಿಕಲ್ಪನೆ ಒಂದೇ ಆಗಿದೆ. ವಿಶ್ವಾತ್ಮಕನ ಮೂಲಶಕ್ತಿ ಜೀವರಲ್ಲಿ ಅಡಗಿರುವದರಿಂದ ಜೀವ ವಿಶ್ವಾತ್ಮನಾಗಲು ಸಾಧ್ಯ. ಪ್ಲಾಟಿನಸ್‌ನ ಶಿಷ್ಯ ಫಾರ್ಫಿರಿ (Perphiri) ಯಾವಾಗಲು ಅವನ ಜೊತೆಯಲ್ಲಿಯೇ ಇರುತ್ತಿದ್ದ ಪ್ಲಾಟಿನಸ್‌ನಿಗೆ ನಾಲ್ಕು ಬಾರಿ ದಿವ್ಯದರ್ಶನ ದೊರಕಿತೆಂದು ಅದು ಅನುಭವಕ್ಕೆ ಮೀರಿದ ಅನುಭಾವ ಮಾತಿನಿಂದ ಹೇಳಲು ಪ್ರಯತ್ನಿಸಿದ್ದಾನೆ. ಯಾವುದೇ ವಿಶ್ವಾತ್ಮಕವಾದ, ಸೇಂಟ್‌ಪಾಲ್, ಪ್ಲಾಟಿನಸ್, ಅಗಸ್ಟಿನ್, ಕ್ರಿಶ್ಚಿಯನ್ ಇವರೆಲ್ಲರ ಅನುಭವವಾಗಲೀ ಇಸ್ಲಾಮಿಕ್ ಸೂಫಿ ತತ್ವವಾಗಲೀ, ಹಿಂದೂ ಆತ್ಮ ಸಾಕ್ಷಾತ್ಕಾರವಾಗಲೀ ಎಲ್ಲರ ಗುರಿ ಕೂಡಾ ಸತ್ಯದ ಸಾಕ್ಷಾತ್ಕಾರ ಅಥವಾ ಅನುಭಾವ ದರ್ಶನ. ವಿಲಿಯಂ ಜೇಮ್ಸ್ ನಂತೆ Mystic classis have neither birthday nor native land.[೫೦] ಈ ಪಾಶ್ಚಾತ್ಯರಲ್ಲಿ ನೋಡಿದಂತೆ ವಚನಕಾರರಲ್ಲಿ, ಕಾವ್ಯಗಳಲ್ಲಿ, ಪುರಾಣಗಳಲ್ಲಿ ಪ್ರಭುವಿನ ಅನುಭಾವ ದರ್ಶನವನ್ನು ಈ ಪ್ರಬಂಧದ ಅಂತಿಮ ಅಧ್ಯಯನವಾಗಿ ತೆಗೆದುಕೊಂಡಿದೆ.

## ಆ. ಪೌರ್ವಾತ್ಯ ವ್ಯಾಖ್ಯಾನಗಳು

ದರ್ಶನ ಎಂದರೆ ನೋಡುವದು, ಬೆಟ್ಟಿಯಾಗುವದು. ಪ್ರತಿಯೊಂದು ಜೀವಿಯು ತನ್ನದೇ ಆದ ದರ್ಶನ ಶಕ್ತಿಯನ್ನು ಪಡೆದುಕೊಂಡಿದೆ. ತನ್ನದೇ ಆದ ರೀತಿಯಲ್ಲಿ ಪ್ರತಿವ್ಯಕ್ತಿ ತನ್ನ ದರ್ಶನ ಶಕ್ತಿಯಂತೆ ನೋಡುತ್ತಾನೆ. ಇಂದ್ರಿಯ ಸನ್ನಿಕರ್ಶದಿಂದ ಉಂಟಾದ ಜ್ಞಾನ, ಅದರಿಂದ ಈ ಸುತ್ತ ಮುತ್ತಲಿನ ಪರಿಸವ್ರರನ್ನು ನೋಡುತ್ತ ಈ ರೀತಿ ಹೇಗೆ ಆಯಿತು? ಈ ರೀತಿ ಇರಲು ಕಾರಣ? ಮೊದಲಿನಿಂದಲೂ ಇತ್ತೆ? ಅಥವಾ ಈಗ ಉಂಟಾಯಿತೆ? ಈಗ ಉಂಟಾದರೆ ಯಾವ ದಿನ? ಅದರಂತೆ ತನ್ನ ಬದುಕಿನ ಶ್ರೇಯಸ್ಸು ಯಾವುದು ಯಾವ ರೀತಿಯದ್ದು ಇದೆ. ದರ್ಶನ ಬದುಕಲಿಕ್ಕೆ ಮಾರ್ಗ ತೋರಿಸುವಂತದ್ದು ಎಲ್ಲಿಯೂ ಗೊತ್ತಿರದ ಜಾಗದಲ್ಲಿದ್ದಿದ್ದಲ್ಲ ಬದುಕಿನ ಜೀವನಕ್ಕೆ ಮಾರ್ಗದರ್ಶಾತ್ಮಕ ರೂಪವಾದುದು.

ದರ್ಶನ = ಕಾಣು = ಬೆಟ್ಟಿ = ಪರಿಚಯ = ಪರಸ್ಪರಮಾತನಾಡು = ಕಂಡುಕೊಳ್ಳು ಇತ್ಯಾದಿ ಅರ್ಥಗಳಿರುವವು.

ಪ್ರಾಜ್ಞರು ದರ್ಶನ ಶಬ್ದದ ಉತ್ಪತ್ತಿಯನ್ನು 'ದೃಶ್ಯತೆ ಅನೇನೇತಿ ದರ್ಶನಂ' ಯಾವುದರಿಂದ ವಸ್ತುಗಳು ನಿಜ ಸ್ವರೂಪವನ್ನು ನಿರೀಕ್ಷಿಸಿ ಪರೀಕ್ಷಿಸಿ ನಿರೂಪಿಸಲಾಗುವದೋ ಅದೇ ದರ್ಶನ. ನಾನು ಯಾರು? ಎಲ್ಲಿಂದ ಬಂದೆನು? ಎಲ್ಲಿಗೆ ಹೋಗುವೆನು? ನನ್ನೆದುರಿನಲ್ಲಿ ಬಿದ್ದುಕೊಂಡಿರುವ ಜಗತ್ತಿನ ಸ್ವರೂಪವೇನು? ಇದು

ಹೇಗೆ ಉದಯಿಸಿತು? ಇದರ ಕಾರಣವಾವುದು? ಅದು ಅಚೇತನವೋ. ಚೇತನವೋ? ಇಲ್ಲಿ ನನ್ನ ಜೀವನ ಅರ್ಥ ಪೂರ್ಣವಾಗಲು ಮಾಡಲೇಬೇಕಾದ ಕರ್ತವ್ಯವಾವುದು, ಇವೇ ಮೊದಲಾದ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡುವುದು ದರ್ಶನದ ಪರಮೋದ್ದೇಶ. ಇದಕ್ಕೆ ಶಾಸ್ತ್ರ ಎಂಬ ಮತ್ತೊಂದು ಹೆಸರುಂಟು. ದರ್ಶನ ಸಾಮಾನ್ಯವಾಗಿ ಸುತ್ತಮುತ್ತಲಿನ ಸೃಷ್ಟಿಯ ರಹಸ್ಯಗಳನ್ನು ತಿಳಿಯುವ ಕುತೂಹಲವೇ ಇದರ ಉತ್ಪತ್ತಿಗೆ ಕಾರಣ. ಸುಖ ದು:ಖಗಳು ಬರುವದು ಸ್ವಾಭಾವಿಕವಾದರು ವಸ್ತುವಿನಿಂದ ಅನುಭವಿಸಿದ ವ್ಯಕ್ತಿನಿಷ್ಠ. ಇವುಗಳಿಂದ ಪಾರಾಗಲು ಮಾರ್ಗ ಈ ದರ್ಶನ ದಾರಿ. ಈ ಚರ್ಚೆಯಲ್ಲಿ ಜೀವನ ತಿರುಳಿನಿಂದ ಪರಮನೊಡನೆ ಹೊಂದುವ ದಾರಿಯಲ್ಲಿ ಜಗತ್ತು ಅದರ ವಿಷಯಗಳ ಬಗ್ಗೆ ತಮತಮಗೆ ತಿಳಿದಂತೆ ಚರ್ಚಿಸಿದರು ಹಲವಾರು ಮಂದಿ ಅವರೇ ದಾರ್ಶನಿಕರು. ಇಲ್ಲಿ ಸ್ಥೂಲದಿಂದ ಪ್ರಾರಂಭವಾಗಿ ಸೂಕ್ಷ್ಮದವರೆಗೆ ಅಂದರೆ ಸ್ಥೂಲ, ಸೂಕ್ಷ್ಮ, ಕಾರಣ ಕ್ರಮವಾಗಿ ಜಗತ್ತು, ಆತ್ಮ, ಈಶ್ವರ, ಅವುಗಳ ಪರಸ್ಪರ ಸಂಬಂಧ ಒಳಗೊಂಡಂತೆ ಇವೆ. ಒಬ್ಬ ಪಾರ್ಸಿ ಕವಿಯು ಜಗತ್ತು ಮಹಾಕಾವ್ಯ ಗ್ರಂಥ ಇದರ ಮೊದಲನೆಯ ಹಾಗೂ ಕೊನೆಯ ಪುಟಗಳು ಕಳೆದುಹೋಗಿವೆ. ಆ ಪುಟಗಳ ಅನ್ವೇಷಣೆಯಲ್ಲಿ ತೊಡಗಿದವರೇ ದಾರ್ಶನಿಕರು ಎಂದು ಹೇಳಿದ್ದನ್ನು ಸ್ಮರಿಸಬಹುದು. ಈ ವಿಶ್ವವು ಬಿಡಿಸಲಿಕ್ಕೆಬಾರದ ಒಗಟು ಆಗಿರುವದೆಂದು ಕೆಲವರು ಹೇಳಿದ್ದಾರೆ. ಅಂತೆಯೇ ಇದರ ಸ್ವರೂಪ ಹಾಗೂ ವ್ಯಕ್ತಿಯನ್ನು ಕಂಡುಹಿಡಿಯಲು ಅನೇಕರು ಅನಾದಿಕಾಲದಿಂದಲೂ ಪ್ರಯತ್ನ ಮಾಡುತ್ತಲೇ ಬಂದಿರುವರು. ಇವುಗಳಲ್ಲಿ ಕೆಲವು ಸಮಸ್ಯೆಗಳು ಬಗೆಹರಿದಿದ್ದು ಇನ್ನೂ ಕೆಲವು ಬಗೆಹರಿಯದ ಸಮಸ್ಯೆಗಳೇ ಆಗಿವೆ. ಇವುಗಳ ಚಿಂತನೆ ಪ್ರಾಥಮಿಕವಾಗಿ ವೇದಗಳಲ್ಲಿ ಗುರುತಿಸಬಹುದು. 'ವೇದ' ಅಂದರೆ - ಕರ್ಮಕಾಂಡ, ಜ್ಞಾನಕಾಂಡ. ಜ್ಞಾನಕಾಂಡದಲ್ಲಿ ಉಪನಿಷತ್ತು ಅದಕ್ಕೆ ಹೊಂದಿಕೆಯಾಗಿ 'ಭಗವದ್ಗೀತೆ ಬ್ರಹ್ಮಸೂತ್ರಗಳು ವೇದಗಳನ್ನು ಒಪ್ಪಿಕೊಳ್ಳುವದು ಅದು ಆಸ್ತಿಕವೆಂದು ಒಪ್ಪಿಕೊಳ್ಳದಿರುವದನ್ನು 'ನಾಸ್ತಿಕ'ವೆಂದು ಕರೆಯುವದುಂಟು. ನಾಸ್ತಿಕ ದರ್ಶನಗಳು ಜೈನ, ಭೌದ್ಧ, ಚಾರ್ವಾಕ. ಆಸ್ತಿಕ ದರ್ಶನಗಳು ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವ ಮೀಮಾಂಸೆ, ಉತ್ತರ ಮೀಮಾಂಸೆ ವೇದದ ಮೊದಲನೆ ಭಾಗ ಪೂರ್ವ ಮೀಮಾಂಸೆ ಅದು ಕರ್ಮಕಾಂಡ. ಉತ್ತರ ಮೀಮಾಂಸೆ ಜ್ಞಾನಕಾಂಡ.

ದರ್ಶನಕಾರರು ಅನುಭವ, ಅನುಭಾವ ತರ್ಕ ವಿತರ್ಕಗಳ ಮುಖಾಂತರ ಕೆಲವು ವಿಷಯಗಳನ್ನು ಗುರ್ತಿಸಿ ಭಕ್ತಿಯಿಂದ ಯುಕ್ತಿಯಿಂದ ಜೀವನದ ಪರಮ ಧ್ಯೇಯಗಳಾದ ಮುಕ್ತಿ, ನಿರ್ವಾಣ, ಕೈವಲ್ಯ, ಕೈಲಾಸ, ಇವುಗಳ ಬಗ್ಗೆ ನಿರೂಪಿಸಿದರು. ಶಾಂತ ಮನಸ್ಸಿನ ಮುಖಾಂತರ ತಾತ್ವಿಕ ಚಿಂತನೆ ಮಾಡುವಾಗ ಲಭಿಸಿದ ಜ್ಞಾನ ಅದು ತತ್ವ ಸಾಕ್ಷಾತ್ಕಾರ. ಇದರ ಕೃತಾರ್ಥತೆಯೇ ಮುಕ್ತಿ. ಇದರ ಪಡೆಯುವಿಕೆಯ ನಿಯಮಗಳೇ ದರ್ಶನಗಳು. ವೇದಗಳಲ್ಲಿ ಪ್ರಾರಂಭವಾಗುವ ಈ ದೃಷ್ಟಗಳು ಮುಂದೆ ಆಯಾ ದಾರ್ಶನಿಕ ಅಭಿಪ್ರಾಯದಂತೆ ಬೆಳೆದು ಹೆಮ್ಮರಗಳಾಗಿವೆ.

ಚಾರ್ವಾಕ - ಬೃಹಸ್ಪತಿ, ಜೈನ - ಮಹಾವೀರ, ಬೌದ್ಧ - ಬುದ್ಧ, ನ್ಯಾಯ - ಗೌತಮ, ವೈಶೇಷಿಕ - ಕಶ್ಯಪ, ಸಾಂಖ್ಯ - ಕಪಿಲ, ಯೋಗ - ಪತಂಜಲಿ, ಪೂರ್ಣಮೀಮಾಂಶ - ಜೈಮಿನಿ, ಉತ್ತರ ಮೀಮಾಂಶ - ಬಾದರಾಯಣ, ಬ್ರಹ್ಮಸೂತ್ರ ಇದರಲ್ಲಿ ಬಾಷ್ಯವನ್ನು ಅನೇಕರು ಬರೆದರು.

| | |
|---|---|
| ನಿರ್ವಿಶೇಷಾದ್ವೈತ | - ಶಂಕರಾಚಾರ್ಯ |
| ಭೇದಾಬೇದ | - ಬಾಸ್ಕರಾಚಾರ್ಯ |
| ವಿಶಿಷ್ಟಾದ್ವೈತ | - ರಾಮಾನುಜಾಚಾರ್ಯ |
| ದ್ವೈತ | - ಮದ್ವಾಚಾರ್ಯ |
| ದ್ವೈತಾದ್ವೈತ | - ನಿಂಬಿರ್ಕಾಚಾರ್ಯ |
| ಶೈವ ವಿಶಿಷ್ಟಾದ್ವೈತ | - ಶ್ರೀಕಂಠಾಚಾರ್ಯ |
| ಶಕ್ತಿವಿಶಿಷ್ಟಾದ್ವೈತ | - ಶ್ರೀಪತಿ (ಶ್ರೀಕರಭಾಷ್ಯ) |
| ಶುದ್ಧಾದ್ವೈತ | - ವಲ್ಲಭಾಚಾರ್ಯ |
| ಅವಿಭಾಗಾದ್ವೈತ | - ವಿಜ್ಞಾನ ಭಿಕ್ಷು |
| ಅಚಿಂತಾ ಭೇದಾಭೇದ | - ಬಲದೇವ |

ನಾಸ್ತಿಕ ಹಾಗೂ ಆಸ್ತಿಕ ಇವೆಲ್ಲವುಗಳು ದರ್ಶನರೂಪಗಳೇ. ಇದರ ಸಮೀಪ ನಾವು ಚರ್ಚಿಸುವ ದರ್ಶನ ಅಂದರೆ ಶ್ರೀಪತಿ ಪಂಡಿತನದ್ದು. ಅವನು ೧೪ನೇ ಶತಮಾನದವನು. ಜಗತ್ತಿನ ದಾರ್ಶನಿಕರಲ್ಲಿ ಅಧ್ಯಯನಕ್ಕೋಸ್ಕರ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಎಂದು ಎರಡು ಭಾಗಗಳನ್ನು ಮಾಡಿದ್ದುಂಟು. ಪಾಶ್ಚಾತ್ಯರೆಂದರೆ ಗ್ರೀಕ್‌ರು ಇತ್ಯಾದಿ. ಪೌರ್ವಾತ್ಯ ಎಂದರೆ ಇದುವರೆಗೆ ಹೇಳಿದ ದರ್ಶನಗಳು. ಪಾಶ್ಚಾತ್ಯ ಮತ್ತು ಪೌರಾತ್ಯರ ತೌಲನಿಕ ಅಧ್ಯಯನ ಪಾಶ್ಚಿಮಾತ್ಯರಲ್ಲಿ ದಾರ್ಶನಿಕ ನೆಲೆ ಹೇಗೆ ಪ್ರಾರಂಭವಾಯಿತೆಂಬುದನ್ನು ಕಂಡುಕೊಂಡು ಪೌರ್ವಾತ್ಯಕ್ಕೆ ಕಾಲಿಡುವದು ಇಲ್ಲಿಯ ಪಠ್ಯತೆಯ ಕ್ರಮ. ಸಮಗ್ರ ಪಾಶ್ಚಾತ್ಯ ತತ್ವಶಾಸ್ತ್ರದ ಅಧ್ಯಯನ ಪೌರ್ವಾತ್ಯದ ಅನುಭಾವದ ಹಿನ್ನಲೆಯಲ್ಲಿ ಯಾವ ರೀತಿ ಹೊಂದಿಕೆಯಾಗಿಯೆದೆಂಬುದನ್ನು ನೋಡುವದಕ್ಕಾಗಿ ಪೌರ್ವಾತ್ಯದ ಕೆಲವು ಅನುಭವಿಕ ಮಾತುಗಳನ್ನು ವಿಶ್ಲೇಷಿಸಿದೆ. ಹಾಗೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ಇವುಗಳ ಅನುಭಾವಿಕ ಪ್ರಾರಂಭವನ್ನು ಚರ್ಚಿಸುತ್ತ ಸಾಗಲಾಗಿದೆ. ಅನೇಕ ಅದ್ವೈತವಾದಿಗಳು ಶಂಕರಾಚಾರ್ಯರ ಪೂರ್ವದಲ್ಲಿದ್ದರು. ಮಾಧ್ಯಮಿಕರ ಶೂನ್ಯಾದ್ವೈತ ಯೋಗಾಚಾರ್ಯರ ವಿಶ್ವಾದ್ವೈತ, ಶಾಕ್ತರ - ಶಕ್ತ್ಯಾದ್ವೈತ, ಭತೃ ಹರಿ ಮಂಡನ ಮಿಶ್ರ ಇವರೆಲ್ಲರುಗಳು. ವಿಶಿಷ್ಟವಾಗಿ ಇವರೆಲ್ಲರೂ ಅದ್ವೈತವಾದರೂ ಕೂಡ ಬ್ರಹ್ಮ, ಜಗತ್ತು, ಉಪಾದಾನ ಕಾರಣ, ಮಾಯಾ ವಿಶಿಷ್ಟಾ, ಅನ್ನುವಲ್ಲಿ ಒಂದಕ್ಕಿಂತ ಒಂದರಲ್ಲಿ ಕೊಂಚ ಭಿನ್ನತೆಯಿದೆ. ಒಂದೊಂದು ದರ್ಶನ ಆಯಾ ದರ್ಶನಕಾರರ ಕಾಲಕ್ಕಿಂತ ಮುಂಚೆ ಅಸ್ತವ್ಯಸ್ಥವಾದ ರೀತಿಯಲ್ಲಿ ಇದ್ದಂತಿದೆ. ಅವುಗಳನ್ನು ವ್ಯವಸ್ಥಿತವಾಗಿ ತಮ್ಮದೇ ಆದ ರೀತಿಯಲ್ಲಿ ನಿರೂಪಿಸಿದಾಗ ಅವರೇ ಆಯಾ ಧರ್ಮ ದರ್ಶನಕಾರರಾದರು. ಅದರಂತೆ ಹರಪ್ಪಾ ಮಹಂಜೋದಾರೊ ಸಂಸ್ಕೃತಿಯಲ್ಲಿ ಕಂಡುಬಂದ ಶಿವಾರಾಧನೆ, ಲಿಂಗೋಪಾಸನೆ, ದೊರಕಿದರೂ ಕೂಡಾ ಅದು ಯಾವುದೋ ಒಂದು ರೂಪದ ಶಿವಾರ್ಚನೆಯೇ ವಿನಹ ನಿರ್ದಿಷ್ಟ ಶೈವ ಪಥವಾಗಲಿ, ವೀರಶೈವ ಪಥವಾಗಲಿ, ಶೈವ ಪ್ರಬೇಧ ಪಥವನ್ನಾಗಲೀ, ನಿರ್ದಿಷ್ಟವಾಗಿ ಸೂಚಿಸುವಂತಿಲ್ಲ. ಆದರೆ ಶಿವೋಪಾಸಕರು ಹೌದು ಹಾಗೆಯೇ ವೀರಶೈವಪಥ ೧೨ನೇ ಶತಮಾನಕ್ಕಿಂತಲೂ ಮುಂಚೆ ಇದ್ದ ಇದು ಅಸ್ತವ್ಯಸ್ಥತೆಯ ಶೈವೋಪಾಸನೆಯ ಆಗರ. ಅದನ್ನು ಪ್ರಭುಬಸವ ವ್ಯವಸ್ಥಿತವಾಗಿ ಸಂಸ್ಕರಣಗೊಳಿಸಿದರು. ಅಂದಾಗ ಪ್ರಭುವೆ ಈ ಧರ್ಮ ದರ್ಶನಕಾರ. ಬಸವ

ಈ ಧರ್ಮ ಸಾಮಾಜಿಕ ರೂಪಾತ್ಮಕ. ಎಲ್ಲ ದರ್ಶನಗಳು ಚತುರ್ವಿಧ ಪುರುಷಾರ್ಥವನ್ನು ಹೇಳುತ್ತವೆ. ಶೈವ ದರ್ಶನದಲ್ಲಿ ಅದರಲ್ಲಿಯೂ ಶಿವಾದ್ವೈತ ದರ್ಶನದಲ್ಲಿ ಭಕ್ತಿ ಒಂದನ್ನು ಸೇರಿಸಿ ಅದು ಕೂಡಾ ಪುರುಷಾರ್ಥವೆಂದು ಹೇಳಿದೆ. ಪುರುಷಾರ್ಥವೆಂದರೆ ಸಾರ್ಥಕತೆ. ಪುರುಷಾರ್ಥ ಅನ್ನುವ ಅರ್ಥದಲ್ಲಿ ಸಾಧಿಸಬೇಕಾದ ವೈಶಿಷ್ಟ್ಯತೆ. ಅಂದರೆ ಪರಮನನ್ನು ಕೂಡಿಕೊಳ್ಳುವದು. ಆದರೆ ಪರಮ ವಸ್ತುವನ್ನು ಒಪ್ಪಿಕೊಳ್ಳದ ಕೇವಲ ಜೀವ ಜಗತ್ತುಗಳ ಬಗ್ಗೆ ಹೇಳುವ ದರ್ಶನಗಳೂ ಉಂಟು. "ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಎಲೆ, ಅಡಿಕೆ, ಸುಣ್ಣ, ಕಾಚು ಮೊದಲಾದವುಗಳು ಒಂದು ಕಡೆ ಕೂಡಿಕೊಂಡಾಗ ಮೊದಲು ಅವುಗಳಲ್ಲಿ ಇಲ್ಲದ ಕೆಂಪು ಬಣ್ಣದ ದ್ರವ ಉದಿಸುವಂತೆಯೇ ಭೂಮಿ ಮೊದಲಾದ ನಾಲ್ಕು ತತ್ವಗಳ ಪರಮಾಣುಗಳು ವಿಶಿಷ್ಟರೀತಿಯಲ್ಲಿ ಸಮ್ಮಿಶ್ರಿತವಾದಾಗ ಚೈತನ್ಯ ಧರ್ಮವು ಜನಿಸುವದೇನಾಶ್ಚರ್ಯ?" ಇದು ಚಾರ್ವಾಕರ ಚೇತನ ದರ್ಶನದ ನಿದರ್ಶನ. ದರ್ಶನದ ಪಾರಿಭಾಷಿಕ ಅರ್ಥ ತತ್ವಜ್ಞಾನ ಎಂದು ಆಗುವದು. ಸಾಧಾರಣ ಅರ್ಥದಿಂದಲೇ ಪಾರಿಭಾಷಿಕ ಅರ್ಥದ ಉತ್ಪತ್ತಿಯಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ತಾನು ಹುಟ್ಟಿ ಬರುವಾಗಲೇ ದರ್ಶನ ಶಕ್ತಿಯನ್ನು ಪಡೆದುಕೊಂಡಿರುವನು. ಅಂತೆಯೇ ಅವನು ತನ್ನ ಮುಂದಿರುವ ಜಗತ್ತನ್ನು ತನ್ನ ದರ್ಶನ ಶಕ್ತಿಗನುಗುಣವಾಗಿಯೇ ನೋಡುತ್ತಿರುವನು. ವ್ಯಕ್ತಿಯ ಬುದ್ಧಿ ವಿಕಾಸಗೊಂಡಷ್ಟು ಅವನ ದರ್ಶನದಲ್ಲಿಯೂ ಪರಿವರ್ತನೆಯಾಗುತ್ತಿರುವದರಿಂದ ಯಾವ ವ್ಯಕ್ತಿಯ ದರ್ಶನವು ಒಮ್ಮೆಲೆ ಪೂರ್ಣವಾಗಲಾರದು. ಅಂತೆಯೇ ದೃಷ್ಟವ್ಯ ಜಗತ್ತಿನ ಯತಾರ್ಥ ಪರಿಚಯವಾಗುವದು. ಕೇವಲ ಇಂದ್ರಿಯಾರ್ಥ ಸಂಯೋಗದಿಂದ ಸಂಭವಿಸುವ ದರ್ಶನವು ಸಮರ್ಪಕವಾಗುವದಿಲ್ಲ. ವ್ಯಕ್ತಿಯು ತನ್ನ ಸುತ್ತಮುತ್ತಲಿನ ವಸ್ತುಗಳನ್ನು ಹಾಗೂ ಅವುಗಳ ವ್ಯಾಪಾರವನ್ನು ನೋಡಿದಾಗ ಅವನ ಬುದ್ಧಿಯಲ್ಲಿ ಇವು ಹೇಗೆ ಉದ್ಭವಿಸಿರುವವು, ಇವು ಕೊನೆಗೆ ಹೇಗೆ ಲಯವಾಗುವವು ಎಂಬ ಬಗ್ಗೆ ಜಿಜ್ಞಾಸೆಯು ಸಹಜವಾಗಿಯೇ ಜನಿಸುವದು ಆಗ ಕಾರ್ಯಕಾರಣ ಸಂಬಂಧದ ನಿರ್ಣಯ ಮಾಡಿಕೊಂಡು ಅವುಗಳ ಸ್ವರೂಪಗಳ ತಿಳುವಳಿಕೆ ಆಗುವ ತನಕ ಸರಿಯಾಗಿ ನೋಡಿದೆ ಎಂದು ಅವನಿಗೆ ಅನಿಸುವದಿಲ್ಲ. ಆಗ ಅವನು ನನ್ನ ಜೀವನದ ಆತ್ಯಂತಿಕ ಶ್ರೇಯಸ್ಸು ಯಾವುದು? ಯಾವುದರಿಂದ ಜ್ಞಾನ ಪರಿಪೂರ್ಣತೆಯಾಗಬಲ್ಲದು ಯಾವುದನ್ನು ಪಡೆದ ಮೇಲೆ ನನ್ನ ಬಯಕೆಗಳೆಲ್ಲ ಆತ್ಯಂತಿಕವಾಗಿ ನಿವೃತ್ತಿಯಾಗುವವು. ಇವೆಲ್ಲ ಸಮಸ್ಯೆಗಳಿಗೆ ಸಮಾಧಾನಕರ ಉತ್ತರ ದೊರಕಿಸಲು ತೊಡಗುವನು. ದೃಶ್ಯಾ ದೃಶ್ಯ ಪದಾರ್ಥಗಳ ಯತಾರ್ಥ ಪರಿಚಯವಾಗುವ ತೆರನವೇ ದರ್ಶನ ಶಬ್ದದ ಪಾರಿಭಾಷಿಕ ಅರ್ಥ.[10] ತಾತ್ವಿಕ ಜಿಜ್ಞಾಸೆಯಲ್ಲಿ ಆತ್ಮ ತತ್ವವೇ ಮುಖ್ಯ ಅದರ ಅಂಗವಾಗಿ ದೇವ ಜಗತ್ತುಗಳ ಜಿಜ್ಞಾಸೆ ಅನಿವಾರ್ಯ. ಎಲ್ಲ ತತ್ವಶಾಸ್ತ್ರಜ್ಞರು ಆತ್ಮ ವಿಚಾರದಲ್ಲಿ ಮಗ್ನರಾದಂತೆ ಜಗತ್ತು ಹಾಗೂ ಅದರ ಕರ್ತೃವಿನ ಬಗ್ಗೆ ಚಿಂತನೆ ಮಾಡಿರುವರು. ಭಾರತದಲ್ಲಿ ದರ್ಶನದೊಂದಿಗೆ ಧರ್ಮ ಒಂದಕ್ಕೊಂದು ಪೂರಕವಾಗಿವೆ. ಕೆಲವು ದರ್ಶನಗಳು ಆತ್ಯಂತಿಕವಾಗಿ ದುಃಖ ನಿವೃತ್ತಿಯನ್ನು ತಮ್ಮ ಗುರಿಯೆಂದು ಸಾರುತ್ತವೆ. ಅದೇ ಮುಕ್ತಿ, ಮೋಕ್ಷ, ಕೈವಲ್ಯ, ನಿರ್ವಾಣ ಮೊದಲಾದ ಹೆಸರುಗಳು. ತತ್ವವಿಚಾರ ಜ್ಞಾನವೇ ತತ್ವ ಸಾಕ್ಷಾತ್ಕಾರವು ಯಾವಾಗ ಇಂದ್ರಿಯಗಳ ಮೇಲೆ ಇದರ ಸಂಪಾದನೆಯಾಗುವದೋ ಆಗ ಮನಸ್ಸು ಪರಿಶುದ್ಧವು ಪ್ರಶಾಂತವೂ ಆಗುವದು. ಆ ಪ್ರಶಾಂತ ಮನಸ್ಸಿನಿಂದ ತತ್ವ ಚಿಂತನೆ ಮಾಡಿದಾಗ ಅದು ತತ್ವ ಸಾಕ್ಷಾತ್ಕಾರ.

ತತ್ವಸಾಕ್ಷಾತ್ಕಾರ ಪರಿಧಿಯಲ್ಲಿ ಅನುಭಾವ ಎಂಬ ತಾತ್ವಿಕ ಪರಿಭಾಷೆಯನ್ನು ವ್ಯಾಖ್ಯಾನಿಸಿಕೊಳ್ಳುವದಕ್ಕೆ ಹಲವು ದಾರಿಗಳುಂಟು ಇದರ ಹಿನ್ನಲೆಯಲ್ಲಿಯೇ ನಮ್ಮ ಸಂಶೋಧನೆ, ಅನುಭಾವ ಎಂದರೆ ಇಂಗ್ಲೀಷಿನಲ್ಲಿ 'Mysticism' ಎಂಬ ಅರ್ಥವನ್ನು ಇಟ್ಟುಕೊಂಡು ಅಧ್ಯಯನಗಳಾಗಿವೆ. ಇಲ್ಲಿ ಸೂಫಿಸಂತರ ಅನುಭಾವಿಗಳ ಮಾರ್ಗ ಉತ್ತರಭಾಗದ ಕಬೀರ, ನಾನಕ ಮಾರ್ಗ, ದಕ್ಷಿಣಭಾರತದ ವಚನಕಾರರ ಮಾರ್ಗಗಳನ್ನು ನೋಡಬಹುದು. ಈ ಮಾರ್ಗದಲ್ಲಿ ಮುಖ್ಯಾ ಮುಖ್ಯವಾದ ಸೂಕ್ಷ್ಮ ನೆಲೆಗಳು ಯಾವವು? ಅವು ಯಾರಿಂದ ಹೇಗೆ ಬೇರೆ ಬೇರೆ ಆಗಿರುತ್ತವೆ. ಈ ದಿಶೆಯಲ್ಲಿ ಹಲವಾರು ಅಧ್ಯಯನಗಳು ಆಗಿವೆ. ಆದರೆ ಆಳವಾದ ಮತ್ತು ವಿಸ್ತಾರವಾದ ಅಧ್ಯಯನ ನಡೆದಿಲ್ಲ. ಆ ದಿಶೆಯಲ್ಲಿಯೇ ಈ ನಮ್ಮ ಪ್ರಯತ್ನ ನಾವು ಇಲ್ಲಿ ಅನುಭಾವವನ್ನು ದರ್ಶನ ಶಬ್ದದ ಸಂವಾದಿಯಾಗಿಟ್ಟುಕೊಂಡಿದೆ. ಇದರ ತಾತ್ವಿಕ ನೆಲೆ ಧ್ಯಾನದಿಂದ ಮತ್ತು ಆತ್ಮಾರ್ಪಣ ಭಾವದಿಂದ ಪರಮಾತ್ಮನಲ್ಲಿ ಸಾಯುಜ್ಯ ಪಡೆಯುವ ಮುಮುಕ್ಷುವನ್ನು ಮಿಸ್ಟಿಕ್ ಅಥವಾ ಅನುಭಾವಿ ಎನ್ನುವರು. ಇಲ್ಲಿ ಬುದ್ಧಿಗೆ ಮೀರಿದ ತತ್ವಗಳನ್ನು ಆಧ್ಯಾತ್ಮಿಕವಾಗಿ ಗ್ರಹಿಸಲು ಸಾಧ್ಯ. ಅದು ಅತೀಂದ್ರಿಯ ಅನುಭಾವದಿಂದ ಸಾಧ್ಯ ಎನ್ನುವದು ಈ ಅನುಭಾವ ವಾದ.

ಮನುಷ್ಯನ ಸಾಧಾರಣ ಅನುಭವಗಳನ್ನು ಮೀರಿದ ಒಂದು ಅಸಾಧಾರಣ ಅನುಭವದಿಂದ ತನಗಿಂತಲೂ ಹಿರಿದಾದ ಪೂಜ್ಯನೀಯ ಪರಾತ್ಪರ ವಸ್ತುವಿನಲ್ಲಿ ತನ್ಮಯತೆಯನ್ನು ಅನುಭಾವಿ ಬಯಸುವನು. 'ಡೀನ್ - ಇಂಜ್ ' ಅನ್ನುವಂತೆ "Mysticism has its root is dim consciousness of the behand, which is the raw material of all religious"[**] ಅನುಭಾವ ಎಲ್ಲ ಧರ್ಮಗಳ ಮೂಲ, ಆನಂದಾನುಭವ ಇದು ಅದರ ಪುರುಶಾರ್ಥ, ಇಲ್ಲಿ ಮಾನವನ ಆಧ್ಯಾತ್ಮಿಕ ಹಸಿವು ಪೂರೈಸುತ್ತದೆ. ಮಧ್ಯಕಾಲೀನ ಭಗವದ್ಭಕ್ತರು ತಮಿಳುನಾಡಿನ ಆಳ್ವಾರರು, ನಾಯನ್ಮಾರರು, ಕರ್ನಾಟಕದ ಶಿವಶರಣರು, ಮಹಾರಾಷ್ಟ್ರ ಮತ್ತು ಬಂಗಾಲದ ಸಂತರು ಇವರೆಲ್ಲಾ ಅನುಭಾವಿಗಳೆ ಈ ಯೋಗ ದರ್ಶಕರ ಅನುಭಾವ ಅಂತಿಮ ಗುರಿ ಸಮಾಧಿ. ಪ್ಲೋಟೋನಿಕ್ ಪಂಥೀ (ಗ್ರೀಕ್ ತತ್ವಜ್ಞಾನಿ) ಪ್ಲೋಟೈನಸ್ ತನ್ನ 'ಎನಿಯೆಡ್ಸ್' ಗ್ರಂಥದಲ್ಲಿ ಅನುಭವಿಯಾಗಲು ಸಚ್ಚಾರಿತ್ರ್ಯ ಮತ್ತು ಸದಾಚಾರಗಳು ಅಗತ್ಯ. ದುಶ್ಚರಿತದಿಂದ ವಿಮುಕ್ತನಾದವನಿಗೆ ಮಾತ್ರ ಆ ಆನಂದ ಲಭಿಸುವದು ಎಂದಿದ್ದಾನೆ. ಇದು ಬಾಹ್ಯ ಶುದ್ಧೀಕರಣ ಆಂತರಿಕ ಶುದ್ಧೀಕರಣದ ರೂಪ ಅದರಂತೆ ನಮ್ಮಲ್ಲಿಯೂ ಕೂಡಾ ಉಪನಿಷತ್ತಿನಲ್ಲಿ ವಚನಕಾರರಲ್ಲಿ ಕಾಣುತ್ತೇವೆ. "ಕಳಬೇಡ ಕೊಲಬೇಡ ...... ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ" ಅಂದಂತೆ "ನವರಿತೋ ದುಃಶ್ಚರಿತಾತ್ ನಶಾಂತೋನ ನವ್ಯಾಹಿಂತ" ಈ ರೀತಿ ಉಪನಿಷತ್ ಗ್ರೀಕ್ ದೊಂದಿಗೆ ವಿಂಗಡಿಸಬಹುದು. ಮೊದಲನೆಯದು ಮಾರ್ಗ, ಎರಡನೆಯದು ಮಾರ್ಗ ಆತ್ಮೀಕರಣ. ಅಂದರೆ ಮಾರ್ಗವು ಲಯವಾಗುವದು, ಸಕ್ಕರೆ ಹಾಲಿನಲ್ಲಿ ಬೆರೆಯುವದು ಅನ್ನುವ ಅರ್ಥದಲ್ಲಿ ಇದು. 'Mystic way' ಇಲ್ಲಿ ಅನುಭಾವಿ ತಾನು ಇತರರಿಗೆ ದಾರ್ಶನಿಕ. ತಾನು ದಾರ್ಶನಿಕ ಅನ್ನುವದನ್ನು ಆತ ತಿಳಿದುಕೊಂಡವನಲ್ಲ, ಆದರೆ ಕೇವಲ ಆ ಆತ್ಯಂತಿಕ ಸತ್ಯವನ್ನು ಕಂಡುಕೊಳ್ಳಲಿಕ್ಕೆ ಸಾಗಿದವ ಅನ್ನಬಹುದು. ಆ ದಾರಿಯಲ್ಲಿ ಸಾಗಿದಾಗ ಎಷ್ಟು ಪ್ರಮಾಣದಲ್ಲಿ ಗುರಿ ಆತನ ಕೈಗೆ ಸಿಗಬಹುದೋ ಅಷ್ಟು ಇತರರಿಗೆ ಆತನ ದರ್ಶನವಾಗಿದೆ. ಪ್ರತಿ ಅನುಭಾವಿಯ ಕೊನೆಯ ಮೆಟ್ಟಿಲು ಆನಂದ ಗೋಪುರವು. ಅದು ಕೈಗೆ ಎಟುಕಿದಾಗ ಪ್ರಭು ಅನ್ನುವ ದಾರ್ಶನಿಕ 'ನಿಶಬ್ದವೇ ಬ್ರಹ್ಮ'[**] ಅನುಭಾವಿಗಳಲ್ಲಿ ಎರಡು ಮೂರು ಮೆಟ್ಟಿಲುಗಳನ್ನು ಕಾಣಬಹುದು. ಅರವಿಂದರ ಅನುಭಾವ ಮಾರ್ಗದಲ್ಲಿಯೂ ನೋಡಬಹುದು.

ಅನುಭಾವಿಗಳು ಅನುಸರಿಸುವ ಮತ ಯಾವುದೇ ಇರಬಹುದು. ಆದರೆ ಅನುಭಾವ ಮಾರ್ಗ ಮಾತ್ರ ಒಂದೆ. ಸಾಗುವ ದಾರಿಯಲ್ಲಿ ಅನುಸರಿಸುವ ಸಾಧನೆಗಳು ಹೆಚ್ಚು ಕಡಿಮೆಯಾಗಿವೆ ಅಷ್ಟೇ. ಅನುಭಾವಮಾರ್ಗ ಅಂದರೆ ಆ ದರ್ಶನವೆಂದರು ಒಂದೆ. ಆ ಅನುಭಾವಿ ತನ್ನದೇ ರೀತಿಯಲ್ಲಿ ಸಾಗಿದಾಗ ಅನುಸರಿಸುವ ಸಾಧನೆಯಲ್ಲಿ ಕಾಣುವ ಸಮಾನಾಂತರ ಅಂಶಗಳು ಸಿಗುತ್ತವೆ. ಕ್ರಿಶ್ಚಿಯನ್ ಸಾಧಕರಲ್ಲಿಯೂ ಇಂತಹ ಹಂತಗಳನ್ನು ಗುರ್ತಿಸಬಹುದು.

೧. Purification or Purgation

೨. Illumination or Englightenment

೩. Unitive Love [೫೪]

ಈ ಮೂರು ಹಂತಗಳಲ್ಲಿ ಮೊದಲು ಮನಸ್ಸನ್ನು ಶುದ್ಧೀಕರಿಸುವದು ನಂತರ ಅದನ್ನು ಜ್ಞಾನದ ಕಡೆಗೆ ಅಣಿಗೊಳಿಸುವದು. ಎರಡನೆಯ ಹಂತದಲ್ಲಿ ಧ್ಯಾನಿಸುವುದರೊಂದಿಗೆ ಜ್ಞಾನದ ಬೆಳಕನ್ನು ಪಡೆಯುವದು, ಕೊನೆಯಲ್ಲಿ ದೈವೀಶಕ್ತಿಯೊಡನೆ ಸಮರಸ ಹೊಂದವದು. ಇದು ಶೋಧನೆ, ದರ್ಶನ ಹಾಗೂ ಸಂಗಮ ಎನ್ನಲೂಬಹುದು. 'ದರ್ಶನ' ಪಡೆಯುವುದು ಅದು ಕೊನೆಯಲ್ಲಿ ಕೊಡುವದು ಸಾಧನೆ ಮಾರ್ಗದ ಹೆಸರು ಅದಾದಂತೆ ನಡೆದು ಸಾಗಿ ಗುರಿಮುಟ್ಟುವ ಪೂರ್ತಿ ಪ್ರಯೋಗಕ್ಕೆ ಅದೇ ಹೆಸರನ್ನು ವ್ಯಾಖ್ಯಾನಿಸಲಾಗುತ್ತದೆ. ಶಿವಾದ್ವೈತದಲ್ಲಿ




The Psychological Basis of

೧. Bhakta Sthala is effective

೨. Mahesha Sthala conative

೩. Prasadi Sthala cognitive

೪. Pranalingi Sthala intuetive

೫. Sharana Sthala excutive

೬. Aikya Sthala is unitive

ಏನನ್ನೋ ನೋಡಲಿಕ್ಕೆ ಹೊರಟ ಸಾದಕಾಪೇಕ್ಷ ಸೃಷ್ಟಿಯ ಮೂಲತತ್ವದ ಶೋಧನೆಯಲ್ಲಿ ಅದು ಹೊರಗಿನಿಂದ ಭೌತಿಕವಾಗಿ ಕಂಡಂತೆ ಆಂತರಿಕವಾಗಿ ಗೋಚರಿಸುವದು ಬಾಹ್ಯವಾಗಿ ಹುಡುಕುವದು ಸಂಶೋಧನೆ, ಆಂತರಿಕವಾಗಿ ಹುಡುಕುವದು ದರ್ಶನ. ಸಂಶೋಧನೆ ಅದು ವಿಜ್ಞಾನ. ದರ್ಶನ ಇದು ಸಂವಿಧಾನ.

ಆ ದರ್ಶನ ಹೊರಗಿನದಲ್ಲ ಅದು ಅಂತರಾಳದ್ದು ಅದರ ಆಳ ಮತ್ತು ಹರವನ್ನು ಸಂತನಲ್ಲಿ ಕಾಣಬಹುದು. ಆ ಬಗೆಯ ಆಂತರಿಕ ಚಿಂತನೆಯಲ್ಲಿ ಹರಿತವಾಗಿ ಪ್ರಯೋಗಿಸಿದರೂ ಕೂಡಾ ಬುದ್ಧಿಗೆ ಅದು ಅಗ್ರಾಹ್ಯವಾಗಿ ನಿಶಬ್ಧಕ್ಕೆ ನಿಂತಂತಾಗುವದು ಅಲ್ಲಿಂದ ಮುಂದಿನ ಅರಿವು ಅನುಭಾವಿಗೆ ಬಿಟ್ಟದ್ದು. ಇದು ಅನುಭಾವಿಗಳ ಲೋಕ ಭಾವನೆ ಅಥವಾ ಭಗವಂತ ಸದಾ ಸನ್ನಿಹಿತ ಎಂಬ ಅನಿಸಿಕೆ, ಈ ಭಗವದ್ದರ್ಶನ ಒಳಗಣ್ಣಿನಿಂದ ಸಾಧ್ಯವೆಂಬುದು ದಾರ್ಶನಿಕ ನಂಬಿಕೆ. ಧರ್ಮ ಮತ್ತು ದರ್ಶನ ಸಂವಾದಿ ಶಬ್ದಗಳಲ್ಲ, ಧರ್ಮದಲ್ಲಿ ದರ್ಶನವಿದೆ ಅದರೊಂದಿಗೆ ಆ ಮತಾಚರಣೆಗಳು ಇವೆ. ದರ್ಶನದಲ್ಲಿ ಮತಾಚರಣೆಗಳಿಲ್ಲ.[೫೫] ಪಾಶ್ಚಾತ್ಯ ಬರ್ಗಸನ್ 'ಅನುಭಾವಿಯ ಮಾರ್ಗ ಅನುಮಾನ ಪ್ರಮಾಣಗಳಿಂದ ಗಳಿಸಿದ ಜ್ಞಾನವಲ್ಲ ಅದು ವಿಶಿಷ್ಟವಾದ ಅಂತರ್ ಭೋಧ ಜನ್ಮವೆಂದು ವಾದಿಸುತ್ತಾನೆ ಮಾತ್ರವಲ್ಲ, ಸತ್ಯಾನುಭಾವ ಆಗಬೇಕಾದರೆ ಕೇವಲ ಅಂತರ್ ಭೋಧೆಯಿಂದ ಮಾತ್ರ ಸಾಧ್ಯ' ಅನ್ನುವನು. ದರ್ಶನ ಶಬ್ದದ ಪ್ರಾರಂಭದ ನೆಲೆ ಅನುಭಾವದಲ್ಲಿಯೇ ಇದೆ.

ಆ ಪರಮಾತ್ಮನ ದರ್ಶನ ನಮಗೆ ದೊರೆಯಬೇಕಾದರೆ ಮೊದಲು ನಾವು ಸುಚಿರ್ಭೂತಗೊಳ್ಳಬೇಕು. ಒಳಗೆ ಮತ್ತು ಹೊರಗೆ ಅಂತರಂಗ ಸಾಧನೆಯು ಅಷ್ಟಾಂಗ ಯೋಗದಿಂದ ಅದರಲ್ಲಿ ಮೊದಲಿನ ಐದು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಇವು ಬಹಿರಂಗದ ಸಾಧನೆಗಳು, ಇನ್ನೂ ಅಂತರಂಗದಲ್ಲಿ ಧ್ಯಾನ, ಧಾರಣ, ಸಮಾಧಿ ಇವುಗಳನ್ನು ಮೊದಲಿನ ಮೂರರೊಂದಿಗೆ ಹೋಲಿಸಬಹುದು.

೧. ಧ್ಯಾನ - Purgatsation

೨. ಧಾರಣ - Illuminition

೩. ಸಮಾಧಿ - Union

ಬಹಿರಂಗದಲ್ಲಿ ಸತ್ಯ ಶುದ್ಧ ಅಹಂಭಾವದ ತ್ಯಾಗ,[೫೬] ಎಲ್ಲವೂ ಅವನೇ 'ತತ್ - ತ್ವಂ - ಅಸಿ' ಅನ್ನುವ ಭಾವದ ಕಸಬರಿಗೆಯಿಂದ ಜಾಡಿಸಬೇಕು. ಹಾಗೆ ಆದಾಗ 'ಅಂತರಂಗ ಶುದ್ಧಿ ಬಹಿರಂಗ ಶುದ್ಧಿ, ಅಷ್ಟೇ ಏಕೆ 'ಕೂಡಲ ಸಂಗಮ ನೊಲಿಸುವಪರಿ' ಈ ಎಲ್ಲ ಅವಶ್ಯಕತೆಗಳು ದರ್ಶನ ಪರಿಕಲ್ಪನೆಯ ಸಾಧನೆಗಳು.

ಅನುಭಾವ ಮಾರ್ಗದ ನೆಲೆಯನ್ನು ತಿಳಿದಂತೆ ಎರಡನೆ ಹಂತದಲ್ಲಿಯ ದರ್ಶನ, ಇದು ಬಾಹೇಂದ್ರಿಯ ಚರ್ಮ ಚಕ್ಷುವಿಗೆ ಗ್ರಾಹ್ಯವಲ್ಲದದು ದರ್ಶನಕ್ಕೆ ಹಾತೊರೆಯುವ ಸಾಧಕ. ಅನುಭಾವದ ಬೆಣ್ಣೆಯನ್ನು ಸವಿಯಬೇಕಾದರೆ, ಅಲ್ಲಿ ಬುದ್ಧಿಯ ಸ್ವಚ್ಛತೆ. ಬುದ್ಧಿ ಮಜ್ಜಿಗೆಯ ವ್ಯವಸಾಯದ ಅಗತ್ಯ ಸಾಕಷ್ಟು, ಆ ಮಜ್ಜಿಗೆ ಕಟೆದಾಗ ಕೊನೆಯಲ್ಲಿ ನವನೀತ ಸಿಗುವದು ಕಣ್ಣು ಕೊರೈಸುವಷ್ಟು ಬೆಳಕು 'ಜೋತಿ ಮುಟ್ಟಿದ ಭಾಗವ ಜ್ಯೋತಿ ಅಪ್ಪುದಯ್ಯ' ಹೃದಯಾಂತರಾಳದಲ್ಲಿ ಎಷ್ಟು ಪರಿಶುದ್ಧತೆ ಇರುವದೋ ಅಷ್ಟು ತೀವ್ರವಾಗಿ ಆ ಸ್ಥಿತಿಯನ್ನು ಹೊಂದಬಹುದು. ಹ್ಯಾಗೆ ಮೀನುಗಾರ ಬಲೆಯನ್ನು ಬೀಸಿ ಮೀನನ್ನು ಹಿಡಿಯುತ್ತಾನೆಯೋ ಅಷ್ಟು ಸುಲಭವಲ್ಲ. ಇದು ಮೀನನ್ನು ಕೈಯಿಂದ ಹುಡುಕಿದಂತೆ ಇಲ್ಲಿಯ ಸ್ಥಿತಿಗತಿ ಕದಡದ ನೀರಿನಂತೆ ನಿಂತಾಗ ಮನಸ್ಸು ಆ ಸ್ಥಿತಿಯನ್ನು ಹೊಂದಬಹುದು. ಆಳವೊಮ್ಮೆ ಅಳೆದರೆ, ಅದನ್ನು ತಿಳಿದುಕೊಂಡಂತೆ, ವಿಶ್ವರೂಪ ದರ್ಶನ ಪಡೆದಂತೆ. ಇಂತಹ ಬೆಳಕನ್ನು ಕಂಡ ಪರಿ ಭಗವದ್ಗೀತೆಯಲ್ಲಿ 'ದಿವ್ಯಂ ದಧಾಮಿತೇ ಚಕ್ಷು: ಪಶ್ಯಮೇ ಯೋಗಮೈಶ್ವರಂ' ಎಂದು ಕೃಷ್ಣ ಅರ್ಜುನನಿಗೆ ಅಂತಶ್ಚಕ್ಷು ದಯಪಾಲಿಸಿದ ಹಾಗೆಯೇ 'ರುಡಾಲ್ಪ ವಟ್ಟೊ' ಈ ವಿಶ್ವರೂಪ ದರ್ಶನವು ಭಗವದ್ಗೀತೆಯ ತಿರುಳು ಅನ್ನುವನು.

ಭಗವದ್ದರ್ಶನಕ್ಕೆ ಪಾಂಡಿತ್ಯವಾಗಲೀ, ತಪಸ್ಸಾಗಲೀ, ವಿದ್ಯೆಯ ಬದ್ಧತೆಯಾಗಲಿ ಸಂಬಂಧವಿಲ್ಲ. ಭಕ್ತಿ ತನ್ಮಯತೆಯಿಂದ ಮಾತ್ರ ಸಾಧ್ಯ. ಇಲ್ಲಿ ಸೂಫಿಗಳು, ದಾಸರು, ವಚನಕಾರರು ಎಲ್ಲರೂ ಕೂಡಾ ಅನುಭಾವಿಗಳಾದಂತೆ, ಇತರರಿಗೆ ದಾರ್ಶನಿಕರು ಕೂಡಾ ಪ್ರಭು ಒಬ್ಬ ಅನುಭಾವಿ ಇತರರಿಗೆ ದಾರ್ಶನಿಕ. ಹರಿಹರನಂತೆ, "ಚಲಿಸದಲುಗದ ಲಿಂಗನಿಜ ಸಿದ್ಧನೊಪ್ಪಿರಲು ಭತ್ತಿಯಲ್ಲಿ ಎಣ್ಣೆಯಲ್ಲಿದ ದೀಪ್ತಿ ಒಳ ಒಳಗೆ ....." ಇದು ವಿರಾಟದರ್ಶನ, ಅನುಭಾವಿ ತನ್ನ ಸಾಧನೆ ಮಾಡುವಾಗ ಅನೇಕ ದು:ಖಕರ, ಖೇದಕರ, ವಿರಹದ ಪ್ರಸಂಗಗಳನ್ನು ಎದುರಿಸುವ ಪ್ರಮೇಯ ಬರುತ್ತದೆ. ಆಗ ಆತನಿಗೆ ಭಗವದ್ದರ್ಶನತೆಯ ತೀವ್ರತೆ ಉಂಟಾಗುತ್ತದೆ. ಈ ತೀವ್ರತೆಯ ತುಡಿತವನ್ನು, ಅವರು ಶಬ್ದಗಳ ಮುಖಾಂತರ ಹೊರಬರುವ ಈ ಅನುಭಾವಿಕ ನುಡಿಗಳು, ಅವುಗಳಲ್ಲಿ ಮನೋ ವೇದನೆಗಳನ್ನು ಕಾಣಬಹುದು. ಅಲ್ಲಿ ನೋಡುವ ವ್ಯಕ್ತಿ ಅನ್ನುವ ಸ್ಥಿತಪ್ರಜ್ಞ ಮಾತ್ರ ಇರವನು. "Our Sweetest Sangs tell of Saddest thought" ಅಂದರೆ ನಮ್ಮ ಅತಿ ಮಧುರ ಗಾನ ನಮ್ಮ ಅಂತರ್ವೇದನೀಯ ಉಚ್ಚಾರ.

ಒಬ್ಬ ಸೂಫಿ ಹೇಳುವಂತೆ ಪರಮಾತ್ಮ ನಿನ್ನಲ್ಲಿ ಬೆರೆತು ಪ್ರತ್ಯೇಕವಾದ ನಿನ್ನತನವನ್ನು ಮರೆ ಮಾಡುವವರೆಗೂ ಈ ಮಾರ್ಗದಲ್ಲಿ ಮುಂದುವರೆಯಬೇಕು. ಆಗ ನಿನ್ನ ಪ್ರಜ್ಞೆ ನಿನ್ನಲ್ಲಿರುವದಾದರೆ ಅದು ಅವನ ಪ್ರಜ್ಞೆ, ನೀನಾಡುವ ಮಾತು ಅವನದು, ಈ ಸತ್ಯ ನೀನು ಎನ್ನುವದು ಅವನೇ ಆ ಸತ್ಯ ಎಂದಾಗುವದು.[೨೨] ಅನುಭವಿ ಅನುಭಾವಿಯಾದ ಮೇಲೆ ಆತ ನುಡಿದದ್ದೆಲ್ಲಾ ಅನುಭಾವ. ಆತನ ಮನಸ್ಸು ನಿತ್ಯದಲ್ಲಿ ಹುದುಗಿದ ಸತ್ಯವನ್ನು ಶೋಧಿಸಬಲ್ಲದು. ಅನುಭಾವ ಒಂದು ಹಂತದಲ್ಲಿ ಬದುಕನ್ನು ಬಿಟ್ಟು ದೂರ ಉಳಿಯುವದಲ್ಲ, ಬದುಕಿನ ಜೊತೆಜೊತೆಗೆ ಸಾಗುವಂತಹದು. ಅಂದರೆ ಕೇವಲ ಬಾಹ್ಯದ ಜೊತೆಗೆ ಬಾಳುವುದೇ ಗುರಿಯಲ್ಲ. ಅದರೊಂದಿಗೆ ಸೇರಿ ಹೋಗಿ ಕೊನೆಗೆ ಪರಮಾರ್ಥ ಗುರಿಯನ್ನು ತಲುಪುವುದು. ವಚನಕಾರರು ತಮ್ಮ ಅಂತರ ನಿವೇದನೆಯನ್ನು ವಚನಗಳ ಮುಖಾಂತರ ಅನುಭಾವದ ಬಗ್ಗೆ ವಿಶಿಷ್ಟ ರೀತಿಯಲ್ಲಿ ಹೇಳಿರುವರು. ವಚನಕಾರರೆಲ್ಲಾ ಅನುಭಾವಿಗಳೇ. ಇದು ತನ್ನಲ್ಲಿಯ ಮನದ ಆಳವನ್ನು ಗುರುತಿಸುವ ಮಾಪನಗಳು ಮರಕ್ಕೆ ಮರ ತಿಕ್ಕಿದಾಗ, ಕಲ್ಲು ಕಲ್ಲನ್ನು ತಿಕ್ಕಿದಾಗ, ಬೆಂಕಿ ಹೊರಡುವಂತೆ ಆತ್ಮವು ಮತ್ತೊಂದು ಆತ್ಮದ ಜೊತೆಗೆ ಮತಿಸಿದಾಗ ಅಲ್ಲಿ ದೊರೆಯುವದು ಅನುಭಾವವೆ ಸರಿ. ಒಂದು ಆತ್ಮ ಇನ್ನೊಂದು ಆತ್ಮ ಎಂದರೆ ಪರಮಾತ್ಮ ಇವುಗಳು ಮಥನಗಳ ಕಥನವಿದು.

ತನ್ನನ್ನು ತಾನು ಅರಿಯುವದು ಅದರಂತೆ ಬಾಹ್ಯಜಗತ್ತಿನ ಮೂಲವನ್ನು ಶೋಧಿಸುವಿಕೆಯೊಳಗೊಂಡಂತೆ ನಾನು ಯಾರು? ಇಲ್ಲಿ ಏಕೆ ಬಂದೆ? ಇದಕ್ಕೆ ಕಾರಣವಾದರು ಏನು? ಇದಕ್ಕೆ ಉತ್ತರವು ಅನುಭಾವ. ನಾನು ಸ್ವತಃ ಶಿವನು ಅನ್ನುವದನ್ನು ಕಂಡುಕೊಂಡು ಹೇಳಿದರನೆ ಅದಕ್ಕೆ ನೆಲೆ ಬೆಲೆಯುಂಟು. ಈಶ್ವರನನ್ನು ದರ್ಶಿಸಿದವ ಈಶ್ವರ. ಎಲ್ಲ ಸಾಧಕರಿಗೂ ಆ ಭಗವಂತನೊಡನೆ ಸೇರಬೇಕೆಂಬ ಗುರಿ ಇದ್ದೇ ಇದೆ. ಅದರಲ್ಲಿ ಪ್ರಭು ಒಬ್ಬ. ಶಬ್ದವು ಜೋರಾಗಿ ಕೂಗಿದಾಗ ಪರ್ವತದಿಂದ ಪ್ರತಿಧ್ವನಿಸುವಂತೆ ದೃಕ್ ವು ಜೋರಾದಾಗ ಅದು ಪ್ರತಿಫಲಿಸಿ ಅಂತರಕ್ಕೆ ಇಳಿಯಬಹುದೇನೋ ಎಂಬಂತಿದೆ ಇಷ್ಟಲಿಂಗ ಉಪಾಸನೆ. ಈ ಲಿಂಗೋಪಾಸನೆಯಲ್ಲಿ ಲಿಂಗ ಕಣ್ಣಳತೆಯ ಸಮಾನಾಂತರದಲ್ಲಿದೆ. ಇದಕ್ಕೆ ಪ್ರಭು "ಕೈತಪ್ಪಿ ಮನದಲ್ಲಿ ಸಿಕ್ಕಿತೆಂಬ ಲಿಂಗ" ಬಯಲು ಬಯಲನ್ನಪ್ಪಿದಂತೆಯೇ ಸರಿ ಏಕೆಂದರೆ ಅಲ್ಲಿ ವ್ಯಕ್ತಿತ್ವ ಲಯವಾಗಿ ಬಯಲು

ಪರಿಮಾಣ, ಆಕಾರ ನಿರಾಕಾರವಾದಂತೆ ಶಿವನೊಡನೆ ಏಕಾರ್ತವಾಗುವ ನಿಮಿತ್ಯ ಮಾತ್ರ ಮನುಷ್ಯನಿದ್ದಂತಿದೆ. ವಚನಗಳಲ್ಲಿ ಕಾಣುವಂತೆ ಶಿಷ್ಯ ಎನ್ನುವ ಬಾಣ, ಶಿವನೆನ್ನುವ ಲಿಂಗದೊಡನೆ ಸೇರಿ ಅಲ್ಲಿಯ ಕೂಡಿ ಶಿವನಾದ ಬಳಿಕ ಮರಳಿ ಮೊದಲಿನ ಬಾಣವನ್ನು ಗುರುತಿಸಲಿಕ್ಕೆ ಆಗದು. ಹಾಗೆ ಸಾಧಕನು ಮೊದಲು ತನ್ನನ್ನು ಅಣಿಗೊಳಿಸುವ ಅಂದರೆ ಶುದ್ಧೀಕರಿಸುವತ್ತ ದೃಷ್ಟಿ ಹಾಯಿಸುವನು. ತದನಂತರದಲ್ಲಿ ಅವನಲ್ಲಿ ನಂಬಿಕೆ ಶುರುವಾದಂತೆ ನೀತಿ - ನಿಯಮಗಳನ್ನು ಪಾಲಿಸುತ್ತ ಎಚ್ಚರಿಕೆಯಿಂದ ಯಾವುದೇ ವಾಮ ಮಾರ್ಗವನ್ನು ಹಿಡಿಯದೇ, ಅಲ್ಲಿ ಅನುಭವಯುಕ್ತವಾದ ಮಾರ್ಗದಲ್ಲಿ ಸಾಗಿದಾಗ ಮುಂದೆ ಅಲ್ಲಿ ಜ್ಞಾನದೀಪ ಬೆಳದಂತೆ ಕಾಣುತ್ತಾ ಅದನ್ನು ನೋಡಿ ತನ್ನ ತಾ ಮರೆಯುತ್ತಾ ಸಮರಸ ಏಕೀಕೃತವಾದಾಗ ಷಟಸ್ಥಲ ಮೆಟ್ಟಿಲುಗಳನ್ನು ಸಾಧಿಸಿದಂತೆ ಐಕ್ಯಸ್ಥಲ ತಲುಪುವನು.[೫೮] ಇದು ಸದೇಹ ಮುಕ್ತಿ ವಿಧೇಯ ಮುಕ್ತಿಯನ್ನು ವಚನಕಾರರು ಅಷ್ಟೊಂದು ಬಯಸಿಲ್ಲ. ಬಯಲೊಳಗೆ ಬಯಲೊಗೆದು ಅನ್ನುವ ಮಾತು ಆನಂದದ ಸವಿಯನ್ನು ಉಪನಿಷತ್ತುಗಳಲ್ಲಿ ವಚನಕಾರರಂತೆ ದೊರೆಯುವದು. ಅಲ್ಲಿ ಒಂದೊಂದು ಕೋಶಗಳು ಕಳಚುತ್ತಾ ಮೇಲಕ್ಕೇರಿದರೆ ಇಲ್ಲಿ ಯಾವುದನ್ನು ಕಳಚುವ ಹಾಗಿಲ್ಲ. ಆನಂದ ಸಮರಸದಲ್ಲಿ ಅನುಭಾವಿ ಆ ಪರಮನಲ್ಲಿ ಭಕ್ತಿಸ್ಥಲ ಆಚರಣೆಯನ್ನು ಗರ್ಭೀಕರಿಸಿಕೊಂಡಿರುವಾತ. ಐಕ್ಯಸ್ಥಲದಲ್ಲಿದ್ದುಕೊಂಡೇ ಭಕ್ತಿಸ್ಥಲದ ಆಚರಣೆಯನ್ನು ಮಾಡುತ್ತಿರುವನು. ಇಲ್ಲಿಯ ಭಾವದ ಬೆಳಗು ಭಾಷೆಯಾಗಿ ಹೊರಬಂದ ಸಂವಾದ ರೂಪಿ ಶರಣರ ವಚನಗಳು ಅಂತರಂಗದ ಅನುಭಾವಿ ಬೀಜಗಳು ದರ್ಶನ ಮನಸ್ಸು ಸ್ಥಿರೀಕೃತ ಸ್ಥಿತಿಯಲ್ಲಿ ಉದ್ಭವಿಸಿದ ಬ್ರಹ್ಮ ಬೀಜ. ಅದರಂತೆ ಈ ಅನುಭಾವದ ಎಲ್ಲವನ್ನು ಭಾಷೆಯಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ಅದರ ಬಗ್ಗೆ ಸಾಧ್ಯವಾದ ಸಾಧ್ಯತೆಯ ಅಂತರ್ವೇದಿಸಿ ಅದರ ಸುತ್ತಮುತ್ತಲಿನ ವ್ಯಾಖ್ಯಾನಗಳಾಗುವದರಲ್ಲಿ ಸಂದೇಹವಿಲ್ಲ. ಅನುಭಾವದ ವ್ಯಾಖ್ಯೆಗಳು ಪ್ರತಿಯೊಬ್ಬನನ್ನು ಅನುಭಾವದ ನೆಲೆ ಒಯ್ಯಬೇಕೆಂದೇನಿಲ್ಲ. ಆದರೆ ಆ ಕ್ಷೇತ್ರಕ್ಕೆ ಸಮೀಪ ಇರಬೇಕಾದ ಶುದ್ಧೀಕರಣ ದೆಶೆಯಲ್ಲಿ ಇತರರು ಅದನ್ನು ಅನುಭವಿಸಿದ ಪರಿಯಲ್ಲಿ ಆಚಾರ ವಿಚಾರಗಳ ಜ್ಞಾನ ಕ್ರಿಯೆಗಳ ಸಮಾಗಮ ಪ್ರಸಂಗದಲ್ಲಿ ೧೨ನೇ ಶತಮಾನದ ಅನುಭಾವ ಒಂದು ವಿಶಿಷ್ಟದಾಯಕ ಭಕ್ತಿ ರಸ. ಪ್ರತಿಯೊಬ್ಬ ಪ್ರಗತಿದಾಯಕ ದಾರ್ಶನಿಕ, ತನ್ನದೇ ಆದ ವ್ಯಾಖ್ಯಾನವನ್ನು ಕೊಡುವ ಭಕ್ತಿ, ಭಾಷ್ಯದಲ್ಲಿ ಶೋಧನೆ ಮಾಡುತ್ತಾ ಅಂತರಂಗ ಶೋಧನೆಯಲ್ಲಿ ತೊಡಗಿದ. ಅನುಭಾವಗಳನ್ನು ಭಾಷ್ಯೀಕರಿಸಿದಾಗ ಅವು ದಾರ್ಶನಿಕ ವ್ಯಾಖ್ಯಾನಗಳಾಗುವವು. ದರ್ಶನೀಯ ವಿಷಯವನ್ನು ಹೇಳಲಿಕ್ಕೆ ಹೋದಾಗ ಬೆಳಕನ್ನು ಹೇಳುವದು. ಕೊನೆಯ ಸ್ಥಿತಿ ಅದಕ್ಕಿಂತ ಹೆಚ್ಚಿನದನ್ನು ಹೇಳಲಿಕ್ಕೆ ಅವರ ಮನಸ್ಸು ಬಾಯಿ ದೃಷ್ಟಿಗಳು ನಿಲ್ಲುತ್ತವೆ ಎನ್ನಬಹುದು. ಅವರೆಲ್ಲರೂ ಮಹಾದೃಕ್‌ವನ್ನು ನೋಡಿ ತಮ್ಮ ಸ್ಫುರಣಕ್ಕೆ ಸಂಬಂಧಿಸಿದಂತೆ ಹೇಳುವರು. ಹೀಗೆ ಹೇಳುವಾಗ ಬೇಧ, ವಿಬೇಧಗಳು, ದ್ವೈತಾದ್ವೈತ ಸ್ಥಿತಿ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ, ಅಚಿಂತೆಬೇದ ಸ್ಥಿತಿಗಳು ರೂಪಗೊಳ್ಳುವವು. ಅವೆಲ್ಲವು ಆ ಮಹಾನ್ ದೃಶ್ಯದ ದರ್ಶಿಸಲು ಪ್ರಯತ್ನಿಸಿ ಪಡೆದ ಫಲ ಮಾರ್ಗಗಳು ಪ್ರಜ್ಞಾವಂತ ಮನುಷ್ಯ ಜೀವರಿಗೂ, ಸೃಷ್ಟಿಕರ್ತನಿಗೂ, ಜಗತ್ತಿಗೂ ಇವುಗಳ ಪರಸ್ಪರ ಸಂಬಂಧ ವಿಚಾರಿಸ ಹೊರಟಾಗ ಆ ದಿಶೆಯಲ್ಲಿ ವ್ಯವಸ್ಥಿತವಾದ ಒಂದು ವಿಚಾರವೇ ತತ್ವಶಾಸ್ತ್ರ.

ಇಲ್ಲಿ ಎರಡು ಮುಖಗಳನ್ನು ನೋಡಬಹುದು. ಒಂದು ಮೂಲಭೂತವಾದ ತತ್ವಗಳ ಜಿಜ್ಞಾಸೆಯನ್ನು ಶೋಧಿಸಲಿಕ್ಕೆ ಪ್ರಾರಂಭಿಸುವದು. ನಂತರದಲ್ಲಿ ತತ್ವ ತಿಳಿದಾದ ಮೇಲೆ ಅರಿತು ಅನುಭವಿಸುವದು. ಅದು

ತತ್ವಾನುಭವ ಅಥವಾ ಅನುಭಾವ ಎರಡು ಅರ್ಥಗಳು ಒಂದೇ ಆದರೂ ಒಂದರಲ್ಲಿ ಸಾಧ್ಯತೆ ಇನ್ನೊಂದರಲ್ಲಿ ಸಿದ್ಧತೆ ಇದೆ. ಪಂಚಭೂತಗಳಿಂದ ಪ್ರಪಂಚ ಸೃಷ್ಟಿ ಕಂಡುಕೊಳ್ಳುವದು. ತತ್ವಾನುಭವ ಆದರೆ ಇದನ್ನು ಸೃಷ್ಟಿಸಿದ ಭಗವಂತನನ್ನು ದರ್ಶಿಸುವದು. ಅದು ಅನುಭಾವ ಗಮ್ಯ, ಇಂದ್ರಿಯ ಅಗಮ್ಯ, ಈ ಜಗತ್ತಿನ ಹಲವಾರು ವಿರುಪೇರುಗಳನ್ನು ವೈಪರೀತ್ಯ ಚಮತ್ಕಾರಗಳನ್ನು ನೋಡಿದಾಗ ಇದನ್ನು ಆಯೋಜಿಸಿದ ಒಂದು ಅದೃಶ್ಯ ಶಕ್ತಿಯನ್ನು ಊಹಿಸಿಕೊಳ್ಳಬೇಕಾಗುತ್ತದೆ. ವಿಜ್ಞಾನವು ಇದನ್ನು ತಿರಸ್ಕರಿಸಲು ಸಾಧ್ಯವಿಲ್ಲ. ವಿಜ್ಞಾನವು ಈಗಿರುವ ಸೃಷ್ಟಿಯಲ್ಲಿ ಭೂಮಿಯ ವಯಸ್ಸನ್ನು ಅದರಲ್ಲಿರುವ ಖನಿಜಗಳನ್ನು, ಹೊಸ ಹೊಸ ವಸ್ತುಗಳನ್ನು ಶೋಧಿಸಲು ಪ್ರಯತ್ನಿಸುತ್ತದೆ. ಇದ್ದ ವಸ್ತುಗಳಿಂದ ಅದರ ಅಂತರಾಳ ಶೋಧನವು ಇಲ್ಲಿ ಸಾಧ್ಯವೇ ಹೊರತು, ಆ ವಸ್ತುಗಳು ರೂಪಗೊಳ್ಳಲು ಏನು ಕಾರಣ ಈ ಭೂಮಿ ಏಕೆ ಉಂಟಾಯಿತು. ಅನ್ನುವದನ್ನು ತಿಳಿಯಲು ಅದು ಸೋಲುತ್ತದೆ. ಅದು ಕೇವಲ ಇದ್ದುದರ ಬಗ್ಗೆ ಅಭ್ಯಾಸವೇ ಹೊರತು, ಅದರ ಅಸ್ತಿತ್ವದ ಅಭ್ಯಾಸದ ಬಗ್ಗೆ ಸೋಲುವ ಪ್ರಸಂಗದಲ್ಲಿ ತತ್ವಜ್ಞಾನವು ಅದನ್ನು ಕೈಗೆ ತೆಗೆದುಕೊಳ್ಳುವದು.

ಈ ಸೃಷ್ಟಿಯು ಮೂಲ ಪರಮಾಣುಗಳಿಂದ ರಚಿತವಾಗಿದೆ. ಆ ಪರಮಾಣು ಪ್ರೋಟಾನ್, ನ್ಯೂಟ್ರಾನ್, ಎಲೆಕ್ಟ್ರಾನುಗಳಿಂದ ರಚಿತವಾಗಿರುವದನ್ನು ಕಂಡುಹಿಡಿಯುವದು, ವಿಜ್ಞಾನ ಇಲ್ಲಿ ವಿಜ್ಞಾನದ ಕಾರ್ಯಸುತ್ತ್ಯವಾದರೂ ಅದುವೇ ಕೇವಲ ಕೊನೆಯಲ್ಲಿ ಇದ್ದುದ್ದನ್ನು ಶೋಧಿಸುವದರಲ್ಲಿ ಪರ್ಯಾವಸಾನ. ಇಲ್ಲಿ ವಿಜ್ಞಾನದ ಕಾರ್ಯವು ತತ್ವಜ್ಞಾನದ ಮೇಲೆ ಪರಿಣಾಮ ಬೀರಬಹುದಾದರೂ ತತ್ವಜ್ಞಾನದ ತೃಷೆ ಅಲ್ಲಿಗೆ ನಿಲ್ಲದೆ ಈ ಸೃಷ್ಟಿಯ ಮೂಲಕಾರಣ ಕರ್ತೃ ಯಾರು ಅನ್ನುವದನ್ನು ಶೋಧಿಸಲಿಕ್ಕೆ ಪ್ರಾರಂಭಿಸಿ ದರ್ಶಿಸಿ ದರ್ಶನವನ್ನು ನೀಡುವದು. ವಿಜ್ಞಾನ ಬಹಿರ್ಮುಖವಾಗಿ ಕೆಲಸಮಾಡಿದರೇ ತತ್ವಜ್ಞಾನ ಅಂತರಮುಖವಾಗಿ ಕೆಲಸ ಮಾಡುವದು. ವಿಜ್ಞಾನವು ದೂರದರ್ಶನ ಸಹಾಯದಿಂದ ಭೂಮಂಡಲ ಹಾಗೂ ಖಗ ಮಂಡಲಗಳನ್ನು ಅಭ್ಯಸಿಸಿ ಅನಂತಾನುಕೋಟಿ ನಕ್ಷತ್ರ ಪುಂಜಗಳು, ಗ್ರಹಗಳು, ಉಪಗ್ರಹಗಳು, ಸೂರ್ಯಪುಂಜ, ಕಗ್ಗತ್ತಲಿನ ಖಗೋಳದಲ್ಲಿ ಭೂಮಿಯಂತೆ ಅನಂತಾನಂತ ಭೂಗಳುಂಟು. ಇವೆಲ್ಲವುಗಳನ್ನು ಊಹಿಸಿಕೊಳ್ಳುವಾಗ ಮನಸ್ಸು ತತ್ತರಿಸಬಹುದು. ಈ ಸೃಷ್ಟಿಯನ್ನು ಒಂದು ಮರಕ್ಕೆ ಹೋಲಿಸಿದಾಗ ಅದರ ಮೂಲ ಬೇರು ದಿವ್ಯಚೇತನ.

ಎಲ್ಲ ಜನಸಮುದಾಯವು ತಮ್ಮ ಮನೋಧರ್ಮ ಸನ್ನಿವೇಶ ಸಂದರ್ಭಗಳಲ್ಲಿ ಕಂಡುಕೊಂಡಂತೆ ಉತ್ತರ ಸಿದ್ಧಪಡಿಸಿಕೊಂಡಿವೆ. ಇಲ್ಲಿ ತತ್ವಶಾಸ್ತ್ರ ಕೇವಲ ಜಿಜ್ಞಾಸೆಗಾಗಿ ಅಲ್ಲ, ಅದರಂತೆ ಧರ್ಮ ಮತ್ತು ತತ್ವಶಾಸ್ತ್ರ ಸಂಬಂಧಯಿಲ್ಲದೆಯು ಇಲ್ಲ. ಒಂದರಿಂದ ಇನ್ನೊಂದು ಬೆಳೆಯಬೇಕು. ಧರ್ಮಕ್ಕೆ ತತ್ವಶಾಸ್ತ್ರ ತಳಹದಿಯಾಗಿ ಬೆಳೆಯಿತು. ಪ್ರತಿಯೊಂದು ಧರ್ಮಕ್ಕೆ ತನ್ನದೇ ಆದ ದರ್ಶನ ಒಳಗೊಂಡಿದೆ. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಸಾಗಿದರು. ಶಂಕರಾಚಾರ್ಯರು ಈ 'ಸೃಷ್ಟಿ ಮಿಥ್ಯ ಜೀವ - ದೇವ ಬೇರೆ ಬೇರೆ ಅಲ್ಲ ಇದು ತೋರಿಕೆಯ ಬೇಧ, ಮಾಯಾ ಬಂಧನವನ್ನು ಕಳಚಿ ಜೀವ ದೇವನಾಗುತ್ತಾನೆ, ಅನ್ನುವ ಅದ್ವೈತ ಅವರದು. ಮದ್ವಾಚಾರ್ಯರು ಜಗತ್ತು ಸತ್ಯವಾದದ್ದು, ಜೀವಗಳು ಬೇರೆ, ದೇವ ಬೇರೆ, ಮುಕ್ತಿಯಲ್ಲಿಯೂ ಕೂಡಾ ಜೀವರುಗಳು - ದೇವನಿಂದ ಬೇರೆ ಬೇರೆಯಾಗಿಯೆ ಉಳಿಯುವವು, ಇದು ದ್ವೈತ. ಇವರಿಬ್ಬರ ಮಧ್ಯದಲ್ಲಿ ರಾಮಾನುಜಾಚಾರ್ಯರು ಜೀವರುಗಳಲ್ಲಿರುವ ಬೇಧವು ಪರಸ್ಪರ ಹೊರಗಿನ ಆವರಣಗಳಾದ ದೇಹದಿಂದ ಉಂಟಾದುದು, ಮೂಲತಃ ಜೀವರುಗಳೆಲ್ಲಾ ಸ್ವರೂಪದಲ್ಲಿ ಸಾಮಾನ್ಯವಾದವುಗಳು. ಜೀವರುಗಳಿಗೂ

ಶಿವನಿಗೂ ಕೆಲವು ವಿಷಯಗಳನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಅತ್ಯಂತ ಸಾಮ್ಯ, ಜೀವಾತ್ಮ ಕೆಲವು ವಿಷಯಗಳನ್ನು ಬಿಟ್ಟು ಪರಮಾತ್ಮ ಸಾಮ್ಯವೆಂಬ ಪರಮ ಪುರುಶಾರ್ಥ ಪಡೆಯುವುದೇ ಮೋಕ್ಷ ಎಂಬ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸಿದರು. ಇವರೆಲ್ಲರಿಗೂ ಸನಾತನವಾದ ಉಪನಿಷತ್ತುಗಳೇ ಆಧಾರ. ತಮ್ಮ ಅನಿಸಿಕೆಯಂತೆ ಅವುಗಳನ್ನು ಒಗ್ಗಿಸಿಕೊಂಡರು ಇವೆಲ್ಲವುಗಳು ಸತ್ಯವಾದವುಗಳೆ. ಆಯಾ ಪಾರ್ಶ್ವಗಳಿಂದ ನಿಂತು ನೋಡಿದಾಗ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮೂರು ಕೂಡಾ ಸತ್ಯವನ್ನೇ ಕಂಡುಕೊಳ್ಳುತ್ತವೆ. ಪೌರ್ವಾತ್ಯ ದರ್ಶನ ಕಲ್ಪನೆಯಲ್ಲಿ ಇವು ಮೂರು ದಾರ್ಶನಿಕ ಪರಿಕಲ್ಪನೆಗಳನ್ನು ಕಾಣುತ್ತೇವೆ. ಪೌರ್ವಾತ್ಯ ದಾರ್ಶನಿಕ ಪರಿಕಲ್ಪನೆ ಅನ್ನುವದು ಈ ಮೂರರಿಂದಲೇ ಕಂಡುಕೊಳ್ಳಬಹುದು.

ಭಾರತದ ವಾತಾವರಣ, ಮೂರು ಕಡೆ ನೀರು, ಒಂದು ಕಡೆ ಪರ್ವತ ಇದ್ದು ಸುಖಕರವಾಗಿದ್ದರಿಂದ ಮಾನವ ಮನಸ್ಸು ತತ್ವ ವಿಚಾರದಲ್ಲಿ ಆಸಕ್ತಿ ಹೊಂದುವಂತಾಯಿತು. ಬರಬರುತ್ತಾ ತತ್ವಶಾಸ್ತ್ರವೇ ಎಲ್ಲದಕ್ಕೆ ಮೂಲ ಎನ್ನುವಂತಾಯಿತು. ಅಷ್ಟೇ ಏಕೆ ತತ್ವಶಾಸ್ತ್ರವನ್ನು ಜನರು ತಮ್ಮ ಪ್ರಾಣವೆಂದು ಬಗೆದರು. ಪಾಶ್ಚಾತ್ಯ ಪ್ಲೇಟೊ ಹೇಳುವಂತೆ 'ದೇಶವನ್ನು ತತ್ವಶಾಸ್ತ್ರಜ್ಞರೇ ಆಳಬೇಕು' ಅನ್ನುವ ನಿಟ್ಟಿಗಿಂತ ಮೊದಲು ಇದನ್ನು ಭರತಖಂಡದಲ್ಲಿ ಜನಕ ಮೊದಲಾದ ತತ್ವಶಾಸ್ತ್ರಜ್ಞರು ರಾಜ್ಯವಾಳಿದ್ದಾರೆ. ಅಲ್ಲಿ ಪ್ಲೋಟೊ ಹೇಳಿದ್ದು ಇಲ್ಲಿ ಪ್ಲೋಟೊ ಕಾಲಕ್ಕಿಂತ ಮುಂಚೆ ಅನುಭವಕ್ಕೆ ಬಂದುಹೋಗಿದೆ. ಜೀವ - ಜಗತ್ತು - ಈಶ್ವರ ಇವುಗಳ ಬಗ್ಗೆ ಚಿಂತನೆ ನಡೆಯುತ್ತಿತ್ತು. ಇವುಗಳ ಪರಸ್ಪರ ಸಂಬಂಧಗಳ ಅಭ್ಯಾಸವೆ ದರ್ಶನ, ಶಾಸ್ತ್ರ. 'ಇಲ್ಲಿ ದರ್ಶನವೆಂದರೆ ವೇದ, ದರ್ಶನಶಾಸ್ತ್ರವೆಂದರೆ ವೇದವನ್ನು ಅಧಿಕ್ಕರಿಸಿಕೊಂಡ ಶಾಸ್ತ್ರ. ಇದು ಉದಾತ್ತರೀತಿಯ ತತ್ವಶಾಸ್ತ್ರ.' ವೇದವನ್ನು ಅಂಗೀಕರಿಸಿದ ತತ್ವಶಾಸ್ತ್ರವನ್ನು ದರ್ಶನವೆಂದು ಕರೆಯುವರು. ಇಲ್ಲಿಯ ಮೀಮಾಂಸಕರಿಗೆ ತಾತ್ವಿಕ ವಿಚಾರದಲ್ಲಿ ಸ್ವತಂತ್ರ ಅಧಿಕಾರವಿರುವದರಿಂದ ಬಹಳಷ್ಟು ಚಿಂತಕರು ಇಲ್ಲಿ ಪ್ರವರ್ತಕರಾದರು. ದುಃಖಮಯ ಪ್ರಪಂಚದಿಂದ ಬಿಡುಗಡೆಹೊಂದಿ ಸತ್ಯ ಸುಖವನ್ನು ಪಡೆಯಲು ಹೇಳುವ ಶಾಸ್ತ್ರಗಳು ಈ ತತ್ವಶಾಸ್ತ್ರಗಳು. ಮದ್ವಾಚಾರ್ಯರ ಇನ್ನೊಂದು ಹೆಸರು ಆನಂದತೀರ್ಥ. ಅಂದರೆ ಮೋಕ್ಷಾನಂದವನ್ನು ಪಡೆಯುವ ತೀರ್ಥರೆಂದಾಗಿರಬಹುದು. ದುಃಖ ಸಂಸಾರವನ್ನು ನಿವೃತ್ತಿಕರಿಸಿ ಸರಿಯಾದ ಪಥದತ್ತ ಸಾಗುವ ಭಾಗ ಅದು ದರ್ಶನಗಳನ್ನು ಅರಿಯುವದರಿಂದ ಬುದ್ಧಿಯು ಶುದ್ಧವಾಗುವದು. ದರ್ಶನಗಳು ಬಹುತೇಕ ಯುಕ್ತಿಮಯ ಬ್ರಹ್ಮಮೀಮಾಂಸಶಾಸ್ತ್ರದಲ್ಲಿ ಬಾದರಾಯಣರು ಮುಕ್ತಿಯನ್ನು ಕೊನೆಯದಾಗಿಸಿದ್ದಾರೆ. ಇಲ್ಲಿ ತತ್ವಶಾಸ್ತ್ರೀಯವಾಗಿ ಕಾಲಗಳ ವಿಂಗಡನೆಯಾಗಿದೆ. ಮೊದಲನೆಯದು ವೇದಗಳ ಕಾಲ ಅದು ಕ್ರಿ.ಪೂ. ೧೦೦೦ ದಿಂದ ಕ್ರಿ.ಪೂ. ೫೦೦ ರವರೆಗಿನ ಕಾಲ ಈ ಅವಧಿಯಲ್ಲಿಯಲ್ಲಿಯೇ ನಾಲ್ಕು ವೇದಗಳು ರಚಿತವಾದವುಗಳು. ಕ್ರಿ.ಪೂ. ೫೦೦ರ ಹಿಂದೆ ಯಾವುದೇ ಕಾಲದಲ್ಲಿ ರಚಿತವಾದವುಗಳೆಂದರೆ ಸರಿ. ಕ್ರಿ.ಪೂ. ೫೦೦ರ ನಂತರ ಕಾಲವನ್ನು ವೇದಾನಂತರ ಕಾಲವೆನ್ನಬಹುದು. ಇಲ್ಲಿ ನಾಸ್ತಿಕ ಮತಗಳು ಚಾರ್ವಾಕ, ಬೌದ್ಧ ಮತ್ತು ಜೈನ, ಪೌರ್ವಾತ್ಯ ದರ್ಶನದಲ್ಲಿ ನಾವು ವೇದಗಳ ಕಾಲದಿಂದ ಹಿಡಿದು ೧೨ನೇ ಶತಮಾನದ ವಚನಕಾರರ ಕಾಲದವರೆಗೂ ನೋಡಲಾಗಿದೆ. ಇಲ್ಲಿ ದರ್ಶನ ಪರಿಕಲ್ಪನೆಯ ವಿವರಣೆ ಮಾತ್ರ ಹೇಳಿ ಮುಂದೆ ಸಾಗಲಾಗಿದೆ. ಪ್ರತಿ ದಾರ್ಶನಿಕರ ಕಲ್ಪನೆ ಹೇಗಿತ್ತು ಎಂಬುದನ್ನು ಹೇಳಿದೆ. ಅವರವರ ಸಮಗ್ರ ದಾರ್ಶನಿಕರನ್ನು ಹೇಳುವದು ಅವಶ್ಯವಿಲ್ಲ. ವೇದಗಳಲ್ಲಿಯ ತದನಂತರ ಜೈನ, ಬೌದ್ಧ, ಚಾರ್ವಾಕ, ಷಡ್ ದರ್ಶನಗಳ ಹಾಗೂ ಕ್ರಿ.ಶ.

೬, ೭ನೇ ಕಾಲದ ಶಂಕರರ ಹಾಗೂ ಉಳಿದಿಬ್ಬರ ಆಚಾರ್ಯರ ಕಲ್ಪನೆಗೆ ಮಾತ್ರ ಸಿಮೀತಗೊಳಿಸಲಾಗಿದೆ. ೫ನೇ ಅಧ್ಯಾಯವನ್ನು ಕೇಂದ್ರವಾಗಿಟ್ಟುಕೊಂಡು ಈ ನಿಧಿದ್ಯಾಸ ನಡೆದಿದೆ. ಇದೇ ಕಾಲಕ್ಕೆ ಹೊಂದಿಕೊಂಡಂತೆ ಪಾಶ್ಚಾತ್ಯ ದಾರ್ಶನಿಕ ಕಲ್ಪನೆ ಕ್ರಿ.ಪೂ. ೩೦೦ ಸಾಕ್ರೆಟಿಸ್‌ನ ಕಾಲದಿಂದ ಆಧುನಿಕ ತತ್ವಶಾಸ್ತ್ರಜ್ಞ 'ಹೆಗಲ್' ನ ಕಾಲದವರೆಗೂ ಇರುವ ದಾರ್ಶನಿಕ ಪರಿಕಲ್ಪನೆಯನ್ನು 'ಅ' ವಿಭಾಗದಲ್ಲಿ ಹೇಳಿದೆ. ಆಸ್ತಿಕವೆಂದರೆ ವೇದದ ಪರಮಸತ್ಯವನ್ನು ಒಪ್ಪುವದು. ನಾಸ್ತಿಕವೆಂದರೆ ವೇದವನ್ನು ಒಪ್ಪದಿರುವದು. ವಚನಕಾರರ ನಂತರದಲ್ಲಿರುವ ದಾಸರು ಸೂಫಿ ಸಂತರು ಹೇಗೆ ವಚನಕಾರರನ್ನು ಹೋಲವರು, ಅನುಭಾವದ ಹಿನ್ನಲೆಯಲ್ಲಿ ವಚನಕಾರರ ಪ್ರಭಾವ ಇವರ ಮೇಲೆ ಹೇಗೆ ಆಗಿದೆ ಎಂಬುದು ಅಧ್ಯಾಯ ನಾಲ್ಕರಲ್ಲಿ ಹೇಳಿದೆ. ಒಟ್ಟಾರೆ ಇದು ಪೌರ್ವಾತ್ಯ ಮತ್ತು ಪಾಶ್ಚಾತ್ಯಗಳ ತುಲನಾತ್ಮಕ ದರ್ಶನ ಪರಿಕಲ್ಪನೆಯೊಂದಿಗೆ ಸಾಗಿದೆ.

ಇಲ್ಲಿ ವೇದಾಂತ ಕಾಲವೆಂದರೆ ಉಪನಿಷತ್ತು. ದೇವರು ಒಬ್ಬನೇ ಸರ್ವಕರ್ತ ಆತನೆ, ವೇದಗಳನ್ನು ನಾಲ್ಕು ಭಾಗಗಳಾಗಿ ಮಾಡಬಹುದು. ಸಂಹಿತೆ (ಮಂತ್ರಗಳು), ಬ್ರಾಹ್ಮಣಗಳು, ಅರಣ್ಯಕಗಳು ಮತ್ತು ಉಪನಿಷತ್ತುಗಳು ನಾಲ್ಕು ವೇದ ಸಂಹಿತೆಗಳು ದೇವತೆಗಳ ಸ್ಥಿತಿಗೆ ಸೀಮಿತ. ಬ್ರಾಹ್ಮಣಗಳು ಯಜ್ಞಯಾಗಾದಿಗಳಿಗೆ ಹೊಂದಿಕೊಂಡಂತೆ ಪುರೋಹಿತ ಗುಂಪು ಅವಶ್ಯವೆಂಬುದು, ಅರಣ್ಯಗಳು ಅರಣ್ಯವಾಸಿಗಳ ವ್ಯಾಸಂಗದಿಂದ ಕೂಡಿದವುಗಳು ಶಕ್ತಿ ವಿಶೇಷದ ಪೂಜೆ ಇಲ್ಲಿ ನಡೆಯುವದು. ಯಜ್ಞಯಾಗಗಳ ವಿಚಾರ ನಿಂತು ತತ್ವವಿಚಾರದ ಬಗ್ಗೆ ಶುರುವಾಯಿತೆನ್ನಬಹುದು. ದರ್ಶನ ವಿಚಾರವೇ ಉಪನಿಷತ್ತು. ಉಪನಿಷತ್ತುಗಳು ಭಾರತೀಯ ಎಲ್ಲ ದರ್ಶನಗಳಿಗೆ ತಾಯಿಬೇರು. ಮತ ಅನ್ನುವದು ನಂಬಿಕೆಯಿಂದಾದರೆ ದರ್ಶನ ವಿಚಾರದಿಂದ ಹುಟ್ಟಿದ ಜ್ಞಾನ ಎಂದರ್ಥ.

ವೇದದಲ್ಲಿ ಸರ್ವದೇವತೆ ಇದ್ದರೂ ಪ್ರತಿಯೊಂದು ಕೆಲಸಕ್ಕೆ ಒಬ್ಬೊಬ್ಬ ದೇವತೆ ಉಂಟು. ಕೊನೆಗೆ ಸರ್ವದಕ್ಕೂ ಕಾರಣ ಒಬ್ಬನೇ ದೇವರು ಅನ್ನುವ ಭಾವನೆ ಯಾವಾಗ ಬಂದಿತೊ ಅಲ್ಲಿಗೆ ಶುರುವಾಯಿತು. ದರ್ಶನ ಕಲ್ಪನೆ ತಪಸ್ಸು ಮಾಡುವದೆಂದರೆ ಆಲೋಚಿಸುವದು ಜ್ಞಾನವನ್ನು ಪಡೆಯುವದು ಪ್ರಪಂಚದ ಮೂಲ ಸ್ವರೂಪ ಜ್ಞಾನ. ಪ್ರಪಂಚವೆಲ್ಲಾ ಪ್ರಜಾಪತಿಮಯ. ಸರ್ವ ವಸ್ತುವಿನಲ್ಲಿ ಹುದುಗಿರುವ ಶಕ್ತಿ ಪ್ರಾಣವೆಂದು ಅದಕ್ಕೆ ಬ್ರಹ್ಮ, ಆತ್ಮ ಸ್ವರೂಪವೆಂದು ಕರೆಯಲಾಯಿತು. ಪ್ರಪಂಚದ ಮೂಲ ಚೇತನ ಪರಮಾತ್ಮ ಆದಂತೆ ಜೀವಿಗಳ ಮೂಲ ಚೇತನ ಆತ್ಮ. ದೇಹ ಬೇರೆ, ಆತ್ಮ ಬೇರೆ ಎಂದು ಋಷಿಗಳು ತಿಳಿದಿದ್ದರು. ಆತ್ಮ ದೇಹದ ಮರಣಾನಂತರ ದೇಹದಿಂದ ಹೊರಗೆ ಬರುತ್ತದೆ. ಯಾರು ಸರಿಯಾಗಿ ಯಜ್ಞ ಯಾಗಾದಿಗಳನ್ನು ಮಾಡುವದಿಲ್ಲವೋ ಅವರು ಮರಣಾನಂತರ ಹುಟ್ಟಿ ದುಃಖ ಅನುಭವಿಸುವರು. ಪುಣ್ಯ ಮಾಡಿದವರಿಗೆ ಸ್ವರ್ಗವು, ಪಾಪ ಮಾಡಿದವರಿಗೆ ನರಕವು ಸಿಗುವದೆಂಬ ಕಲ್ಪನೆ ಇದ್ದಿತು. ಕೆಲವು ಸಾರಿ ಮನಸ್ಸಿಗೆ ಆತ್ಮವೆಂದು ಕರೆದಿದ್ದುಂಟು. ಕೆಲವು ಸಂದರ್ಭದಲ್ಲಿ ಪ್ರಾಣವಾಯುವೇ ಜೀವ ಎಂದು ತಿಳಿಯಲಾಗಿತ್ತು. ತೈತ್ತರೀಯದಲ್ಲಿ "ಪ್ರಜಾಪತಿಯೇ ಪ್ರಪಂಚವನ್ನು ಸೃಷ್ಟಿಸಿ ಅದರಲ್ಲಿ ತಾನು ಸೇರಿಕೊಂಡ" ಅನ್ನುವಾಗ ಸೃಷ್ಟಿಕರ್ತ ಪ್ರಪಂಚವನ್ನು ಬಿಟ್ಟು ಹೊರಗಿಲ್ಲ. ಅದರಲ್ಲಿ ಇದ್ದಾನೆ. ಆತ್ಮವೆಂಬುದು ಸರ್ವಶ್ರೇಷ್ಠವಾದ ವಸ್ತು. ಅದನ್ನು ತಿಳಿದ ಮನುಷ್ಯ ಪಾಪರಹಿತವಾಗುವನು ಎನ್ನುವ ಭಾವನೆಯಿತ್ತು. ವೇದಗಳ ಉದ್ದೇಶವೆಂದರೆ ಜೀವರಿಗೆ ಮೋಕ್ಷವನ್ನು ಕೊಡುವ ಜ್ಞಾನವೆಂದು ತಿಳಿಯಲಾಯಿತು.

ವ್ಯಾಕ್ಸಮುಲ್ಲರ ಹೇಳುವಂತೆ - ವೇದಮಂತ್ರಗಳಲ್ಲಿ ನನ್ನನ್ನು ಕಾಪಾಡು, ಅನ್ನಕೊಡು, ಪಶುಗಳನ್ನುಕೊಡು, ಹೆಂಡತಿ ಮಕ್ಕಳನ್ನು ಕೊಡು, ಬರೆ ಇಂತಹವುಗಳೇ ಇರುವದರಿಂದ ವೇದಗಳನ್ನು ಗೌರವಿಸುವ ಪ್ರಮೇಯ ಬರುವದಿಲ್ಲವಾದರೂ ನೈತಿಕ ತಾತ್ವಿಕ ಭಾವನೆಗಳು ಅಲ್ಲಲ್ಲಿ ಹುದುಗಿರುವದರಿಂದ ಇವುಗಳ ಸಲುವಾಗಿಯಾದರೂ ವೇದಗಳ ಅಧ್ಯಯನ ಮಾಡಬೇಕೆಂದಿದ್ದಾನೆ.[೫]

ಡೈಸನ್ ಪತೀಚ್ಯ ತತ್ವಜ್ಞಾನಿ ನಂಬಿಕೆ ತತ್ವವಿಚಾರದ ಮೂಲ ಎನ್ನುವನು. ಆದರೆ ನಂಬಿಕೆಯಲ್ಲಿ ವಿಚಾರಕ್ಕೆ ಆಸ್ಪದವಿಲ್ಲದರಿಂದ ಈತನ ವಾದ ಸರಿಯಲ್ಲ. ಏನೇ ಆದರೂ ಸರ್ವೋತ್ತಮ ದೇವರು ಈ ಪ್ರಪಂಚದ ಆತ್ಮ, ಆತ ಸರ್ವಕ್ಕೂ ಮೂಲ ಅನ್ನುವದು ವೇದ ಸಿದ್ಧಾಂತ. ಅವನು ಎಲ್ಲ ವಸ್ತುವಿನ ಮೂಲ ಎಂಬುದು ಋಗ್ವೇದದ ವಿಶ್ವಕರ್ಮ ಸೂಕ್ತ. ಇರುವದಕ್ಕೂ ಇಲ್ಲದಿರುವದಕ್ಕೂ ಎಲ್ಲದಕ್ಕೂ ಆತ ಮೂಲ ಎಂದು ನಾಸದಿಯ ಸೂಕ್ತ ಸರ್ವಾಂತರಯಾಮಿ ಮಾತ್ರವೆ ಅಲ್ಲ ಸರ್ವಾತೀತವೆಂದು ಪುರುಷಸೂಕ್ತ ಹೇಳಿದೆ. ಬ್ರಾಹ್ಮಣರು ಗ್ರಹಸ್ಥಾಶ್ರಮಿಗಳಿಗೆ, ಅರಣ್ಯಕಗಳು ವೃದ್ಧರಿಗೆ, ಉಪನಿಷತ್ತುಗಳು ಮೋಕ್ಷವನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳವರಿಗೆ ಹೊಂದಿಸಬಹುದಾಗಿದೆ. ಕರ್ಮದ ಪರ್ಯಾವಸಾನ ಜ್ಞಾನದಲ್ಲಿ ವೇದದಲ್ಲಿ ಕಂಡುಬಂದ ಜ್ಞಾನ. ಉಪನಿಷತ್ತಿನಲ್ಲಿ ಪರಿಪೂರ್ಣತೆಯನ್ನು ಹೊಂದಿತು. ಕೆಲವು ಸಾರಿ ಉಪನಿಷತ್ತುಗಳು ಕೇವಲ ಜ್ಞಾನವನ್ನು ಹೇಳುತ್ತವೆ. ಕರ್ಮವನ್ನು ಹೇಳುವದಿಲ್ಲ. ಯಜ್ಞ ಯಾಗಗಳನ್ನು ತಿರಸ್ಕರಿಸುವವು ಎಂದಾಗಿದೆ. ಜೀವಿಯ ಶ್ರೇಯಸ್ಸು ಯಾವುದು ಎನ್ನುವದರ ಜೊತೆಗೆ ಸಾಮಾಜಿಕ ಸಮತೋಲನೆಯನ್ನು ಗುರ್ತಿಸಬಹುದು. ಶ್ರೇಯಸ್ಸಿನ ಬಗ್ಗೆ ಕಠೋಪನಿಷತ್ತು ಸಾಕಷ್ಟು ಹೇಳಿದೆ. ಅಲ್ಲದೇ ಹೆಣ್ಣುಗಂಡು ಬೇಧವಿಲ್ಲದ ಧಾರ್ಮಿಕ ಸಮಾನತೆಯ ಮಾನವೀಯ ಮೌಲ್ಯ ಯಾಜ್ಞವಲ್ಕರ ಮೈತ್ರಿಯ ಸಂವಾದದಿಂದ ಕಂಡುಬರುವದು. ಉಪನಿಷತ್ತುಗಳ ಕಾಲ ಅದು ತತ್ವಜ್ಞಾನಕ್ಕೆ ಮಾತ್ರ ಆಸ್ಪದ ಕೊಟ್ಟಿದೆ. ಉಪನಿಷತ್ತು ಎಂದರೆ ರಹಸ್ಯ, ಧ್ಯಾನ ಪೂಜೆ, ರಹಸ್ಯದಲ್ಲಿ ಕುಳಿತುಕೊಳ್ಳುವಿಕೆ, ರಹಸ್ಯ ವಸ್ತುವಿನ ಜ್ಞಾನ ಉಂಟುಮಾಡುವ ವಿದ್ಯೆ ಇತ್ಯಾದಿಯಾಗಿ ಹೇಳಿರುವರು. ಉಪನಿಷತ್ ಕಲ್ಪನೆ ಪೌರ್ವಾತ್ಯ ದಾರ್ಶನಿಕ ಕಲ್ಪನೆಯಾಗಿದೆ. ಅವೆಲ್ಲವೂ ಒಂದೇ ಕಾಲದಲ್ಲಿ ರಚಿತವಾದವುಗಳಲ್ಲ. ೧೦ - ೧೨ ಉಪನಿಷತ್‌ಗಳೇ ಮುಖ್ಯ ಎಲ್ಲ ಆಸ್ತಿಕ ನಾಸ್ತಿಕ ದರ್ಶನಗಳಿಗೂ ಉಪನಿಷತ್ತಗಳ ಅವಶ್ಯಕತೆಯಿದೆ. ನಾಸ್ತಿಕರಾದ ಚಾರ್ವಾಕರು ಕೂಡಾ ಉಪನಿಷತ್‌ನ್ನೇ ಆಧಾರವಾಗಿಟ್ಟುಕೊಂಡಿರುವರು. ಉಪನಿಷತ್ತಿನ ಕಲ್ಪನೆ ಎಂದರು ಒಂದೇ, ಪೌರ್ವಾತ್ಯ ದಾರ್ಶನಿಕರು ಎಂದರು ಒಂದೇ. ಇದರಲ್ಲಿಯು ವಿಭಿನ್ನ ಮತಗಳಾದ ಮತ ಮೀಮಾಂಸಕರನ್ನು ನೋಡಬಹುದು. ಉಪನಿಷತ್ತು ಆತ್ಮ ಈ ಪ್ರಪಂಚಕ್ಕೆ ಆಧಾರ, ಅದು ಚೈತನ್ಯ ಸ್ವರೂಪ, ಮೂರುತರಹದ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಇವು ಕೂಡಾ ಚೈತನ್ಯ ಪ್ರಕಾರಗಳು ಅನ್ನಬಹುದು. "ನಮ್ಮಲ್ಲಿದ್ದು ವಿಷಯಗಳನ್ನು ತಿಳಿಯುವವನಿಗೆ ಆತ್ಮ ಎನ್ನುವರು. ಆತನೇ ಪ್ರಪಂಚದಲ್ಲಿ ಮಿಥ್ಯನಾದವನು ಎಂದು ತತ್ವಶಾಸ್ತ್ರ ಸಂಗ್ರಹಕಾರರು ಹೇಳುತ್ತಾರೆ.

ಬ್ರಹ್ಮ ಎಂದರೆ 'ಬೃಹ್' ಧಾತುವಿನಿಂದ ಇದರ ಉತ್ಪತ್ತಿ ವೃದ್ಧಿಯನ್ನು ಹೊಂದುವದೆಂದು ಇದರ ಅರ್ಥ. ಈ ಪದ ಋಗ್ವೇದದಲ್ಲಿ ಸಿಗುವದು. ಪ್ರಪಂಚದ ಪ್ರತಿವಸ್ತುವಿಗೆ ಅವಧಿಯಿದೆ ಆದರೆ ಬ್ರಹ್ಮಕ್ಕೆ ಅವಧಿಯಿಲ್ಲ. ಆ ವಸ್ತುವಿನಲ್ಲಿ ಪ್ರಪಂಚವೆಲ್ಲಾ ಅಡಗಿದೆ. ಈ ಗೋಚರ ಪ್ರಪಂಚ ಅಗೋಚರ ಬ್ರಹ್ಮ

ಅಭಿವ್ಯಕ್ತಿಯ ರೂಪ. ಪ್ರಪಂಚ ತತ್ವ, ಸತ್ಯಜ್ಞಾನ ಅನಂತವೆಂದು ಹೇಳಿರುವದು ಸತ್ಯವೆಂದರೆ ತತ್ವಜ್ಞಾನವೆಂದರ ಆತ್ಮರೂಪ, ಅನಂತವೆಂದರೆ ಅವಧಿರಹಿತ, ಅದುವೆ `ಸತ್ಯಂ ಜ್ಞಾನ ಮನಂತಂ ಬ್ರಹ್ಮ' ಉಪನಿಷತ್ತುಗಳು ಹೇಳಿರುವಂತೆ ಅದು ನೀನು ಆಗಿರುವೆ ಅದು ಬ್ರಹ್ಮ `ತತ್ವಮಸೀ' ಮಾತು ಈ ಸಂಬಂಧದ ಉಪನಿಷತ್ತಿನ ಹೇಳಿಕೆ ಜೀವಾತ್ಮಕ್ಕೂ ಪರಮಾತ್ಮಕ್ಕೂ ಒಂದೇ ವಸ್ತು ಆಧಾರ ಸತ್ಯವೆಂದರೆ ವಿಕಾರವಲ್ಲದವನು. ಜ್ಞಾನವೆಂದರೆ ಜಡವಲ್ಲ ಎಂದರ್ಥ, ಅನಂತವೆಂದರೆ ದೇಶ ಕಾಲದ ಅವಧಿಯಿಲ್ಲದ್ದು. ಪ್ರಪಂಚದಿಂದ ಆತ ಹೊರಗೆ ಇರುವಂತೆ ಆತನಿಂದ ಸಹಿತ ಪ್ರಪಂಚವಾಗಿದೆ. ಶರೀರ ರಹಿತ ಶಿವ ಶರೀರ ಸಹಿತ ಪ್ರಪಂಚವಾಗುವದು. ಈ ಜಗತ್ತಿನ ಪ್ರಾಯೋಜಿಕತೆಗೆ ಆಗಿರಬಹುದು.

ಎಲ್ಲ ಪಂಚಭೂತಾತ್ಮಗಳು ಇದ್ದರು ಕೂಡಾ ಸಾರವೊಂದಿರದೇ ಹೋದರೆ ಜೀವನವಾಗುವದಿಲ್ಲ. ಈ ಜೀವಿಗೆ ಹಲವಾರು ಕೋಶಗಳೆಂದು ವರ್ಗೀಕರಿಸುವರು. ಯಾವುದೇ ವಸ್ತು ಜಡವಾಗದ ಹೊರತು ಕಣ್ಣಿಗೆ ಕಾಣಿಸದು. ಕಣ್ಣಿಗೆ ಕಾಣಿಸುವ ಶರೀರ ಜಡವಸ್ತು. ಅದರೊಡನೆ ಚೈತನ್ಯ ಕೂಡಿದಾಗ ಅದು ಜೀವ ಜಡಕ್ಕೆ ಚಲನೆಯಿಲ್ಲ. ಆದರೆ ಶರೀರಕ್ಕೆ ಚಲನೆಯಿದೆ. ಚೇತನಕ್ಕೆ ಪ್ರಾಣವಾಯುವೇ ಅದರ ಗಮನಾಗಮನಕ್ಕೆ ಕಾರಣ. ಅದೇ ಪ್ರಾಣಮಯ, ಜೀವಿಗಳಲ್ಲಿರುವ ಗ್ರಹಣಶಕ್ತಿಯೇ ಮನೋಮಯ. ಮನಸ್ಸಿಲ್ಲದ ಜೀವಿಯು ಮಾನವನೆ ಅಲ್ಲ. ಗ್ರಹಿಸುವ ಶಕ್ತಿ ಇರುವದರಿಂದ ಒಂದು ಉದ್ದೇಶವುಳ್ಳ ಕಾರ್ಯವನ್ನು ಮನುಷ್ಯ ಮಾಡುವನು. ವಿಜ್ಞಾನಮಯವೆಂದರೆ ತನ್ನನ್ನು ತಾನು ತಿಳಿಯುವದು. ಉಳಿದ ಪ್ರಾಣಿಗಳಲ್ಲಿಲ್ಲದ ಮನುಷ್ಯ ಮಾತ್ರನಲ್ಲಿರುವ ವಿಶೇಷತೆಯಿದು. ಆನಂದಮಯವೆಂಬುದೇ ಅದೇ ಅತೀತ ವಸ್ತು. ಮನುಷ್ಯ ಯಾವುದಾದರೂ ಸುಂದರ ವಸ್ತು ನೋಡಿದಾಗ ಅದನ್ನು ಅನುಭವಿಸಿದಾಗ ಆ ವಸ್ತುವಿನೊಂದಿಗೆ ತನ್ನನ್ನು ಮರೆಯುವನು. ತನ್ನನ್ನು ತಾನು ಮರೆಯುವದೇ ಆನಂದಮಯ ಕೋಶದ ಪ್ರಭಾಗ. ಮೊದಲು ನಾಲ್ಕು ಕೋಶಗಳಲ್ಲಿ ಜೀವಿ ಬ್ರಹ್ಮನಿಂದ ಭಿನ್ನ, ಕೊನೆಯ ಆನಂದಮಯದಲ್ಲಿ ಬ್ರಹ್ಮನಿಂದ ಅಭಿನ್ನ. ಈ ಉಪನಿಷತ್ತಿನ ಸಾರತೆಯು ಪ್ರಭು ದರ್ಶನದ ಷಟಸ್ಥಲದಲ್ಲಿ ಕಾಣಬಹುದು.

ವೀರಶೈವ ಒಂದರ್ಥದಲ್ಲಿ ಹಿಂದೂ ದರ್ಶನ ಸಾರವೆನ್ನಬಹುದು. ವೇದದೊಳಗಿನ ಕೆಲವು ಜ್ಞಾನದ ಮೂಲಗಳನ್ನು ತೆಗೆದುಕೊಂಡು ಕರ್ಮವನ್ನು ತಿರಸ್ಕರಿಸಿ ಸ್ವತಂತ್ರ ಧರ್ಮ ಷಟ್ ದರ್ಶನದಂತಿದೆ. ತ್ರಿಮೂರ್ತಿ ಆಚಾರ್ಯರು ವೇದಗಳಲ್ಲಿ ಬ್ರಹ್ಮಸೂತ್ರಕ್ಕೆ ಮೀಮಾಂಸಾ ರೂಪವನ್ನು ಕಂಡುಕೊಂಡಿದ್ದಾರೆ. ಸ್ವತಂತ್ರ ದಾರ್ಶನಿಕರಾದರು ಬೌದ್ಧರಂತೆ ಅಲ್ಲ. ಬೌದ್ಧರು ವೇದವನ್ನು ತಿರಸ್ಕರಿಸಿದರು. ಜೈನರು ಹಾಗೆಯೇ ಆದರೆ ವೀರಶೈವರು ವೇದವನ್ನು ತಿರಸ್ಕರಿಸಲಿಲ್ಲ ಪೂರ್ತಿಯಾಗಿ ಒಪ್ಪಿಕೊಳ್ಳಲಿಲ್ಲ. ಆವಸ್ಥೆಗಳು ನಾಲ್ಕು ಜಾಗ್ರ, ಸ್ವಪ್ನ, ಸುಷುಪ್ತಿ, ತುರ್ಯಾವಸ್ಥೆ ಅನ್ನುವ ಈ ನಾಲ್ಕನೆ ಆವಸ್ಥೆ ಉಪನಿಷತ್ತುಗಳಲ್ಲಿ ಹೇಳಿದೆ. ಜಾಗ್ರವೆನ್ನುವದಾದರೆ, ಎಚ್ಚರವಾಗಿರುವ ಸಾಮಾನ್ಯ ಜೀವನ, ಇಲ್ಲಿ ಪಂಚಕೋಶಗಳು ಕರಗತವಾಗಿರುವವು. ಸ್ವಪ್ನಾವಸ್ಥೆಯಲ್ಲಿ ಬಾಹ್ಯ ಇಂದ್ರಿಯಗಳ ವ್ಯಾಪಾರವಿಲ್ಲ, ಇಲ್ಲಿ ಕೇವಲ ಮನಸ್ಸಿನ ವ್ಯಾಪಾರ ಮಾತ್ರವಿದೆ. ಜಾಗ್ರಾವಸ್ಥೆಯಲ್ಲಾದ ಅನುಭಗಳು ನವೀಕರಣದಂತೆ ಮನೋವ್ಯಾಪಾರ ಅನುಭವಿಸುವುದು. ಇಲ್ಲಿ ಅನುಭವಿಸುವ ಸುಖದು:ಖಗಳು ನಿಜವಲ್ಲವಾದರು, ನಿಜದಂತೆ ಭಾಸವಾಗುವದು. ಕಾಲ್ಪನಿಕ ಸುಖದು:ಖಗಳನ್ನು ಅನುಭವಿಸುವ ಸ್ಥಿತಿ. ಸುಷುಪ್ತಾವಸ್ಥೆ ಎಂದರೆ ಮನಸ್ಸಿನ ವ್ಯಾಪಾರವು ಕೂಡಾ ಶಾಂತ, ಆದರೆ ಇಲ್ಲಿ ಮನಸ್ಸು

ಸಹಿತ ಇಲ್ಲಿಯವರೆಗೆ ಬರಲಾಗುವದಿಲ್ಲ. ಇಲ್ಲಿ ಕೇವಲ ಆತ್ಮಭಾಗ ಪ್ರಕ್ರಿಯೆಯಿದೆ. ಅನುಭವಿಸುವಾಗ ಗೊತ್ತಿಲ್ಲದ ಅನುಭವಿಸಿದ ನಂತರ ಸುಖವೆಂದು ಹೇಳುವ ಸ್ಥಿತಿಯಿದು. ನಿದ್ರೆ ಹೋದ ಆತ್ಮ ಎಚ್ಚೆತ್ತಾಗ ಅನುಭವಿಸಿದ ಸುಖವನ್ನು ನಂತರದಲ್ಲಿ ಹೇಳಲಿಕ್ಕೆ ಬರುವದು. ಸುಷುಪ್ತಿಯಲ್ಲಿಯ ಸುಖ ನಂತರದಲ್ಲಿ ಹೇಳಲು ಶಕ್ಯ. ನಿದ್ರೆಯ ಕಾಲದಲ್ಲಿ ಆನಂದಾನುಭವವಿದೆ ಉಳಿದೆರಡರಲ್ಲಿ ಬಾಹ್ಯಾಧಾರಿತ ಅನುಭವವಿದ್ದರೆ ಸುಷುಪ್ತಿಯಲ್ಲಿ ಆಂತರಿಕ ಅನುಭವವಿದೆ. ಸುಷುಪ್ತಿಗಿಂತ ಮುಂದೆ ಅದು ತುರ್ಯಾವಸ್ಥೆ ಅದಕ್ಕೆನೆ ತೈತ್ತರೀಯ ಉಪನಿಷತ್ತು, ಸಚ್ಚಿತ್ತಾನಂದವೆಂದು ಕರೆದಿದೆ. ಆನಂದಮಯ ಕೋಶದ ಪ್ರಭಾವವು ಇಲ್ಲಿದೆ. ಆತ್ಮ ಸಾಕ್ಷಾತ್ಕಾರ ಕ್ರಿಯೆಯಿಂದು ಆನಂದ ಮಾರ್ಗ ಸುಷುಪ್ತಿಯಲ್ಲಿ ಅನುಭವಿಸಿದ ಸುಖವನ್ನು ಸ್ವಲ್ಪಮಟ್ಟಿಗೆ ಹೇಳಬಹುದು. ನಡೆದಿದ್ದೆಲ್ಲವನ್ನು ಪೂರ್ತಿಯಾಗಿ ಹೇಳಲಿಕ್ಕೆ ಆಗುವದಿಲ್ಲ. ಅಂದ ಮೇಲೆ ತುರ್ಯಾವಸ್ಥೆಯಲ್ಲಿಯ ಆತ್ಮ ಸಾಕ್ಷಾತ್ಕಾರ ಹೇಳುವದು ಸುಲಭವಾದದ್ದಲ್ಲ. ತತ್ವಶಾಸ್ತ್ರವೆಂದರೆ ಉಪನಿಷತ್ತುವೆಂದಾಗಿದೆ. ಶಾಸ್ತ್ರಧ್ಯಾಯದ ಕೊನೆಯ ಭಾಗದ ಪರ್ಯಾವಸಾನವೇ ಆತ್ಮಸಾಕ್ಷಾತ್ಕಾರ. ಸಾಕ್ಷಾತ್ಕಾರವೆಂದರೆ ಆತ್ಮ ಸ್ವರೂಪವನ್ನು ತಿಳಿಯುವದು ಅದೇ ತತ್ವಜ್ಞಾನದ ಶ್ರಮ ಆತ್ಮ ಆನಂದ ರೂಪಿಯಾದರೂ ದು:ಖವಾಗಿರುವದಕ್ಕೆ ಸಂಸಾರ ಬದ್ಧತೆ ಕಾರಣ. ಈ ಆವಸ್ಥೆಯನ್ನು ಪಡೆಯಬೇಕಾದರೆ ಯೋಗದ ಅವಶ್ಯಕತೆವುಂಟು. ಆತ ಸರ್ವದರಲ್ಲಿ ಸನ್ಯಾಸಿಯಾದಾಗ ಧ್ಯಾನ ಹತ್ತುವದು. ಆಶ್ರಮವೆಂದರೆ ಶ್ರಮ ಪೂರ್ವಕವಾಗಿ ಹೊಂದಿದ ಯೋಗ್ಯತೆ. ಅದನ್ನು ಪಡೆದವರು ಆಶ್ರಮವಾಸಿಗಳು ಧ್ಯಾನ ಸಮಾಧಿ ಸನ್ಯಾಶಗಳು ಸಾಕ್ಷಾತ್ಕಾರ ಸಾಧನಗಳು.

ಒಟ್ಟಿನಲ್ಲಿ ಹಿಂದೂ ದರ್ಶನ ಕಲ್ಪನೆ ಏನೆಂಬುದು ತಿಳಿದಂತೆ, ಬ್ರಹ್ಮ ಜೀವ ಜಗತ್ತು ಎಂದರೆ ಬ್ರಹ್ಮನಿರ್ಮಿತ ಆತ್ಮವೇ ಪ್ರಪಂಚ ಪ್ರಮುಖ ಆಚಾರತ್ರಯ ದಾರ್ಶನಿಕ ಕಲ್ಪನೆಯಂತೆ ಬ್ರಹ್ಮವೇ ಎಲ್ಲದಕ್ಕೂ ಮೂಲಕಾರಣ ಅದುವೆ ಪ್ರಧಾನವಸ್ತು. ಅದನ್ನು ತಿಳಿಯುವದು, ಜೀವನದ ಮುಖ್ಯ ಉದ್ದೇಶ. ಜಗತ್ತು ಮಾತ್ರ ಉಪಪ್ರಧಾನ ಆದರೆ ವ್ಯವಹಾರಿಕ ಸತ್ಯವೆ ವಿನಹಕಾಯಂ ಸತ್ಯವಲ್ಲ, ಬ್ರಹ್ಮನು ಪ್ರಪಂಚಕ್ಕೆ ಅಧಿಷ್ಠಾನ ಯೋಗ್ಯ ಇದು ಶಂಕರರಂತೆ ರಾಮಾನುಜರಂತೆ ಜಗತ್ತು ಬ್ರಹ್ಮನ ಶರೀರ ಬ್ರಹ್ಮನೇ ಜಗತ್ತಿನ ಆತ್ಮ. ಮಧ್ವರಂತೆ ಬ್ರಹ್ಮ ಸ್ವತಂತ್ರ, ಜಗತ್ತು ಪರತಂತ್ರ, ಸ್ವತಂತ್ರ ಬ್ರಹ್ಮ ಜಗತ್ತಿನ ಆತ್ಮ, ಈ ಧ್ಯಾನಕ್ಕೆ ಸಾಧನವಾದವುಗಳು, ವೇದ ಅವು ಅಪೌರುಶೇಯ. ಆದರೆ ಎಲ್ಲರಲ್ಲಿ ಸಾಮಾನ್ಯವೆಂದರೆ ಮೋಕ್ಷದ ಅಪೇಕ್ಷೆ ಇವರೆಲ್ಲರು ವೇದಗಳನ್ನು ಅನುಸರಿಸಿದ್ದಾರೆ. ಎಲ್ಲ ವೇದಗಳ ಗುರಿಯು ಬ್ರಹ್ಮನನ್ನು ತಿಳಿಯುವದೇ ಆಗಿದೆ. ‘ಸರ್ವಭೇದಾ: ಯತ್ ಪದಂ ಮಾನುಸಂತಿ’ ತನ್ನಂತೆ ಅಂತಃಚಕ್ಷುವಿನಿಂದ ನೋಡುವದು ನೋಡಿದ್ದನ್ನು ಹೇಳುವದು, ಪ್ರಮಾಣಗಳ ಸಮೇತ ಸಾಧಿಸುವದು ಇವೆಲ್ಲಾ ತಾತ್ವಿಕ ಧರ್ಮದಲ್ಲಿ ಬರುವಂತಹವು. ಶೃತಿ ಮತ್ತು ಸ್ಮೃತಿ ಎಂದು ಎರಡು ವಿಧಗಳುಂಟು. ಶೃತಿಗಳೆಂದರೆ ವೇದಗಳು, ಸ್ಮೃತಿ ಎಂದರೆ ಉಳಿದ ಪುರಾಣಗಳು ಇತ್ಯಾದಿ ಪೌರುಶಯವಾದವುಗಳು. ಕ್ರಿ.ಶ. ೬ - ೭ - ಅನೇ ಶತಮಾನದಲ್ಲಿ ವೇದಗಳಲ್ಲಿ ಮಂತ್ರದ ಬಗ್ಗೆ ವೈಚಾರಿಕತೆ ಶುರುವಾಯಿತು. ಸ್ವತಂತ್ರ ವಿಚಾರಧರ್ಮ ಪ್ರತಿಯೊಂದರಲ್ಲಿ ಸಂದೇಹ ದೃಷ್ಟಿ ಇದು ಅಂದರೆ ‘ಅಂತಹದೇವರು ಅದಾನವೊ ಇಲ್ಲವೊ’[೬೦] ಬ್ರಾಹ್ಮಣಗಳಲ್ಲಿಯೂ ಕೂಡಾ ಸ್ವತಂತ್ರ ವಿಚಾರ ಶೀಲತೆಗೆ ಅವಕಾಶವುಂಟು ಉಪನಿಷತ್ತುಗಳಂತೂ ತತ್ವ ವಿಚಾರವೇ ಪ್ರಾಧಾನ್ಯ. ಸ್ವತಂತ್ರ ಮನೋಭಾವದ ಚಾರ್ವಾಕರು ಈ ಪ್ರಪಂಚ ಜಡ ಇದನ್ನು ಬಿಟ್ಟು ಹೊರಗೆ ಮತ್ತ್ಯಾವುದೇ ದೇವರು ಇಲ್ಲ ಅಂದರು. ಚಾರ್ವಾಕ, ಬೌದ್ಧ, ಜೈನ,

ದರ್ಶನಕಾರರ ಉಗಮದಿಂದ ಅನೇಕ ಸ್ವತಂತ್ರ ಧರ್ಮ ದರ್ಶಕರು ಹುಟ್ಟಿಕೊಂಡರು. ವೈದಿಕರನ್ನು ತ್ಯಾಜ್ಯರನ್ನಾಗಿ ಮಾಡಿದರು. ವೈದಿಕರು ವೇದವನ್ನು ಸತ್ಯವೆಂದು ತಿಳಿದು ಸಿದ್ಧಾಂತವನ್ನು ಸಾಧಿಸಲು ಈ ಮೂರನ್ನು ನಿಂದಿಸಿ ಯುಕ್ತಿ ಪ್ರಮಾಣಗಳಿಂದ ಇವು ಸುಳ್ಳೆಂದು ಹೇಳಿ, ತಮ್ಮ ಸಿದ್ಧಾಂತ ಪ್ರಚುರ ಪಡಿಸಲು ಶುರುಮಾಡಿದರು. ಇದು ವೇದಕ್ಕೆ ಸಂಬಂಧಪಟ್ಟ ದರ್ಶನ ಅನೇಕವಾಗಲು ಕಾರಣವಾಯಿತು. ವೇದ ಪ್ರಮಾಣ ಸಾಧಿಸಲು ಹೊರಟ ಇವರು ಅನೇಕ ಪ್ರಸಂಗಗಳಲ್ಲಿ ಅವುಗಳನ್ನು ಉಪಯೋಗಿಸಲು ಅಸಮರ್ಥರಾಗಿ ಕೈಚೆಲ್ಲಿ ಸ್ವತಂತ್ರ ವಿಚಾರ ಕೂಡಾ ಪ್ರಚಾರ ಪಡಿಸಿದರೆನ್ನಬಹುದು. ಇದರಂತೆ ವೈದಿಕ ದರ್ಶನಗಳು ಪ್ರಸಿದ್ಧಿಗೆ ಬಂದವು. ಇವುಗಳ ಬಗ್ಗೆ ಹಿಂದೆ ಹೇಳಿದರು ಕೂಡಾ ಯಾವುವು ಯಾವ ವಿಷಯದ ಬಗ್ಗೆ ವತ್ತು ಕೊಡುತ್ತವೆಂದು ಇಲ್ಲಿ ಹೇಳಲಾಗಿದೆ. ಗೌತಮರ ನ್ಯಾಯ, ಕಣಾದರ ವೈಶೇಶಿಕ, ಕಪಿಲರ ಸಾಂಖ್ಯ, ಪತಂಜಲಿಯ ಯೋಗ, ಜೈಮಿನಿಯರ ಪೂರ್ವ ಮೀಮಾಂಸ, ಹಾಗೂ ಬಾದರಾಯಣರ ಉತ್ತರ ಮೀಮಾಂಸ, ವೈದಿಕ ಷಡ್ ದರ್ಶನಗಳು ಇವು. ತಾತ್ವಿಕ ನಿರ್ಣಯದಲ್ಲಿ ತನ್ನ ಯುಕ್ತಿಗೆ ಆಧಾರವಾಗಿ ವೇದಗಳನ್ನು ತೆಗೆದುಕೊಳ್ಳುವದರಿಂದ ಇವೆಲ್ಲವುಗಳ ಆಸ್ತಿಕ ದರ್ಶನಗಳು ವೇದ ಪ್ರಮಾಣವಪ್ಪಿದರು ಪೂರ್ತಿಯಾಗಿ ಒಪ್ಪಿಲ್ಲ. ಇವುಗಳಲ್ಲಿ ಬ್ರಹ್ಮನನ್ನು ಒಪ್ಪಿಕೊಳ್ಳಲು ದರ್ಶನಗಳು ಇವೆ. ನಯ್ಯಾಯಿಕ ವೈಶೇಶಿಕರು ದೇವರು ಯುಕ್ತಿಯಿಂದ ಸಿದ್ಧಪಡಿಸಿದರು. ಸಾಂಖ್ಯರು ದೇವರಿಲ್ಲವೆಂದು ಯುಕ್ತಿಯಿಂದಲೆ ಸಿದ್ಧಪಡಿಸಿದರು. ಯೋಗಿಗಳು ವ್ಯವಹಾರಿಕದಿಂದಲೇ ಬ್ರಹ್ಮ ಬ್ರಹ್ಮನ ಇರುವಿಕೆಯನ್ನು ವೇದ ಬಿಟ್ಟೆ ಹೇಳಿದರು. ಆದರೆ ಪೂರ್ವ ಮೀಮಾಂಸೆ ಮತ್ತು ಉತ್ತರ ಮೀಮಾಂಸೆಗಳು ಮಾತ್ರ ಶುದ್ಧ ವೇದಗಳ ಪ್ರಾಮಾಣ್ಯಕ್ಕೆ ಒಳಪಟ್ಟಿವೆ. ಪೂರ್ವ ಮೀಮಾಂಸೆ ಬ್ರಹ್ಮನ ವಿಷಯದಲ್ಲಿ ಅಷ್ಟೇನು ಲಕ್ಷ್ಯವಹಿಸಿಲ್ಲ. ಉತ್ತರ ಮೀಮಾಂಸೆ ಮಾತ್ರ ವೇದಗಳ ಆಧಾರದಿಂದ ಭಗವಂತನ ಅಸ್ತಿತ್ವವೆಂದು ಹೇಳಬಹುದು. ದಾರ್ಶನಿಕರು ವೇದ ಪ್ರಮಾಣವನ್ನು ಬಳಸಿದರೆ, ಅದು ಪುರಾತನವಾಗುತ್ತದೆ ಎನ್ನುವ ಭಾವನೆಯಿತ್ತು. ಬಹುತೇಕ ಬೌದ್ಧರನ್ನು ತಿರಸ್ಕರಿಸಿ ತಮ್ಮದನ್ನು ಸಿದ್ಧಪಡಿಸಿಕೊಂಡರು. ಈ ಜಗತ್ತಿಗೆ ಮೂಲವಸ್ತು ಅಣುರೂಪವೆಂದು ಒಬ್ಬರು, ಹಾಗಿಲ್ಲ ಪ್ರಕೃತಿಯೆಂದು ಒಬ್ಬರು, ಮಾಯೆ ಎಂದು ಹಲವರು ಹೇಳುವರು. ಆದರೆ ಮೋಕ್ಷದಲ್ಲಿ ಎಲ್ಲ ದರ್ಶನಗಳು ಏಕಾಭಿಪ್ರಾಯವನ್ನು ಹೇಳಿವೆ. ಎಲ್ಲವುಗಳಿಗೆ ಮೋಕ್ಷವೇ ಪರಮಪುರುಷಾರ್ಥ. ಮನುಷ್ಯ ಜೀವಿತವಿರುವಾಗಲೇ ಮುಕ್ತನಾಗಬಹುದು. ಇದು ಸದೇಹ ಮುಕ್ತಿ, ಪ್ರತಿ ದರ್ಶನ ಈ ಜೀವಿಗೆ ಜನ್ಮ ಜನ್ಮಾಂತರವುಂಟು ಎಂದು ಹೇಳುವದು, ಈ ಮೂಲಭೂತ ತತ್ವದಲ್ಲಿ ನಮಗಿರುವ ತಪ್ಪು ತಿಳುವಳಿಕೆಗಳೇ ಈ ದುಃಖ ಸಂಸಾರಕ್ಕೆ ಕಾರಣ. ಈ ತತ್ವದ ನಿಜದರಿವೆಯೇ ಸಾಕ್ಷಾತ್ಕಾರ. ಬ್ರಹ್ಮ ಸಾಕ್ಷಾತ್ಕಾರವೆಂದರೆ ಆ ತತ್ವದ ಬಗೆಗಿನ ನಿಜದರಿವನ್ನು ಸಂಪಾದಿಸಿ ಅದನ್ನು ಸ್ಥಿರೀಕರಣಗೊಳಿಸುವದಾಗಿದೆ. ಆಯಾ ತಾತ್ವಿಕವು ಆಯಾ ರೀತಿಯಲ್ಲಿ ಗೋಚರಿಸಿದಂತೆ (ದರ್ಶಿಸಿದಂತೆ) ಆಯಾ ದರ್ಶನ ಉತ್ಪತ್ತಿಯಾಯಿತೆನ್ನಬಹುದು. ಇಲ್ಲಿ ಪ್ರಪಂಚಕ್ಕಿಂತಲೂ ಅದರ ಮೂಲಕ್ಕೆ ಮಹತ್ವವಿದೆ.

ಇಲ್ಲಿ ಅಲ್ಲಮಪ್ರಭುವಿನ ದರ್ಶನ ಮೀಮಾಂಸೆ ಎಂದು ಪ್ರಬಂಧದ ಹೆಸರನ್ನು ಆಯ್ಕೆ ಮಾಡುವಾಗ ದರ್ಶನ, ಮೀಮಾಂಸೆ ಎರಡು ಪದಗಳ ಬಳಕೆ ಯಾಕೆ ಅನ್ನಿಸಬಹುದು. ದರ್ಶನ ಇದರ ಅರ್ಥ ಮೀಮಾಂಸೆ ಆದರೆ ಇಲ್ಲಿ ಮೀಮಾಂಸೆ ಪದ = ದರ್ಶನ ಅಥವಾ ಸಿದ್ಧಾಂತವೆಂದು ಇನ್ನೊಂದು ಅರ್ಥ. ಸಿದ್ಧಾಂತ ಅರ್ಥದಲ್ಲಿ ಮೀಮಾಂಸೆ ಪದ ಬಳಕೆಯಾಗಿದೆ. ಈಗ ಪೂರ್ವ ಮೀಮಾಂಸಾದರ್ಶನ ಅನ್ನುವಾಗ ಪೂರ್ವ ಮೀಮಾಂಸೆ

ಇವು ಏನು ಎಂದು ಹೇಳಬೇಕಾದರೆ ಅನಿವಾರ್ಯವಾಗಿ ದರ್ಶನ ಎನ್ನಬೇಕಾಗುವದು. ಹಾಗೆ ದ್ವಿರುಕ್ತಿಯಾದ ರೀತಿಯಲ್ಲಿ ಸ್ವಲ್ಪಮಟ್ಟಿಗೆ ಅನ್ನಿಸಿದರು ಅವು ಸರಿಯಾದ ಅರ್ಥವನ್ನೇ ಕೊಡುವದು. ಅಲ್ಲಮಪ್ರಭು ಮೀಮಾಂಸೆ ಮತ್ತೊಬ್ಬರಿಗೆ ತಿಳಿಯಬೇಕಾದರೆ ಅಲ್ಲಮಪ್ರಭು ಮೀಮಾಂಸಾ ಎಂದು ಹೇಳಬೇಕಾಗುವದು. ರಾಘವೇಂದ್ರಾಚಾರ್ಯರಂತೆ ತತ್ವವಿಚಾರವೆಂದರೆ ದರ್ಶನಶಾಸ್ತ್ರ ದೃಷ್ಟಿಯಿಂದ ಪ್ರಮೇಯ ಶೋಧನ, ಮೋಕ್ಷದ ವಿಚಾರದಲ್ಲಿ ಬೌದ್ಧರಿಗೆ ಶೂನ್ಯಭಾವ ಅದೇ ಮೋಕ್ಷ. ಜೈನರಿಗೆ ರತ್ನತ್ರಯದ ಪೂರ್ಣತೆಯಿಂದ ಮೇಲಮೇಲಕ್ಕೆ ಸಾಗುವುದೇ ಮೋಕ್ಷ. ನ್ಯಾಯ ವೈಶೇಷಿಕರಿಗೆ ೨೧ ವಿಧದ ದುಃಖ ನಿವೃತ್ತಿಯೇ ಮೋಕ್ಷ. ಸಾಂಖ್ಯರಿಗೆ ವಿವೇಕದಿಂದುಟಾದ ಕೈವಲ್ಯವೇ ಮೋಕ್ಷ. ಪೂರ್ವ ಮೀಮಾಂಸಕರಿಗೆ ಆತ್ಮನು ತನ್ನ ಸ್ವ ಸ್ವರೂಪದಲ್ಲಿರುವದೇ ಮೋಕ್ಷ. ಉತ್ತರ ಮೀಮಾಂಸರಿಕಗೆ ಬ್ರಹ್ಮ ಪ್ರಾಪ್ತಿಯೇ ಮೋಕ್ಷ. ಅದ್ವೈತಿಗಳಿಗೆ ಬ್ರಹ್ಮ ಭಾವವೇ ಮೋಕ್ಷ. ವಿಶಿಷ್ಟಾದ್ವೈತಿಗಳಿಗೆ ಬ್ರಹ್ಮಶರೀರ ಹೊಂದಿ ಬಿಡುಗಡೆಯಾಗುವುದೇ ಮೋಕ್ಷ. ಮದ್ವರಿಗೆ ಆನಂದಬ್ರಹ್ಮ ಸಾಕ್ಷಾತ್ಕಾರವೇ ಮೋಕ್ಷ. ಮೋಕ್ಷವೆನ್ನುವದು ಸ್ಥಿರವಲ್ಲ ಆದರೆ ಅದು ಸಾಧನ ಸಂಪತ್ತುಗಳ ಪೂರ್ಣತೆಯನ್ನು ಪಡೆಯುವ ರೀತಿ.

ಪ್ರತಿಚ್ಯ (ಪಾಶ್ಚಾತ್ಯ), ಪ್ರಾಚ್ಯ (ಪೌರ್ವಾತ್ಯ) ಯಾರೇ ಇರಲಿ ಪ್ರತಿಚ್ಯೆಯರಂತೆ ದರ್ಶನವೆಂದರೆ ಜೀವನದ ಅರ್ಥ ಮತ್ತು ಮಹತ್ವವನ್ನು ತಿಳಿಯುವುದಾಗಿದೆ. ತತ್ವಶಾಸ್ತ್ರವೆಂದರೆ ಪ್ರಮಾಣಗಳ ಸಹಾಯದಿಂದ ನಾವು ವಾಸಮಾಡುವ ಪ್ರಪಂಚವನ್ನು ತಿಳಿಯುವುದೆಂದು ಪ್ರಪಂಚ ತಿಳಿಯುವುದೆಂದರೆ ಅದು ಹೇಗೆ ಸೃಷ್ಟಿಸಲ್ಪಟ್ಟಿತು ಅದರ ಸೃಷ್ಟಿಕರ್ತನನ್ನು ಪ್ರಪಂಚದ ಉತ್ಪತ್ತಿಯ ಉದ್ದೇಶವನ್ನು ಮನುಷ್ಯನ ಆತ್ಮ ಜಗತ್ತು ಈಶ್ವರ ಸಂಬಂಧಗಳನ್ನು ತಿಳಿಯುವುದಾಗಿದೆ.

ಹರ್ಬರ್ಟ್ ಸ್ಪೆನ್ಸರ್ ಹೇಳುವಂತೆ "ತತ್ವಶಾಸ್ತ್ರವೆಂದರೆ ಪೂರ್ಣ ಸಾಂಗತ್ಯ ಹೊಂದುವ ಜ್ಞಾನ, ವಿಷಯಕ್ಕೆ ಸಂಬಂಧವಿದ್ದಂತೆ ಸಾಂಗತ್ಯ ಅದು. ಮ್ಯಾಥೋ ಅರ್ನಾಲ್ಡ್ "ಮನುಷ್ಯ ಜೀವನವನ್ನು ಸಂಪೂರ್ಣವಾಗಿ ದರ್ಶನ ಮಾಡುವುದೇ ತತ್ವಶಾಸ್ತ್ರವೆನ್ನುವರು" ಈ ಶಾಸ್ತ್ರ ತತ್ವವಿಚಾರ ಮಾಡಲು ಮನುಷ್ಯನಿಗೆ ದಾರಿ ಮಾಡಿ ಕೊಡುವುದರೊಂದಿಗೆ ಪ್ರಪಂಚ ಕ್ಷೇಮ ನಂತರ ಪರ್ಯಾವಸಾನದಲ್ಲಿ ಆತನ ಶ್ರೇಯಸ್ಸಿಗೆ ಕಾರಣವಾಮದು. ಭಾರತೀಯ ತತ್ವಶಾಸ್ತ್ರದಲ್ಲಿ ಪರಿಪೂರ್ಣತೆಯ ಒಂದು ಭಾಗ ಮಾತ್ರ ಪಾಶ್ಚಾತ್ಯ ತತ್ವಶಾಸ್ತ್ರ. ಪ್ರಪಂಚದ ಸ್ವರೂಪ ಅಧ್ಯಯನ ಇದರಲ್ಲಿ ಸೇರಿರುವಂತೆ ತನ್ನ ಜೀವನವನ್ನು ರೂಪಿಸಿಕೊಳ್ಳುವ ತಿಳುವಳಿಕೆ ಕೂಡಾ ಇದೆ. ಆ ತತ್ವವೇ ಕೊನೆಯ ಸತ್ಯ ಅದರೊಂದಿಗೆ ನಿರಂತರ ಸಂಬಂಧ ಇಟ್ಟುಕೊಳ್ಳಬೇಕೆಂಬ ಆಸೆ ಬಲವತ್ತರವಾದಾಗ ಈ ನಿರಂತರ ತತ್ವಾನುಸಂಧಾನ ಧ್ಯಾನಯೆನಿಸುವದು. ಹಲವು ಸಾರಿ ಪಾಶ್ಚಾತ್ಯರು ಇದು ಆಶ್ಚರ್ಯದಿಂದ ಬಂದ ವಿಚಾರ ತನ್ನ ಸಂಪೂರ್ಣ ಸ್ವರೂಪವನ್ನು ಅಸಮರ್ಥ ಈ ತತ್ವಶಾಸ್ತ್ರವೆನ್ನುವರು. ಅಗಸ್ಟಕ್ರಾಮ್ಟೆ ಅನ್ನುವವನು 'ಯುಕ್ತಿಯಿಂದ ಅನುಭವಗೋಚರ, ಮನುಷ್ಯ ಜಾತಿಯ ಸುಖಕ್ಕೆ ಅನುಕೂಲವಾದ ಮಾರ್ಗವನ್ನು ಕಂಡುಹಿಡಿಯುವುದೇ ಹೊರತು, ಪ್ರಪಂಚದ ಕಾರಣ ತಿಳಿಯಲಾಗುವದಿಲ್ಲ ಅನ್ನುವನು. ಗ್ರೀಕ್, ಗಾರ್ಜಿಯಸ್, ಪ್ರಪಂಚದಲ್ಲಿ ಸತ್ಯವಾದದು ಇಲ್ಲ, ಒಂದು ವೇಳೆ ಇದ್ದರೂ ಸಹಿತ ಅದನ್ನು ಹೇಳಲು ಬರುವದಿಲ್ಲ. ಗ್ರೀಕ್ ರೋಮನ್‌ರಲ್ಲಿ ಪೈರೊ - ಕೆಲವರು ಹೇಳುವಂತೆ ಅತೀಂದ್ರಿಯವಾದ ವಸ್ತುವನ್ನು ತಿಳಿಯಲು ಸಾಧ್ಯವಿಲ್ಲ. ಅದರ ಯೋಚನೆಯನ್ನು ಕೈಬಿಡಬೇಕು. ಇವರೆಲ್ಲರ ಅಭಿಪ್ರಾಯಗಳು ಭಾರತೀಯ

ಚಾರ್ವಾಕರಂತೆ ಅನ್ನಬಹುದು. ಹೀಗೆ ಪಾಶ್ಚಾತ್ಯರಲ್ಲಿಯೂ ಭಾರತೀಯ ದಾರ್ಶನಿಕರಲ್ಲಿಯೂ ಹೋಲಿಕೆಯನ್ನು ನೋಡಬಹುದು. ಹಕ್ಸೇಲೇ ಅನ್ನುವವನು "ದೇವರು ಅನ್ನುವ ವಸ್ತುವನ್ನು ನಿಷೇಧಿಸಲಾಗದೇ ಹೋಗಬಹುದಾದರೂ ಅದರ ಸ್ವರೂಪವನ್ನು ತಿಳಿಯಲು ಅಸಮರ್ಥ" ಹೀಗೆ ತಿಳುವಳಿಕೆಯೆಂಬುದೆ ದೊರೆಯದ ವ್ಯರ್ಥ ಚಿಂತನ - ಮಂಥನಗಳೇಕೆ? ಅನ್ನಿಸುವದು ಮನುಷ್ಯ ವಾದ ಮಾಡುವಾಗ ನಾಸ್ತಿಕವಾಗಿದ್ದರೂ ಸಹಿತ ತನ್ನದೇ ಆದ ಆತ್ಮ ಹಾಗೂ ಪ್ರಪಂಚಕ್ಕಿರುವ ಸಂಬಂಧವನ್ನು ಯಾವುದೋ ಗೊತ್ತಿರದ ಮಾರ್ಗದ ಮೂಲಕ ಗ್ರಹಿಸುವನು ಹೀಗೆ ಅತೀಂದ್ರಿಯ ನಿರ್ಣಯ ವಸ್ತು ಸಾಧ್ಯವಿದೆ ಎಂಬುದು ನ್ಯಾಯ, ಭಾರತೀಯರು ಸಹಿತ ಅದು ತಿಳಿಯಲು ಅಸಾಧ್ಯ ಎನ್ನುವದು, ಅದರ ಮೂಲ ಕಾರಣಗಳನ್ನು ತಿಳಿಯಬಹುದು. ಆದರೆ ಪಂಚೇಂದ್ರಿಯಗಳಿಂದಲ್ಲ, ಅತೀಂದ್ರಿಯ ಗೋಚರವಾದ ಒಂದು ತಿಳುವಳಿಕೆಯನ್ನು ಹೊಂದುವ ಗ್ರಂಥಿ ಮನುಷ್ಯನಲ್ಲಿದೆ, ಅದು ಗ್ರಹಿಸುವದು. ಅದರ ಕ್ರಮ ಮಾತ್ರ ತಿಳಿಯುವದು ಕಷ್ಟ. ಅದಕ್ಕೆ ಅಂತಃಚಕ್ಷು, ಅಂತಹಾಚಕ್ಷು ಇತ್ಯಾದಿಯಾಗಿ ಹೇಳುವರು. ಅದಕ್ಕೆ ಇಂದ್ರಿಯಾನುಭವ ಅನ್ನದೇ ವಿಜಾತಿಯಾನುಭವ ಎನ್ನುವರು. ಪ್ಲೋಟಿನಸ್, ಸೇಂಟ್ ಟೆರೆಸ್, ಸೇಂಟ್ ಜಾನ್, ಯೆಕಾಹರ್ಟ, ಜಾಕಬ್ ಭೂಮಿ, ಜಾಜ್ ಫಾಕ್ಸ್ ಇವರು ಇದೇ ರೀತಿಯ ವಾದಿಗಳು. ಇವರಿಗೆ ಅನುಭಾವಿಗಳೆಂದು ಕರೆಯಬಹುದು. ಅದು ಅಸಾಧಾರಣ ಅನುಭವ ಗೋಚರ, ಅನುಭವ ಪರೀಕ್ಷೆಯೇ ಇಲ್ಲ ನಿರ್ಣಾಯಕತ್ವವನ್ನು ಕೊಡುವದು.

ಪ್ರಾಚ್ಯವಸ್ತು ಕಾಣದ ನಿವೃತ್ತಿಯೇ ಮೋಕ್ಷವೆನ್ನುವದು. ಇದಕ್ಕೆ ನಾವು ಧರ್ಮದರ್ಶನ ಎನ್ನಬಹುದು. ಮತಧರ್ಮವೆಂದರೆ ಆಯಾ ಧರ್ಮಕ್ಕನುಸರಿಸಿ ಬೇರೆಬೇರೆಯಾಗಿರುವವು. ಅಲ್ಲಿ ತತ್ವಶಾಸ್ತ್ರ ಮತಧರ್ಮದ ಅಡಿಯಾಳದಂತೆ ಆದರೆ ದರ್ಶನ ಚಿಂತನ - ಮಂಥನದಿಂದ ಬಂದಿದ್ದೆನ್ನಬಹುದು. ಧರ್ಮವೆಂದರೆ ಪರಲೌಕಿಕ ಶ್ರೇಯಸ್ಸನ್ನು ಕೊಡುವಂತಹದ್ದು ಜೀವನದ ಪರಮಗುರಿ ಮುಕ್ತಿಯೆಂಬ ಪುರುಷಾರ್ಥವನ್ನು ಹೊಂದುವದಾಗಿದೆ. 'ಧರ್ಮ' ಸಿದ್ಧಿತರ ತಮವಾದದ್ದು, 'ದರ್ಶನ' ಸಾಧನ ತರತಮವಾದದ್ದು, ಚೇತನವೆನ್ನುವ ಅರ್ಥದಲ್ಲಿ ದೇವರನ್ನು ಕಾಣುವದು ರೂಢಿ. ಈ ಪ್ರಪಂಚಕ್ಕೆ ಚೇತನ ಶಕ್ತಿ ಹೇಗೆ ಬಂತು, ಜಡ - ಚೇತನ ಅನ್ನುವಾಗ ಜಡದಿಂದ ಚೇತನ ಸಾಧ್ಯವಿದೆಯೇ? ಚೇತನದಿಂದ ಚೇತನ ಉತ್ಪತ್ತಿ ಹೊರತು ಜಡದಿಂದ ಸಾಧ್ಯವಿಲ್ಲ. 'ರೋಮದ ಲುಕ್ರಿಸಸ್' ಅನ್ನುವನೊಬ್ಬ ಅದು ತನ್ನ ಸ್ವಭಾವದಿಂದಲೆ ಚೈತನ್ಯರೂಪ ಪಡೆಯುವದೆನ್ನುವನು. ೧೯ನೇ ಶತಮಾನದಿಂದೀಚೆ ಹಲವಾರು ಪರೀಕ್ಷೆಗಳ ನಂತರದಲ್ಲಿ ಚೇತನಗುಣ ವಸ್ತುವಿಗೆ ಸಂಬಂಧಪಟ್ಟಿದ್ದಲ್ಲ ಅದು ಹೊರಗಿನಿಂದ ಬಂದು ಪ್ರಪಂಚದಲ್ಲಿ ಸೇರುತ್ತದೆ ಎಂದು ಭೌತಶಾಸ್ತ್ರಜ್ಞರು ತಿಳಿದರು. ಮತ ಧರ್ಮ ಅದಕ್ಕೆ ದೇವರು ಎಂದು ಹೇಳುವರು. ಇನ್ನೂ ಕೆಲವು ಪರಿಣಾಮವಾದಿಗಳು ವಸ್ತುವಿನ ಪರಿಣಾಮದಿಂದ ಆಗುತ್ತದೆ ಎಂದರು. ಆದರೆ ಅದು ವಿಜಾತಿಯ ಪರಿಣಾಮ ಅದು ಕೂಡ ದೇವರು ಅನ್ನುವದರ ಸುತ್ತಮುತ್ತಲೇ ತಿರುಗುವರು. ಇದಕ್ಕೆ ಬರ್ಗಸನ್ ಪರಿಣಾಮವಾದವೆನ್ನಬಹುದು. ಪ್ರಾಣದ ಧರ್ಮ ತನ್ನನ್ನು ತಾನು ಕಾಪಾಡಿಕೊಳ್ಳುವದು ಪ್ರಾಣ ವಸ್ತುವಿನ ಇನ್ನೊಂದು ಹೆಸರು ಚೈತನ್ಯ ಯಾವುದೋ ಒಂದು ಶಕ್ತಿ ವಿಶೇಷದ ಮಾತ್ರದಿಂದಲೇ ವಸ್ತುವಿನಲ್ಲಿ ಚೈತನ್ಯ ಉಂಟಾಗುವದೆಂದು ಅರಿಸ್ಟಾಟಲ್ ಹೇಳುತ್ತಾನೆ. ಬಹಳ ಜನ ಪಾಶ್ಚಾತ್ಯರು ಈ ಪರಿಣಾಮವಾದಿಗಳಾಗಿದ್ದಾರೆ.[೬೯] ಫ್ರೆಂಚ್ ಮೋಲಿಯರ್ ಎಂಬುವರು 'ಚೈತನ್ಯ ಜಡ ವಸ್ತುವಿನಲ್ಲಿ ಕಾಣುವ ಸ್ವಾಭಾವಿಕ ಗುಣವೆನ್ನುವುದಾದರೆ, ಯಾವ ಶಕ್ತಿಯಿಂದ ಅದು ಬಂದಿತು, ಅಂದಾಗ

ಮತ್ತೇ ಚೈತನ್ಯದಿಂದಲೇ ಅನ್ನಬೇಕಾಗುವದು ಆದ್ದರಿಂದ ಜಡವು ಚೈತನ್ಯ ಶಕ್ತಿಗೆ ಪ್ರೇರಕವಲ್ಲವೆಂದು ಪರಿಣಾಮ ವಾದವನ್ನು ತಿರಸ್ಕರಿಸುವನು. ಪ್ರಾಣವೆಂದರೆ[3] ಒಳಗಿನ ವಸ್ತು ಹೊರಗಿನ ಪರಿಸರಕ್ಕನುಗುಣವಾಗಿ ತನ್ನನ್ನು ತಾನು ರೂಪಿಸಿಕೊಳ್ಳುವದು. ಜಡ ವಸ್ತುಗಳು ಪ್ರಾಣಕ್ಕಿಂತಲೂ ಭಿನ್ನ ಭೌತಿಕ ವಸ್ತುಗಳ ನಿಯಮವು ಶರೀರ ವ್ಯಾಪಾರ, ಅದಕ್ಕನುಗುಣವಾಗಿ ವೃದ್ಧಿ ಪರಿಣಾಮಗಳಿಗೆ ಸಂಬಂಧವಿಲ್ಲ. ಜಡವಸ್ತುವೇ ಬೇರೆ. ಚೇತನ ವಸ್ತುವೇ ಬೇರೆ, ಹೀಗೆ ಪಾಶ್ಚಾತ್ಯರು ಹೇಳಿರುವದನ್ನು ಇಲ್ಲಿ ಉಪನಿಷತ್ತುಗಳ ಭಾಗದಲ್ಲಿ ಕಾಣುತ್ತೇವೆ. ಅನೇಕ ವಿಷಯಗಳಲ್ಲಿ ಪಾಶ್ಚಾತ್ಯ ಮತ್ತು ಪೌರ್ವಾತ್ಯ ದಾರ್ಶನಿಕ ಕಲ್ಪನೆಯಲ್ಲಿ ಸಾಮ್ಯತೆಯಿದೆ. ಪ್ರಪಂಚದ ಉತ್ಪತ್ತಿಗೆ ದೇವರೇಕೆ ಕಾರಣವೆಂದರೆ ಜೀವರಿಗೆ ಶ್ರೇಯಸ್ಸುಬೇಕೆಂಬ ಸೃಷ್ಟಿಯ ಕಾರಣ ಕೊಡುವರು. ಇದು ಮಾಧ್ವರ ಮಾತು. ದಾರ್ಶನಿಕ ಕಲ್ಪನೆಯನ್ನು ಕಾಣುವದು ತಾತ್ವಿಕ ಶೋಧನೆಯ ಹಿನ್ನಲೆಯಲ್ಲಿ ಅದು ಹುಡುಕಲು ಶುರುಮಾಡುವ ಕಲ್ಪನೆಯೇ ದಾರ್ಶನಿಕ ಮಾರ್ಗ. ಈಶ್ವರ ಕಲ್ಪನೆಯನ್ನು ಹೇಳಲು ಭಾರತೀಯರಂತೆ ಪಾಶ್ಚಾತ್ಯರು ಕೂಡಾ ವಾದ ಮಾಡಿರುವರು. ಮತಗಳ ಅಡಿಯಲ್ಲಿ ಗುರುವಿನ ಕೂಡಾ ವಾದ ಮಾಡಿರುವರು. ಮತಗಳ ಅಡಿಯಲ್ಲಿ ಗುರುವಿನ ಮುಖಾಂತರ ತತ್ವ ವಿಚಾರಗಳನ್ನು ಮಾಡುವ ಮೂಲಕ ತಿಳಿಯಬಹುದಾಗಿದೆ. ಗ್ರೀಕ್‌ರು ಕೂಡಾ ಮನುಷ್ಯನಲ್ಲಿ ಮಾತುಕತೆ ಸಂಬಂಧ ಹೊಂದುವಂತೆ ಆ ದೇವನೊಡನೆ ಸಂಬಂಧ ಹೊಂದಬಹುದೆಂದು ನಂಬಿದ್ದರು. ಈ ಪರಿಕಲ್ಪನೆ ಪೌರ್ವಾತ್ಯದಲ್ಲಿಯೂ ಇದೆ. ಆ ಅಸ್ತಿತ್ವವನ್ನು ಸಿದ್ಧಗೊಳಿಸಲು ದಾರ್ಶನಿಕರು ಹಲವಾರು ಮಾರ್ಗಗಗಳನ್ನು ಕಂಡುಕೊಂಡರು ಒಬ್ಬ ಕರ್ತೃ ಇರಬೇಕು. ಆ ಕರ್ತೃವೇ ದೇವರು. ಹಲವು ಭೌತಿಕ ಶಾಸ್ತ್ರಜ್ಞರು ದೇವರೆಂದರೆ ಪ್ರಪಂಚ ಪರಿಣಾಮಕ್ಕೆ ಪ್ರಪಂಚ ನಿಯಮ ಮತ್ತು ನಿಯಮಕಾರಗಳ ಶಕ್ತಿ ಮೂಲ ಅದೇ ಎಂದೆನ್ನುವನು. ದೇವರೆಂಬ ತಿಳುವಳಿಕೆ ನಮಗೆ ಇದೆ ಆದ್ದರಿಂದ ದೇವರಿದ್ದಾನೆ ಎಂದು 'ಕಾಂಟ'[4] ವಿಲಿಯಂ ಜೇಮ್ಸ್ 'ಪ್ರಪಂಚಕ್ಕೆ ಅಸ್ತಿತ್ವ ಸ್ಥಾನಮಾನಗಳನ್ನು ಕೊಡುವ ಅಂತರ್ಯ ವಸ್ತು ಎನ್ನುವನು.' ಒಟ್ಟಿನ ಮೇಲೆ ತತ್ವಶೋಧನೆ ತತ್ವಶಾಸ್ತ್ರ.[5] ಪ್ಲೋಟೊ - ದೇವರು ಶುಭಗುಣ, ಅರಿಸ್ಟಾಟಲ್ - ಆತ ಶೇಷ್ಟಕ, ಸ್ಟೋಯಿಕ್ - ಅದೃಷ್ಟರೂಪ, ನೂತನ - ಪ್ಲೋಟೊ - ಅವನನ್ನು ವರ್ಣನೆಮಾಡಲು ಸಾಧ್ಯವಿಲ್ಲ, ಹಿಬ್ರುಗಳು - ಧಮರ ಪರಿವರ್ತಕ ಜಿಹೇನಾ, ಕ್ರಿಶ್ಚಿಯನ್ - ಕ್ರೈಸ್ತ, ಸ್ಪಿನೋಜ್ - ಜ್ಞಾನ ಆಕಾರವುಳ್ಳ ವಸ್ತು, ಬಾರ್ಕ್ಲೆ - ಜೀವರತಂದೆ, ಕಾಂಟ - ಧರ್ಮರಕ್ಷಕ, ಹೆಗಲ್ - ಅನಂತಸ್ವರೂಪ, ಆಯಕನ್ - ಜ್ಞಾನ ರೂಪ ಶಕ್ತಿ, ಹರ್ಬರ್ಟ್ಸ್ ಸ್ಪೇನ್ಸರ್ - ಅನಂತ ಮತ್ತು ನಿತ್ಯವಾದ ಶಕ್ತಿ, ಬ್ರಾಡ್ಲೇ ಆಯಂಡ್ ರೈಸ್ - ಅನಂತಾನುಭವರೂಪ, ವಿಲಿಯಂ - ದೇವರು ಸರ್ವವ್ಯಾಪ ಶಕ್ತಿರೂಪ, ಪೆಟ್ರೀಕ್ - ದೇವರು ಪ್ರಪಂಚದ ಆತ್ಮ ಮತ್ತು ಅಂತರವ್ಯಾಪ್ತಿ, ಆನಂದದ ಪರಮಾವಧಿ ಎಡ್ವಿನ್ ಗ್ರಾಂಟ್ ಕಾಂಕ್ಲಿನ್, ವಿಲಿಯಂ ಪ್ಯೆಟಿನ್ - ಪ್ರಪಂಚದ ಪ್ರವೃತ್ತಿಯಾಗಲು ಊರ್ಧ್ವ ಮಾರ್ಗ ಪೂರ್ಣತೆಯನ್ನು ಬಯಸುವನು. ಆ ಪೂರ್ಣತೆಯೇ ದೇವರು ಎನ್ನುವನು. ಕಾಂಟನ ಪ್ರಪಂಚಕ್ಕೆ ನಿಮಿತ್ಯ ಕಾರಣ ದೇವರು ಇದು ನ್ಯಾಯ ವೈಶೆಸಿಕವನ್ನು ಹೊಂದುವದು. ಪಾಶ್ಚಾತ್ಯರ ಪರಿಣಾಮವಾದ ಇಲ್ಲಿಯ ಸಾಂಖ್ಯರ ಪರಿಣಾಮವನ್ನು ಹೋಲುತ್ತದೆ. ಜ್ಞಾನರೂಪ ಶಕ್ತಿ ಪ್ರಪಂಚಕ್ಕೆ ಮೂಲಾಧಾರ ಅನ್ನುವ ಪಾಶ್ಚಾತ್ಯವಾದ ಅದ್ವೈತ ಮತ್ತು ದ್ವೈತ ವೇದಾಂತವನ್ನು ಹೋಲುವದು. ಈಶ್ವರ ಇದು ಅಂತರಯಾಮಿ ಇದು ವಿಶಿಷ್ಟಾದ್ವೈತ. ಅಂತರಯಾಮಿ ಯಾದರೆ ಸೃಷ್ಟಿ - ಸ್ಥಿತಿ - ಲಯಗಳಿಗೆ ಕಾರಣ. ಇದು ಮಧ್ವ ದರ್ಶನಕ್ಕೆ ಸಮ, ಸ್ವಭಾವದಿಂದ ಜಗತ್ ಸೃಷ್ಟಿಯನ್ನು ಪರಿಣಾಮಕರವಾದ ಚಾರ್ವಾಕರ ಮತವನ್ನು, ಕ್ಷಣಿಕ ವಸ್ತು ಅನಂತರ ಹುಟ್ಟಿ ಕಾರಣ ಎನ್ನುವ ಬೌದ್ಧದ ವಾದವನ್ನು, ಚೇಷ್ಟಕ ಅಥವಾ

ಚೇತಕ, ಜೀವನಕರ್ಮ, ಪ್ರಪಂಚ ಪ್ರವೃತ್ತಿಗೆ ನಿಮಿತ್ಯ ಇದು ಮೀಮಾಂಸಕರನ್ನು ಹೋಲುವದು. ಹೀಗೆ ಪ್ರಾಚ್ಯ ಮತ್ತು ಪ್ರತೀಚ್ಯೆ ದರ್ಶನ ಕಲ್ಪನೆಗಳು ಬಹಳಷ್ಟು ವೈದೃಶ್ಯ ಹೊಂದಿದಷ್ಟು ಸಾದೃಶ್ಯ ಹೊಂದಿವೆ. ಇಲ್ಲಿ ಜ್ಞಾನ ಪರೀಕ್ಷೆ ಅನ್ನುವ ಮಾತು ತತ್ವ ಪರೀಕ್ಷೆ ಅನ್ನುವುದೇ ಆಗಿದೆ. ಜ್ಞಾನೋತ್ಪತ್ತಿ ವಿಚಾರದಲ್ಲಿ ಸುತ್ತಮುತ್ತಲಿನ ಪ್ರಪಂಚಜ್ಞಾನ, ಆತ್ಮಜ್ಞಾನ, ಧ್ಯಾನಧರ್ಮಗಳ ಜ್ಞಾನ, ಗಣಿತಶಾಸ್ತ್ರದ ಜ್ಞಾನ, ಸೌಂದರ್ಯಗಳ ಜ್ಞಾನ, ಸಗುಣಗಳ ಜ್ಞಾನ, ಇವೆಲ್ಲ ಅನೇಕ ರೀತಿಯ ಜ್ಞಾನಗಳಾದರೂ ಜ್ಞಾನೋತ್ಪತ್ತಿಯ ವಿಧ ನಾಲ್ಕು ಪಥ ಎನ್ನುವದರಲ್ಲಿ ಸಂದೇಹವಿಲ್ಲ."[*] ೧. ಜ್ಞಾನವು ಹೊಸದಾಗಿ ಹುಟ್ಟುವುದಿಲ್ಲ ಅದು ಮೊದಲಿನಿಂದಲೂ ಇದೆ. ೨. ಯುಕ್ತಿಯಿಂದ ಲಬ್ದ ಎಂದು ಕೆಲವರು (ಬುದ್ಧ್ಯಾತ್ಮಕವಾದ Rationulism) ೩. ಇಂದ್ರಿಯದಿಂದ ಜ್ಞಾನ ಉಂಟಾಗುವದೆಂದು (Emphiricism) ೪. ಇದೇ ಮುಖ್ಯ ವಿಚಿತ್ರವಾಗಿರುವ, ಧ್ಯಾನಾಧಾರಿತ ಶೋಧೀಕರಿಸಲು ತನ್ನನ್ನು ತಾನು ಕಾಣುವ ಪರಿಯಲ್ಲಿ ಅಂತರ ಮುಖವಾಗಿ ಇರುವ ಸಾಕ್ಷಾತ್ಕಾರದ ಜ್ಞಾನವೇ ಅದು ಅನುಭಾವ. (Mysticism) ಇದರಿಂದಲೇ ಭಗವಂತನ ಸಾಕ್ಷಾತ್ಕಾರ. ಈ ತತ್ವಗಳ ಆಧಾರದಲ್ಲಿಯೇ ಅಲ್ಲಮನ ತತ್ವ ಮೀಮಾಂಸೆಯನ್ನು ಜಿಜ್ಞಾಸೆಗೊಳಪಡಿಸುವುದು. ಬಹುತೇಕ ಭಾರತೀಯ ದಾರ್ಶನಿಕರು ಅನುಭಾವಿಗಳೇ ಷಡ್ ದರ್ಶನಿಗಳಂತೆ ಬೌದ್ಧ, ಜೈನ ಇತ್ಯಾದಿ ಸ್ವತಂತ್ರದಾರಕರು ನಿಜಾನುಭಾವಿಗಳೇ ಎನ್ನಬಹುದು. ಇಲ್ಲಿ ದಾರ್ಶನಿಕರು ಚಿಂತನ - ಮಂಥನದಿಂದ ಸಾಗಿ ಅನುಭಾವದಿಂದ ಬಂದವರು. ಅನುಭಾವಿ ಪೂರಿತರಾದವರು. ಚಿಂತನೆಯಲ್ಲಿ ಸ್ವತಂತ್ರತೆಯನ್ನು ಬಹುವಾಗಿ ಹೊಂದಿದವರೆನ್ನಬಹುದು. ಇವರಿಗೆ ವೇದದ ವಿಚಾರ ಸಾಮ್ಯ ಹೊಂದಿರಬಹುದು. ಇಲ್ಲ ಬಿಟ್ಟಿರಬಹುದು. ತನಗೆ ಸರಿ ಕಂಡದ್ದನ್ನು ಮಾತ್ರ ತಿಳಿಸುವ ಮಹಾನುಭಾವರು.

ಪ್ರಾಚೀನ ಪಾಶ್ಚಾತ್ಯ ತತ್ವಶಾಸ್ತ್ರವೆಂದರೆ ಗ್ರೀಕರ ತತ್ವಶಾಸ್ತ್ರವೆಂದು ಪೌರ್ವಾತ್ಯ ತತ್ವಶಾಸ್ತ್ರವೆಂದರೆ ವೇದವನ್ನಾಧರಿಸಿದ ಉಪನಿಷತ್ತುಗಳೊಂದಿಗಿನ ಆಚಾರತ್ರಯರ ಮೀಮಾಂಸೆಯನ್ನು ತೆಗೆದುಕೊಂಡು ಜೈನ, ಬೌದ್ಧ ಮುಂತಾದವುಗಳನ್ನು ನೋಡುತ್ತ ಸಾಗಲಾಗಿದೆ. ಪಾಶ್ಚಾತ್ಯ ಮತ್ತು ಪೌರ್ವಾತ್ಯರ ಈ ಮೇಲಿನ ದೃಷ್ಟಿಯಂತೆ ನೋಡುತ್ತಾ ೧೨ನೇ ಶತಕದ ಪ್ರಭುವಿನ ಅನುಭಾವವನ್ನು ನೋಡುವ ಉದ್ದೇಶ ನಮ್ಮದು.

ಪೌರ್ವಾತ್ಯ ವ್ಯಾಖ್ಯಾನವೆಂದರೆ ಅದು ಹರಪ್ಪ - ಮಹೆಂಜೋದಾರೋ ಪ್ರದೇಶದಿಂದ ಪ್ರಾರಂಭ ಎನ್ನುವರು. ಆ ಸಂಸ್ಕೃತಿಯೇ ಅನುಭಾವದ ಮೂಲ ನೆಲೆ. ಅಲ್ಲಿಂದಲೇ ಎಲ್ಲವೂ ಪ್ರಾರಂಭ. ಮೊದಲು ಮಾನವ ಹಸಿಮಾಂಸ ತಿನ್ನಲಿಕ್ಕೆ ಶುರುಮಾಡಿದ ನಂತರ ಅದನ್ನು ಸುಟ್ಟು ತಿನ್ನಲು ಪ್ರಾರಂಭಿಸಿದ ದಿನ ಹೋದಂತೆ ತನ್ನ ಇರುವಿಕೆಯಲ್ಲಿ ಬದಲಾವಣೆಯನ್ನು ಬಯಸಿದ. ಸೃಷ್ಟಿಯ ರಹಸ್ಯಗಳನ್ನು ಅವಲೋಕಿಸುತ್ತಾ ಸಿಡಿಲು, ಗುಡುಗು, ಮಳೆ, ರೋಗ ರುಜಿನಗಳು, ಆಗಾಗ ಸಾಯುವದು ಇವೆಲ್ಲಾ ಸೃಷ್ಟಿಯ ಕೃತಿಗಳಿಗೆ ಏನೋ ಕಾರಣವಿರಬಹುದು ಅದರಿಂದಲೇ ಇವೆಲ್ಲಾ ನಡೆಯುತ್ತವೆ. ಅದರ ಮೂಲ ನೆಲೆಯನ್ನು ಹುಡಕಲಿಕ್ಕೆ ಉತ್ಸಹಕನಾದದ್ದೇ ಧರ್ಮದ ಉಗಮಕ್ಕೆ ಕಾರಣ. ಹುಟ್ಟುಸಾವುಗಳ ಬಿಡುಗಡೆಯನ್ನು ಹೊಂದಬೇಕಾದರೆ ಈ ಅದೃಶ್ಯಶಕ್ತಿಯನ್ನು ಯಾವರೀತಿ ಕಂಡುಹಿಡಿಯಬೇಕು. ಸತ್ಯ ಸಂಶೋಧನೆಯ ಪ್ರಾರಂಭಿಸಿದ ಕಾರಣ ಧರ್ಮದ ಹುಟ್ಟು ಈ ಸತ್ಯವನ್ನು ತರ್ಕಬದ್ಧವಾಗಿ ಅರಿಯಲು ತೊಡಗಿದಾಗ ಅದು ಜ್ಞಾನವಾಗುವುದು. ಸತ್ಯ ವಸ್ತುನಿಷ್ಠವಾದರೇ ಅದು ವಿಜ್ಞಾನ, ಅದೇ ವ್ಯಕ್ತಿ ಬದ್ಧವಾದಾಗ ಸುಜ್ಞಾನ ಭಾವನೆಯಾಗುವದು. ಆ ಭಾವನೆಗಳನ್ನು ಒಳಗೊಂಡರೂ ಅದನ್ನು ಮೀರಿ ಅಲೌಕಿಕವಾದ ಸತ್ಯವನ್ನು ಅರಿಯಬೇಕಾದಲ್ಲಿ, ಅವು ಧರ್ಮ

ದರ್ಶನವಾಗುವುದು. ಪ್ರತಿಜೀವಿ ಆತ್ಯಂತಿಕವಾಗಿ ಪಡೆಯಬಹುದಾದ ಅತ್ಯುನ್ನತ ಸಾಧನೆ ಎಂದರೆ ಪರಿಪೂರ್ಣತೆ. ವೇದದ ಮೊದಲಿನ ಭಾಗ ಕರ್ಮಕಾಂಡ ಅಲ್ಲಿ ಅನುಭಾವಕ್ಕೆ ಸ್ಥಾನವಿಲ್ಲ, ಜ್ಞಾನಕಾಂಡ (ವೇದಾಂತ) ಈ ಉಪನಿಷತ್ತಿನಲ್ಲಿ ಅನುಭಾವಕ್ಕೆ ಸ್ಥಾನಮಾನವಿದೆ. ಉಪನಿಷತ್ತುಗಳು ಅನುಭಾವದ ಗದ್ದೆಗಳು. ಗೀತೆ ಅನುಭಾವದ ಪದ್ಯರೂಪ ಇದು ಉಪನಿಷತ್ತು ಸಾರಗಳು ಕೂಡಾ. ಅನುಭಾವದ ದೃಷ್ಟಿಯಿಂದ ಕರ್ನಾಟಕದಲ್ಲಿ ಎರಡು ಭಾಗಗಳನ್ನು ನೋಡಬಹುದು. ೧. ೧೨ನೇ ಶತಮಾನದ ವಚನಕಾರರ ಮಾರ್ಗ. ೨. ೧೫ನೇ ಶತಮಾನದ ದಾಸ ಸಾಹಿತ್ಯ. ಹಾಗೇ ಸೂಫಿ ಸಂತರನ್ನು ಅನುಭಾವದ ಹಿನ್ನಲೆಯಲ್ಲಿ ನೋಡಲಾಗಿದೆ.

## ಅಡಿಟಿಪ್ಪಣಿ

೧. ಪಾಶ್ಚಾತ್ಯ ತಾತ್ವಿಕ ಚಿಂತನೆ, ಪು. ೧೧
೨. ಅದೇ, ಪು. ೪೯
೩. ಅದೇ, ಪು. ೯೨
೪. ಅದೇ, ಪು. ೯೪
೫. ಅದೇ, ಪು. ೯೪
೬. ಗ್ರೀಕ್ ತತ್ವಶಾಸ್ತ್ರ, ಪು. ೧೭೫
೭. ಅದೇ, ಪು. ೧೭೬
೮. ಗ್ರೀಕ್ ತತ್ವಶಾಸ್ತ್ರ ಸಂಗ್ರಹ, ಪು. ೩೬
೯. ಅದೇ, ಪು. ೨೮೮
೧೦. ಅದೇ, ಪು. ೨೬೨
೧೧. ಪಾಶ್ಚಾತ್ಯ ತಾತ್ವಿಕ ಚಿಂತನೆ, ಪು. ೧೩೦, ೧೩೧
೧೨. ಅದೇ, ಪು. ೧೩೪
೧೩. ಅದೇ, ಪು. ೧೩೪
೧೪. ಅದೇ, ಪು. ೧೩೬
೧೫. ಅದೇ, ಪು. ೧೩೯
೧೬. ಅದೇ, ಪು. ೧೩೯
೧೭. ಅದೇ, ಪು. ೧೩೯
೧೮. ಅದೇ, ಪು. ೧೪೩
೧೯. ಅದೇ, ಪು. ೧೪೩
೨೦. ಅದೇ, ಪು. ೧೪೪
೨೧. ಅದೇ, ಪು. ೧೪೪
೨೨. ಅದೇ, ಪು. ೧೪೫
೨೩. ಗ್ರೀಕ್ ತತ್ವಶಾಸ್ತ್ರ, ಪು. ೩೮೪
೨೪. ಪಾಶ್ಚಾತ್ಯ ತಾತ್ವಿಕ ಚಿಂತನೆ, ಪು. ೧೫೬
೨೫. ಅದೇ, ಪು. ೧೫೯
೨೬. ಅದೇ, ಪು. ೧೫೯
೨೭. ಅದೇ, ಪು. ೧೬೧
೨೮. ಅದೇ, ಪು. ೧೭೦
೨೯. ಅದೇ, ಪು. ೧೮೫
೩೦. ಅದೇ, ಪು. ೧೯೦
೩೧. ಅದೇ, ಪು. ೧೯೩
೩೨. ಅದೇ, ಪು. ೧೯೯
೩೩. ಅದೇ, ಪು. ೨೦೯

೩೪. ಅದೇ, ಪು. ೨೧೭

೩೫. ಅದೇ, ಪು. ೨೧೯

೩೬. ಅದೇ, ಪು. ೨೩೩

೩೭. ಅದೇ, ಪು. ೨೩೪

೩೮. ಅದೇ, ಪು. ೨೩೯

೩೯. ಅದೇ, ಪು. ೨೫೪

೪೦. ಅದೇ, ಪು. ೨೬೭

೪೧. ಭಾರತೀಯ ತತ್ವಶಾಸ್ತ್ರ ಸಂಗ್ರಹ, ಪು ೧೩೩

೪೨. ಅದೇ, ಪು. ೧೩೪

೪೩. ಪಾಶ್ಚಾತ್ಯ ತಾತ್ವಿಕ ಚಿಂತನೆ, ಪು. ೨೪೫

೪೪. ಶರಣರ ಅನುಭಾವ ಸಾಹಿತ್ಯ, ಪು. ೧೬೪

೪೫. ಅನುಭಾವ ಸಾಹಿತ್ಯ, ಪು. ೧೬೪

೪೬. ಶರಣರ ಅನುಭಾವ ಸಾಹಿತ್ಯ, ಪು. ೧೬೬

೪೭. ಅದೇ, ಪು. ೧೬೬

೪೮. ಅದೇ, ಪು. ೧೬೯

೪೯. ಅನುಭವ ಸಾಹಿತ್ಯ, ಪು. ೧೭೪

೫೦. ಅದೇ, ಪು. ೧೭೭

೫೧. ದರ್ಶನ ಸಮೀಕ್ಷೆ, ಪು. ೨೪

೫೨. ತಿಳಿಯುವ ತೇಜದ ಮುಂದೆ, ಪು. ೭೮

೫೩. ಅದೇ, ಪು. ೮೦

೫೪. ಶರಣರ ಅನುಭಾವ ಸಾಹಿತ್ಯ, ಪು. ೧೭೮

೫೫. ತಿಳಿವ ತೇಜದ ಮುಂದೆ, ಪು. ೮೧, ೮೨

೫೬. ಅದೇ, ಪು. ೮೧

೫೭. ಅದೇ, ಪು. ೮೨

೫೮. ಅದೇ, ಪು. ೯೦

೫೯. ಭಾರತೀಯ ತತ್ವಶಾಸ್ತ್ರ ಸಂಗ್ರಹ

೬೦. ಅದೇ, ಪು. ೧೬೯

೬೧. ಅದೇ, ಪು. ೯೮೭

೬೨. ಅದೇ, ಪು. ೯೯೫

೬೩. ಅದೇ, ಪು. ೯೯೫

೬೪. ಅದೇ, ಪು. ೯೯೫

೬೫. ಅದೇ, ಪು. ೧೦೦೩



# ೩

# ಭಾರತೀಯ ಕೆಳವರ್ಗದ ದಾರ್ಶನಿಕ ಪರಂಪರೆ

ವೇದಗಳ ಕಾಲದಿಂದಲೂ ಅಂದರೆ ಆರ್ಯ ಮತ್ತು ಅನಾರ್ಯರಲ್ಲಿ ದಾರ್ಶನಿಕ ಪರಂಪರೆಯ ಮೂಲಗಳನ್ನು ಕಾಣಬಹುದು. ಋಗ್ವೇದದಲ್ಲಿ ಪ್ರಾರ್ಥನೆ ಮಂತ್ರಗಳು, ಪ್ರಕೃತಿಯ ವೈಪರೀತ್ಯಕ್ಕೆ ಹಲವಾರು ದೇವತೆಗಳನ್ನು ಕಲ್ಪಿಸಿದ್ದರು. ಅಗ್ನಿಪೂಜೆ, ಮಳೆದೇವರು, ಅದರಂತೆ ಬೆಟ್ಟ ಮರಗಳನ್ನು ಪೂಜಿಸಲಾಯಿತು. ಬ್ರಹ್ಮ ಸೃಷ್ಟಿಗೆ ಕಾರಣನಾದರೆ, ವಿಷ್ಣು ಪಾಲನಕರ್ತನಾಗಿ, ಶಿವ ಕೆಟ್ಟದ್ದನ್ನು ನಾಶಮಾಡುವ ಲಯಕರ್ತನಾಗಿದ್ದಾನೆ. ಈ ದೈವಿಕ ವಿಭಾಗಗಳನ್ನು ಮಾಡುವಲ್ಲಿ ಸಮಾಜವನ್ನು ಕೂಡಾ ವಿಭಾಗಿಸಿದಂತೆ ಕಂಡುಬರುವುದು. ಅಂದರೆ ಚಾತುರ್ವರ್ಣ ವ್ಯವಸ್ಥೆ ಮೊದ ಮೊದಲು ಇದು ಜಾತಿವಾಚಕವಾಗಿಲ್ಲದಿದ್ದರೂ ಕ್ರಮೇಣ ವರ್ಣ ಸಂಕರಕ್ಕೆ ಅಂಟಿಕೊಂಡಿತು. ಜಾತಿಯಿಂದ ಯಾರೂ ಬ್ರಾಹ್ಮಣರಲ್ಲ. ಬ್ರಹ್ಮಜ್ಞಾನವನ್ನು ಯಾರು ಪಡೆಯುವರೋ ಅವನೇ ಬ್ರಾಹ್ಮಣ. ರಾಜ್ಯವನ್ನು ಸಂಪಾದಿಸುವವ ಕ್ಷತ್ರಿಯನಾಗಿ, ವ್ಯಾಪಾರ ಮಾಡುವವ ವೈಶ್ಯನಾಗಿ, ಈ ಮೂರು ಜನರ ಸೇವೆ ಮಾಡುವವ ಶೂದ್ರನಾಗಿದ್ದುದು ತಿಳಿದುಬರುವುದು. ಜನಕರಾಜ ಆತ ರಾಜನಾದರೂ ಕೂಡಾ ಬ್ರಾಹ್ಮಣ್ಯತ್ವವನ್ನು ಪಡೆದುಕೊಂಡಿದ್ದ. ಅದರಂತೆ ವಿಶ್ವಾಮಿತ್ರ ಕ್ಷತ್ರಿಯರಂತೆ ರಾಜರ್ಷಿ ಎನಿಸಿಕೊಂಡಿದ್ದ. ದಾರ್ಶನಿಕ ಪ್ರಾರಂಭದ ಹಂತದಲ್ಲಿ ಹುಟ್ಟಿನ ಜಾತಿಯನ್ನು ಅಳೆಯಲಾಗುತ್ತಿದ್ದಿಲ್ಲ. ನಂತರದಲ್ಲಿ ಅದು ಪ್ರಾರಂಭವಾಯಿತು. ಬ್ರಾಹ್ಮಣ, ಕ್ಷತ್ರಿಯ ಇವುಗಳೆರಡರಲ್ಲಿಯೂ ಸಂಬಂಧಗಳು ಹೊಂದಿಕೊಂಡಂತೆ ಅಥವಾ ಸ್ವತಂತ್ರವಿದ್ದಂತೆ ಕೆಳವರ್ಗದವರಿಗೆ ಶೂದ್ರತ್ವ ಅಂದರೆ ಅಸ್ಪೃಶ್ಯತೆ ಪಡೆದುಕೊಂಡಿತ್ತು. ಅವರಿಗೆ ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯವಿರಲಿಲ್ಲ. ಇದನ್ನು ಬುದ್ಧ, ಮಹಾವೀರ ಮೊದಲಾದವರು ವಿರೋಧಿಸಿದರು. ಕೆಳವರ್ಗದ ದಾರ್ಶನಿಕ ಪರಂಪರೆಯಲ್ಲಿ ಇವರ

ಚಿಂತನೆಗಳು ಬಹುಮುಖ್ಯ. ಇಬ್ಬರೂ ರಾಜಕುಮಾರರೆ ಇಬ್ಬರಿಗೂ ಜನಸಾಮಾನ್ಯರ ಬಗ್ಗೆ ಅನುಕಂಪವಿದೆ. ಬ್ರಾಹ್ಮಣರು ಸಕಲರಿಗೆ ನಿರ್ದೇಶಕರಾಗಿ ಸಕಲ ವಿದ್ಯಾ ಸ್ವಾತಂತ್ರ್ಯವನ್ನು ಪಡೆದುಕೊಂಡಂತೆ ಶೂದ್ರರಿಗೆ ಅದೇ ಸ್ವಾತಂತ್ರ್ಯ ತಂದುಕೊಡಲು ಯತ್ನಿಸಿದರು. ಅಷ್ಟೇ ಅಲ್ಲ ಶೂದ್ರರು ತಾವು ಹಿಂದಿನ ಜನ್ಮದ ಯಾವ ತಪ್ಪಿಗಾಗಿ ಈಗ ನಾವು ಶೂದ್ರರಾಗಿ ಹುಟ್ಟಿದ್ದೇವೆ ಎಂಬ ಕಲ್ಪನೆ ಮನೆಮಾಡಿತ್ತು. ಒಳ್ಳೆಯ ಸೇವೆ ಮಾಡಿದರೆ ಮಾತ್ರ ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಬಹುದೆಂಬ ಜಾತಿ ವ್ಯವಸ್ಥೆ ರೂಪಗೊಂಡಿತ್ತು. ಇದರ ವಿರುದ್ಧ ಜೈನ ಬೌದ್ಧರು ತೀಕ್ಷ್ಣವಾದ ದಾರ್ಶನಿಕ ಕಲ್ಪನೆಗಳಿಂದ ಖಂಡಿಸಿದರು. ಅಂದರೆ ಈ ವರ್ಣವ್ಯವಸ್ಥೆ ವೇದ ಉಪನಿಷತ್ತುಗಳಲ್ಲಿ, ಮನುಸ್ಮೃತಿ, ಭಗವದ್ಗೀತೆಗಳಲ್ಲಿ ಶಾಸ್ತ್ರೀಕೃತಗೊಂಡಿರುವುದನ್ನು ನೋಡಿ ಆ ವೇದಗಳ ಪಾರಮ್ಯವನ್ನೇ ಇವರು ನಿರಾಕರಿಸಿದರು. ಆದ್ದರಿಂದ ಇವರಿಗೆ ಅವೈದಿಕರು ಎಂದು ಕರೆಯುತ್ತಾರೆ. ಜೈನ ಜೀವನ ನಶ್ವರ, ದೇಹದಂಡನೆ ಸುಖಕ್ಕೆ ಒಂದು ಮಿತಿಯಿದೆ. ಸೂಚನೆ ಬಂದಾಗ ಅದನ್ನು ಬಿಟ್ಟು ಹೋಗಬೇಕು. ಸೃಷ್ಟಿಗಳೆಲ್ಲ ಮೊದಲ ತೀರ್ಥಂಕರ ವೃಷಭಾಂಗನೆಗೆ ಮಾತ್ರ ಗೊತ್ತು, ಸ್ನಾನ ಮಾಡಬಾರದು. ಹೀಗೆ ವಿಪರೀತವಾಗಿರುವ ಅಹಿಂಸಾ ಬೋಧನೆಯಿಂದ ಜನತೆ ಸುಸ್ತಾದರು. ಇದರಿಂದ ದೂರ ಸರಿದವರು ಬೌದ್ಧ ಬದ್ಧತೆಗೆ ಒಳಗಾದರು. ಇಲ್ಲಿ ಆಸೆಯೇ ದುಃಖಕ್ಕೆ ಮೂಲ, ಆಸೆಯ ನಾಶವೇ ಸಂತೋಷಕ್ಕೆ ಕಾರಣ ಎಂಬ ನುಡಿಯೊಂದಿಗೆ ದೇವರ ಅಸ್ತಿತ್ವದ ಬಗ್ಗೆ ಯಾವ ಮಾತನ್ನು ಬುದ್ಧ ಹೇಳಲಿಲ್ಲ. ಅದರಂತೆ ಯಾವ ಶಿಷ್ಯನನ್ನು ಬೆಳೆಸಲಿಲ್ಲ. ಇಲ್ಲಿ ಗುರು-ಶಿಷ್ಯ ಪರಂಪರೆಯಿಲ್ಲ. ಈತ ಸರ್ವಾಧಿಕಾತ್ವವನ್ನು ತ್ಯಜಿಸಿ ಶಿಷ್ಯನ ಸರ್ವಾಧಿಕಾರಿ ಗುರು ಎಂಬುದನ್ನು ತಿರಸ್ಕರಿಸಿದ. ಈತನನ್ನು ಕೂಡಾ ವೈದಿಕ ಧರ್ಮ ಸ್ವೀಕರಿಸಿ ಒಂಭತ್ತನೆ ಅವತಾರವಾಗಿ ಮಾರ್ಪಡಿಸಿತು. ಇದು ಕೆಳವರ್ಗದ ದಾರ್ಶನಿಕ ಪರಂಪರೆಗೆ ಬಹಳಷ್ಟು ಪ್ರಾಮುಖ್ಯತೆಯನ್ನು ತಂದುಕೊಟ್ಟಿತು. ಯಾವ ದರ್ಶನ ಕೆಳವರ್ಗದವರನ್ನು ಆಕರ್ಷಿಸುತ್ತದೆಯೊ ಅಥವಾ ಕೆಳವರ್ಗದವರು ತಮಗೆ ಸ್ವೀಕೃತವಾದ ದಾರ್ಶನಿಕ ಸಿದ್ಧಾಂತಕ್ಕೆ ಕೆಳವರ್ಗದ ದಾರ್ಶನಿಕ ಪರಂಪರೆ ಎನ್ನಬಹುದು. ಕೆಳವರ್ಗ ಇದರ ಅರ್ಥ ಜಾತಿ, ಪಂಥ ಮುಂತಾದವುಗಳಿಂದ ತಿರಸ್ಕರಿಸಲ್ಪಟ್ಟವರು ಎಂದರ್ಥ. ಅದೇ ಬೌದ್ಧ ಧರ್ಮ ಜಾತಿ ವ್ಯವಸ್ಥೆಯ ವಿರುದ್ಧ ಹೋರಾಡಿರುವದರಿಂದ ಅಂಬೇಡ್ಕರರ ಪಂಥಾನುಯಾಯಿಗಳು ಬೌದ್ಧ ಧರ್ಮ ಸ್ವೀಕರಿಸಿದಲ್ಲಿ ತಪ್ಪೇನಿಲ್ಲ. ಇದಕ್ಕಿಂತ ಸ್ವಲ್ಪ ಪೂರ್ವದಲ್ಲಿ ಅಂದರೆ ಮಹಾಭಾರತದ ಕೊನೆಯ ಕಾಲದಲ್ಲಿ ಇರುವ ಚಾರ್ವಾಕ ಸಂಸ್ಕೃತಿ ಅಂಧ ಸಂಪ್ರದಾಯಗಳನ್ನು ಕಾರ್ಯ-ಕಾರಣ ಸಂಬಂಧವಿಲ್ಲದ ಕಂದಾಚಾರಗಳನ್ನು ಪ್ರಶ್ನಿಸುವ ಒಂದು ವಿಚಾರವಾದಿ ಪಂಥ. ಅದಕ್ಕೆ ಲೋಕಾಯತ ಅಥವಾ ಭೌತಿಕವಾದಿಗಳು ಎಂದು ಕರೆಯುತ್ತಾರೆ. ಇದರ ಅಧ್ವೈರ್ಯ, ಚಾರ್ವಾಕ. ಈತ ಅವಂತಿ ನಗರದಲ್ಲಿ ಕ್ರಿ.ಪೂ. ಸುಮಾರು ೧೫೦೦-೧೩೦೦ ಎಂದು ಹೇಳುವಾಗ ಭಾರತದ ಮೊಟ್ಟ ಮೊದಲಿನ ವೈಚಾರಿಕ ತತ್ವಜ್ಞಾನಿಯೆನಿಸಿಕೊಳ್ಳುವನು. ಇವರು ಕಟ್ಟಾ ನಾಸ್ತಿಕರು. ವೇದಗಳಲ್ಲಿ ನಂಬಿಕೆ ಇಡದವರು ಎಂದು ಅರ್ಥ "ಚಾರುವಾಕರಿಗೆ ವೇದದಲ್ಲಿ ಯಾವ ಗೌರವವೂ ಇಲ್ಲ. ವೇದಗಳು ಕುತಂತ್ರಿಗಳಾದ ಪುರೋಹಿತರಿಂದ ವಿರಚಿತವಾದುದೆಂದು, ದಡ್ಡರು, ಬೋಳೆ ಸ್ವಭಾವದವರು ಆದವರನ್ನು ಪುರೋಹಿತರು ಮೋಸಗೊಳಿಸಿ ಹೊಟ್ಟೆ ಹೊರೆಯುತ್ತಾರೆಂದು ಚಾರುವಾಕರು ಟೀಕಿಸುತ್ತಾರೆ."[೯] ಅಂದಾಗ ದೇವರ ಹೆಸರಿನಲ್ಲಿ ಅರ್ಥವಿಲ್ಲದ, ಅಮಾನವೀಯ ತಿನ್ನುವ ತೊಡುವ ಪದಾರ್ಥಗಳ ಧಾರ್ಮಿಕ ನೆಪದಲ್ಲಿ ಕಾಲ, ಹಣ, ಶ್ರಮಗಳನ್ನು ನಾಶ ಮಾಡುವುದನ್ನು ಇವರು ಟೀಕಿಸಿದ್ದಾರೆ. ಹಸಿದ ಹೊಟ್ಟೆ ಸಾಕಷ್ಟು ಇರುವಾಗ ಆಹಾರ ಪದಾರ್ಥಗಳನ್ನು ಬೆಂಕಿಗೆ ಅರ್ಪಿಸಿ ಹೊಗೆಯಿಂದ ಪರಿಸರ ಮಲೀನಗೊಳಿಸುವ ದರಿದ್ರ ವೈದಿಕ

ಕೃತ್ಯವನ್ನು ಇವರು ಮೊದಲಿಗರಾಗಿ ಪ್ರಶ್ನಿಸಿದವರು. ಸಮಾಜದ ಸ್ಥಿತಿಗತಿಗಳನ್ನೇ ಚಾರುವಾಕರಂತೆ ವಿಮರ್ಶೆಗೊಳಪಡಿಸಿದವರು ಸಿಗುವುದಿಲ್ಲವೇನೋ ಎನಿಸುವುದು. ಪರಂಪರೆಯನ್ನು ಪ್ರಶ್ನಿಸಿದ್ದು, ಬಾಳ್ವೆಯಲ್ಲಿ ಬೆರೆತುಹೋಗಿದ್ದ ಮೌಢ್ಯಾಚರಣೆಯನ್ನು ಕೈಬಿಡುವಂತೆ ಆಗ್ರಹಿಸಿದ್ದೆ ಇವರ ಸಮಾಜ ಪರಿವರ್ತನೆಯಾಗಿದೆ. ವೇದಾಂತವೊಂದೇ ಭಾರತೀಯ ದರ್ಶನವಲ್ಲ ಬುದ್ಧನೂ ಸಹಿತ ಬಹಳಷ್ಟು ಸಂಗತಿಗಳಲ್ಲಿ ಚಾರುವಾಕರಿಂದ ಪ್ರೇರಣೆಗೊಂಡಿದ್ದಾನೆ ಎನ್ನಬಹುದು. ಭಾರತೀಯ ತತ್ವಜ್ಞಾನ ಖಂಡನೆ-ಮಂಡನೆಗೆ ಹೆಸರಾಗಿದೆ. ಹತ್ತಾರು ಅಭಿಪ್ರಾಯ ವೈರಗಳು ಸ್ಥಾಪಿತವಾಗಿ ಕ್ರಮೇಣ ಸಿದ್ಧಾಂತ ರೂಪಗಳನ್ನು ಪಡೆದುಕೊಂಡಿವೆ. ಪಾಶ್ಚಾತ್ಯರಲ್ಲಿ ತತ್ವಜ್ಞಾನಿಗಳು ಮಂಡಿತಗೊಳ್ಳುವ ಮೊದಲೇ ನಮ್ಮಲ್ಲಿ ದರ್ಶನದ ಚೌಕಟ್ಟು ಪಡೆದುಕೊಂಡಿವೆ. ವೈದಿಕ ಪರಂಪರೆಯಲ್ಲಿರುವ ಒಂದು ದೊಡ್ಡ ಗುಣವೆಂದರೆ ಒಳ್ಳೆಯ ಗುಣಗಳನ್ನು ಇತರ ಧರ್ಮದಿಂದ ಸ್ವೀಕರಿಸುತ್ತದೆ. ಮೊದಲನೆಯ ಅವೈದಿಕ ಪಂಥವಾದ ಈ ಚಾರುವಾಕ ಕೆಳವರ್ಗದ ಪರಂಪರೆಯಾಗಿದೆ. ಈ ಅವೈದಿಕ ದರ್ಶನಗಳಲ್ಲಿ ಚಾರುವಾಕ ಸಾಂಖ್ಯ, ವೈಶೇಷಿಕ, ಜೈನ ಮತ್ತು ಬೌದ್ಧ ಪ್ರಶ್ನೆಗಳು ಕೂಡಿಕೊಂಡಿವೆ. ಚಾರುವಾಕವು ದೈವತ್ವವನ್ನು ಒಪ್ಪುವುದಿಲ್ಲ. ಈ ಲೋಕಾಯತಕ್ಕೆ ತೀರ ವಿರುದ್ಧವಾದ ದರ್ಶನವೆಂದರೆ ಶಂಕರಾಚಾರ್ಯರು ಪ್ರತಿನಿಧಿಸುವ ಅದ್ವೈತ ದರ್ಶನವಾಗಿದೆ. ಲೋಕಾಯತರು ಈ ದೇಹವೇ ಸತ್ಯವೆಂದು ತೋರಿಸಲು ಆತ್ಮದ ಅಸ್ತಿತ್ವವನ್ನು ನಿರಾಕರಿಸಿದರೆ, ಶಂಕರರು ಆತ್ಮವೇ ಸತ್ಯವೆಂದು ಹೇಳಿ ದೇಹವನ್ನು ನಿರಾಕರಿಸುವರು. ಹೀಗೆ ವೈದಿಕರ ವಿರುದ್ಧ ಬೌದ್ಧರ ನಂತರದಲ್ಲಿ ಅನಂತ ಅವೈದಿಕ ಪರಂಪರೆಗಳು ಬೆಳೆದುಬಂದವು. ಅವೈದಿಕದಲ್ಲಿ ವರ್ಣ, ಜಾತಿ, ಲಿಂಗ, ಊಟೋಪಚಾರ ಮುಂತಾದವುಗಳು ಅದರಂತೆ ಜಗತ್ತಿನ ಅಸ್ತಿತ್ವ ನಿರಾಕರಣೆ ಮುಂತಾದವುಗಳು ಬರುತ್ತವೆ. ದೇವರು ಜಗತ್ತಿನ ಕರ್ತೃ ಅಲ್ಲ. ಹೌದು ಮುಂತಾದ ವಿಚಾರ ಚಿಂತನೆಗಳು ಈ ಅವೈದಿಕ ಪರಂಪರೆಯಲ್ಲಿ ಹಾಸುಹೊಕ್ಕಾಗಿವೆ.[೨]

ವೈಷ್ಣವ ಧರ್ಮದಂತೆ ಶೈವ ಧರ್ಮವೂ ಕೂಡ ಪ್ರಾಚೀನವಾಗಿದ್ದು ವೈದಿಕ ವ್ಯವಸ್ಥೆಯಲ್ಲಿ ಕಡೆಗಣಿಸಲ್ಪಟ್ಟ ಅಗಸ, ಅಕ್ಕಸಾಲಿಗ, ಹೊಲೆಮಾದಿಗರು, ಕುರುಬ, ಕಂಬಾರ, ಬೆಸ್ತ, ಕ್ಷೌರಿಕ ಮುಂತಾದ ದಲಿತ ವರ್ಗದವರನ್ನು ಶೈವಧರ್ಮ ಯಾವ ರೀತಿಯಲ್ಲಿ ಕಂಡಿದೆ ಎಂಬುದು ಗಮನಾರ್ಹ ವಿಷಯ. ತ್ರಿಷಷ್ಠಿ ಪುರಾತನರಾದ ನಾಯನ್ಮಾರರು ಶೈವ ಧರ್ಮದಲ್ಲಿ ಧಾರ್ಮಿಕ ಕ್ರಾಂತಿಗಳನ್ನು ಎಸಗಿದವರಾಗಿದ್ದಾರೆ. ವೀರಶೈವ, ಪಾಶುಪತರೊಡನೆ ಮತ್ತು ಶೈವ ಸಿದ್ಧಾಂತಿಗಳೊಡನೆ ಬೆರೆತು ಬಾಳಿತು. ಈ ನಾಯ್‌ನ್ಮಾರ್‌ಗಳಲ್ಲಿ ತಿರುಣಾವುಕರಸು ನಾಮ್‌ನಾರ್‌ನ ಶೈವ ಆಂದೋಲನ ದಲಿತ ವರ್ಗದವರನ್ನು ಸಂಘಟಿಸಿದ ಜನಪರ ಸಾಂಸ್ಕೃತಿಕ ಆಂದೋಲನವಾಗಿದೆ. ತಮಿಳುಶೈವ ನಾಯ್‌ನಾರರ ಧಾರ್ಮಿಕ ಆಂದೋಲನದ ಒಂದು ಅಂಗವಾಗಿ ವೀರಶೈವ ಆಂದೋಲನ ಜನ್ಮ ಪಡೆದಿದೆ. "ಈ ಆಂದೋಲನಕ್ಕೆ ಒಂದು ಸಾಂಸ್ಕೃತಿಕ ಭೂಮಿಕೆಯನ್ನು ಜೊತೆ ಜೊತೆಯಲ್ಲೆ ಅದಕ್ಕೊಂದು ತಾತ್ವಿಕ ಸ್ವರೂಪವನ್ನು, ಸಾಮಾಜಿಕ ಸಂಘಟನೆ ನೀತಿ ಸಂಹಿತೆಯನ್ನು ಸಿದ್ಧಪಡಿಸಿಕೊಂಡು, ಈ ಆಂದೋಲನ ಅತ್ಯಂತ ಶಕ್ತಿಯುತವಾಗಿ ಮುನ್ನಡೆಯಲು ಕಾರಣನಾದವನು ಆರನೇಯ ಶತಮಾನದ ತಿರುಣಾವುಕರಸು ನಾಯನಾರ್ . ಅಂತೆಯೇ ಕನ್ನಡ ನಾಡಿನ ವೀರಶೈವ ಆಂದೋಲನ ಕೂಡಾ, ರಾಜಕೀಯವಾಗಿ ಅತ್ಯಂತ ಧೀಮಂತ ವ್ಯಕ್ತಿ ಎನಿಸಿದ್ದ ಬಸವಣ್ಣನ ನಾಯಕತ್ವನ್ನು ಪಡೆಯುವ ಮೊದಲು ಸುಮಾರು ಕ್ರಿ.ಶ. ೯-೧೦ನೇ ಶತಮಾನದಿಂದಲೇ ಈ ಶೈವ ಆಂದೋಲನ ಒಂದು ಸಂಘಟಿತ ಸ್ವರೂಪ ಪಡೆದುಕೊಂಡು ಚನ್ನಯ್ಯ,

ಕಕ್ಕಯ್ಯ, ಭೋಗಯ್ಯ, ಶರೀಯಾಳ ಮತ್ತು ದಾಶ್ಯಮಯಿಯರೆ ಮೊದಲಾದ ಹಿರಿಯ ಶರಣರ ಸಂಘಟನಾ ಶಕ್ತಿಯಿಂದಲೂ, ಜ್ಞಾನ ಭಕ್ತಿಗಳ ಹಿರಿಮೆಯಿಂದಲೂ ಜನ ಮುನ್ನಡೆಯನ್ನು ಪಡೆದು ಮುನ್ನಡೆದಿದೆ ಎಂಬುದನ್ನು ಚರಿತ್ರೆಯಲ್ಲಿ ಕಾಣಬಹುದಾಗಿದೆ."[೩]

ಅಂದರೆ ಚಾರುವಾಕ ಬೌದ್ಧ ಜೈನರಂತೆ ಕೆಳವರ್ಗದ ಈ ದಾರ್ಶನಿಕ ಪರಂಪರೆ ಶೈವಧರ್ಮದ ಭಾಗವಾಗಿಯೂ ಕಂಡುಬರುತ್ತದೆ. ನಾಯನಾರ್‌ರಲ್ಲಿ ಮತ್ತು ಶರಣರಲ್ಲಿ ಬಹುತೇಕವಾಗಿ ಕೆಳವರ್ಗದಿಂದ ಬಂದವರಾಗಿದ್ದಾರೆ. ದಕ್ಷಿಣ ಭಾರತವನ್ನೆಲ್ಲ ವ್ಯಾಪಿಸಿದ ಶೈವ ಆಂದೋಲನ ತೀವ್ರ ತರವಾದ ವಿಚಾರಗಳನ್ನು ಅರ್ಥಪೂರ್ಣವಾದ ಜನಪರ ಆಂದೋಲನವಾಗಿ ಪಾರಂಪರಿಕ ಜೀವನ ಮೌಲ್ಯ ಪರಿವರ್ತನೆಗೊಂಡು ನಡೆದುದೇ ಕೆಳವರ್ಗದಿಂದ ಬಂದ ಪುರಾತನ ಶರಣ ಮಾನ್ಯರಿಂದ ಎಂಬುದಾಗಿದೆ. ದಾಸಿಮಯ್ಯ ಸ್ಮರಿಸುವ ಕೆಂಭಾವಿ ಭೋಗಣ್ಣ, ಕೊಂಡಗುಳಿ ಕೇಶಿರಾಜ ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ ಮುಂತಾದವರು. ಈ ವೀರಶೈವ ಧರ್ಮ ಪ್ರವರ್ತನೆಯಲ್ಲಿ ಪ್ರಥಮಿಗರು ಎಂದಾಗ ಅದನ್ನು ಎಲ್ಲರೂ ಒಪ್ಪುವಂತದ್ದಾಗಿದೆ. ಈ ಜಾಡಿನಲ್ಲಿಯೇ ಬಸವೇಶ್ವರ ಮುಂತಾದವರು ತೀವ್ರ ಸ್ವರೂಪದ ಕಾರ್ಯಚರಣೆಯನ್ನು ಮುಂದುವರೆಸಿದರು. ಇದರ ಫಲವಾಗಿ ಸಾಮಾಜಿಕ ರೀತಿ-ನೀತಿ, ಒಲವು-ನಿಲುವು ಜೀವನ ಮೌಲ್ಯಗಳು ಹಲವು ಕೋನಗಳಿಂದ ಈ ಆಂದೋಲನ ಮುನ್ನಡೆದಿದೆ. ತಮಿಳು ಶೈವಧರ್ಮದ ೬೩ ಜನ ಪುರಾತನ ನಾಯನಾರ್‌ರಲ್ಲಿ ನಂದನಾರ್ ಈತ ಜಾತಿಯಲ್ಲಿ ಅಸ್ಪೃಶ್ಯ. ಶಿವದೇವಾಲಯಗಳಲ್ಲಿ ಉತ್ಸವದಲ್ಲಿ ಬಳಸುವ ಚರ್ಮ ವಾದ್ಯಗಳನ್ನು ಸಿದ್ಧಪಡಿಸುವದು ಇವನ ಕಾಯಕ. ಡೋಲು ಒಡೆಯುವ ಉದ್ಯೋಗಕ್ಕೆ ಊರಲ್ಲಿ ನೆಲದ ಆದಾಯವನ್ನು ತನ್ನ ಅಶನಕ್ಕೆ ಆಧಾರವಾಗಿಟ್ಟು ಜನ್ಮ ಸಂಬಂಧದಿಂದ ಬಂದ ಉದ್ಯೋಗ ಮಾಡಿಕೊಂಡು ಬಂದವನು. ಅಸ್ಪೃಶ್ಯನಾದ ಇವನೊಮ್ಮೆ ತಿರುಪಾನ್ ಊರಿನ ಶಿವದೇವಾಲಯಕ್ಕೆ ಹೋದಾಗ ಅಲ್ಲಿ ಶಿವಪೂಜೆ ನಡೆಯುತ್ತಿರಲು ಈ ನಂದನಾರ್ ಭಕ್ತಿ ಭಾವಾವೇಷದಿಂದ ಹಾಡತೊಡಗಿದ. ಅವನ ಭಕ್ತಿಗೆ ಮೆಚ್ಚಿ ಶಿವ ಅಡ್ಡವಾಗಿ ನಿಂತ ನಂದಿಯನ್ನು ಪಕ್ಕಕ್ಕೆ ಸರಿಸಿ ನಂದನಾರ್‌ನನ್ನು ಕಾಣಿಸಿಕೊಂಡ. ಅಲ್ಲಿ ಈತ ಒಂದು ಕೆರೆಯನ್ನು ಸಹಿತ ಕಟ್ಟಿಸಿದ್ದಾನೆ. ಅಂದ ಮೇಲೆ ಪುರಾತನ ಶೈವರಲ್ಲಿ ದಾರ್ಶನಿಕ ಪರಂಪರೆ ಕೆಳವರ್ಗದಿಂದಲೂ ಸಾಗಿಬಂದದ್ದಾಗಿದೆ.

ಒಬ್ಬ ಅಸ್ಪೃಶ್ಯ ತನ್ನ ಜ್ಞಾನದ ಹಿರಿಮೆಯಿಂದ ಆಧ್ಯಾತ್ಮಿಕರಣದ ಸಂವೇದನೆಯಿಂದ ಸಮಾಜದಲ್ಲಿ ಮಹಾಪುರುಷ ಎನಿಸಿಕೊಳ್ಳುವದು ಸಾಧ್ಯವೆಂದು ನಂದನಾರ್ ಚರಿತ್ರೆಯಿಂದ ತಿಳಿಯುತ್ತದೆ. ಅದಿಭತ್ತ ನಾಯನಾರ್ ಇವನು ಜಾತಿಯಲ್ಲಿ ಬೆಸ್ತ ಅಂದರೆ ಮೀನುಗಾರ ಮೊದಲ ಮೀನನ್ನು ಶಿವನಿಗೆ ಅರ್ಪಿಸಿ ಉಳಿದ ಮೀನುಗಳನ್ನು ಮಾರಿ ಬಂದ ಭಕ್ತರಿಗೆ ದಾಸೋಹ ಏರ್ಪಡಿಸುವನು. ಇದು ಇವನ ಸೇವಾರಾಧನೆಯ ಕ್ರಮ. ಒಂದೊಂದು ದಿನ ಒಂದೇ ಮೀನು ಸಿಕ್ಕರೆ ಅದನ್ನು ಶಿವನಿಗೆ ಅರ್ಪಿಸಿ ಉಪವಾಸವಿರುತ್ತಿದ್ದ. ಶಿವ ಇವನ ಪರೀಕ್ಷೆಗೆಂದೆ ಎಷ್ಟೋ ದಿವಸಗಳವರೆಗೆ ಸಿಗದಂತೆ ಮಾಡಿ, ಕೊನೆಗೊಂದು ದಿನ ಚಿನ್ನದ ಮೀನು ಬಲೆಗೆ ಬಿದ್ದಾಗ ಅದರಿಂದ ಅವನು ಶ್ರೀಮಂತನಾಗಬಹುದಿತ್ತು. ಆದರೆ ತಾನು ಶಿವನಿಗರ್ಪಿಸಿ ಉಪವಾಸ ಮಲಗಿದ. ಭಕ್ತಿಯೆಂಬುದು ಎಲ್ಲರಲ್ಲಿಯೂ ಒಂದೇ. ಎಲ್ಲರಲ್ಲಿ ಇರುವ ರಕ್ತ ಒಂದೇ. ಈತ ಕೇವಲ ಮುಗ್ಧ ಭಕ್ತ ಎನಿಸಿಕೊಳ್ಳದೆ ಪ್ರಜ್ಞಾಪೂರ್ವಕವಾದ ಕಾಯಕನಿಷ್ಠೆ ಭಕ್ತಿಪೂರ್ವಕವಾಗಿದೆ. ಶಿವಭಕ್ತಿಯುತ ಜನಪರ ಆಂದೋಲನಕ್ಕೆ ಇಂತಹ ಶರಣರ ಬದುಕು ಸಮರ್ಪಿತಗೊಂಡಿದೆ. ತಿರುಕುರಿಪ್ಪಂಡ ನಾಯನಾರ್ ಅಗಸರವನು.

ಶಿವಭಕ್ತರ ಬಟ್ಟೆಗಳನ್ನು ಮಡಿಮಾಡಿಕೊಡುವುದು ಈತನ ಕಾರ್ಯ. ಶಿವನಿಗೆ ಇವನನ್ನು ಪರೀಕ್ಷಿಸಬೇಕೆನಿಸಿತು. ಅತ್ಯಂತ ಕೊಳಕಾದ ಬಟ್ಟೆ ಉಟ್ಟು ಬಡ ಶಿವಭಕ್ತನಂತೆ ಕಾಣಿಸಿಕೊಂಡು ತನ್ನ ಬಟ್ಟೆಯನ್ನು ಒಗೆದುಕೊಡಬೇಕೆಂದು ತೊಂಡರನ್ನು ಕೇಳಿದ. ತೊಂಡರ್ ಬಡವನ ಬಟ್ಟೆಗಳನ್ನು ಒಗೆಯುತ್ತಿದ್ದಂತೆ ಮಳೆ ಧಾರಾಕಾರವಾಗಿ ಸುರಿದು, ಮಳೆ ನಿಲ್ಲಬಹುದೆಂದು ಎಷ್ಟು ಕಾದರೂ ಮಳೆ ನಿಲ್ಲಲಿಲ್ಲ. ಬಟ್ಟೆಯನ್ನು ಮಡಿಮಾಡಿಕೊಡಲಾಗಲಿಲ್ಲ. ಆಗ ತಾನು ಸೋತೆನೆಂದು ತಿಳಿದು ತೊಂಡರ್ ಬಟ್ಟೆ ಒಗೆಯುವ ಕಲ್ಲಿಗೆ ತಲೆ ಬಡಿದುಕೊಳ್ಳುವಾಗ ಶಿವ ಪ್ರತ್ಯಕ್ಷನಾದ ಎಂಬಲ್ಲಿ ಎಲ್ಲರಿಗೂ ಶಿವ ಸಾಕ್ಷಾತ್ಕಾರ ಸಾಧ್ಯ ಎಂದ ಶೈವ ಧರ್ಮದ ತತ್ವವನ್ನು ತೋರಿಸಿಕೊಟ್ಟಿದ್ದಾನೆ. ಇದರಂತೆ ತಿರುನೀಲಕಂಠ ನಾಯನಾರ್ ಕುಂಬಾರ ಸಮುದಾಯದವನು. ಇವನಂತೆ ೬೩ ಪುರಾತನರಲ್ಲಿ ಹಿರಿಯನಾದ ಅಪ್ಪರ್ ಅಥವಾ ತಿರುಣಾವುಕರಸು ಹುಟ್ಟಿನಿಂದ ಶೂದ್ರ ಜಾತಿಗೆ ಸೇರಿದವ. ಮೊದಲು ಜೈನನಾಗಿದ್ದ ಇವನು ಉದರ ಸೂಲೆಯಿಂದ ಪ್ರಾಣಹೋಗುವ ಸ್ಥಿತಿಯಲ್ಲಿ ಜೈನ ಬಸದಿಯಲ್ಲಿ ಬಿದ್ದುಕೊಂಡಾಗ ಶಿವಭಕ್ತೆಯಾದ ಅವನ ಅಕ್ಕ ಲೇಕವತಿಗೆ ಮೊರೆಯಿಟ್ಟಾಗ ಉದರ ಸೂಲೆಯ ನಿವಾರಣೆಗಾಗಿ ಶಿವನನ್ನು ಪ್ರಾರ್ಥನೆ ಮಾಡುತ್ತಾಳೆ. ಶಿವನಲ್ಲಿ ಮೊರೆಯಿಡುವುದರೊಂದಿಗೆ ವಿಭೂತಿ ಲೇಪನ ರುದ್ರಾಕ್ಷಿಯ ಸ್ಪರ್ಶದಿಂದ ಉದರ ಸೂಲೆ ಗುಣಮುಖವಾಗುವುದು. ಅಂದಾಗ ಪ್ರಾರ್ಥನೆ ಜ್ಞಾನ ಉಪಾಸಾದಿಗಳು ಜಪ ತಪಾದಿ ನಿಯಮಗಳು ಮೇಲು ವರ್ಗದವರಂತೆ ಕೆಳವರ್ಗದವರಿಗೂ ಕೂಡಾ ಇಷ್ಟವಾದ ಸಾಧನೆಗಳೊಂದಿಗೆ ಸಾಧ್ಯವನ್ನು ಪಡೆದುಕೊಂಡಿರುವರು. ೬೩ ಪುರಾತನರಲ್ಲಿ ಕಲಿಯನಾಯನಾರ್ -ಗಾಣಿಗ, ಅನಾಯ ನಾಯನಾರ್ ಗೊಲ್ಲರ ಸಮುದಾಯದವನು ಕಣ್ಣಪ್ಪನಾಯನಾರ್ -ಬೇಡ, ಏಣಾಧಿನಾಥ ನಾಯನಾರ್ -ಈಡಿಗ, ನೇಶ ನಾಯನಾರ್ -ನೇಕಾರ ತಿರುಮೂಲರ್ -ಗೊಲ್ಲ ಹೀಗೆ ಭಿನ್ನ ವಿಭಿನ್ನ ಕಾಯಕದ ಹಾಗೂ ಸಾಮಾಜಿಕ ಹಿನ್ನಲೆಯಿಂದ ಬಂದು ಸಂಘಟಿತರಾಗಿ ಶರಣರಿಗೆ ಮಾನ್ಯರೆನಿಸಿರುವ ಈ ಕೆಳವರ್ಗದ ಜನ ತಮ್ಮ ಬದುಕನ್ನೆ ಸಮರ್ಪಿಸಿ ಶಿವಭಕ್ತಿ ಪ್ರದಾನ ಜನಪದರ ಆಂದೋಲವನ್ನು ಕಟ್ಟಿ ಮುನ್ನಡೆಸಿರುವುದನ್ನು ನೋಡಿದಾಗ ವೈದಿಕ ವ್ಯವಸ್ಥೆಯಲ್ಲಾಗಲಿ, ಜೈನ ವ್ಯವಸ್ಥೆಯಲ್ಲಾಗಲಿ ಇಷ್ಟೊಂದು ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗು ಧಾರ್ಮಿಕ ಸ್ವಾತಂತ್ರ್ಯ ಕಾಣಸಿಗುವುದಿಲ್ಲ. ಮೇಲ್ವರ್ಗದವರ ದಾರ್ಶನಿಕ ಪರಂಪರೆ ಕೆಳವರ್ಗದವರಿಗೆ ಮಾನ್ಯವಾಗುವದು ಸಹಜ. ಆದರೆ ಕೆಳವರ್ಗದ ದಾರ್ಶನಿಕ ಪರಂಪರೆ ಮೇಲ್ವರ್ಗದವರಿಗೆ ಮಾದರಿಯಾಗಿರುವದನ್ನು ಶಿವಶರಣರಲ್ಲಿ ಕಾಣುತ್ತೇವೆ. ಹಿರಿಯ ವಚನಕಾರ ಚನ್ನಯ್ಯ ಕಕ್ಕಯ್ಯ ಧಾರ್ಮಿಕ ಹಿರಿಯ ಪುರುಷರೆಂದು ಒಗೆಯುತ್ತಾರೆ ವಿನಃ ದಲಿತವರ್ಗದ ಪುರುಷರೆಂದು ಎಲ್ಲಿಯೂ ತಿಳಿಯಲಾಗಿಲ್ಲ. ಅಂದ ಮೇಲೆ ಅವರು ದಲಿತರಲ್ಲ ಅವರೂ ಕೂಡಾ ಶಿವಶರಣರೆ ದಲಿತ ಶಬ್ದವು ಕೂಡಾ ಅವರಿಗೆ ಅನ್ವಯಿಸಿದರೆ ತಪ್ಪಾಯಿತೆಂಬುದು ಅಭಿಪ್ರಾಯ. ಹುಟ್ಟಿನಿಂದ ಕೆಳವರ್ಗದವರಾಗಿ ಬಂದರೂ ದಾರ್ಶನಿಕ ಹೆಣೆತ ಮಾತ್ರ ಇಲ್ಲಿ ಸರಿಸಮನಾಗಿದೆ.

"ಹೀಗೆ ಕನ್ನಡ ನಾಡಿನ ಶಿವಶರಣರ ಆಂದೋಲನಕ್ಕೆ ಆದರ್ಶ ಪುರುಷರು ಎನಿಸಿರುವ ಈ ೬೩ ತಮಿಳು ಶೈವ ಪುರಾತನರಲ್ಲಿ ರಾಜರು, ಮಂತ್ರಿಗಳು, ಬ್ರಾಹ್ಮಣರು ಮೊದಲಾದ ಮೇಲು ಸ್ಥರದ ಸಾಮಾಜಿಕ ಶ್ರೇಣಿಯಿಂದ ಬಂದವರಿದ್ದರೂ ಕೆಳವರ್ಗದ ಜನ ಈ ಆಂದೋಲವನ್ನು ಸೇರಿಕೊಂಡ ನಂತರವೇ ಅದೊಂದು ವ್ಯಾಪಕವು ಅತ್ಯಂತ ಅರ್ಥಪೂರ್ಣವು ಆದ ಜನಪರ ಆಂದೋಲನ ಎನಿಸಿ ಮುನ್ನಡೆಯಲು ಸಾಧ್ಯವಾಗಿರಬೇಕೆಂಬುದರಲ್ಲಿ ಅನುಮಾನವಿದ್ದಂತೆ ಕಾಣುವುದಿಲ್ಲ."[೪] ಹೀಗೆ ಹೇಳುವ ಮಾತು ಅನನ್ಯವಾಗಿದೆ.

ಅಂದಹಾಗೆ ತಮಿಳಿನ ಅಪ್ಪರ್, ಸಂಬಂಧರ್ ಸುಂದರರ್ ಮತ್ತು ತಿರುನೀಲಕಂಠರ್ ಮುಂತಾದವರು ವೇದ ವಿರೋಧಿಗಳನ್ನು ಖಂಡಿಸಿ ವೇದ ಪಾರಮ್ಯವನ್ನು ಸ್ವೀಕರಿಸಿರುವುದನ್ನು ನೋಡಿದಾಗ ಕೆಳವರ್ಗದವರೂ ಸಹಿತ ವೈದಿಕ ಪಾರಮ್ಯಕ್ಕೆ ಮಾರುಹೋದದ್ದು ಕಂಡುಬರುತ್ತದೆ. ತಮಿಳು ಶೈವ ಪಂಥ ವೇದಗಳನ್ನು ಒಪ್ಪಿಕೊಂಡು ಬೆಳೆದು ಬಂದರೂ, ವರ್ಣ ಬೇಧವನ್ನು ತುಳಿದು ಸಮಾನತೆಯನ್ನು ಸಾಧಿಸುವಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ಈ ಶರಣರು ವೇದ ಪಾರಮ್ಯವನ್ನು ಸಂಪೂರ್ಣವಾಗಿ ಒಪ್ಪಿಲ್ಲ. ವೇದ ಉಪನಿಷತ್ತು ಪುರಾಣ ಶಾಸ್ತ್ರಾದಿಗಳೆಲ್ಲ ತಮ್ಮ ಅನುಭವದ ನಿಕಶಕ್ಕೆ ಒಡ್ಡಿ ಕಠೋರತಮ ಪರೀಕ್ಷೆಗೆ ಒಳಪಡಿಸುತ್ತಾ ಸಾಗಿದ್ದಾರೆ. ಇವರು ಉಪನಿಷತ್ತು ಆಗಮಗಳನ್ನು ಅರಗಿಸಿಕೊಂಡು ತಮ್ಮೊಂದಿಗಿನ ಅನುಭಾವದಿಂದ ಅವುಗಳನ್ನು ಹೊಂದಿಸಿಕೊಂಡಿದ್ದಾರೆ. ಊಟೋಪಚಾರದಲ್ಲಿ ತಾರತಮ್ಯವನ್ನು ಹೋಗಲಾಡಿಸುವದಕ್ಕೋಸ್ಕರ ದಾಸೋಹ ವ್ಯವಸ್ಥೆಯನ್ನು ಮಾಡಿರಬಹುದಾಗಿದೆ. ಮೇಲು ಕೀಳೆಂಬ ಭಾವನೆ ದೂರ ಸರಿಸಲು ಬಸವಣ್ಣನ ಈ ಕೆಳಗಿನ ವಚನ ನಿದರ್ಶನವಾಗಿದೆ.

> ವೇದಕ್ಕೆ ಹೊರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ
> ತರ್ಕದ ಬೆನ್ನಭಾರನೆತ್ತುವೆ
> ಆಗಮದ ಮೂಗ ಕೊಯ್ಯುವೆ .....
> ..... ಮಾದರ ಚೆನ್ನಯ್ಯನ ಮನೆಯ ಮಗನಾನಯ್ಯ

ಎನ್ನುವುದನ್ನು ನೋಡಿದಾಗ ಕೆಳವರ್ಗದವರ ಜೊತೆ ಕೌಟುಂಬಿಕ ಸಂಬಂಧ ಹೊಂದಬಯಸುವವರಾಗಿದ್ದಾರೆ ಶರಣರು. ವೇದ, ಶಾಸ್ತ್ರ, ಆಗಮ, ಪುರಾಣಗಳನ್ನೆಲ್ಲ ಸೋಸಿ ಸಾರಸತ್ವವನ್ನು ಹೊರತೆಗೆದು ಪ್ರಗತಿಪರ ಆಂದೋಲನ ಪ್ರತಿಪಾದಿಸುವ ಶ್ರೇಷ್ಠ ಮಾನವತಾ ವಾದಕ್ಕೆ ತಾತ್ವಿಕ ಸ್ವರೂಪ ನೀಡುವುದು ಬಸವನ ಉದ್ದೇಶವಾಗಿದೆ. ವೇದ ಶಾಸ್ತ್ರಾದಿಗಳನ್ನು ಕಾಯಕನಿಷ್ಠೆ ಅಂತರಂಗ ಪ್ರಾಮಾಣ್ಯದ ಒರೆಗೆ ಹಚ್ಚುವ ರೀತಿ ಬಸವಣ್ಣನಿಗಿಂತ ಪ್ರಾಚೀನದಲ್ಲಿ ಮಾದಾರ ಚೆನ್ನಯ್ಯ ಮುಂತಾದ ಶರಣರಿಂದಲೇ ಪ್ರಾರಂಭವಾಗಿದೆ. ಬಸವಣ್ಣ ತನ್ನ ಇಡೀ ಬದುಕನ್ನೇ ಮಾನವತಾವಾದಕ್ಕೆ ಅರ್ಪಿಸಿದವನು. ಕರಿಕಾಲ ಚೋಳನ ಕುದುರೆ ಲಾಯದ ಸೇವಕನಾದ ಮಾದರ ಚೆನ್ನಯ್ಯನ ಅಂಬಲಿಯಿಂದ ಶಿವ ಸಂತೃಪ್ತನಾದ ಎನ್ನುವ ಮಾತು ನಿರುಮ್ಮಳದ ಭಕ್ತಿಯಿಂದೊಡಗೂಡಿದ ಕೆಳವರ್ಗದ ಪರಂಪರೆಯಿಂದ ಶಿವ ಸಂತೃಪ್ತನಾಗುತ್ತಾನೆ ವಿನಃ ಮೇಲು ವರ್ಗದ ಅಹಂಭಾವ ಭಕ್ತಿಯಿಂದಲ್ಲ ಎಂದು ಇಲ್ಲಿ ತಿಳಿಯಬಹುದು. ತಮಿಳು ಶೈವರು "ತಿರುಪ್ಪಾಡಲ್"ಗಳಲ್ಲಿ ತಮ್ಮ ವಿಚಾರವನ್ನು ತಿಳಿಸಿದಂತೆ ಕನ್ನಡ ಶರಣರು ವಚನಗಳಲ್ಲಿ ಮಂಡಿಸಿರುವರು. ಸಮಾಜದ ವ್ಯವಸ್ಥೆಯಲ್ಲಿ ಕಟ್ಟಕಡೆಯವನನ್ನು ಸಹಿತ ಆತ್ಮೀಯವಾಗಿ ಆಕರ್ಷಿಸಿ, ಸಮಾನವಾಗಿ ಗೌರವಿಸಿ ಆ ಜನ ತಮ್ಮನ್ನು ತಾವೇ ಆಂದೋಲನದಲ್ಲಿ ತೊಡಗಿಸಬಯಸುವ ಸ್ವಯಂ ಪ್ರೇರಣೆಯ ಸಂಕಲ್ಪ ಬಲವನ್ನು ಉತ್ತೇಜಿಸುವ ಉದಾತ್ತ ಧ್ಯೇಯ ಈ ಶರಣ ಧರ್ಮದ್ದು. ರಾಮಾನುಜ ವೈದಿಕ ಮತದ ಆಗಮ ಚೌಕಟ್ಟಿನೊಳಗೆ ವ್ಯವಹರಿಸಿದರೆ ಬಸವಣ್ಣ ಧಾರ್ಮಿಕ ಆಂದೋಲನದ ದಾರಿಗೆ ಅಡ್ಡಬಂದ ಶಾಸ್ತ್ರಗಳನ್ನೆಲ್ಲ ಖಂಡಿಸಿದ. ರಾಮಾನುಜ ಬಸವರಿಗೆ ಇನ್ನೊಂದು ವ್ಯತ್ಯಾಸವೆಂದರೆ ಬಸವ ದೀನದಲಿತರ ವಾಸ್ತವ ಬದುಕಿನೊಡನೆ ಸಕ್ರಿಯವಾಗಿ ಭಾಗವಹಿಸಿದ ಆದರೆ ರಾಮಾನುಜರಿಗೆ ಅದು ಸಾಧ್ಯವಾಗಿಲ್ಲ. ಈ ಶರಣರ ಬದುಕಿನಲ್ಲಿ ಸಾಮಾಜಿಕ ವ್ಯವಸ್ಥೆ ಮೇಲ್ವರ್ಗ

ಕೆಳವರ್ಗವೆಂಬ ಬೇರೆ ಬೇರೆಯಾದ ದಾರ್ಶನಿಕ ಪರಂಪರೆ ಹೊಂದದೆ ಸರ್ವಸಮಾನತೆಯ ಒಂದೇ ದಾರ್ಶನಿಕ ಪರಂಪರೆಯಾಗಿದೆ. ಬಸವನ ಸಮಗ್ರ ಚಿಂತನೆಯೆಂದರೆ ಸಾಮಾಜಿಕವಾಗಿ - ಧಾರ್ಮಿಕವಾಗಿ ಕಡೆಗಣಿಸಲ್ಪಟ್ಟ ದೀನ ದಲಿತರ ಕೆಳವರ್ಗದವರನ್ನು ಕುರಿತದ್ದೆ ವಿನಃಮೇಲು ವರ್ಗದವರನ್ನಲ್ಲ ಎಂಬುದು ಕಂಡುಬರುವುದು. ಕೆಳವರ್ಗವೇ ಆಗಲಿ ಮೇಲುವರ್ಗವೇ ಆಗಲಿ ಬದುಕುವ ದಾರಿಯನ್ನು ತಾನೇ ಕಾಣಬಹುದಾದ ಅತೀ ಸೂಕ್ಷ್ಮವಾಗಿ ನಿಲುಕುವುದೇ ಅಥವಾ ತೋರಿಸುವುದೆ ದರ್ಶನವಾಗಿದೆ. ಸಮಾಜದ ಪುನರುಜ್ಜೀವನಕ್ಕಾಗಿ ಹೇಳುವ ದಾರಿ ಅದು. ಈ ಕೆಳವರ್ಗದ ಪರಂಪರೆಯಲ್ಲಿ ಶರಣವರ್ಗದ ಪರಂಪರೆಯನ್ನು ಕಂಡುಕೊಂಡು ಮುಂದೆ ಅರ್ಹಪಾದ, ಕಬೀರ, ಗುರುನಾನಕ್, ಜ್ಞಾನೇಶ್ವರ ಅಲ್ಲದೇ ನಾಥ ಪರಂಪರೆಗಳು, ಮಾಹಾನುಭಾವಪಂಥ, ಗುರುದತ್ತ ಪಂಥ, ಚೈತನ್ಯ ಪಂಥ, ಸಿಖ್ ಧರ್ಮ ಇವುಗಳೆಲ್ಲ ಕೆಳವರ್ಗದ ಪರಂಪರೆಗಳೇ ಆಗಿವೆ.

ನಾಥ ಪಂಥಗಳು ಅವೈದಿಕ ದರ್ಶನ ಪರಂಪರೆಗೆ ಹೊಂದಿಕೊಂಡಂತೆ ವಿಷ್ಣು-ಶಿವ ಬೇಧವಿಲ್ಲದ ಇಲ್ಲಿ ಎಲ್ಲರ ದೇವರು ಒಬ್ಬನೆ, ಇಲ್ಲಿ ದೇವಬೇಧವು ಇಲ್ಲ ಜಾತಿಬೇಧವು ಇಲ್ಲ. ಎಲ್ಲ ಧರ್ಮಗಳು ಚೌಕಟ್ಟಿನಲ್ಲಿರುವುದಾದರೆ ನಾಥ ಪಂಥಕ್ಕೊಂದು ಚೌಕಟ್ಟಿಲ್ಲ. ಈ ಚೌಕಟ್ಟನ್ನು ಮೀರಿ ನಡೆದವರು ಕರ್ನಾಟಕದಲ್ಲಿ ಅಲ್ಲಮ, ಮಹಾರಾಷ್ಟ್ರದಲ್ಲಿ ಜ್ಞಾನೇಶ್ವರ ಅದರಂತೆ ಬಸವನೂ ಕೂಡಾ ತನ್ನದೆ ಸಮಾಜವನ್ನು ಕಂಡಿದ್ದಾನೆ. ದರ್ಶನ ಮಾತ್ರ ಅಲ್ಲಮನಿಗೆ ಸಂಬಂಧ ಚೆನ್ನಬಸವನಿಗೆ ಸಂಪ್ರದಾಯ ಮುಖ್ಯ ಅಂದಹಾಗೆ ಪ್ರಭು ದಾರ್ಶನಿಕ ನೇತಾರ. ಬಹಳ ಜನರಿಗೆ ಗೊತ್ತಿಲ್ಲದ ಪ್ರಭುವಿನ ದಾರ್ಶನಿಕ ನೆಲೆ ನಾಥ ಸಂಪ್ರದಾಯದ ಕೊನೆಯಲ್ಲಿ ವೀರಶೈವ ಚಳುವಳಿ ಹುಟ್ಟಿಕೊಂಡಿದೆ ಎನ್ನುವರು. ಇದು ಕರ್ನಾಟಕದಲ್ಲಿಯ ಬೆಳವಣಿಗೆಯಾದರೆ ಮಹಾರಾಷ್ಟ್ರದಲ್ಲಿ ನಾಥ ಪಂಥ ಮುಂದುವರಿದಿದೆ. ಅಲ್ಲಿ ಶಾಪ್ರಭು ಎಂದು ಅಲ್ಲಮಪ್ರಭುವನ್ನು ಕರೆಯುವರು. ಬಹುತೇಕವಾಗಿ ಪ್ರಭು ಮಹಾರಾಷ್ಟ್ರದಲ್ಲಿ ಎಲ್ಲಿಯೋ ಕಾಲ ಕಳೆದಿರಬಹುದೇನೊ ಅನಿಸುವುದು. ಮಹಾರಾಷ್ಟ್ರದ ಹಲವಾರು ಭಕ್ತಿ ಪಂಥಗಳು ಕೆಳವರ್ಗದ ಪರಂಪರೆಗಳೇ ಆಗಿವೆ. ಕ್ರೈಸ್ತ ಧರ್ಮ ಭಾರತದಲ್ಲಿ ಕೆಳವರ್ಗದವರನ್ನೇ ಹೊಂದಿಸಿಕೊಂಡಿದೆ. ಇದು ಹೊರಗಡೆಯಿಂದ ಬಂದದ್ದಾದರೂ ಕೆಳವರ್ಗದವರ ಬಗ್ಗೆ ಹೆಚ್ಚು ಒಲವಿದೆ. ಮಹಾನುಭಾವಿಗಳು ರಾಜಾಶ್ರಯದಲ್ಲಿರಲಿಲ್ಲ. ಜ್ಞಾನೇಶ್ವರ ಮಹಾನುಭಾವ ಪಂಥದ ಸಂತ. ಮೂಲತಃ ಬ್ರಾಹ್ಮಣ ತಂದೆ ಸನ್ಯಾಸಿಯ ಮಗ, ವಿಠ್ಠಲ ದೇವರು ವೈದಿಕ ದೇವರಲ್ಲ. ತುಕಾರಾಮ-ವೈಶ್ಯ, ನಾಮದೇವ-ದರ್ಜಿ (ಸಿಂಪಿ), ಸಂತಚೊಕಮೇಳ-ಶೂದ್ರ ವಿಠ್ಠಲ ದೇವಾಲಯದ ಎದುರುಗಡೆ ಈತನ ಸಮಾಧಿಯೂ ಇದೆ. ಮಹಾನುಭಾವ ಪಂಥ ಮತ್ತು ಪಾರ್ಕರಿ ಪಂಥಗಳು ಒಂದಕ್ಕೊಂದು ಹೊಂದಿಕೊಳ್ಳುತ್ತವೆ. ವಿಶಾಲಾರ್ಥದಲ್ಲಿ ನೋಡಿದಾಗ ಕ್ಷತ್ರಿಯ, ವೈಶ್ಯ ಇವರುಗಳೂ ಕೂಡಾ ಕೆಳವರ್ಗದ ಪರಂಪರೆಯಲ್ಲಿ ಬರುವವರಾಗಿದ್ದಾರೆ. ಅದೇನೆ ಇದ್ದರೂ ಕೆಳವರ್ಗದವರನ್ನೊಳಗೊಂಡ ದಾರ್ಶನಿಕ ಪರಂಪರೆಯೆಂಬುದು ಬೇರೆಯಾಗಿರದೇ ಉಚ್ಛ-ನೀಚ ಇಬ್ಬರಿಗೂ ಒಂದೇ ಪರಂಪರೆಯಾಗಿದೆ. ಆದರೆ ಕೆಳಪರಂಪರೆಯಲ್ಲಿ ಕೆಳವರ್ಗದಿಂದ ಬಂದವರೆಂಬುದಕ್ಕೆ ಮಾತ್ರ ಈ ಶಬ್ದ ಪ್ರಯೋಗ. ಧಾರ್ಮಿಕ ಮತ್ತು ಸಾಮಾಜಿಕ ಸಮಾನತೆಯಲ್ಲಿ ಆಚಾರದ ಅಳತೆಗೋಲಾಗಿರುವುದು. ಶರಣರಲ್ಲಿ ಕಂಡುಬಂದಂತೆ ನಾಥ ಸಂಪ್ರದಾಯದಲ್ಲಿ ಕಾಣಬರುವುದಿಲ್ಲ. ಜಾತೀಯತೆಯನ್ನು ಪ್ರಶ್ನಿಸುವ ಹಲವಾರು ಪ್ರಶ್ನೆಗಳು ಅಥವಾ ಶರಣರ ಮಾತುಗಳು ವೇದದ ಬುಡವನ್ನೇ

ಅಲುಗಾಡಿಸುವಂತಿವೆ. ಮಾದಾರ ಚೆನ್ನಯ್ಯನ ಋಷಿಗಳ ಮೂಲದ ಬಗ್ಗೆಯ ಮಾತುಗಳು, ಬ್ರಾಹ್ಮಣ ಅನ್ನುವದು ಜಾತಿ ಅಲ್ಲ ಅದು ಸಾಧನೆಯ ಮೆಟ್ಟಿಲು ಅನ್ನುವದನ್ನು ತೋರಿಸಿಕೊಡುತ್ತದೆ.

ಸಾಂಖ್ಯ-ಶ್ವಪಚ, ಅಗಸ್ತ್ಯ-ಕಬ್ಬಿಗ, ದೂರ್ವಾಸ-ಮಚ್ಚಿಗ, ದಧೀಚಿ-ರೇಲಿಗ, ಕಶ್ಯಪ-ಕಮ್ಮಾರ, ರೇಮಜ-ಕಂಚುಗಾರ, ಕೌಂಡಿಲ್ಯ-ನಾವಿಂದ, ಯಂಬುದನರಿದು ಮತ್ತೆ ಕುಲವುಂಟೆಂದು ಛಲಕ್ಕೆ ಹೊರಲೇತಕ್ಕೆ? ..... ಅರಿನಿಜಾತ್ಮ ರಾಮನಾಮನ ಅಂದಾಗ ನಿಜವಾಗಿಯೂ ಸಾಧನೆಯ ಅವಸ್ಥೆಗಳೆ ವಿನಃ ಜಾಲೆ ಅವಸ್ಥೆಗಳಲ್ಲ ಎಂಬುದು ಕಂಡುಬರುತ್ತದೆ. ಮಾದರ ಚೆನ್ನಯ್ಯ, ಕೆಂಭಾವಿ ಬೋಗಯ್ಯ, ತೆಲುಗು ಜೊಮ್ಮಯ್ಯ, ಡೋಹರ ಕಕ್ಕಯ್ಯ, ಮಾರುಡಿಗ ನಾಚಯ್ಯ ಬಸವ ಸಮಕಾಲೀನರಾದ ಮಾದರ ಧೂಳಯ್ಯ ಮೇದರ ಕೇತಯ್ಯ, ಮಡಿವಾಳ ಮಾಚಯ್ಯ, ಗಾಣದ ಕನ್ನಯ್ಯ, ಉರಿಲಿಂಗ ಪೆದ್ದಿ ಇವರುಗಳೆಲ್ಲ ಶಿವಶರಣರ ಕಾಲದ ಕೆಳವರ್ಗದ ಪರಂಪರೆಯಿಂದ ಬಂದವರಾಗಿದ್ದಾರೆ. ಇವರೆಲ್ಲರಿಗೂ ಕೇಂದ್ರಬಿಂದು ಬಸವಣ್ಣ. ಈ ಕೆಳವರ್ಗದ ಶರಣರು ಯಾವ ಯಾವ ಸಾಮಾಜಿಕ ಸ್ಥರಗಳಿಂದ ಬಂದಿದ್ದಾರೊ, ಆ ವರ್ಗವನ್ನು ಹೆಸರಿಗೆ ಮಾತ್ರ ಪ್ರತಿನಿಧಿಸುತ್ತಾರೆ. ವಿನಃ ಆ ವರ್ಗದ ಉಸಿರನ್ನ ಖಂಡಿತವಾಗಿಯೂ ಪ್ರತಿನಿಧಿಸುವದಿಲ್ಲ. ತಮ್ಮ ವರ್ಗದ ಬಗ್ಗೆ ಅವರಿಗೆ ಚಿಂತೆಯಿಲ್ಲ. ಶರಣರಾಗಬೇಕಾದಲ್ಲಿ ಸಾಧನೆಯನ್ನು ಮೈಗೂಡಿಸಿಕೊಳ್ಳಲೆಂಬುದೇ ಅವರ ಆಶಯ. ಅದರಂತೆ ಸಂಕಟ, ನೋವು, ಬಡತನ ಇತ್ಯಾದಿಗಳನ್ನು ಹೇಳುವದಿಲ್ಲ. ಅವರು ತಮ್ಮ ಪ್ರತಿನಿಧಿಗಳೆ ಹೊರತು ತಮ್ಮ ವರ್ಗದ ವೇದನೆ-ಸಂವೇದನೆಗಳ ಪ್ರತಿನಿಧಿಗಳಲ್ಲ. ಅವರ ವೇದನೆ ಸಂವೇದನೆಗಳೆಲ್ಲವೂ ಶಿವಭಕ್ತಿಗೆ ಸೀಮಿತ.

ವೈದಿಕ ವ್ಯವಸ್ಥೆಯಲ್ಲಿಯ ಮೂಲಭೂತ ಸಮಸ್ಯೆಗಳೆಂದರೆ ಅಸ್ಪೃಶ್ಯತೆ ಹಾಗೂ ಜಾತಿಯ ಕ್ರೌರ್ಯಗಳು. ಇವು ಬಡತನ ಶೋಷಣೆಗಿಂತಲೂ ಘನ ಘೋರವಾದವುಗಳು. ಬಡತನವೆಂಬುದು ಪ್ರಾಪಂಚಿಕ ಸಮಸ್ಯೆಯಾದರೆ ಸಮಾಜ ವ್ಯವಸ್ಥೆಯಲ್ಲಿ ಬಡತನಕ್ಕೆ ಆರ್ಥಿಕ, ಶೈಕ್ಷಣಿಕ ಸಮಸ್ಯೆಗಳು ಕಾರಣವಾದರೆ ಅದೇ ಬಡತನಕ್ಕೆ ಅಸ್ಪೃಶ್ಯತೆ ಮತ್ತ ಜಾತೀಯತೆ ಹಲವು ಬಾರಿ ಕಾರಣವಾಗಿ ಕಾಣಿಸಿಕೊಂಡಿದೆ. ಈ ಕೆಳವರ್ಗದಿಂದ ಬಂದ ಶರಣರು ಮೊಟ್ಟಮೊದಲ ಬಾರಿಗೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯದ ಜೊತೆಗೆ ಬದುಕನ್ನು ಸಾಮಾಜೀಕರಿಸುವ ವ್ಯವಸ್ಥೆಯನ್ನು ಕಂಡುಕೊಂಡಿದ್ದಾರೆ. ಇದು ಶರಣ ಮಾರ್ಗದ ವಿಶೇಷ. ಕೆಳವರ್ಗದವರಿಗೆ ವಿದ್ಯೆಯ ಸ್ವಾತಂತ್ರ್ಯವಿಲ್ಲದಿರುವಾಗ ಎಲ್ಲರೊಂದಿಗೆ ಸಮಾನವಾಗಿ ಕುಳಿತು ಊಟೋಪಚಾರದಲ್ಲಿ ಮೇಲು ಕೀಳಿಲ್ಲದೆ ಎಲ್ಲದರಲ್ಲಿಯೂ ಕಡಿಮೆ ಎನಿಸದ ವಚನಕಾರರಾಗಿದ್ದಾರೆಂದರೆ ಅದು ಅಗಮ್ಯ ಸಾಧನೆಯೇ ಸರಿ. ಚೆನ್ನಯ್ಯನ ಹಿಡಿದುಕೊಂಡು ಹಲವಾರು ವಚನಕಾರರಾಗಿದ್ದಾರೆ. ಪ್ರಬುದ್ಧ ಲೇಖಕನೂ ಆಗಿರುವ ಚೆನ್ನಯ್ಯ ತನ್ನ ವೈಯಕ್ತಿಕ ಜೀವನವನ್ನಷ್ಟೇ ಹಸನಗೊಳಿಸಿಕೊಂಡು ತನ್ನ ಪಾಡಿಗೆ ತಾನಿರಬಹುದಾಗಿದ್ದರೂ, ಆತ ಹಾಗೇ ಮಾಡಲಿಲ್ಲ. ಚೆನ್ನಯ್ಯನ ಸಾಧನೆ ಉಳಿದ ಶರಣರಿಗೆ ಆದರ್ಶ ಅನುಕರಣಾಯೋಗ್ಯವಾಗಿದೆ. ಶರಣ ಧರ್ಮದ ಪ್ರಾಚೀನ ಪ್ರತಿಪಾದಕನಾಗಿ ಜನಪರ ಸಾಂಸ್ಕೃತಿಕ ಚಳುವಳಿಯ ನೇತಾರನಾಗಿ ತನ್ನ ಬದುಕನ್ನು ಸಮಾಜಕ್ಕೆ ಸಮರ್ಪಿಸಿದವನಾಗಿದ್ದಾನೆ. ದುಡಿದು ತಂದ ಕೂಲಿನಾಲಿಯನ್ನು ದಾಸೋಹದ ಮುಖಾಂತರ ಶರಣಧರ್ಮದ ಅಭಿವೃದ್ಧಿಗಾಗಿ ಉಪಯೋಗಿಸಿದ್ದರಿಂದಲೇ ಸಾವಿರ ವರ್ಷಗಳ ಸಾಂಸ್ಕೃತಿಕ ಜನಮನ ಪರಂಪರೆಯಲ್ಲಿ ಚೆನ್ನಯ್ಯ ಜಾನಪದ ನಾಯಕನಾಗಿರುವಂತೆ, ಧಾರ್ಮಿಕದಲ್ಲಿಯೂ ಅಪೂರ್ವ ಅಧ್ಯಾಯವೆನಿಸಿದ್ದಾನೆ. ಆಂದೋಲನದ ಮುನ್ನಡೆಗೆ ಕಾರಣವಾಗಿರಬೇಕಾದರೆ ತಮ್ಮ ಅಹಂಕಾರವನ್ನು ನಾಮಾವಶೇಷ ಮಾಡಿಕೊಳ್ಳುವದು. ಒಂದು ಅರ್ಹತೆಯೆಂಬುದು ಚೆನ್ನಯ್ಯನ ಚಿಂತನೆಯಿಂದ ಕಂಡುಬರುತ್ತದೆ.

"ಸ್ವತಃ ಶೈವ ಧರ್ಮೀಯವಾಗಿರುವ ದೊರೆ ನಮಸ್ಕರಿಸುತ್ತಿರುವುದು ಉಚ್ಚ ಅಥವಾ ನೀಚ ಕುಲಕ್ಕಾಗಿರದೆ, ಶಿವನಿಗೂ ಶರಣಧರ್ಮಕ್ಕೂ ತಲೆಬಾಗುತ್ತಿದ್ದಾನೆ ಎಂಬ ಪೂರ್ವಾನ್ಮಯ ಜಾಣ್ಮೆ ಚೆನ್ನಯ್ಯನಿಗೆ ಸಮಾಧಾನ ಚಿತ್ರವನ್ನು ತಂದುಕೊಟ್ಟದ್ದಾಗಿದೆ. ಆದಕಾರಣ ಈ ವಿಶ್ಲೇಷಣೆಯ ಒಟ್ಟು ತಾತ್ಪರ್ಯವೆಂದರೆ, ಇಲ್ಲೊಂದು ಬಹುದೊಡ್ಡ ಮಾನವ ವ್ಯಕ್ತಿತ್ವ ಗೋಚರವಾಗುತ್ತದೆ. ಅಂತಹ ಆ ವ್ಯಕ್ತಿತ್ವದ ಎದುರು ನಿಂತು, ದೊರೆ ಕರಿಕಾಲ ಚೋಳ ಆಡುವ ಮಾತುಗಳು ಚೆನ್ನಯ್ಯನಂತ ಒಬ್ಬ ಧರ್ಮ ಪುರುಷನಿಗೆ ಸಲ್ಲುವ ಗೌರವ ಮಾತ್ರವಲ್ಲದೆ, ಸ್ವತಃ ಚೋಳರಾಜನ ಧರ್ಮ ನಿಷ್ಟೆಗೆ ಸಂದ ಗೌರವ ಕೂಡಾ ಆಗಿದೆ." ಇಲ್ಲಿ ಯಾವ ತೆರನಲ್ಲಿ ದಾರ್ಶನಿಕ ದಾರಿ ಯೋಗ್ಯ ಎಂಬುದನ್ನು ಚೆನ್ನಯ್ಯನ ಬದುಕಿನಿಂದ ದೊರೆ ಕಂಡುಕೊಂಡಿದ್ದಾನೆ. ಕೊಂಡರು ಸಹಿತ ದೊರೆ ಅದನ್ನು ನಿರಾಕರಿಸುವನು. ಮೇಲುಜಾತಿಯ ಜನ ಜಾತಿ ಭಿನ್ನತೆಯನ್ನು ನಿರಾಕರಿಸಿ ಕೆಳಜಾತಿಗಳ ಪ್ರತಿಭಟನೆಗಿಂತ ಅದು ಶಕ್ತಿಯುತ ಶರಣರು ಮಾಡಿದ್ದು ಇದನ್ನೆ. ಡೋಹರ ಕಕ್ಕಯ್ಯನ ಜೀವನದಲ್ಲಿಯೂ ಕೂಡಾ ಭಿನ್ನತೆಯನ್ನು ಕಾಣುವುದಿಲ್ಲ. ಡೋಹರ ಕಕ್ಕಯ್ಯ ಮಾದರ ಚೆನ್ನಯ್ಯರ ಪ್ರಸ್ತಾಪವಿಲ್ಲದೆ ವೀರಶೈವ ಪುರಾಣ ಇಲ್ಲವೇ ಇಲ್ಲ. ಪುರಾಣಕ್ಕಿಂತಲೂ ಪ್ರಾಚೀನವಾದ ಬಸವಣ್ಣನವರ ನೂರಾರು ವಚನಗಳಲ್ಲಿ ಚೆನ್ನಯ್ಯ ಕಕ್ಕಯ್ಯನವರ ಸ್ಮರಣೆ ಅವ್ಯಾಹತವಾಗಿ ಸಾಗಿ ಬಂದಿದೆ.

ಅಪ್ಪನು ನಮ್ಮ ಮಾದಾರ ಚೆನ್ನಯ್ಯ
ಬಪ್ಪನು ನಮ್ಮ ಡೋಹರ ಕಕ್ಕಯ್ಯ
- - - - - - - - - - - - - -
ಎನ್ನನೇ ತಕ್ಕರಿಯಿರಿ ಕೂಡಲ ಸಂಗಮದೇವ

ತಾನು ಕಕ್ಕಯ್ಯ ಶಪಚಯ್ಯ ಚೆನ್ನಯ್ಯರ ಪರಂಪರೆಯಿಂದ ಬಂದವನೆಂದು ಹೇಳಿಕೊಳ್ಳುವದಕ್ಕೆ ಹೆಮ್ಮೆ ಪಡುತ್ತಾನೆ. ಬಸವ ಸಮಕಾಲೀನ ಶರಣಧರ್ಮದ ಮುನ್ನಡೆಗೆ ಅತ್ಯಂತ ಸಮೀಪ ಆದರ್ಶ ಪುರುಷರು ಈ ಕೆಳವರ್ಗದ ಪರಂಪರೆಯವರೆ ಆಗಿದ್ದಾರೆಂಬುದು ಸತ್ಯ ಸಂಗತಿಯಾಗಿದೆ. ಕೆಂಭಾವಿ ಭೋಗಯ್ಯ ಈತನೊಬ್ಬ ಕೆಳವರ್ಗದ ಶರಣ. ತನ್ನ ಮನೆಗೆ ಅಸ್ಪೃಶ್ಯರನ್ನು ಕರೆಯುವದನ್ನು ನೋಡಿದರೆ ಹುಟ್ಟಿನಿಂದ ಮೇಲ್ಜಾತಿಯವರಾದರೂ ದಲಿತ ವರ್ಗದವನೆಂದೇ ಕರೆಯಲ್ಪಡುತ್ತಾನೆ. ತೆಲುಗು ಜೊಮಯ್ಯ ಬೇಡರ ಜಾತಿಯವನು. ಸರ್ವರನ್ನು ಸಮನಾಗಿ ಕಾಣುವ ಶೈವ ಮತಾವಲಂಬಿ. ಈತ ಪ್ರಾಣಿಗಳನ್ನು ಕೊಂದು ತಂದು ಮಾರಿ ಶುದ್ಧ ಶಾಖಾಹಾರಿಯಾಗಿ ತಂದಿದ್ದರಲ್ಲಿಯೆ ದಾಸೋಹವನ್ನು ಮಾಡುವ ದಾರ್ಶನಿಕ ಜೀವಿ ಈತ. ಕಂಕರಿ ಕಕ್ಕಯ್ಯನ ಕಾಯಕವೇ ವಿಭಿನ್ನ ಬಗೆಯದ್ದು ಈ ಕಕ್ಕಯ್ಯನ ನಾಟ್ಯಕ್ಕೆ ಮನಸೋತ ಶಿವ ಪ್ರತ್ಯಕ್ಷನಾಗಿ ಕೈಲಾಸಕ್ಕೆ ಕರೆದಾಗ ಮರ್ತ್ಯಲೋಕದ ಮಹತ್ವ ಹೆಚ್ಚೆಂದು ಹೇಳಿ ನನಗೆ ಕೈಲಾಸ ಬೇಡ ಎನ್ನುವ ಅಂದರೆ ಕಾಯಕ ಕೈಲಾಸವಾಗಿದೆ ಎಂದರ್ಥ. ಮಡಿವಾಳ ಮಾಚಯ್ಯ, ಮೇದರ ಕೇತಯ್ಯ ಹಾಗೂ ಉರಿಲಿಂಗ ಪೆದ್ದಿಗಳ ವಿಚಾರವನ್ನು ನೋಡುವಾಗ, ಮಾದರ ಮಾಳಯ್ಯ ಅಸ್ಪೃಶ್ಯ ಸಮುದಾಯದಿಂದ ಬಂದವರಲ್ಲಿ ತುಂಬಾ ಗಮನಾರ್ಹ ವ್ಯಕ್ತಿಯಾಗಿದ್ದಾನೆ. ಈತನ ಬಚ್ಚಲ ಕೆಸರಲ್ಲಿ ಬಿದ್ದ ವಿಪ್ರನೊಬ್ಬ ಕಾಡುತ್ತಿದ್ದ ಕುಷ್ಟರೋಗವನ್ನು ನಿವಾರಿಸಿಕೊಂಡ ಘಟನೆ ನಿಜವಾಗಿಯೂ ಸಮಾನತೆಯ ಸಾಕ್ಷಿರೂಪವಾಗಿದೆ. ಈ ದೂಳಯ್ಯನಲ್ಲಿ ಕಾಯಕ ನಿಷ್ಠೆ ಇತರರಿಗೆ ಮಾರ್ಗದರ್ಶಕವಾಗಿರುವಂಥದ್ದು. ತನ್ನ ವೃತ್ತಿಯಲ್ಲಿ ನಿರತನಾಗಿರುವಾಗ ಶಿವನೇ ಸಾಕ್ಷಾತ್ತಾಗಿ

ಬಂದರೂ ಉದಾಸೀನ ಮಾಡಿದನಂತೆ. ಈ ಅಸ್ಪೃಶ್ಯನ ಮುಂದೆ ಶಿವನೇ ಬಂದರೂ, ಶಿವ, ಮುಕ್ತಿ, ಕೈಲಾಸ ಮುಂತಾದವುಗಳಿಂದ ತನ್ನ ಕಾಯಕವೇ ಮೇಲಾದುದು ಎಂಬುದನ್ನು ತೋರಿಸಿಕೊಟ್ಟಿದ್ದಾನೆ. ಅಚಲಕಾಯಕ ನಿಷ್ಠೆಗೆ ವಿಶೇಷ ಅರ್ಥವನ್ನು ಕಲ್ಪಿಸಿದವನೀತ. ಇವನ ನೂರಾರು ವಚನಗಳು ಅತ್ಯುನ್ನತ ಮಟ್ಟದ ಪ್ರತಿಭಾವಂತ ಎನ್ನುವುದು ತೋರಿಸಿಕೊಡುತ್ತವೆ. ಪ್ರತಿಭೆ, ಕವಿಮನೋಧರ್ಮ, ಮಾನವಕಲ್ಯಾಣದ ಚಿಂತನೆ, ಆಧ್ಯಾತ್ಮ ಮಾರ್ಗ ಹೀಗೆ ಹಲವು ಕವಲುಗಳಲ್ಲಿ ಹರಿದಿರುವ ತನ್ನ ಬದುಕನ್ನು ಪ್ರಾಚೀನ ಶರಣಧರ್ಮದ ನಿರಂತರ ಪ್ರತಿಪಾದನೆಗಾಗಿ ಶ್ರಮಿಸಿದ್ದಾನೆ.

ಮಡಿವಾಳ ಮಾಚಯ್ಯನಾದರೂ ಆತನ ಕಾಯಕ ನಿಷ್ಠೆ ಅತಿ ಪ್ರಸಿದ್ಧವಾಗಿದೆ.

ಎನ್ನ ಕಾಯವ ಶುದ್ಧ ಮಾಡಿದಾತ ಮಡಿವಾಳ
ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ
- - - - - - - - - - - - - - - - -
ಕೂಡಲಸಂಗಮದೇವಾ.
- - - - - - - -

ಈತ ಕೇವಲ ಬಟ್ಟೆಯನ್ನು ಶುದ್ಧಮಾಡುವ ಕಾಯಕವಲ್ಲದೆ ಅಂತರಂಗವನ್ನು ಬೆಳಗುವ ಯೋಗ ನಿಷ್ಠನಾಗಿದ್ದಾನೆ.

'ಬಸವಣ್ಣ ನಿನ್ನನ್ನು ಮಡಿವಾಳನನ್ನು ನೀನೆಂದೆ ಕಂಡೆನಯ್ಯ' ಎಂದು ಅಲ್ಲಮ ಹೇಳುವದನ್ನು ನೋಡಿದರೆ ಇವರಿಬ್ಬರನ್ನೂ ಸಾಕ್ಷಾತ್ ಗುಹೇಶ್ವರನೆಂದು ಕಂಡಿರಬೇಕಾದರೆ ಮಾಚಯ್ಯ ಎಂಥವನೆನ್ನುವದು ಕಂಡುಬರುತ್ತದೆ. ಶರಣರ ಸಂಘಟನೆಗೆ ತತ್ ಜನಿತವಾದ ಲೋಕಕಲ್ಯಾಣದ ಕಾರ್ಯಸಾಧನೆಗೆ ತನ್ನನ್ನು ತಾನೇ ಸಮರ್ಪಿಸಿಕೊಂಡ ಮಡಿವಾಳನೆನಿಸಿಕೊಂಡಿದ್ದಾನೆ. ತನ್ನ ಬದುಕಿನ ಕೊನೆ ಕಾಲದವರೆಗೂ ಶರಣ ಸಂಸ್ಕೃತಿಯ ಪುನರುತ್ಥಾನಕ್ಕಾಗಿ ಸದುದ್ದೇಶದ ಜನಜಾಗೃತಿ ಆಂದೋಲನಕ್ಕಾಗಿ ತನ್ನ ಬದುಕನ್ನು ಸಮರ್ಪಿಸಿದ್ದಾನೆ.

ಮೇದರ ಕೇತಯ್ಯ, ಮಾದರ ಜಾತಿಯವನು. ಬಿದಿರಿನ ಕಸಬಲ್ಲದೆ ಮರ, ಕುಕ್ಕೆ ಹೆಣೆದು ಮಾರಿ ಬದುಕುವಂತ ಅತ್ಯಂತ ಸಣ್ಣ ಉದ್ಯೋಗಿಯಾದರು ಈ ಕನಿಷ್ಟ ಸಂಪಾದನೆಯಲ್ಲಿಯೇ ದಾಸೋಹ ಕಾರ್ಯವನ್ನು ಮಾಡಿ ಶ್ರೇಷ್ಟಮಾನವರ ಸಾನಿಧ್ಯ ಪಡೆದು ಧರೆಯೊಳುತ್ತಮ ಮೇದರ ಕೇತಯ್ಯ ಎನಿಸಿಕೊಂಡಿದ್ದಾನೆ. ಅವನು ಬಿದಿರು ಕಡೆಯುವಾಗ ಉದುರಿದ ಚಿನ್ನದ ಹರಳುಗಳನ್ನು ಕೈಯಿಂದ ಮುಟ್ಟಲಿಲ್ಲ. ಶರಣರು ಹೊನ್ನು, ಮಣ್ಣು ಎಂಬ ತಾರೆಕ ಆಮಿಶಗಳ ಜಂಜಾಟದಲ್ಲಿ ಸಿಲುಕಿದವರಲ್ಲ. ಅವರ ಬದುಕು ಬಡತನ ದಾರಿದ್ರ್ಯಗಳೊಡನೆ ಬಡಿದಾಡುತ್ತಿತ್ತೇ ಹೊರತು ಸುಖದ ಸುಪತ್ತಿಗೆಯಲ್ಲಲ್ಲ. ಅವನ ಸಾವು ಕೂಡಾ ಶಿವಾರ್ಪಣೆ ಎನಿಸುವ ಮಾನವ ಕಲ್ಯಾಣಾಕಾಂಕ್ಷಿ ಚಳುವಳಿಯ ಕೊಡುಗೆಯಾಗಿದೆ. ಕೇತಯ್ಯನ ಸಾವಿನ ಬಗ್ಗೆ ಬಸವ ಮಾಚಯ್ಯಾದಿಗಳು ತಮ್ಮ ಸಾವೇ ಸಂಭವಿಸಿತೇನೊ ಎನ್ನುವಷ್ಟು ದಿಗ್ಭ್ರಾಂತರಾಗಿದ್ದನ್ನು ನೋಡಿದರೆ ಸಣ್ಣಕಾಯಕದ ಸಣ್ಣ ಜೀವನಕ್ಕೂ ಕೂಡಾ ಶರಣಮಾನ್ಯರಲ್ಲಿ ಸಮಾನ ಪೂಜ್ಯಭಾವದ ಅರಿವು ಮೂಡುತ್ತದೆ. ಗಾಣದ ಕನ್ನಯ್ಯ ಮೀನುಗಾರನಾದರೂ ಅಂತಹ ಬಡತನದಲ್ಲಿ ತಾನು ಉಣ್ಣುವದನ್ನು ಪರರಿಗೂ ಹಂಚಿ

ಬದುಕಿರುವ ದಂಪತಿಗಳಿವರು. ಇವನ ಹೆಂಡತಿ ರೇಚವ್ವೆ ತನ್ನಂತಹ ನಾಲ್ಕು ಜನ ಶಿವಶರಣರನ್ನು ತಂದು ಉಣಬಡಿಸುವ ಯೋಗ್ಯತೆ ತಮಗಿಲ್ಲವಲ್ಲವೆಂದು ಮುಖ ವಿಚಿತರಾಗಿ ಅಂತರಾಳದ ಅವ್ಯಕ್ತತೆ ಶಿವ ಸಂಸ್ಕೃತಿಯ ದ್ಯೋತಕವಾಗಿದೆ. ಅತ್ಯಂತ ಕೆಳಸ್ತರದ ಉದ್ಯೋಗವನ್ನು ಅರಸಿಕೊಂಡು ಕಾಯಕ ನಿಷ್ಠೆಯಿಂದ ಅಂತಕರಣದ ಪ್ರಾಮಣ್ಯದಿಂದ ಜೀವನವಿಡೀ ನೆರವೇರಿಸಿ ತಪಸ್ವಿಗಳಾಗಿ ಬದುಕಿಹೋಗಿರುವ ಈ ಕೆಳವರ್ಗದ ಶರಣನ ದಾರ್ಶನಿಕತೆ ಅನನ್ಯವಾಗಿದೆ. ಬಸವಣ್ಣನ ನಂತರದ ಹರಿಹರ ಮುಂತಾದ ವೀರಶೈವ ಪುರಾಣಿಕರು ತಮ್ಮ ತಮ್ಮ ಪುರಾಣಗಳಲ್ಲಿ ಕೆಳವರ್ಗದ ಈ ಶರಣರಿಗೆ ಸಲ್ಲಿಸುವ ಪೂಜ್ಯಭಾವನೆ ಬೇಧವಿಲ್ಲದೆ ಸಲ್ಲಿಸುವ ಅವಿಸ್ಮರಣೀಯ ತತ್ವ ವಿಚಾರವಾಗಿದೆ. ಅವರನ್ನು ಗುರುತಿಸಲಿಕ್ಕೆ ಕೆಳವರ್ಗ ಎನ್ನಬಹುದೇ ವಿನ: ಶರಣ ಎನ್ನುವ ಶಬ್ದದಲ್ಲಿ ಕೆಳವರ್ಗ ಮೇಲುವರ್ಗ ಎಂಬುದಿಲ್ಲ. ತಾನು ಜೀವಿತಾವಧಿಯಲ್ಲಿ ಬೆಳೆಸಿಕೊಂಡಿರುವ ಘನತೆ ಗೌರವಗಳು ಭವಣೆ, ಬಡತನಗಳು ಚಿಂತನ ಮಂಥನಗಳು ಸರ್ವವು ಶರಣಧರ್ಮದ ಉತ್ಕರ್ಷಕ್ಕಾಗಿ ಸಮರ್ಪಿತವಾಗಿವೆ.

ಉರಿಲಿಂಗ ಪೆದ್ದಿ ಜೀವನದಲ್ಲಂತೂ ವೈವಿಧ್ಯಮಯವಾದ ಪಾತ್ರವನ್ನು ಕಾಣುತ್ತೇವೆ. ಆತನೊಬ್ಬ ಕಳ್ಳ. ಉರಿಲಿಂಗ ದೇವನ ಮನೆಗೆ ಕಳ್ಳತನಕ್ಕೆ ಬಂದಾಗ, ಉರಿಲಿಂಗದೇವ ಸೊರಯ್ಯನೆಂಬ ಭಕ್ತನಿಗೆ ಲಿಂಗದೀಕ್ಷೆ ಮಾಡುತ್ತಿರುವ ಸಂದರ್ಭ ಅದನ್ನು ನೋಡಿ ಮನ ಪರಿವರ್ತನೆಯಾದ ವಿಷಯ ತುಂಬಾ ಪ್ರಚಲಿತವಾಗಿದೆ. ಲಿಂಗದೀಕ್ಷೆಗಾಗಿ ಉರಿಲಿಂಗದೇವನ ಸೇವೆಯನ್ನು ಹನ್ನೆರಡು ವರುಷ ಉರಿಲಿಂಗ ಪೆದ್ದಿ ಸೌದೆ ತರುವ ರೂಪದಲ್ಲಿ ಮಾಡಿದ್ದಾನೆ. ಆದರೆ ಈ ಉರಿಲಿಂಗ ಪೆದ್ದಿ ಹನ್ನೆರಡು ವರುಷ ಗುರುವಿನ ಮನೆಗೆ ಕೇವಲ ಸೌದೆ ಹೇರುವ ಕೆಲಸವಷ್ಟೇ ಮಾಡಿರಲಿಲ್ಲ. ಯಾಕೆಂದರೆ ಸಂಸ್ಕೃತದಲ್ಲಿ ಆತನೊಬ್ಬ ಪ್ರಕಾಂಡ ಪಂಡಿತ, ಮಠಾಧೀಶನಾಗಿ, ಮಠಾಚಾರ್ಯನಾಗಿ ಸ್ಥಾನ ಮಹತ್ವವನ್ನು ಪಡೆದುಕೊಂಡಿದ್ದರಿಂದ ವಿದ್ಯಾ ಶಿಷ್ಯನಾಗಿಯೂ ಕೆಲಸ ಮಾಡಿದ್ದಾನೆ ಎನಿಸುವದು. ಕೇವಲ ಸೌದೆಯನ್ನು ಹೊತ್ತು ಉಪಜೀವನ ಮಾಡಿ ಶರಣರಿಗೆ ಮಾನ್ಯ ಎನಿಸಿದ ಈ ಉರಿಲಿಂಗ ಪೆದ್ದಿ ಕೆಳವರ್ಗದ ಅನ್ಯ ಶರಣರಂತೆ ಈ ಶರಣಧರ್ಮದ ಶ್ರೇಯಸ್ಸಿಗಾಗಿ ತನ್ನ ಜೀವಿತ ಕಾಲದಲ್ಲಿ ತನ್ನದಾಗಿರಬಹುದಾದ ಸರ್ವಸ್ವವನ್ನು ತ್ಯಾಗ ಮಾಡಿದ್ದಾನೆ. ಕೆಳವರ್ಗದಿಂದ ಬಂದ ಈ ಶರಣ ತನ್ನ ಗುರು ಉರಿಲಿಂಗ ದೇವ ಯಾವ ಮಠದ ಪೀಠಾಧಿಪತಿಯಾಗಿದ್ದಾನೆ ಅದೇ ಮಠದ ಅಧಿಪತಿಯಾಗಿ ಉರಿಲಿಂಗ ಪೆದ್ದಿ ನೇಮಕಗೊಂಡದ್ದು ಒಂದು ಧಾರ್ಮಿಕ ದಾಖಲೆಯೇ ಸರಿ. ಈ ವರ್ಗದಿಂದ ಬಂದವರನ್ನು ಶರಣ ಧರ್ಮ ಎಷ್ಟೊಂದು ಉದಾತ್ತ ಬುದ್ಧಿಯಿಂದ ಸ್ವೀಕರಿಸಿದೆ ಎಂಬುದನ್ನು ನೋಡಿದರೆ ಈ ಕೆಳವರ್ಗದ ಪರಂಪರೆಯ ಆದಿಗುರು ಶರಣಧರ್ಮದ ಬಸವಣ್ಣನೆ ಎನ್ನಬೇಕಾಗುತ್ತದೆ. ಈ ಪ್ರಸಂಗದಲ್ಲಿ ಇನ್ನೊಂದು ವೈಶಿಷ್ಟ್ಯ ಸಂಗತಿಯೆಂದರೆ ಪೆದ್ದನ ಹೆಂಡತಿಯಾದ ಕಾಳವ್ವೆ ತನ್ನ ಗಂಡನ ಮಹಾ ಮಾನವ ಚೇತನಕ್ಕೆ ಸರಿಸಾಟಿಯಾಗಿ ನಿಂತಿದ್ದಾಳೆ. ಇಲ್ಲಿ ರಾಮಕೃಷ್ಣ ಶಾರದಾ ದೇವಿಯರ ಸಂಬಂಧ ಅಷ್ಟೇ ಅಲ್ಲ ಸಾಂಸಾರಿಕ ಜೀವನ ಹೊಂದಿದವರೂ ಕೂಡಾ ಮಠಾಧಿಪತಿಯಾಗಿದ್ದಾರೆಂಬುದಕ್ಕೆ ಈ ಪೆದ್ದಿಯೇ ಸಾಕ್ಷಿ.

ವರ್ಣ ಧರ್ಮ ಮತ್ತು ಶರಣ ಧರ್ಮಕ್ಕೆ ಬಹಳಷ್ಟು ವ್ಯತ್ಯಾಸವಿದೆ. ಪ್ರಸ್ಥಾನತ್ರಯಗಳ ಆಧಾರದ ಮೇಲೆ ವರ್ಣಧರ್ಮ ನಿಂತರೆ ಶರಣಧರ್ಮ ಸಮಾನ ಧಾರ್ಮಿಕತೆಯನ್ನು ಹೇರಿದ ವಚನಗಳ ಮೇಲೆ ನಿಂತಿದೆ. ಬ್ರಹ್ಮಸೂತ್ರ, ವೇದೋಪನಿಷತ್ತುಗಳಿಂದ ಹಿಡಿದು ಮನುಸ್ಮೃತಿಯವರೆಗೆ ಇರುವ ಎಲ್ಲ ಶಾಸ್ತ್ರಾದಿಗಳನ್ನು

ಒಂದು ಸಂಹಿತೆ ಎನ್ನಬಹುದು. ಇದರಲ್ಲಿ ನೀಚೋಚ್ಚ ಜಾತಿ ವ್ಯವಸ್ಥೆಯಿದೆ. ಈ ವ್ಯವಸ್ಥೆಯಲ್ಲಿ ಅತ್ಯಂತ ಮೇಲಾದವ ಬ್ರಾಹ್ಮಣ ಅತ್ಯಂತ ಕೀಳಾದವ ಶೂದ್ರ. ಇದಲ್ಲದೆ ಯಾವ ಹೆಸರಿಗೂ ಅರ್ಹನೆನಿಸದ ಅನಾಮಿಕನೆಂದು ಕಡೆಗಣಿಸಲ್ಪಟ್ಟವ ಹೊಲೆ ಮಾದಿಗ ಅಸ್ಪೃಶ್ಯ ಎನಿಸಿಕೊಂಡಿದ್ದಾನೆ. ಇವುಗಳನ್ನು ಭಗವದ್ಗೀತೆಯೇ ದೃಢೀಕರಿಸಿದೆ. ಇಡೀ ವೈದಿಕ ಜನ ಸಮುದಾಯವನ್ನು ಅವರವರ ಗುಣ ಹಾಗೂ ಕರ್ಮಗಳ ಆಧಾರದ ಮೇಲೆ ನಾಲ್ಕು ವರ್ಣಗಳಾಗಿ ವಿಂಗಡಿಸಿದೆ. ಎಷ್ಟೊ ಜನ ಸಮುದಾಯದಲ್ಲಿ ಈ ನಾಲ್ಕು ಬಗೆಯ ಗುಣಗಳು ಮಾತ್ರ ಇವೆಯೆಂದೂ ಅವರವರ ಕರ್ಮಾನುಸಾರಕ್ಕಾಗಿ ಪರಸ್ಪರ ವಿಭಿನ್ನರಿರುವರೆಂದು ಇದು ನಿಸರ್ಗ ಶಾಶ್ವತವೆಂದೂ ಭಗವದ್ಗೀತೆ ಆದೇಶಿಸುವುದನ್ನು ನೋಡಿದಾಗ ಬುದ್ಧಿವಂತ ಮಾನವನಿಗೆ ಕನಿಕರ ಬರದಿರದು.

ಚಾತುರ್ವರ್ಣ್ಯಮಯಾಸೃಷ್ಟಂ ಗುಣಕರ್ಮ ವಿಭಾಗಶಃ ಧಾರ್ಮಿಕ ಮತ್ತು ಸಾಮಾಜಿಕವಾಗಿ ಬ್ರಾಹ್ಮಣನಿಗೆ ಉಚ್ಚ ಸ್ಥಾನವನ, ಶೂದ್ರ ಮತ್ತು ಅಸ್ಪೃಶ್ಯ ಜನವರ್ಗಕ್ಕೆ ನೀಚ ಸ್ಥಾನವನ್ನು ಕಲ್ಪಿಸಿದೆ. ಉಚ್ಚ ವರ್ಣದವನೆನಿಸಿದ ನೀಚ ಸ್ಥಾನವನ್ನು ಕಲ್ಪಿಸಿದೆ. ಉಚ್ಚವರ್ಣದವನೆನಿಸಿದ ಬ್ರಾಹ್ಮಣನಿಗೆ ದೊರೆತಿರುವ ಉಚ್ಚ ಸ್ಥಾನಮಾನ ಹುಟ್ಟಿನಿಂದ ತನಗೆ ಲಭ್ಯವಾಗುವದೆಂದೂ ಅದು ತನ್ನ ಜನ್ಮಸಿದ್ಧ ಹಕ್ಕೆಂದು ಭಾವಿಸಲಾಗಿದೆ. ಅದರಂತೆ ಅನ್ಯರು ಹುಟ್ಟಿನಿಂದ ಕೀಳೆಂಬ ಭಾವನೆ ಬೆಳೆದುಬಂದಿದ್ದಕ್ಕೆ ಈ ಗೀತೆಯ ಧೋರಣೆಯೇ ಕಾರಣ. ಹೀಗೆ ಈ ವರ್ಣಧರ್ಮದ ಶಾಸ್ತ್ರಾದಿಗಳು ಶೂದ್ರರು ಮತ್ತು ಅಸ್ಪೃಶ್ಯರಿಗೆ ಅಪಾರ ಅನ್ಯಾಯವೆಸಗುವ ಮೂಲಕ ಇಡೀ ಮಾನವ ಕುಲವನ್ನು ಕಳಂಕ ಗ್ರಸ್ಥವಾಗಿಸಿದೆ ಎಂದು ಶರಣರು ತೋರಿಸಿಕೊಟ್ಟಿದ್ದಾರೆ. ಗೀತೆ ಎಷ್ಟರ ಮಟ್ಟಿಗೆ ಕಾಲಕಾಲದಿಂದಲೂ ಶೋಷಣೆಯ ಮಾಧ್ಯಮವಾಗಿದೆ ಎಂಬುದು ಅರಿವಾಗುವದು. ಶೂದ್ರಾದಿ ಶೂದ್ರರೆನಿಸಿರುವ ದಲಿತ ವರ್ಗಗಳ ಮೇಲೆ ನಡೆಯುತ್ತ ಶೂದ್ರರೆನಿಸಿರುವ ದಲಿತ ವರ್ಗಗಳ ಮೇಲೆ ನಡೆಯುತ್ತ ಬಂದಿರುವ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ವಂಚನೆಗಳನ್ನು ವಿವರವಾಗಿ ತಿಳಿದುಕೊಂಡ ಬಳಿಕ, ಶರಣಧರ್ಮದಲ್ಲಿ ಈ ದೀನದಲಿತರ ಸ್ಥಾನಮಾನ ಎಂಥದ್ದು ಎಂಬುದು ತಿಳಿದುಬರುತ್ತದೆ. ಈ ಶರಣರು ತಮ್ಮ ಆಂದೋಲನವನ್ನು ಸೈದ್ಧಾಂತಿಕವಾಗಿ ರೂಪಿಸುವಾಗ ವೈದಿಕ ಸಮಸ್ತ ಶಾಸ್ತ್ರಾದಿಯಾಗಿ ಬಲ್ಲಿದರೆಂಬುದು ವಚನಗಳಿಂದ ತಿಳಿದುಬರುವದು. ಬ್ರಾಹ್ಮಣನ ಸೇವೆಗೆಂದೇ ಬ್ರಹ್ಮ ಶೂದ್ರನನ್ನು ಸೃಷ್ಟಿ ಮಾಡಿದ್ದಾನೆ. ಶೂದ್ರ ಅವನ ಸೇವಕನಾಗಿರಬೇಕು. ಈ ಸೇವಕಗುಣ ಅವನ ಹುಟ್ಟು ಸ್ವಭಾವದಿಂದಲೇ ಸೃಷ್ಟಿಯಾಗಿದೆ ಎಂಬುದು ಗೀತೆಯ ಸಾರವಾದರೆ, ಶೂದ್ರಾದಿಗಳಿಗೆ ಮೇಲು ವರ್ಗದವರಿಗೆ ಸೇವೆ ಮಾಡದೆ ಗತ್ಯಂತರವೇ ಇಲ್ಲ, ಜೀವನ್ಮುಕ್ತಿಯಂತು ಸಾಧ್ಯವೇಯಿಲ್ಲ. ಇದಷ್ಟೇ ಅಲ್ಲದೇ 'ಕರ್ಮಣ್ಯ ವಾಧಿಕಾರಸ್ತ್ಯ ಮಾಪಲೆಂಸುಕದಾಚನ' ಎಂಬ ನುಡಿಗಳು ಗುಲಾಮಗಿರಿಯನ್ನು ಶೂದ್ರನ ಮೇಲೆ ಧಾರ್ಮಿಕವಾಗಿ ವಿಧಿಸಲಾಗಿದೆ ಎನ್ನಬಹುದು. ಆದರೆ ಫಲವನ್ನು ಯಾಕೆ ಕೇಳಬಾರದು? ಎಂಬುದು ಶರಣ ಧರ್ಮದ ಪ್ರಶ್ನೆ. ದುಡಿದಷ್ಟೆ ಫಲ ಕೇಳಬೇಕೆಂಬುದು ಇಲ್ಲಿಯ ಎಚ್ಚರಿಕೆಯ ಗಂಟೆ. ಆದರೆ ಫಲವನ್ನು ಕೇಳುವದು ಸೂಕ್ತ ಮಾತ್ರೆಯಾಗಿದೆ. ಮನಸ್ಮೃತಿಯಂತೆ ಶೂದ್ರ ಮತ್ತು ಅಸ್ಪೃಶ್ಯ ಎರಡೂ ಅಲ್ಲದೆ ಪಂಚಮವೆಂಬ ವಾಕ್ಯ ಕೂಡಾ ಇಲ್ಲ ಎಂದು ಹೇಳುತ್ತದೆ. ಅಂದರೆ ಅಸ್ಪೃಶ್ಯ, ಶೂದ್ರ ಎರಡೂ ಒಂದೇ ಶಬ್ದಗಳು. ಶೂದ್ರ ಊರೊಳಗಿನ ಗುಲಾಮನೆಂದೂ, ಅಸ್ಪೃಶ್ಯ ಊರ ಹೊರಗಿನ ಗುಲಾಮನೆಂದು ಹೇಳವರು ಇಷ್ಟೇ ವ್ಯತ್ಯಾಸ. ಈ ಶೂದ್ರರಿಗೆ ವೇದ ವಿದ್ಯೆಯಲ್ಲಿ ಅಧಿಕಾರವಿರುವುದಿಲ್ಲ. ಅಂದರೆ ಸಂಸ್ಕಾರ ಎಂಬ ಪ್ರಾಥಮಿಕ ಜನ ವರ್ಣಧರ್ಮದ ವ್ಯವಸ್ಥೆಯಲ್ಲಿ ಧಾರ್ಮಿಕ

ದಬ್ಬಾಳಿಕೆಗೆ ಹಾಗೂ ಸಾಮಾಜಿಕ ಶೋಷಣೆಗೆ, ಶೈಕ್ಷಣಿಕ ವಂಚನೆಗೆ ಗುರಿಯಾಗಿದೆ. ಆದರೆ ಶರಣ ಧರ್ಮದಲ್ಲಿ ಇವರ ಸ್ಥಾನಮಾನ ಏನೆಂಬುದು ವಚನಗಳಲ್ಲಿ ಸ್ಪಷ್ಟವಾಗಿದೆ. ಇಲ್ಲಿ ಶಾಸ್ತ್ರ ಘನವಲ್ಲ, ವೇದ ಘನವಲ್ಲ, ಶೃತಿ ಘನವಲ್ಲ ಎಂಬುದು ಬಸವಣ್ಣನವರ ಮಾತು. ಅದರಂತೆ ಹಾವಿನಾಳ ಕಲ್ಲಯ್ಯನ

ಬ್ರಾಹ್ಮಣ ಮೊದಲಾಗಿ ಸ್ವಪಚ ಕಡೆಯಾಗಿ

ಎಲ್ಲರಿಗೂ ಜನನ ಒಂದೇ

ಆಹಾರ-ನಿದ್ರೆ, ಭಯ-ಮೈತುನ ಒಂದೇ

ಪುಣ್ಯ-ಪಾಪ ಒಂದೇ ಸ್ವರ್ಗ-ನರಕ ಒಂದೇ

- - - - - - - - - - - - -

ಈ ವಚನ ಬ್ರಾಹ್ಮಣನಿರಲಿ ಅಸ್ಪೃಶ್ಯನಿರಲಿ ಅವರೆಲ್ಲರ ದೇಹವು ಸಪ್ತಧಾತುಗಳಿಂದ ಸೃಷ್ಟಿಯಾಗಿದೆ. ಅಂದಾಗ ಬ್ರಾಹ್ಮಣ ಅಸ್ಪೃಶ್ಯರೆಂಬ ವ್ಯತ್ಯಾಸ ಹೇಳುವ ವರ್ಣ ಸಿದ್ಧಾಂತದಿಂದ ಪ್ರಯೋಜನವಿಲ್ಲ. ವಿಪ್ರರು ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರೂ ಒಂದೇ. ಹಾರವ ವೇದವಾಗಿ ಸ್ವಪಚ ಕಡೆಯಾಗಿ ಭವಿಯಾದವರೆಲ್ಲರು ಒಂದೇ ಬಸವ ಆಕಸ್ಮಿಕವಾಗಿ ತಾನು ಜನಿಸಿದ ಹಾರೂರ ಕುಲವನ್ನು ತ್ರಿಕರಣಶುದ್ಧವಾಗಿ ದೂರವಿರಿಸಿ ಸರ್ವ ಶರಣರು ಸಾಮಾನ್ಯವೆಂದು ಗೌರವಿಸುತ್ತಾನೆ. ಕಾಯಕದ ನಿಯಮದಲ್ಲಿ ಕಾಯಕಕ್ಕೆ ತಕ್ಕ ಪ್ರತಿಫಲ ಇರಬೇಕು ಎನ್ನುತ್ತದೆ ಈ ಶರಣಧರ್ಮ. ಈ ಶರಣರ ಧಾರ್ಮಿಕ, ಸಾಮಾಜಿಕ ವಿಷಯದಲ್ಲಿಯ ಗಮನಾರ್ಹವಾದ ಅಂಶವೆಂದರೆ ತಮಗೂ ಜನಸಮೂಹ ಹಕ್ಕು ನಡುವೆ ವೈದಿಕರು ಕಟ್ಟಿಕೊಂಡಿದ್ದ ಮತೀಯ ಪರಂಪರೆಯನ್ನು ಸಮಾನತೆಯ ಕತ್ತಿಯಿಂದ ಕಿತ್ತೆಸೆದು ತಮ್ಮ ದರ್ಶನ ವಿಸ್ತೀರ್ಣ ಹೆಚ್ಚಿಸಿಕೊಂಡಿದ್ದಾರೆ. ಧಾರ್ಮಿಕ ಸಮಾನತೆ, ಆರ್ಥಿಕ ಸಮಾನತೆ ಮತ್ತು ವ್ಯಕ್ತಿ ಸ್ವಾತಂತ್ರಗಳಿಗೆ ಶರಣಧರ್ಮ ಕೆಳವರ್ಗದ ದರ್ಶನ ಪರಂಪರೆಗೆ ಕೊಟ್ಟ ಕೊಡುಗೆ ಅತ್ಯಮೂಲ್ಯವಾದದ್ದು. ಶಾಸ್ತ್ರಗಳನ್ನು ಬರೆದ ಋಷಿಗಳ ಜಾತಿಯೇ ಒಂದೇ ಇಲ್ಲದಿರುವುದನ್ನು ಶರಣರು ಪ್ರಶ್ನಿಸುವರು. ಇದಕ್ಕೆ ಸಿದ್ಧರಾಮನ

ಗುಣದಿಂದ ಹಾರುವನಲ್ಲದೆ

ಅಗಣಿತ ಅಭಾಸದಿಂದ ಹಾರವನಲ್ಲ ನೋಡಾ

ಹಾರಬೇಕು ಮಲತ್ರಯಂಗಳ

ಹಾರಬೇಕು ಸೃಷ್ಟಿ ಸ್ಥಿತಿ ಲಯವ

- - - - - - - - - - - -

ಕಪಿಲಸಿದ್ಧ ಮಲ್ಲಿಕಾರ್ಜುನನ ಆಹಾರದಲ್ಲಿ

ಅಂದರೆ ಗುಣದಿಂದ ಮೇಲು ಕೀಳು ಎಣಿಸಬಹುದೆ ಹೊರತು ಹುಟ್ಟಿನಿಂದಲ್ಲ ಎಂದು ಶರಣಧರ್ಮ ಹೇಳುತ್ತದೆ. ಅಂದ ಹಾಗೆ, ಈ ಕೆಳವರ್ಗದ ದಾರ್ಶನಿಕ ಪರಂಪರೆ ಚಾರುವಾಕರಿಂದ ಹಿಡಿದು ಬೌದ್ಧ, ಜೈನ, ತಮಿಳು ಶೈವ ನಾಯನಾರ್, ಹನ್ನೆರಡನೆಯ ಶತಮಾನದ ಶರಣ ಧರ್ಮದೊಂದಿಗೆ ಭಕ್ತಿಪಂಥಗಳಾದ ಮಹಾರಾಷ್ಟ್ರದ - ನಾಥಪಂಥಗಳು, ಕಬೀರ ಗುರುನಾನಕರ ಕೆಳವರ್ಗದ ದರ್ಶನ ಪರಂಪರೆಯೊಂದಿಗೆ ಈ ಅಧ್ಯಾಯವು ಮುಕ್ತಾಯಗೊಳ್ಳುವದು.

ಎಲ್ಲ ಪಂಥಗಳಿಗಿಂತಲೂ ಕೆಳವರ್ಗದ ದಾರ್ಶನಿಕ ಪರಂಪರೆ ಶರಣಧರ್ಮದಲ್ಲಿ ಉಚ್ಛ್ರಾಯ ಸ್ಥಿತಿಯನ್ನು ಪಡೆದುಕೊಂಡಿದೆ. ಅಷ್ಟೇ ಅಲ್ಲ ಇದು ಸಮಾನತೆಗೋಸ್ಕರವೇ ಕೆಳವರ್ಗದ ದಾರ್ಶನಿಕತೆಯೊಂದಿಗೆ ಬೆಳೆದುನಿಂತಿದೆ ಎನ್ನಬಹುದು. ಈ ದೃಷ್ಟಿಯಲ್ಲಿ ಶರಣರ ಕೊಡುಗೆ ಅಪಾರ. ದಕ್ಷಿಣ ಭಾರತದ ಅನೇಕಾನೇಕ ಕೆಳವರ್ಗದ ದಾರ್ಶನಿಕ ಭಕ್ತಿ ಪಂಥಗಳಿರುವಂತೆ ಉತ್ತರಭಾರತದ ಪಂಜಾಬ ಕೂಡಾ ಈ ಪರಂಪರೆಯ ಹಿಂದೆ ಬಿದ್ದಿಲ್ಲ. ಹದಿನಾಲ್ಕನೇ ಶತಮಾನದ ಗುರುನಾನಕ್ ಸಂಸ್ಕೃತವನ್ನು ಕುರಿತಂತೆ, ಮೌಲ್ವಿಯಬಳಿ ತಕ್ಕಮಟ್ಟಿಗೆ ಪಾರ್ಸಿ ಮತ್ತು ಅರಬ್ಬಿ ಭಾಷೆಗಳನ್ನು ಕಲಿತನು. ಆತನ ತಂದೆ ಸಂಪ್ರದಾಯಸ್ಥನಾದ ಮೆಹತ್ ಕಾಲು ಮಗನ ಉಪನಯನ ಸಮಾರಂಭ ಏರ್ಪಡಿಸಿದಾಗ ಯಜ್ಞೋಪವೀತ ಧಾರೆಯನ್ನು ವಿರೋಧಿಸುತ್ತಾನೆ. "ಕರುಣೆಯೆಂಬ ಹತ್ತಿಯಿಂದ ತೃಪ್ತಿಯೆಂಬ ನೂಲು ತೆಗೆದು, ಸತ್ಯವೆಂಬ ಮುಷ್ಟಿಯಿಂದ ಅದನ್ನು ಹೊಸೆದು ಗಟ್ಟಿಮಾಡಿ ಸಂಯಮ ಎಂಬ ಗಂಟುಕಟ್ಟಿ ಸಿದ್ಧಪಡಿಸಿದ ಜನಿವಾರ ನನಗೆ ಬೇಕು." ಅಂದರೆ ಸಾಂಪ್ರದಾಯಿಕ ಯಜ್ಞೋಪವೀತವನ್ನು ವಿರೋಧಿಸಿದ ಈತ ವಿಭಿನ್ನ ಪರಂಪರೆಯ ಕೆಳವರ್ಗದ ದಾರ್ಶನಿಕ.

ಶರಣ ಧರ್ಮ ಹೇಳುವ ತನುವ ತೋಂಟವ ಮಾಡಿ ಎಂಬ ಅಲ್ಲಮನ ವಚನ ಈತನಲ್ಲಿ ಪ್ರತಿಧ್ವನಿಸಿದಂತೆ ಭಾಸವಾಗುತ್ತದೆ.

"ನನ್ನ ದೇಹವೆ ಒಂದು ಹೊಲ, ಮನಸ್ಸೆ ಅದನ್ನು
ಊಳುವ ಎತ್ತು ವಿನಯವೆಂಬ ನೀರುಣಿಸಿ
- - - - - ನಾ ಬೇಡಿದಷ್ಟನ್ನು ಅವನು
ಕೊಡುತ್ತಾನೆ. ಹೆಚ್ಚಲ್ಲ, ಕಡಿಮೆಯಲ್ಲ"

ಹಿಂದೂ ಮತ್ತು ಮುಸ್ಲಿಂ ಸಹಯೋಗದಲ್ಲಿ ಹೊಸ ಧರ್ಮ ಸ್ಥಾಪನೆಯೇ ಈತನ ಗುರಿಯಾಗಿದೆ. ಯಾವನಿಗೆ ಕರುಣೆ ಮಸೀದಿಯೊ, ಶ್ರದ್ಧೆಯೋ ಪ್ರಾರ್ಥನೆಯೊ ಪ್ರಾಮಾಣಿಕ ಜೀವನವೇ ಖುರಾನವಾಗಿದೆಯೊ ಸಂಯಮವೇ ಉಪವಾಸವಾಗಿದೆಯೊ ಅವನೇ ನಿಜವಾದ ಮುಸಲ್ಮಾನ ಎನ್ನುತ್ತಾನೆ. ಇಸ್ಲಾಂ ಧರ್ಮದಿಂದ ನಡೆಯುತ್ತಿದ್ದ ಮೂರ್ತಿಪೂಜೆ ವ್ಯಂಗ್ಯ ಹಾಗೂ ಬ್ರಾಹ್ಮಣ ಸಂಸ್ಕೃತಿ ಹೇರಲು ಯತ್ನಿಸುವ ಕಂದಾಚಾರದ ಭಾರದ ಮಧ್ಯೆ ಇರುವ ಧಾರ್ಶನಿಕತೆ ಇದಾಗಿದೆ. ದೈವ ಸಾಕ್ಷಾತ್ಕಾರಕ್ಕೆ ಇರುವ ಮಾರ್ಗ ಒಂದೇ ಅದೇ ಭಕ್ತಿ ಮಾರ್ಗ. ಆ ಕಾಲಕ್ಕೆ ನಾನಕ್‌ನ ಬೋಧನೆ ಬ್ರಹ್ಮವಾಗಿ ಆಕರ್ಷಿಸಿತು. ಹಿಂದೂ ಧರ್ಮದಲ್ಲಿ ನಿರಾಕಾರ ನಿರ್ಗುಣ ಬ್ರಹ್ಮನ ಬಗ್ಗೆ ಬಹು ಹಿಂದೆಯೇ ಪ್ರಸ್ತಾಪಿಸಲ್ಪಟ್ಟಿತ್ತು. ಉಭಯ ಶಕ್ತಿಗಳು ಮೂರ್ತಿ ಪೂಜೆಯನ್ನು ನಿರಾಕರಿಸಿದ್ದವು. ಸರ್ವಜ್ಞತ್ವ ಸರ್ವ ವ್ಯಾಪಕತ್ವ, ಸರ್ವಶಕ್ತ ಗುಣಗಳನ್ನು ಆಗಲೇ ಕಂಡುಕೊಂಡಿದ್ದವು. ಜನಮನದಿಂದ ದೂರ ಸರಿದ ಪ್ರಾಚೀನ ಚಿಂತನೆಗಳನ್ನು ಗುರುನಾನಕ್ ಮತ್ತೊಮ್ಮೆ ಉಜ್ವಲಗೊಳಿಸಿದನು. ಇಸ್ಲಾಂ ಮತ್ತು ಹಿಂದೂ ಧರ್ಮಗಳ ಕಲಬೆರಕೆಯಾಗಿ ಸಿಖ್ ಧರ್ಮ ರೂಪಗೊಂಡಿದೆ ಎಂಬುದು ಸತ್ಯಕ್ಕೆ ದೂರವಾದ ಮಾತು. ಕಬೀರ, ರಮಾನಂದ, ರವಿದಾಸ ಭಕ್ತಿಪಂಥದ ಮುಂತಾದ ರೂವಾರಿಗಳು ನಾನಕ್‌ಕ್ಕಿಂತ ಮುಂಚೆ ಪ್ರಸಿದ್ಧಿಯಾಗಿದ್ದರು. ಜಾತಿವಾದವನ್ನು ಧಿಕ್ಕರಿಸಿ ನೀತಿ ಗೌರವ ಕೊಟ್ಟು, ದೈವದೊಲುಮೆಗೆ ಭಕ್ತಿಯೇ ಪರಮಮಾರ್ಗ ಎಂದು ತಮ್ಮ ಜೀವನದಲ್ಲಿ ಸಾಧಿಸಿ ತೋರಿಸಿದ್ದರು. ಈ ಹಿನ್ನೆಲೆಯಿಂದ ಗುರುನಾನಕರ ಪಂಥ ಸಂತ ಪರಂಪರೆಯ ಮುಂದುವರಿದ ಭಾಗವಾಗಿದೆ ಎನ್ನಬಹುದು. ಹಸಿದವನಿಗೆ ಉಣಿಸುವುದು ದೇವರ

ಪ್ರೀತಿಗೆ ಪಾತ್ರಾರ್ಹ. ಅವಶ್ಯ ಇದ್ದಷ್ಟನ್ನು ಮಾತ್ರ ಸ್ವೀಕರಿಸಬೇಕು. ಅಗತ್ಯವಿಲ್ಲದ ಸುಖವನ್ನು ಬಯಸುವದು ಪಾಪವಾದರೆ ಜೀವನದ ಅಗತ್ಯಗಳನ್ನು ನಿರಾಕರಿಸುವುದು ಪಾಪವೇ ಆಗಿದೆ. ಈತನು ಹೆಂಡತಿ ಮಕ್ಕಳೊಂದಿಗೆ ತನ್ನ ಕೊನೆಯ ಗಳಿಗೆಯಲ್ಲಿ ತನ್ನ ಹೊಲದಲ್ಲಿಯೇ ವಾಸವಾಗಿರುತ್ತಾನೆ. ದೇವತಾ ವಿಗ್ರಹದ ಹೆಸರಿನಿಂದ ನಡೆಯುತ್ತಿರುವ ಉತ್ಸವ, ಜಾತ್ರೆ ಅವುಗಳಿಂದ ಉಂಟಾಗುತ್ತಿದ್ದ ಘರ್ಷಣೆಗಳನ್ನು ಖಂಡಿಸಿ ಪರಮಾತ್ಮನೊಬ್ಬನೆ ಎಂಬುದನ್ನು ಪ್ರತಿಪಾದಿಸಿದ್ದಾಕ್ಕಾಗಿ ಮುಸ್ಲಿಂರಿಗೆ ಹತ್ತಿರವಾದಂತೆ ಈತನ ವಿಚಾರ ಶಂಕರಾಚಾರ್ಯ. ವಿಚಾರಕ್ಕೆ ಹತ್ತಿರವಾದದ್ದರಿಂದ ಸನಾತನ ಹಿಂದುಗಳಿಗೆ ಪ್ರಿಯರಾದರು. ಈ ವಿಚಾರಧಾರೆಯಿಂದ ಹಿಂದೂ-ಮುಸ್ಲಿಂ ಇಬ್ಬರ ಗೌರವವನ್ನು ತಮ್ಮತ್ತ ಸೆಳೆದುಕೊಳ್ಳಲು ಕಾರಣವಾಯಿತು. ಇದಕ್ಕೆ ಸಮಾನಂತರವಾಗಿ ಹಿಂದುಗಳಲ್ಲಿ ಭಕ್ತಪಂಥದ ಕೇಂದ್ರಬಿಂದು ಎನಿಸಿದರು. ಈ ರಮಾನಂದರು ಮುಸಲ್ಮಾನ ಹಾಗೂ ಕೆಳಜಾತಿಯ ಹಿಂದುಗಳನ್ನು ಶಿಷ್ಯರಾಗಿ ಸ್ವೀಕರಿಸಿ ದೊಡ್ಡ ಕ್ರಾಂತಿಯನ್ನೇ ಎಸಗಿದರು. ಇವರ ಶಿಷ್ಯನೇ ಕಬೀರ ಹಾಗೂ ರವಿದಾಸ. ತಮ್ಮ ಪ್ರಾಮಾಣಿಕ ಸಾಧನೆಯಿಂದ ಜನತೆಯ ಹೃದಯದಲ್ಲಿ ಉನ್ನತ ಸ್ಥಾನ ಪಡೆದುಕೊಂಡಿದ್ದಾರೆ. ಈ ಗುರುನಾನಕರು ಕಾಣಿಸಿಕೊಳ್ಳುವ ಮೊದಲೇ ರಮಾನಂದ, ಕಬೀರರು ಸಾಮಾಜಿಕ ಸಮಾನತೆಗಾಗಿ ಜಾತೀಯತೆಯ ನಿವಾರಣೆಗಾಗಿ ಯತ್ನಿಸಿದ್ದರು. ನಾನಕ ಪಂಜಾಬ ಪ್ರಾಂತವನ್ನು ಆರಿಸಿಕೊಂಡ ಸಂದರ್ಭದಲ್ಲಿಯೆ ಬಂಗಾಳದಲ್ಲಿ ಚೈತನ್ಯ ಮಹಾರಾಷ್ಟ್ರದಲ್ಲಿ ಸಂತ ಜ್ಞಾನೇಶ್ವರ, ನಾಮದೇವ, ತುಕಾರಾಮರು, ರಾಜಸ್ಥಾನದಲ್ಲಿ ಭಕ್ತೆ ಮೀರಾಬಾಯಿ ಸಿಂಧದಲ್ಲಿ ಸಾಧನ, ಕರ್ನಾಟಕದಲ್ಲಿ ಪುರಂದರ-ಕನಕರು ಭಕ್ತಿಪಂಥದ ಬೆಳವಣಿಗೆಯಲ್ಲಿ ತೊಡಗಿಸಿಕೊಂಡ ಮಹಾನುಭಾವರೆನಿಸಿ ಕೊಂಡಿದ್ದಾರೆ. ಇವೆಲ್ಲವುಗಳು ಅವೈದಿಕ ಭಾರತೀಯ ಕೆಳವರ್ಗದ ದಾರ್ಶನಿಕ ಪರಂಪರೆಗೆ ಸಾಕ್ಷ್ಯ ಚಿತ್ರಗಳಾಗಿವೆ.

**ಅಡಿಟಿಪ್ಪಣಿಗಳು**

೧. ಲೋಕ ಚಾರುವಾಕ, ಡಾ. ಎಚ್.ಎನ್.ಮಂಜುರಾಜ, ಪು. ೨
೨. ದಲಿತ ವರ್ಗದ ಅಧ್ಯಯನ, ಮ.ನ.ಜವರಯ್ಯ, ಪು. ೬
೩. ದಲಿತ ವರ್ಗದ ಶರಣರು, ಡಾ. ಜವರಯ್ಯ, ಪು. ೮
೪. ಗುರುನಾನಕ್, ಡಾ. ಡಿ.ಬಿ.ರಾಮಚಂದ್ರಾಚಾರ್ಯ, ಪು. ೪, ೫



# ೪

# ಮಧ್ಯಕಾಲೀನ ದಾರ್ಶನಿಕ ಪರಂಪರೆ ಮತ್ತು ವಚನಕಾರರು

## ಅ. ಸೂಫಿ ಸಂತರು ಮತ್ತು ವಚನಕಾರರು

ಸೂಫಿ ಸಂತರು ಮತ್ತು ವಚನಕಾರರನ್ನು ತೌಲನಿಕವಾಗಿ ನೋಡುವಾಗ ಮೊದಲು ಸೂಫಿ ತತ್ವ ಅಂದರೇನು ಎಂಬುದು ಮುಖ್ಯ. ಸೂಫಿ ಎಂದರೆ - ಸಿದ್ದ, ಅನುಭಾವಿ ಗ್ರೀಕಿನ ಸೂಫಿಯಾ = ಜ್ಞಾನ, ಅರಬ್ಬಿಯಾ ಸೂಪ್ಪಾ = ಜಗುಲಿ, ಸೂಪ್ = ಉಣ್ಣೆ, ಅಂದರೆ ಸೂಫಿಗಳು ಮಸೀದಿಯ ಜಗುಲಿಗಳಲ್ಲಿ ವಾಸಿಸುತ್ತಿದ್ದರು, ಉಣ್ಣೆಯ ನಿಲುವಂಗಿಯನ್ನು ಉಡುತ್ತಿದ್ದರು. ಸೂಫಿಗಳು ಹೊಂದಿರಬೇಕಾದ ವಸ್ತುಗಳೆಂದರೆ - ದಂಡ, ಗಿಂಡಿ, ಗುದಡಿ, ಚಾಪಡೆ ಗುರು ತನ್ನ ಶಿಷ್ಯ (ಕಲೀಫ) ಕೊಡುತ್ತಿದ್ದ ವಸ್ತುಗಳೆಂದರೆ ಇವೆಯಾಗಿದೆ. ಲಾಕುಳ (ದಂಡ) ಕೈಯಲ್ಲಿ ದಂಡವನ್ನು ಹಿಡಿಯುವ ಇವರಿಗೆ ಲಕುಲೀಶರೆಂದು ಕರೆದಂತೆ ಹಂಡಿ (ಮಡಿಕೆ) ಇದನ್ನು ಹೊಂದಿರುವುದರಿಂದ ಹಂಡಿ ಬಡಗನಾಥ ಎಂದು ಧರಿಸುವ ವಸ್ತುವಿನಿಂದ ಆಯಾ ಪಂಥಗಳಿಗೆ ಹೆಸರು ತಂದಿರುವದು ಸ್ವಾಭಾವಿಕವಾಗಿದೆ. ಹಾಗೆ ಕಂಬಲ್ ಪೋಷ್ ಅಂದರೆ ಕಂಬಳೀ ತೊಟ್ಟವನು, ಶವರ ಉಡುಪಿನಂತೆ ಗುದಡಿಯನ್ನು ಹಿಡಿದು ವೈರಾಗ್ಯ ಫಕೀರನ ಸಂಕೇತ. ಇದಕ್ಕೆ ಸಮಾನವಾಗಿ ವಚನಕಾರರಲ್ಲಿ ಇದಕ್ಕೆ ವಿರಕ್ತ ಅನ್ನುವ ಪದವಿದೆ. ಈ ಸೂಫಿಗಳಿಗೆ ನೀವು ಸುನ್ನಿ ಅಥವಾ ಷಿಯಾ ಇದರಲ್ಲಿ ಯಾವ ಪಂಗಡಕ್ಕೆ ಸೇರಿದವರು ಎಂದು ಪ್ರಶ್ನಿಸಿದರೆ "ನಾವು ಹಿಂದೂಗಳು ಅಲ್ಲ - ಮುಸ್ಲೀಂರು ಅಲ್ಲ, ಸೂಫಿಗಳು ಹೀಗಿರುವಾಗ ಸುನ್ನಿ, ಷಿಯಾ ಆಗುವದು ಹೇಗೆ ಸಾಧ್ಯ?"[೧] ಎನ್ನುವರು. ಅಂದರೆ ಸಾಂಪ್ರದಾಯಿಕ ಮತಧರ್ಮದ ಕಂದಾಚಾರಗಳನ್ನು ಭೇದಿಸಿ ಸ್ವತಂತ್ರ

ಇಸ್ಲಾಂನ ಅನುಭವ ಶಾಖೆ ಅನಿಸಿಕೊಂಡಿದೆ ಈ ಸೂಫಿವಾದ. ಇಸ್ಲಾಂಕ್ಕೂ ಇದಕ್ಕೂ ಸಂಬಂಧವಿದೆ ಆದರೆ ಸ್ವತಂತ್ರವಾಗಿದೆ. ಪುರಾತನ ಗ್ರೀಕ್ ರಲ್ಲಿ ಸಾಕ್ರೆಟಿಸ್ ಸಾಂಪ್ರದಾಯಿಕರ ವಿರೋಧದಿಂದ ತನ್ನ ಪ್ರಾಣವನ್ನೇ ಬಲಿಕೊಡಬೇಕಾಯಿತು. ಅದರಂತೆ ಇಸ್ಲಾಂ ಸಾಂಪ್ರದಯಕ್ಕೆ ತನ್ನ ವಿಚಾರವನ್ನು ಬಲಿಕೊಡದೇ ಅಮಿನುದ್ದೀನ್, ಗೂಗಿಯ ಮಹಮ್ಮದ್ ಬಹ್ರೀ, ವಿಚಾರಣೆಗೆ ಒಳಗಾದ ಬಾಗ್ದಾದಿನ ಮನ್ಸೂರ್ ಅಲ್-ಹಲ್ಲಾಜ್ ತನ್ನ ಪ್ರಾಣವನ್ನು ಬಲಿಕೊಟ್ಟ. ಇದಕ್ಕೆ ಕಾರಣ ಸೂಫಿಯ ತಸಲುಫ್ ಅಂದರೆ ಅನುಭಾವ ಪರಿಕಲ್ಪನೆಯು ಇಸ್ಲಾಂ ವಿರೋಧಿ ಎಂದು ಗುರುತಿಸಲ್ಪಡುತ್ತಿತ್ತು. ಇವರು ಮಧುರ ಪ್ರೇಮದಿಂದ ಮಾತನಾಡಿ ಜಗತ್ತಿನ ಯಾವುದೇ ಭಾಗದ ಅನುಭಾವ ಸಂತರೊಡನೆ ಬೆರತು ಬಿಡುವವರಾಗಿದ್ದರು. ಸಾಂಸ್ಕೃತಿಕ ನೆನಪುಗಳ ಹಿನ್ನಲೆಯಲ್ಲಿ ಪರ್ಶಿಯಾವನ್ನು ಪುನರ್ ನಿರ್ಮಾಣ ಮಾಡಬೇಕಾದಾಗ ಸೂಫಿಗಳು ರಾಷ್ಟ್ರನಿರ್ಮಾಣಕ್ಕೆ ಬದ್ಧರಾಗಿಲ್ಲದಿರುವದರಿಂದ ಅವರನ್ನು ಹೊರಹಾಕಲು ಪ್ರಾರಂಭಿಸಿದರು. ಜಗತ್ತಿನ ಎಲ್ಲ ಭಾಗಗಳಲ್ಲಿ ಅನುಭಾವಿ ಪಂಥ ಇರುವಂತೆ, ಸೂಫಿಯು ಒಂದು ಅನುಭಾವ ಪಂಥ. ಇವರು ಹಲವಾರು ಬಾರಿ ಮೂಲಭೂತ ಇಸ್ಲಾಮಿನಿಂದ ಶಿಕ್ಷೆಯನ್ನು ಎದುರಿಸಿದ್ದಾರೆ. ಇಸ್ಲಾಂ ಇದು ದ್ವೈತವಾದಿ, ಇಲ್ಲಿ ದೇವ ಅಸ್ತಿತ್ವ ಬೇರೆಬೇರೆಯಿವೆ. ಅವರಿಬ್ಬರೂ ಎಂದಿಗೂ ಒಂದಾಗಲು ಸಾಧ್ಯವಿಲ್ಲ ಆದ್ದರಿಂದ ದೈವಿಶಕ್ತಿಗೆ ಶರಣು ಹೋಗಲೇಬೇಕು. ಅದರ ಸಾಂಕೇತಿಕವೇ ನಮಾಜು, ಉಪವಾಸ, ಜಕಾತ್ ಅಂದರೆ ಹಜ್ ಯಾತ್ರೆಗಾಗಿ ಖರ್ಚು ಮಾಡುವುದು. ಈ ಸೂಫಿಗಳಲ್ಲಿ ನಾಲ್ಕು ಹಂತಗಳನ್ನು ಕಾಣಲಾಗುತ್ತದೆ.

೧. ಶರಿಯತ್ ೨. ತರೀಕತ್ ೩. ಮಾರಿಫತ್ ೪. ಹಕೀಕತ್ ಅಂದರೆ ವಚನಕಾರರಲ್ಲಿ ಆರು ಸ್ಥಲಗಳಿರುವಂತೆ ಈ ಸೂಫಿಗಳಲ್ಲಿ ಈ ನಾಲ್ಕು ಸ್ಥಲಗಳು. ಸಾಧಕ ಹಂತ ಹಂತವಾಗಿ ಮೇಲೇರಿ ಹೋಗುವುದು. ಇವರೀರ್ವರಲ್ಲಿಯೂ ಇದೆ. ಷಟ್‌ಸ್ಥಲದಲ್ಲಿ ಮೊದಲು ಮೂರು ಹಂತಗಳು ಆಚಾರ ಪ್ರಧಾನವಾದರೆ ಕೊನೆಯ ಮೂರು ಹಂತಗಳು ಜ್ಞಾನ ಪ್ರಧಾನವಾಗಿವೆ. ಹಾಗೆ ಇಲ್ಲಿ ಶರಿಯತ್ ಅಂದರೆ ಒಳ್ಳೆಯ ಕೆಲಸಗಳನ್ನು ಮಾಡಲು ಆಚಾರವಿದೆ. ಇದರಿಂದ ಮುಂದೆ ತತ್ವಚಿಂತನೆಗೆ ಒಳಗಾಗುವ ತರೀಕತ್ತನ್ನು ಮುಟ್ಟುವದು. ಆ ತತ್ವಚಿಂತನೆಯನ್ನು ಮಾಡುತ್ತ ಆ ದೈವಿಕ ಜ್ಞಾನವನ್ನು ಪಡೆದುಕೊಳ್ಳುವುದೇ ಮಾರಿಫತ್ ಆಗಿದೆ. ಅಂದರೆ ಶರಣಸ್ಥಲವನ್ನು ಸೂಚಿಸುವಂತಿದೆ. ಕೊನೆಯ ಹಂತವಾದ ಐಕ್ಯಸ್ಥಲವೇ ಪರಮಸತ್ಯದ ಸಾಕ್ಷಾತ್ಕಾರ. ಸಾಧಕ ಆ ಸತ್ಯಕ್ಕೆ ಸಮನಾಗುವದು ಸತ್ಯವನ್ನು ಏಕೀ ಬಯಸುವಿಕೆ, ಮುಂತಾಗಿ ಕರೆಯುವರು. ಆಹಂ ಬ್ರಹ್ಮಾಸ್ಮಿ ಇದಕ್ಕೆ ಆನಲ್ ಹಕ್ = ನಾನೇ ಸತ್ಯ - ಇದನ್ನು ಹೋಗಲಾಡಿಸಬೇಕಾಗುವುದೇ ಸೂಫಿಗಳಲ್ಲಿ ಫನಾ = ನಾಶ ಎಂದು ಕರೆಯುವರು. ಇದು ಭೌದ್ಧರ ಶೂನ್ಯವನ್ನು ಯೋಗದಲ್ಲಿ ತಲುಪುವ ಸಾಧಕನ ಪರಮಾನಂದವನ್ನು ಹೇಳುತ್ತದೆ. "ಒಬ್ಬ ದೇವರಿಂದ ಮತ್ತೊಬ್ಬ ದೇವರನ್ನು ಅರಸುತ್ತಾ ಹೋದೆ, ಒಳಗಿನಿಂದ ನೀನೆ ನಾನು ಎಂಬ ಧ್ವನಿ ಬಂದಿತು. ಎಂದು ಸೂಫಿಗಳು ಈ ಅನಲ್ ಹಕ್ಕ್ ಆವಸ್ಥೆಯನ್ನು ವರ್ಣಿಸುತ್ತಾರೆ."[೨] ಈ ಅನುಭಾವದ ಸೂಫಿ ಕವಿಗಳು ತಮ್ಮ ಪರಮಾನಂದವನ್ನು ಪ್ರಿಯಕರ ಪ್ರಿಯತಮೆಯರನ್ನು ಪಡೆಯುವ ಮಿಲನ ರೂಪಾತ್ಮಕವಾಗಿ ಹೇಳುವರು. ವಚನಕಾರರಲ್ಲಿಯೂ ಕೂಡ ಲಿಂಗಾಂಗ ಸಾಮರಸ್ಯ ಪುರುಷ - ಸ್ತ್ರೀ, ಶಿವ - ಶಕ್ತಿ ರೂಪದಲ್ಲಿ ಹೇಳಿರುವಂತೆ ಈ ವಚನಕಾರರಲ್ಲಿ ಶಿವ ಗಂಡನಾದರೇ ಸೂಫಿಗಳಲ್ಲಿ ಶರಣಪತಿ ಲಿಂಗಸತಿಯಾಗಿದೆ. (ವಚನಕಾರರಲ್ಲಿ ಶರಣಸತಿ - ಲಿಂಗಪತಿ) ತಾನೇ ದೈವವಾಗುವ ಅಹಂಕಾರ ಅದು ಅಲ್ಲಾಗೆ ಬಗೆಯುವ ದ್ರೋಹವೆಂದು ತಿಳಿದರು. ಈ ಸೂಫಿಗಳು ಇಸ್ಲಾಮಿಕ್ ತತ್ವವನ್ನು ಉಲ್ಲೇಖಿಸುತ್ತಲೇ ಈ

ಜಗತ್ತು ದೇವರ ಸೃಷ್ಟಿಯಾದರೆ ಈ ಮನುಷ್ಯ ಕೂಡಾ ದೇವರ ಅಂಶವೇ ಆದ್ದರಿಂದ ಈ ದೇಹದಲ್ಲೇ, ಈ ಲೋಕದಲ್ಲೇ ಸತ್ಯವಿದೆ. ಆದ್ದರಿಂದ ಅದನ್ನು ಪಡೆದುಕೊಳ್ಳಬೇಕು. ಲೋಕದ ಚೇಷ್ಟೆಗಳಿಗೆಲ್ಲಾ ಆ ದೈವವೇ ಕಾರಣ. ಇಲ್ಲಿ ಲೋಕದ ಚೇಷ್ಟೆಗೆರವಿ ಬೀಜವಾದಂತೆ - - - - -, ಎನ್ನುವ ಅಕ್ಕಮಹಾದೇವಿ ವಚನ ನೆನಪಿಗೆ ಬರುವದು. ವಚನಕಾರರಲ್ಲಿ ಸಾಧಕ ಕೊನೆಯಲ್ಲಿ ಶಿವನಾದರೇ ಇಲ್ಲಿ ದಾಸರಂತೆ ಮನುಷ್ಯ ಯಾವಾಗಲೂ ಪ್ರಾರ್ಥನೆಯನ್ನು ಮಾಡುತ್ತಾ ಅಸಹಾಯಕನಾಗಿದ್ದಾನೆ. ಮತಧರ್ಮದ ನೀತಿ ವಿಧಿ ನಿಷೇದಗಳಿಂದ ದೂರಾಗಿ ಚಿಂತನಾ ಸ್ವಾತಂತ್ರ್ಯಕ್ಕೆ ತಾತ್ವಿಕ ನೆಲೆಯನ್ನು ಹುಡುಕಿಕೊಂಡರು. ಸೂಫಿ ಮತ್ತು ಉಲೇಮಾಗಳು ಇಸ್ಲಾಮಿಗೆ ಸಂಬಂಧಪಟ್ಟರೂ ಸೂಫಿಗಳಲ್ಲಿ ಫೀರ್ (ಗುರು) ಈ ಕಲ್ಪನೆ, ಸಮ (ಸಂಗೀತ), ವಜದ್ (ಭಾವ ಸಮಾಧಿ) ಇಂತಹುಗಳನ್ನು ಇಲ್ಲಿ ಕಾಣುತ್ತೇವೆ. ಗುರುವಿನಿಂದ ಬಯತ್ (ದೀಕ್ಷೆ) ಪಡೆದುಕೊಂಡು ತನ್ನನ್ನು ಗುರುವಿಗೆ ಅರ್ಪಿಸಿಕೊಳ್ಳುವದು ಅಂದರೆ ಗುರುವಿಗೆ ಶರಣು ಹೋಗುವದು. ಇದು ಗುರು ಪಂಥವಾಗಿದೆ. ಎಲ್ಲ ಅನುಭಾವಿ ಪಂಥಗಳು ಕೂಡಾ ಗುರುವನ್ನು ಒಪ್ಪಿಕೊಳ್ಳುತ್ತವೆ. ಆದರೆ ಉಲೇಮಾ ಇಸ್ಲಾಂ ಎಲ್ಲವೂ ಕೂಡಾ 'ಅಲ್ಲಾನಿಗಲ್ಲದೇ' ಮತ್ತ್ಯಾರಿಗೂ ತಲೆ ಬಾಗಿಸಬಾರದು ಎಂಬುದು ಇಸ್ಲಾಂ ನಂಬಿಕೆಯಾದರೆ ಗುರುವಿಗೆ ಶರಣು ಹೋಗುವ ಈ ಸೂಫಿ ಪಂಥ ವಚನಕಾರರಂತೆ ಗುರುಕಲ್ಪನೆ ಶರಣರ ಅನುಭಾವವನ್ನು ಈ 'ವಜದ್' ಹೋಲುತ್ತದೆ. ಇದೆ ಅನುಭಾವ ಅರವಿಂದರ ಪೂರ್ಣ ಪ್ರಜ್ಞ ಸಮಾಧಿಯನ್ನು ಕೂಡಾ ಹೋಲುವದು.

ಈ ಸೂಫಿ ತತ್ವದ ಮೂಲ ಪುರುಷ "ಹದೀಸಿನ (ಧರ್ಮಶಾಸ್ತ್ರದ) ಅಲಿಗೆ ಬೋಧಿಸಿದನು. ಹೀಗಾಗಿ ಅಲ್ಲಿಯೇ ಮೊದಲ ಸೂಫಿ. ಬಹುತೇಕ ಎಲ್ಲ ಸೂಫಿ ಪಂಥಗಳು ಅಲಿಯನ್ನು ಮೊದಲ ಗುರು ಎಂದು ಭಾವಿಸುತ್ತವೆ."[೩] ವಚನಕಾರರ ಅಧ್ಯಕ್ಷ ಅಲ್ಲಮಪ್ರಭುವಾದರೆ ಇಲ್ಲಿ ಮೊದಲ ಗುರು ಅಲಿಯಾಗಿದ್ದಾನೆ. ಈ ಸೂಫಿ ಸಂತರು ಕೇವಲ ಒಂದು ಶತಮಾನ, ಒಂದು ದೇಶ, ಒಂದೇ ಸಂಪ್ರದಾಯದಲ್ಲಿದ್ದವರಲ್ಲ. ಹಲವು ದೇಶಗಳಲ್ಲಿ, ಹಲವು ಶತಮಾನಗಳಲ್ಲಿ ಇದ್ದ ಇವರ ಲಕ್ಷಣವನ್ನು ಹೇಳುವದು ದುಸ್ತರದ ಸಂಗತಿ. ಈ ಸೂಫಿಗಳೆಂದರೆ ಕೇವಲ ಯೋಗ ಸಾಧಕರಲ್ಲ, ವಿದ್ವಾಂಸರಾಗಿ, ವಿರಕ್ತರಾಗಿ, ಸಂಸಾರಿಗಳಾಗಿ, ಶಾಸ್ತ್ರಕಾರರಾಗಿ, ಸಂಗೀತಕಾರರಾಗಿ, ಕವಿಗಳಾಗಿ, ತತ್ವಜ್ಞಾನಿಗಳಾಗಿರುವ ಬಹುರೂಪಿ ಪಂಥವಾಗಿದೆ. ಬಂದೇ ನವಾಜಿನಂತಹ ತತ್ವಜ್ಞಾನಿಗಳು ಆಮೀನುದ್ದೀನಂಥಹ ನಿರಂಕುಶ ಮತಿಗಳು ಅಂದರೆ ಸೂಫಿಗಳು ರಾಜಾಧಿಕಾರವನ್ನು ಮಾಡಿದ್ದಾರೆ. ರುಕ್ ನುದ್ದೀನ್ ನಂತಹವನು ರಾಜನಲ್ಲಿ ಉನ್ನತ ಪದವಿಯನ್ನು ಪಡೆದ ಸೂಫಿಯಾದ ಪರಿಯು ವಚನಕಾರರಲ್ಲಿ ಬಸವ ಮಂತ್ರಿಯಾದದ್ದು, ಪ್ರೌಢದೇವರಾಯನ ಕಾಲದಲ್ಲಿ ಲಕ್ಕಣ ಮಂತ್ರಿಯಾದದ್ದನ್ನು ನೆನಪಿಗೆ ತರುತ್ತದೆ. ಈ ಸೂಫಿವಾದವನ್ನು ಮೂರು ಹಂತಗಳಲ್ಲಿ ಕಾಣಲಾಗುವುದು. ೧. ಖಾನಖಾ ೨. ತಾರಿಖಾ ೩. ತಾಯಿಫಾ ಆದಿ ಸೂಫಿಗಳು ತಿರುಗಾಡಿ ಸಂಘಟನೆಯಿಲ್ಲದೆ ಯಾವುದೇ ರಾಜಕೀಯ ಸಂಪರ್ಕವಿಲ್ಲದೆ ವಿರಕ್ತ ತಾಪಸ ಜೀವನವನ್ನು ಕಳೆಯುತ್ತಿದ್ದರು. ಎರಡನೇಯ ಹಂತದಲ್ಲಿ ಈ ಅಲೆಮಾರಿ ಸೂಫಿಗಳು ಸಂಘಗಳಾಗಿ ಪಂಥಗಳಾಗಿ ರೂಪಿತಗೊಂಡು, ಗುರು ಶಿಷ್ಯ ಪರಂಪರೆಯನ್ನು ರೂಪಿಸಿಕೊಂಡು ಸುವ್ಯವಸ್ಥಿತವಾದ ಸಂಚಾರ ಬೋಧನೆಯಲ್ಲಿ ಪ್ರಾರಂಭಿಸಿದರು. ಮೂರನೇ ಹಂತದಲ್ಲಿ ಗುರುವಿನ ನಿಷ್ಠೆ, ಫೀರರು ದೈವತ್ವಕ್ಕೇರಿದರು. ಈ ಹಂತದಲ್ಲಿ ತತ್ವಜ್ಞಾನಿಗಳು ಉದಿಸಿದರು. ರೂಮಿ, ಸಾದಿ, ಜಾಮಿ, ಹಾಫಿಸ್, ಉಮರ್ ಖಯ್ಯಾನಂಥಹ ಕವಿಗಳು ಹುಟ್ಟಿದ್ದು ಇದೇ ಘಟ್ಟದಲ್ಲಿ. ಮೊದಲೆರಡು ಘಟ್ಟಗಳ ನಂತರ ತಾಯಿಫಾ

ಘಟ್ಟದಲ್ಲಿ ಗುರುವಿನ ಚಿಂತನೆಗಳನ್ನು ಪ್ರಶ್ನಿಸುವ ಹಕ್ಕಿಲ್ಲದೇ ಯಥಾರೀತಿಯಾಗಿ ಅದನ್ನು ಅನುಸರಿಸುವುದಾಗಿದೆ. ಒಂದು ಗುರುವಿನ ಮಠಕ್ಕೆ ಉತ್ತರಾಧಿಕಾರಿಯನ್ನು ತೆಗೆದುಕೊಂಡು ಆ ಪರಂಪರೆಯನ್ನು ಮುಂದುವರೆಸುವ ಯೋಗ್ಯ ಶಿಷ್ಯನನ್ನು ಹುಡುಕುವುದು ಕಡಿಮೆಯಾಗಿ ಆ ಸಂತನ ಮಕ್ಕಳು ಪಿತ್ರಾರ್ಜಿತ ಆಸ್ತಿಯ ಹಕ್ಕುದಾರರಾಗಿ ಮುಂದುವರೆದರು. ಇಲ್ಲಿ ಕಾಣುವುದು ಸಂತನ ತಾತ್ವಿಕ ದರ್ಶನವನ್ನಲ್ಲ. ಸಂತನ ಮೇಲೆ ಪುರಾಣವನ್ನು ಕಟ್ಟಿ ಅದನ್ನು ಹರಡುವ ಕೆಲಸವಾಯಿತು. ಈ ಮೂರು ಘಟ್ಟಗಳು ವಚನಕಾರರ ಸಾಮಾನ್ಯ, ವಿಶೇಷ, ನಿರಾಭಾರಿ, ಮೂರು ತೆರೆದ ಹಂತಗಳನ್ನು ನೆನಪಿಸುವಂತಿದೆ. ಆದರೆ ವ್ಯವಸ್ಥಾಬದ್ಧ ಜೋಡಣೆ ವಿಭಿನ್ನ. ಸೂಫಿಗಳು ದೈವೀಕರಣಗೊಂಡದ್ದು ತಾತ್ವಿಕ ಅನವನತಿಯಾದರೆ ಸತ್ತ ಸಮಾಧಿಯ ಸುತ್ತ ಬೆಳೆದುಕೊಂಡ ಪುರಾಣ - ಕಥೆ ಕಾವ್ಯಗಳು ಸೂಫಿಗಳನ್ನು ಜೀವಂತವಾಗಿಸಿದವು. ಸಾಮಾನ್ಯವಾಗಿ ೧೧ನೇ ಶತಮಾನದ ಹೊತ್ತಿನಲ್ಲಿ ವೈಚಾರಿಕ ತರ್ಕ, ಭೌದ್ಧಿಕಾವಸ್ಥೆಗೆ ಈ ಸೂಫಿ ತತ್ವ ಸ್ವರೂಪವನ್ನು ಪಡೆದುಕೊಂಡಿತು. ಈ ಕಾಲದಲ್ಲಿ ಸೂಫಿ ಪಂಥ ಸೂಫಿ ವಾದವಾಯಿತು. (Sophy is become Sophist) ಪ್ರತಿಭಾವಂತರಾದ ಸೂಫಿಗಳು ತಮಗೆ ಸರಿಕಂಡಂತೆ ಸಿದ್ಧಾಂತವನ್ನು ವ್ಯಾಖ್ಯಾನಿಸುತ್ತಾ ಹೋದರು. ಅವರವರ ಅನುಯಾಯಿಗಳು ತಮ್ಮದೇ ಆದ ಮಾರ್ಗವನ್ನು ಕಟ್ಟಿಕೊಂಡರು. ಹೀಗೆ ಅವು ಚಿಸ್ತಿಯಾ, ಖಾದ್ರಿಯ್ಯಾ, ನಕ್ಷ ಬಂದಿಯಾ, ಸುಹರ್ವರ್ದಿಹಯಾ, ಕಲಂದರಿಯಾ, ಸಪ್ತಾರಿಯಾ, ಹಲವಾರು ಪಂಥಗಳಾದವು. ಅಬು - ಅಬ್ದುಲ್ಲಾ ಚಿಸ್ತಿ (೯೬೬) ಇತ ಚಿಸ್ತಿಯವನ್ನು, ಅಬ್ದುಲ್ ಖಾದರ್ ಜಿಲಾನಿ, (೧೧೬೬) ಈತ ಖಾದ್ರಿಯ ಮಾರ್ಗವನ್ನು, ಮಹಮದ್ ಬಿನ್ ಅಲಾ ಅಲ್ಲ ರಫಾಯಿಯಾವನ್ನು ಸ್ಥಾಪಿಸಿದರು. ಚಿಸ್ತಿಯಾ ಮತ್ತು ಖಾದ್ರಿಯಾ ಭಾರತದಲ್ಲಿ ಜನಪ್ರಿಯಗೊಂಡ ಶಾಖೆಗಳು. ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಮರಕ್ಕೆ ಹಸಿರು ಬಾವುಟವನ್ನು ಕಟ್ಟಿ, ಮರಕ್ಕೆ ಕಟ್ಟೆಯನ್ನು ಕಟ್ಟಿ, ಕಟ್ಟೆಯ ಮುಂದೆ ದೀಪದ ಮಾಡನ್ನು ಮಾಡಿರುವುದು ಖಾದ್ರಿಯ ಶಾಖೆಗೆ ಸೇರಿರುವಂತಹದು.

ಕರ್ನಾಟಕದಲ್ಲಿ ಚಿಸ್ತ ಸೂಫಿಗಳ ಪ್ರಭಾವ ಬಹಳವಿದೆ. ಗುಲ್ಬರ್ಗಾದ ಬಂದೇನವಾಜ, ಅಮೀನುದ್ದೀನ್, ಖಾದರಲಿಂಗ, ಹೊನ್ನೂರಸ್ವಾಮಿ, ಮಹಮ್ಮದ್ ಬಹ್ರಿ ಇವರೆಲ್ಲರೂ ಕೂಡಾ ಚಿಸ್ತ ಸೂಫಿಗಳಾಗಿದ್ದಾರೆ. ಸೂಫಿಗಳೆಂದರೆ ಕಾವ್ಯವನ್ನು ರಚಿಸುತ್ತಾ ಸಂಗೀತವನ್ನು ಹಾಡುತ್ತಾ ಚಿಂತನೆಗೈಯುವ ಅನುಭಾವಿಗಳೆಂದು ಕರೆಯುವರು. ತತ್ವ ಬೋಧನೆಯನ್ನು ಮಾಡುತ್ತಾ ಸಂಚರಿಸುವ ಬಿಜಾಪುರದ ಹಾಸೀಂ ಫೀರ್ ಸೂಫಿಗಳೂ ಇದ್ದರು. ರಾಜನ ಆಸ್ಥಾನದಲ್ಲಿದ್ದು ಇನಾಮುಗಳಿಂದ ಸುಖೀ ಜೀವನ ಸಾಗಿಸುವ ಗುಲ್ಬರ್ಗೆಯ ರುಕ್ನುದ್ದೀನ್ ಅಂತಹವರು ಇದ್ದರು. ಯಾವುದೇ ಕಟ್ಟುಪಾಡಿಗೆ ಒಳಗಾಗದೇ ಕಾಪಾಲಿಕರಂತೆ ಉನ್ಮತ್ತ ಕೆಲಸಗಳಲ್ಲಿ ಮುಳುಗಿ ತಮ್ಮ ಪಾಡಿಗೆ ತಾವಿರುವಂತಹ ದರ್ವೇಸು ಸೂಫಿಗಳು ಕೂಡಾ ನೆಲೆಸಿದ್ದರು. ಆದರೆ ವಚನಕಾರರಲ್ಲಿ ಒಂದು ವ್ಯವಸ್ಥಾಬದ್ಧವಾದ ಧಾರ್ಮಿಕ ಸಂಘಟನೆ ಇದ್ದಂತೆ ಒಂದೇ ಕಾಲದಲ್ಲಿ ಆದ ಚಳುವಳಿಯಂತೆ ಸೂಫಿಗಳಲ್ಲಿ ಇಲ್ಲ. ವಚನಕಾರರು ಕೂಡಾ ಒಂದೇ ಕಡೆ ನೆಲೆಸಿ ತಮ್ಮ ಪಂಥವನ್ನು ಅನುಭಾವಮಂಟಪ ಗೋಷ್ಠಿಯನ್ನು ನಡೆಸಿದಂತೆ ಸೂಫಿಗಳಲ್ಲಿ ಕಾಣಲಾಗುವದಿಲ್ಲ. ಆದರೆ ದಾಸರ ಹಾಗೆ ಸಂಚರಿಸಿ ತಮಗೆ ಮನ ಬಂದ ಹಾಗೆ ಸೂಫಿ ಪಂಥವನ್ನು ಪ್ರಚಾರಮಾಡಿದರು. ಧರ್ವೇಷಿ ಸೂಫಿಗಳೆಂದರೆ ದರಿದ್ರ, ಭಿಕ್ಷುಕ ಎಂದು ಅರ್ಥಗಳಿವೆ. ಅನುಭಾವದ ಆಕಾಂಕ್ಷೆಯಲ್ಲಿ ಅಪರಿಮಿತ ಸ್ವಾತಂತ್ರ್ಯದಿಂದ ಮನಸ್ಸೋ

ಇಚ್ಛೆ ನಡೆಯುವ ಧಾರ್ಮಿಕ ಶರತ್ತುಗಳಿಗೆ ಗಮನ ಕೊಡದೆಯಿರುವ ಇವರನ್ನು ಸಾಂಪ್ರದಾಯಿಕ ಇಸ್ಲಾಮಿಕರು ಖಂಡಿಸುತ್ತಾರೆ. ಈ ಧರ್ವೆಷಿ ಸೂಫಿಗಳಲ್ಲಿ ಕಲಂದರ್, ಮಜ್ಜುಬ್, ಮಲಾಮತಿ, ಮುಂತಾಗಿ ಕರೆಯುವರು. ಬಾಬಾ ಬುಡನಗಿರಿಯ ದಾದಾ ಹಯಾತ್‌ನು, ಖಲಂದರನಾಗಿದ್ದಾನೆ. ಅನೇಕ ಸೂಫಿಗಳು ಅಡವಿಯಲ್ಲಿ ಬೆಟ್ಟ ಕಾಡುಗಳಲ್ಲಿ ವಾಸಿಸುತ್ತಿದ್ದರು. ಅನೇಕ ಸೂಫಿಗಳು ಜಂಗ್ಲಿಸಾಬ್ (ಜಂಗಲ್ = ಕಾಡು), ಡೊಂಗ್ರಿಸಾಬ್ (ಡೊಂಗರ್ = ಬೆಟ್ಟ) ಎಂಬ ಹೆಸರನ್ನು ಧರಿಸಿದ್ದಾರೆ. ಹೀಗೆ ಅಡವಿಯಲ್ಲಿ ವಾಸಿಸುವ ಈ ಸಂತರು ವಚನಕಾರರಾದ ಕಾಡಸಿದ್ಧನನ್ನು ಕೊನೆಗೆ ಶ್ರೀಶೈಲ ಪರ್ವತಕ್ಕೆ ಹೋದ ವಚನಕಾರ ಅಲ್ಲಮನನ್ನು ನೆನಪಿಗೆ ತರುತ್ತದೆ. ವಚನಕಾರರು ವಿರಕ್ತರಾಗಿ ಸಂಸಾರಿಕವಾಗಿ, ತ್ಯಾಗಿಗಳಾಗಿ, ಭೋಗಿಗಳಾಗಿ, ಮಠಾಧಿಪತಿಗಳಾಗಿರುವಂತೆ, ಸೂಫಿಗಳಲ್ಲಿ ಕೂಡಾ ಇದನ್ನು ಕಾಣುತ್ತೇವೆ. ನಾಥ ಸಂಪ್ರದಾಯದಂತೆ ಹಲವಾರು ದೈವಿಕ ಭಾವಾವೇಷಗಳನ್ನು ಆಚರಣೆಗಳನ್ನು ಸೂಫಿಗಳಲ್ಲಿ ಕಂಡರೆ ವಚನಕಾರರಲ್ಲಿ ಸಹಜಾಚರಣೆಗೆ ಮಹತ್ವವಿದ್ದು, ವಾಮ ಮಾರ್ಗಕ್ಕೆ ಆಸ್ಪದವಿಲ್ಲ. ನಿರ್ಧಿಷ್ಟವಾದ ಆಚಾರ ವಿಚಾರಗಳು ಇವರಲ್ಲಿರುವಂತೆ ಸೂಫಿಗಳಲ್ಲಿ ಇಲ್ಲ. ನಾಗಲಿಂಗಯತಿ, ಬ್ರಿಟಿಷ್ ಕಛೇರಿಗಳಲ್ಲಿ ತನ್ನ ಹುಚ್ಚಾಟತನದಿಂದ ಬೆರಗುಗೊಳಿಸುತ್ತಿದ್ದ ಸಯೀದ್ ಸರ್ಮದ್ ದೆಹಲಿಯ ಬೀದಿಗಳಲ್ಲಿ ಬೆತ್ತಲೆಯಾಗಿ ತಿರುಗಿ ಔರಂಗ್‌ಜೇಬನನ್ನು ಅಪಮಾನಿಸಿದ. ಇದಕ್ಕೆ ಕಾರಣ ತಮ್ಮ ಶಿಷ್ಯ ಧಾರಾ ಸಿಜುವಿನ ಕೊಲೆಗೆ ಸಮರ್ಥತೆ ಇದಾಗಿತ್ತು. ಈ ರೀತಿಯಾಗಿ ಬೆತ್ತಲಾಗಿ ತಿರುಗುವ ಅಮಾಯಕತನ ಸೂಫಿಗಳಲ್ಲಿದ್ದಂತೆ ವಚನಕಾರರಲ್ಲಿ ಇಲ್ಲವಾದರೂ ಅಕ್ಕಮಹಾದೇವಿ ಕೌಶಿಕನ ಕಾರಣದಿಂದ ಶಿವನನ್ನು ಕಂಡನಾಗಬೇಕೆಂದು ಬಯಸಿ ಬೆತ್ತಲೆಯಾಗಿ ತಿರುಗಿದ, ವಿಶ್ವದ ಯಾವುದೇ ಮತ, ಪಂಥಗಳಲ್ಲಿ ಇಲ್ಲದ ಏಕೈಕ ವಚನಕಾರ್ತಿಯಳಾಗಿದ್ದಾಳೆ. ೧೦ನೇ ಶತಮಾನದ ಮನ್ಸೂರ್‌ನಿಂದ ಹಿಡಿದು ೧೭ನೇ ಶತಮಾನದ ಅಮೀನುದ್ದೀನನ ಹಾಗೂ ಫಕೀರೇಶನ ಮೂಲಕ ಸಾಗಿ ಬಂದ ಈ ಸೂಫಿ ಸಂತತಿಗೆ ಅಧೋಗತಿ ಎಂಬುದಿಲ್ಲ. ಈ ಸೂಫಿಗಳಲ್ಲಿ ನವಲಗುಂದದ ಸಮೀಪ ಇರುವ ಯಮನೂರಪ್ಪ ಪ್ರಮುಖನಾಗಿದ್ದಾನೆ. ಈತನ ಉರುಸಿಗೆ ಲಕ್ಷಲಕ್ಷ ಜನ ಸೇರುತ್ತಾರೆ. ಭಕ್ತಿಪಂಥೀಯರೆಂದು ಕರೆಯಲಾಗುವ ಮಹಾನುಭಾವ, ವಾರ್ಕರಿ, ಚೈತನ್ಯ ಕಬೀರಪಂಥಗಳ ಅನುಭಾವಿಗಳಿಗೂ ಮತ್ತು ಸೂಫಿಗಳಿಗೂ ಬಹಳ ವ್ಯತ್ಯಾಸ ಅನಿಸುವುದಿಲ್ಲ. ಇಲ್ಲಿ ಹಿಂದೂ - ಮುಸ್ಲಿಂ ಅನ್ನುವ ಭಾವನೆಯಿಲ್ಲದೆ ಫಕೀರೇಶ ಅಮೀನನ ಶಿಷ್ಯನಾಗುವದು, ಮಡಿವಾಳಪ್ಪನಿಗೆ ಮೋಟನಳ್ಳಿ ಹಸನಸಾಬನು ಶಿಷ್ಯನಾಗುವದು ಇವು ಸೂಫಿ ಪಂಥಗಳಲ್ಲಿ ಸಾಮಾನ್ಯ. ಆ ಮಹಾನುಭಾವ ಪಂಥದ ಪರಂಪರೆಯಲ್ಲಿ ಬರುವ ಚಾಂಗದೇವನೇ ಯಮನೂರಪ್ಪನಾಗಿದ್ದಾನೆ. ಈತನ ಸಮಾಧಿ ಮಹಾರಾಷ್ಟ್ರದ ಪುಣತಾಂಬೆಯಲ್ಲಿದೆ. ಈತನ ಬಗ್ಗೆ ಇದ್ದ ಜನಪದ ಹಾಡುಗಳು ಸೂಫಿ ಪಂಥಕ್ಕೆ ಸಂಬಂಧಗೊಳಿಸುತ್ತವೆ. ಈತನ ಇನ್ನೊಂದು ಹೆಸರು ರಾಜಾ ಬಾಗ್ ಸವಾರ. ಅಂದರೆ ಹುಲಿಯ ಮೇಲೆ ಏರಿ ಬರುವವನು. ಇವನಂತೆ ಬಂದೇನವಾಜ್, ಮಲೆಮಹಾದೇಶ್ವರ, ಮುಂತಾದವರು ಬಾಗ್ ಸವಾರರೇ ಆಗಿದ್ದಾರೆ. ವಚನಕಾರರ ನಂತರದಲ್ಲಿ ಬಸವಣ್ಣ ಪ್ರಭುವಿನ ಬಗ್ಗೆ ಪುರಾಣ ಕಥೆಗಳನ್ನು ಕಟ್ಟಿದಂತೆ ಸೂಫಿಗಳ ನಂತರದಲ್ಲಿ ಪುರಾಣ ಕಥೆಗಳನ್ನು ಹೆಣೆಯಲಾಗಿದೆ. ಮಹಾನುಭಾವಪಂಥದ ಈ ಚಾಂಗದೇವನು ಸೂಫಿ ಪರಂಪರೆಯೊಳಗೆ ಬಂದಂತೆ ಅನೇಕ ಸೂಫಿಗಳು ಕೂಡಾ ಮಹಾನುಭಾವ ಪಂಥಕ್ಕೆ ಸೇರಿದ್ದಾರೆ. ಮಹಾರಾಷ್ಟ್ರದಲ್ಲಿ ಗುಲ್ಬರ್ಗೆಯ ಬಂದೇನವಾಜನು ಕೇಶವ ಚೈತನ್ಯನಾಗಿ, ಆಳಂದದ ಲಾಡ್ಲಾ ಮಶಾಯಿಕ್‌ನು ರಾಘವ ಚೈತನ್ಯನಾಗಿ ಕಾಣಿಸಿಕೊಂಡಿದ್ದಾರೆ. ಮಹಾನುಭಾವ ಪಂಥದ ಜೊತೆ ಸೇರಿದಂತೆ ಅನುಭಾವಿ ಪಂಥಗಳ

ಜೊತೆ ಕೂಡಾ ಸೇರಿಕೊಂಡಿದೆ. ನಾಸಿರುದ್ದೀನ್ ನಾಗನಾಥನಾಗುವದು ಅಷ್ಟೂರಿನ ಅಲೀ ಆದಿಲ್ ಶಾ ಅಲ್ಲಮಪ್ರಭು ಆಗುವದು, ಬಂದೇನವಾಜನಿಗೆ ಸಿದ್ದನು, ನಾಶಿರುದ್ದೀನ್‌ನಿಗೆ ಹೆಗ್ರಾಸ್ ಸ್ವಾಮಿಯು, ಗೋವಿಂದಭಟ್ಟರಿಗೆ ಶಿಶುನಾಳ ಶರೀಫನು ಶಿಷ್ಯನಾಗುವದನ್ನು ನೋಡಿದರೇ ಈ ಸೂಫಿ ಪಂಥಗಳು ಅನೇಕ ತಾತ್ವಿಕ ಪಂಥಗಳೊಂದಿಗೆ ಬೆರೆತಿರುವದನ್ನು ಕಾಣಬಹುದು. ಆದರೆ ವಚನಕಾರರಲ್ಲಿ ಯಾವುದೇ ಪಂಥದ ಜೊತೆಗೆ ಹೊಂದಿಕೆಯಾಗುವದನ್ನು ಕಾಣಲಾಗುವುದಿಲ್ಲ. ಸೂಫಿಗಳ ಪ್ರಭಾವದಿಂದ ರೂಪ ತಳೆದಿರುವ ಕೊಡೆಕಲ್, ತಿಂಥಿಣಿ, ಸಾವಳಗಿ, ಶಿರಹಟ್ಟಿ ಮುಂತಾದವು ಸಂಕರ ಸೂಫಿ ಸಂಪ್ರದಾಯಗಳಾಗಿವೆ. ಮುಸ್ಲಿಂರಿಗೂ ಹಿಂದೂಗಳಿಗೂ ವ್ಯತ್ಯಾಸವೆಂದರೆ ಗೋಮಾಂಸ ಭಕ್ಷಣೆ, ವಚನಕಾರರು ಅಹಿಂಸಾವಾದಿಗಳಾದರೆ, ಸೂಫಿಗಳಲ್ಲಿ ಈ ವಿಷಯ ಗೌಣವಾಗಿದೆ. ಮೊಗಲ್‌ರಿಗೂ ಮತ್ತು ಸಿಖ್‌ರಿಗೂ ಅನೇಕ ಬಾರಿ ಸಂಘರ್ಷಗಳಾದರೂ ಕೂಡಾ ಸಿಖ್ ಪಂಥದ 'ಗ್ರಂಥಸಾಹಿಬಾ'ದಲ್ಲಿ ಬಾಬಾ ಫರೀದನ ಹಾಡುಗಳು ಸೇರಿಕೊಂಡಿವೆ. ಇದು ಸೂಫಿಸಂತನ ಪ್ರಭಾವ ಸ್ವತಹ ಗುರುನಾನಕ ಶೇಖ್ ಇಬ್ರಾಹಿಂನ ಅನುಯಾಯಿ ಅಂದಾಗ ರಾಜಕೀಯವನ್ನು ಮೀರಿ ಈ ಸೂಫಿ ಸಂಪ್ರದಾಯ ಬೆಳೆದಿದೆ ಎನ್ನಬಹುದು.

೧೨ನೇ ಶತಮಾನದಿಂದ ಹಿಡಿದು ಕಳೆದ ಶತಮಾನದವರೆಗೆ ಅನುಭಾವಿ ಸಂತರನ್ನು ನೋಡುತ್ತಾ ಸಾಗಿದಾಗ ದಾಸ ಸಾಹಿತ್ಯದ ಮಹಿಪತಿರಾಯ, ವೀರಶೈವ ಸಾಹಿತ್ಯದ ಕಾಡಸಿದ್ದೇಶ್ವರ ಇವರು "ಸೂಫಿ ಪ್ರಭಾವದ ಅನುಭಾವಿಗಳು."[೪] ಅಂದರೆ ಇವರು ಅನುಭಾವಿಗಳು ಹೌದು ಇವರ ಮೇಲೆ ಸೂಫಿ ಪ್ರಭಾವ ಆಗಿರಬಹುದು. ಆದರೆ ಸೂಫಿಗಳಲ್ಲ. ಸೂಫಿಗಳಲ್ಲಿಲ್ಲದ ವೈಚಾರಿಕತೆ ಇವರಲ್ಲಿ ಕಾಣುತ್ತದೆ. ಬಸವೋತ್ತರ ಯುಗದ ವಚನಕಾರರಲ್ಲಿ ಕಡಕೋಳ ಮಡಿವಾಳಪ್ಪ, ತಿಂಥಿಣಿ ಮೌನಪ್ಪ, ಕೊಡೇಕಲ್ ಬಸವಣ್ಣ ಮುಂತಾದವರಲ್ಲಿ ಲಿಂಗ, ಶಿವ, ಷಟಸ್ಥಲಗಳ ಬಗ್ಗೆ ಇವರ ವಚನಗಳಲ್ಲಿ ಪ್ರಸ್ತಾಪ ಬರುವದರಿಂದ ಇವರು ವೀರಶೈವರು. ಆದರೆ ಸೂಫಿಸಂತನ ಪ್ರಭಾವ ಸ್ವಲ್ಪಪ್ರಮಾಣದಲ್ಲಿ ಇವರಿಗೆ ಆಗಿರಬಹುದು. ಆದರೆ ಈ ವಚನಕಾರರೇ ಸೂಫಿಗಳು ಅನ್ನಲಿಕ್ಕೆ ಆಧಾರಗಳು ಕಡಿಮೆ. ಸೂಫಿಗಳು ಬಹುವಿಧವಾಗಿ ಇಸ್ಲಾಂನ್ನು ಅನುಕರಿಸುವಂತೆ ವಚನಕಾರರು ವೀರಶೈವರಾಗಿದ್ದಾರೆ. ವಚನಕಾರರ ನಡೆ - ನುಡಿ - ಆಚಾರ - ವಿಚಾರ, ವೈಚಾರಿಕತೆ ಒಂದೇ ತೆರನಾಗಿರುವಂತೆ ಸೂಫಿಗಳಲ್ಲಿ ಕಾಣಲಾಗುವದಿಲ್ಲ. ವಚನಕಾರರಲ್ಲಿ ನಡೆನುಡಿ ಒಂದಾಗಿ ಬದುಕುವದಾದರೇ ಸೂಫಿಗಳಲ್ಲಿ ಒಂದಾಗಿ ಬದುಕಬೇಕೆಂಬ ನಿಯಮವಿಲ್ಲ. ಕೊಡೇಕಲ್ ಬಸವಣ್ಣ, ತಿಂಥಿಣಿ ಮೌನಪ್ಪ ಲಿಂಗಧಾರಿಗಳಲ್ಲದಿದ್ದರೂ ಲಿಂಗ ವಿರೋಧಿಗಳೇನಲ್ಲ. ಆದರೆ ನಾಥ ಸಂಪ್ರದಾಯವನ್ನು ಹೋಲುತ್ತಾರೆ. ಕರಿಬಸವೇಶ್ವರ 'ಕರಿ ಕಲಂಧರ' ಎಂದು ಕರೆಸಿಕೊಳ್ಳುತ್ತಾನೆ. ಬಹದ್ದೂರ್ ಖಾನ್, ಮಹಾಂತಖಾನ್ ಅನ್ನುವವರು ಅನುಭಾವ ಪದವನ್ನು ರಚಿಸುತ್ತಾರೆ. ಕಾಡಸಿದ್ದೇಶ್ವರ ದಖನಿ ಉರ್ದುವಿನಲ್ಲಿ ವಲ್ಲಿಯ ಫೀರಣ್ಣಗಳು ಕಾಯಕವ ಮಾಡಿದ ವಚನವನ್ನು ಬರೆದಿದ್ದಾನೆ. ಅದರಂತೆ ಅಲ್ಲಮನ ಚರಿತ್ರೆಯು ನಾಥ ಸೂಫಿ ಪಂಥಗಳ ಜೊತೆ ಒಡನಾಟ ಮಾಡಿದ್ದನ್ನು ಕಾಣಬಹುದು. ಅಂದರೆ ಅನುಭಾವಕ್ಕೆ ಯಾವುದೇ ಮತ ಪಂಥಗಳು ಅಡ್ಡಿಯಾಗಲಾರವು ಎಂಬುದು ಇದರ ಅರ್ಥ. ನಾಥ ಪಂಥ "ತಲೆ ಎತ್ತಿ ಬಾಳಲು ಕೊಡದ ಶರಣರು ಒಂದೆಡೆ, ನಾಥ ಪಂಥ ಚೆನ್ನಾಗಿ ಉಸಿರಾಡಲು ಕಾರಣವಾದ ಇಸ್ಲಾಂ ಇನ್ನೊಂದೆಡೆ,"[೫] ಅಂದರೆ ಸೂಫಿ ಪದ್ಧತಿಯಲ್ಲಿ ತಮ್ಮ ಮತೀಯ ತತ್ವಗಳನ್ನು ಹಿಡಿದುಕೊಂಡೇ ಹಲವಾರು ಪಂಥಗಳು ಇಲ್ಲಿ ಗುರುತಿಸಿಕೊಂಡರೆ ವಚನಕಾರರಲ್ಲಿ ತನ್ನದೇ ವಿಶಿಷ್ಟವಾದ ಅನುಭಾವಿ ಪಂಥವನ್ನು ಹೊಂದಿದೆ. ೧೨ನೇ

ಶತಮಾನದ ಶಿವಶರಣರು ಇಲ್ಲಿಯೇ ಹುಟ್ಟಿ ವಚನಕಾರರಾಗಿ, ತಮ್ಮ ತತ್ವಗಳನ್ನು ಭಿತ್ತರಿಸಿದಾಗ ಬಹಳ ದೂರ ದೂರದಿಂದ ತನ್ನ ಅನುಯಾಯಿಗಳನ್ನು ಆಕರ್ಷಿಸಿಕೊಂಡರೆ ಸೂಫಿ ಅನುಭಾವವು ಇಸ್ಲಾಂ ಧರ್ಮ ಮತ್ತು ಪರ್ಶಿಯನ್ ಆಳುವ ವರ್ಗಗಳ ಜೊತೆ ಭಾರತಕ್ಕೆ ಬಂದಿವೆ. ಉತ್ತರ ಕರ್ನಾಟಕದಲ್ಲಿ ಆಳುತ್ತಿದ್ದ "ಇಸ್ಲಾಂ ದಾಳಿಗಳು ತೀವ್ರವಾಗಿ ಸಂಚರಿಸುತ್ತಿದ್ದ ಕಾಲದಲ್ಲಿ ಕೊಡೇಕಲ್ ಬಸವಣ್ಣ, ತಿಂಥಿಣಿ ಮೌನಪ್ಪಯ್ಯ, ಸಾವಳಗಿ ಶಿವಲಿಂಗೇಶ್ವರ, ಶಿರಹಟ್ಟಿ ಫಕೀರೇಶ್ವರ ಹೀಗೆ ಅನೇಕ ಯೋಗಿಗಳು, ಪ್ರತಿಭಾವಂತ ಧಾರ್ಮಿಕ ನಾಯಕರುಗಳೆಲ್ಲಾ ಪರಿಸರಕ್ಕೆ ತಕ್ಕ ಹೊಸ ವೇಷಹಾಕಿ ಅಲ್ಲಾ - ಅಲ್ಲಮಾ ಒಂದೇ ಎಂದರು."[೬] ಹೀಗೆ ಇಸ್ಲಾಂದ ಒತ್ತಡದಿಂದಾಗಿ ಪರಿಸ್ಥಿತಿಗನುಗುಣವಾಗಿ ಈ ಸಂಕರ ರೂಪಿ ಆಚರಣೆಗಳನ್ನು ಇವರು ಅಕಸ್ಮಾತ್ ಆಚರಿಸುವುದರಲ್ಲಿ ಇತರರಿಗೆ ಇವರು ಸೂಫಿಗಳಂತೆ ಕಂಡರು ಆಶ್ಚರ್ಯವಿಲ್ಲ. ಇವರಂತೆ ಹಿಂದೂಗಳ ಪ್ರಭಾವದಲ್ಲಿ ಅಮೀನುದ್ದೀನ್, ಎರಡನೇ ಇಬ್ರಾಹಿಂ, ಕಬೀರ, ಶಿಶುನಾಳಷರೀಫ್ ಮುಂತಾದವರು ಹಿಂದೂ ದರ್ಶನಕ್ಕೆ ಹೊಂದಿಕೊಂಡವರಾಗಿದ್ದಾರೆ. ಶರೀಫರಂತು ವೈದಿಕ ಗುರು ಗೋವಿಂದ ಭಟ್ಟರ ಶಿಷ್ಯ. ಈ ಅನುಭಾವಿಗಳ ಪರಂಪರೆ ಯಾವುದೇ ಕಂದಾಚಾರ ಡಂಭಾಚಾರಗಳಿಗೆ ಹಾಗೂ ಪ್ರಭುಗಳ ಒತ್ತಡಕ್ಕೆ ಸಿಲುಕುವರಲ್ಲ ಇದು ಇವರೀರ್ವರಲ್ಲಿ ಕಂಡುಬರುವ ಅಂಶ. ಸೂಫಿ ಇದರ ಸಾಮಾನ್ಯ ಅರ್ಥ ಹಿಂದೂ ಮುಸ್ಲಿಂರ ಆಧ್ಯಾತ್ಮಿಕ ಪ್ರವೃತ್ತಿಯ ಸಾಮರಸ್ಯಭಾವವಾಗಿದೆ. ಗುರುದತ್ತ ಮಾರ್ಗ, ಮಹಾನುಭಾವ ಪಂಥದ ಆಧ್ಯಾತ್ಮಿಕದಲ್ಲಿ ಮುಸಲ್ಮಾನರಿಗೆ ಹೇರಳವಾದ ಅವಕಾಶ ದೊರೆತಿದೆ. ವಚನಕಾರರಲ್ಲಿ ಶೈವ ವಾಮ ಪಂಥಗಳಿಂದ ಸಿಡಿದು ತನ್ನ ಶರಣ ಧರ್ಮವನ್ನು ನೆಲೆಸಿಕೊಂಡರೆ ಇಲ್ಲಿ ಇಸ್ಲಾಂದಿಂದ ಸಿಡಿದು ಸೂಫಿಯಾಗಿ ನೆಲೆಸಿಕೊಂಡಿತು. ಸಾಮಾಜಿಕ ಮತ್ತು ರಾಜಕೀಯ ಸ್ವರೂಪಗಳಲ್ಲಿ ಹಿಂದೂ ಮುಸಲ್ಮಾನರ ನಡುವೆ ಧಂಗೆ ನಡೆದರೂ, ಆಧ್ಯಾತ್ಮಿಕ ಪ್ರವೃತ್ತಿಯಲ್ಲಿ ಈ ಸಾಮರಸ್ಯಕ್ಕೆ ಬಾಧೆ ಉಂಟಾಗಲಿಲ್ಲ. ಸೂಫಿ, ನಾಥ ಹಾಗೂ ವೀರಶೈವ ತಾತ್ವಿಕಗಳನ್ನು ಹೊಂದಿಕೆಯಾಗಿ, ನೋಡಿದಾಗ ಒಂದಕ್ಕೊಂದು ಕಲಬೆರಕೆಯಾದಂತೆ ಕಂಡುಬರುವುದು. ಇಸ್ಲಾಂ ಮತ್ತು ಹಿಂದೂ ಧರ್ಮಗಳನ್ನು ಅವಲೋಕಿಸುವಾಗ ಇಸ್ಲಾಂದಲ್ಲಿ ಕಾಣಬರುವ ಧರ್ಮದ ಉಪಟಳತೆ ಮತ್ತು ಬಲತ್ಕಾರಗಳು ಉಳಿದ ಯಾವುದೇ ಧರ್ಮದಲ್ಲಿ ಕಾಣಬರುವುದಿಲ್ಲ. ವಚನಕಾರರಲ್ಲಿ ತತ್ವಚಿಂತನೆಗೈದ ಬಳಿಕ ಅದನ್ನು ಆಚರಿಸಬಹುದಾಗಿತ್ತು. ಆದರೆ "ಮುಸಲ್ಮಾನರ ಆಳ್ವಿಕೆಯ ಉಪಟಳದ ಕಾಲದಲ್ಲಿ ಇತರರು ತಮ್ಮ ಧರ್ಮಾಚರಣೆಯನ್ನು ಮತ್ತು ದೇವಾಲಯಗಳನ್ನು ರಕ್ಷಿಸಿಕೊಳ್ಳಲು ಮುಸಲ್ಮಾನಿ ಸಂಕೇತಗಳನ್ನು ಬಳಕೆಯಲ್ಲಿ ತೆಗೆದುಕೊಂಡರು."[೭] ಹೀಗೆ ಬದುಕಿನ ಅನಿವಾರ್ಯತೆಯಾಗಿ ಈ ಸೂಫಿ ತಲೆಎತ್ತಲು ಒಂದು ಕಾರಣವಾಗಿರಬಹುದು. ಈ ತತ್ವ ಅರಬ್ಬಿಯಾ, ರೂಮಿ, ನಜೀರ, ಜಾಯಸೀ, ಬಾಬಾ ಫರೀದ, ಮುಂತಾದವರ ಕಾವ್ಯಗಳನ್ನು ಬಂದೇನವಾಜ, ಧಾರುಶುಕು ಮುಂತಾದವರ ವಿದ್ವತ್ತನ್ನು ಗೂಗಿಯ ಬಹ್ರಿ ಬರೆದ ಗ್ರಂಥ 'ಭಾಂಗಾಬ್ ನಾಮಾ', ಎರಡನೇ ಇಬ್ರಾಹಿಂ ಬರೆದ 'ಕೀತಾಬೆ ನವರಸ್ ', ಫೆರಿಸ್ಥಾನ ಬರೆದ 'ತಾರಿಖ್ ಎ ಫೆರಿಸ್ತಾ' ಮುಂತಾದ ಗ್ರಂಥಗಳನ್ನು ಒಳಗೊಂಡಿದೆ. ವಚನಕಾರರಲ್ಲಿ ವಚನ ಗ್ರಂಥಗಳೇ ತಾತ್ವಿಕ ಗ್ರಂಥಗಳಾದರೆ ಇಲ್ಲಿ ಬೇರೆ ಬೇರೆ ಸೂಫಿಗಳು ಬರೆದ ಇವು ತಾತ್ವಿಕ ಗ್ರಂಥಗಳಾಗಿವೆ. ಆಳಂದೆಯ ಲಾಡ್ಲಾಮಶಾಯಿಕ್, ಎರಡನೇ ಇಬ್ರಾಹಿಂ, ರುಕ್ಮಾಂಗದ ಪಂಡಿತ ಇವರು ಮರಾಠಿಯಲ್ಲಿಯೂ ಕೂಡಾ ಪ್ರಸ್ತುತರಾಗಿದ್ದಾರೆ. ನಾಗೇಶ ಸಂಪ್ರದಾಯ ಮತ್ತು ಬಿಯಾಬಾನಿ ಶೇಖರರ 'ಅಲಕ್ ನಿರಂಜನ್', ಸೇತು ಮಾಧವರಾವ್ ಪಗಡಿ ಇವರ ಸೂಫಿ ಮುಂತಾದವುಗಳು ಒಂದಕ್ಕೊಂದು ಹೊಂದಿಕೆಯಾಗಿವೆ.

ವಚನಕಾರರಲ್ಲಿ ಅವರದೇ ಆದ ಆಚಾರ - ವಿಚಾರ ವೇಷ - ಭೂಷಣಗಳು ಇದ್ದಂತೆ, ಯಾವುದೇ ಪಂಥದ ಜೊತೆ ಹೊಂದಾಣಿಕೆ ಮಾಡಿಕೊಳ್ಳುವ ಅನಿವಾರ್ಯತೆ ಕಂಡುಬರುವುದಿಲ್ಲ. ಆದರೆ ಸೂಫಿಗಳಲ್ಲಿ ಈ ಒಂದೇ ತರಹದ ಆಚಾರ - ವಿಚಾರಗಳು ಇಲ್ಲದೇ ಇಸ್ಲಾಂ ಮತ್ತು ಹಿಂದೂ ಪದ್ಧತಿಯು ಸಂಕರ ಎಲ್ಲಿ ಕಂಡು ಬರುವುದೋ ಅದು ಸೂಫಿ ಅನಿಸಿಕೊಳ್ಳುವಂತಿದೆ. ಹೈದರಾಬಾದ ಕರ್ನಾಟಕದ ವ್ಯಾಪ್ತಿಯಲ್ಲಿಯೇ ಬಹುತರವಾದ ಸೂಫಿ ನೆಲೆಗಳನ್ನು ಕಂಡಷ್ಟು ಕರ್ನಾಟಕದಲ್ಲಿ ಉಳಿದ ನೆಲೆಗಳಲ್ಲಿ ಕಡಿಮೆಯಾಗಿ ಕಾಣುವದು. ಇದಕ್ಕೆ ಕಾರಣ ಮುಸಲ್ಮಾನೀಕರಣ ಇಲ್ಲವೇ ಸೂಫೀಕರಣ. ಸೈಯದ್ ಅತ್ತಾರ ಅಬ್ಬಾಸ್ ರಿಜ್ವಿ ಹೇಳುವಂತೆ ಈ ಸೂಫಿ ಪಂಥ ಕೇವಲ ಭಾರತದ ಬೇರೆ ಬೇರೆ ಪಂಥಗಳೊಂದಿಗೆ ಹೊಂದಿಕೆಯಾಗಿದ್ದಷ್ಟೇ ಅಲ್ಲ, ಅರಬ್ ರಾಷ್ಟ್ರಗಳಲ್ಲಿಯೂ ಕೂಡಾ ಇದು ಪ್ರಚಲಿತವಿತ್ತು ಎಂದು ತಿಳಿದುಬರುವುದು. ವಚನಕಾರರಲ್ಲಿಯ ತಾತ್ವಿಕ ಚಿಂತನೆ, ಕಾವ್ಯರಚನೆ, ವಿದ್ವತ್ತು, ಯೋಗಿಕ ಸಾಧನೆ, ತಮ್ಮ ಸ್ವಶಕ್ತಿಯ ಮೂಲಕ ಸಾಮಾಜಿಕ, ಧಾರ್ಮಿಕ, ರಾಜಕೀಯ ವ್ಯವಸ್ಥೆಯನ್ನು ಎದುರಿಸಿ ಬದುಕಿದಂತೆ ಅಥವಾ ಅದನ್ನು ಪರ್ಯಾಯವಾಗಿ ಉಪಯೋಗಿಸಿಕೊಂಡು ಬದುಕಿದರೆ ಸೂಫಿಗಳಲ್ಲಿಯೂ ಕೂಡಾ ಈ ವಿಚಾರವನ್ನು ಕಾಣಬಹುದು. ವಚನಕಾರರಲ್ಲಿ ಕೆಳಜಾತಿಯಿಂದ ವೈದಿಕರವರೆಗೆ ಯಾವುದೇ ಜಾತಿ ಭೇದವಿಲ್ಲದ ವಚನಕಾರರನ್ನು ಕಂಡಂತೆ ಸೂಫಿಗಳಲ್ಲಿ ನಾಥ, ಇಸ್ಲಾಂ, ಕೆಳಜಾತಿಯವರನ್ನು ಕಾಣಬಹುದು. ಹಿಂದೂ ಇಸ್ಲಾಂ ಬಗೆಗೆ ಚಿಂತನೆ ಕರ್ನಾಟಕದಲ್ಲಿ ಈ ಇಸ್ಲಾಂ ಸರಳೀಕರಣಗೊಂಡು ಉಳಿದ ಧರ್ಮಗಳ ಜೊತೆ ಹೊಂದಾಣಿಕೆಯಾಗಿ ಬದುಕಲು ಸೂಫೀಕರಣ ಅನುವು ಮಾಡಿಕೊಟ್ಟಿತು. ಹಿಂದೂ - ಮುಸ್ಲಿಂ ಸಂಕರರ ಸ್ಥಿತಿ ಸೂಫಿಗಳಲ್ಲಿ ಕಂಡುಬರುವುದಾದರೆ ವಚನಕಾರರಲ್ಲಿ ಯಾವುದೇ ಅನಿವಾರ್ಯತೆಯಿಂದ ಸಂಕರ ಸ್ಥಿತಿಯನ್ನು ಪಡೆದುಕೊಳ್ಳಲಿಲ್ಲ.

೧೨ನೇ ಶತಮಾನದಲ್ಲಿ ಆಗಿರುವ ವಚನ ಚಳುವಳಿಯಲ್ಲಿ ಮೂಡಿಬಂದ ಜಾತೀಯತೆಯ ನಿವಾರಣೆ ಮುಂದಿನ ಶತಮಾನಗಳಲ್ಲಿ ಮುಂದುವರೆಯಲಿಲ್ಲ. ಆದರೆ ಸೂಫಿಗಳಲ್ಲಿ ಬಹುತೇಕ ಸಂತರೆಲ್ಲಾ ಕೆಳವರ್ಗದ ಸಂತರೇ ಆಗಿದ್ದಾರೆ. ಇದಕ್ಕೆ ಕಾರಣ ಯಾವುದೇ ಜಾತಿಯ ನಿರ್ಬಂಧ ಇಲ್ಲದಿರುವುದು. ಈ ಸೂಫಿ ಪರಂಪರೆಯಲ್ಲಿ ಗುರು - ಶಿಷ್ಯ ಸಂಬಂಧವೂ ಕೂಡಾ ಬೇರೆ ಬೇರೆ ಜಾತೀಯತೆಯನ್ನು ಹೊಂದಿದೆ. ಅಮೀನುದ್ದೀನ್ ಮತ್ತು ಶಿರಹಟ್ಟಿ ಫಕೀರೇಶನ ಸಂಬಂಧ, ಬಂದೇನವಾಜ್ ಮತ್ತು ಸಾವಳಗಿ ಶಿವಲಿಂಗರ ಸಂಬಂಧ, ಅಮೀನಧರ್ಗಾ ಮತ್ತು ಮಂಟೇಸ್ವಾಮಿಗಳ ಸಂಬಂಧ ಇವುಗಳು ಸಾಕ್ಷಿಗಳಾಗಿವೆ. ಆದರೆ ವಚನಕಾರರಲ್ಲಿ ಇಂತಹ ರೂಪಗಳು ಕಂಡುಬರುವುದಿಲ್ಲ. ಬಸವೋತ್ತರ ಯುಗದ ಕೆಲವು ವಚನಕಾರರಲ್ಲಿ ಸೂಫೀಕರಣದ ಪ್ರಭಾವವನ್ನು ಗುರುತಿಸಬಹುದು. ವಚನಕಾರರ ಧರ್ಮ ಇಲ್ಲಿಯೇ ಹುಟ್ಟಿ ಇಲ್ಲಿಯೇ ಬೆಳೆದದ್ದಾದರೆ ಸೂಫಿ ತತ್ವ ಮೂಲತಃ ಅರೇಬಿಯಾ, ಪರ್ಶಿಯಾ, ಇರಾಕ್, ಅಫಘಾನಿಸ್ತಾನ, ಮುಂತಾದ ಕಡೆಯಿಂದ ಬಂದದ್ದಾಗಿದೆ. ಹಲವಾರು ಸಾರೆ ಸೂಫಿಗಳ ಹೆಸರಿನ ಜೊತೆಗೆ ಅವರು ಮೂಲತಃ ಬಂದ ಸ್ಥಳದ ಹೆಸರು ಕೂಡಿಕೊಂಡಿದೆ. ಬಾಗ್ದಾದ್‌ನಿಂದ ಬಂದ ಸುಲೇಮಾನ್ ಬಾದಶಹಾ ಖಾದ್ರಿ ಬಗ್ದಾದಿ, ಮದೀನಾದಿಂದ ಬಂದ ಉಳ್ಳಾಲದ ಮಹಮ್ಮದ್ ಶರೀಫುಲ್ಲಮದನಿ ಹೀಗೆ ಅನೇಕ ಸೂಫಿಗಳ ಹೆಸರುಗಳು ಸ್ಥಳವನ್ನು ಗುರುತಿಸುತ್ತವೆ. ಸೂಫಿಗಳಲ್ಲಿ ಈ ರೀತಿ ಕಂಡರೆ ವಚನಕಾರರಲ್ಲಿ ಅವರು ಮಾಡುತ್ತಿರುವ ಕಾಯಕಗಳು ಹೆಸರಿನಿಂದ ಕೂಡಿಕೊಂಡಿವೆ. ಉದಾಹರಣೆಗೆ ಮೋಳಿಗೆ ಕಾಯಕದ ಮೋಳಿಗೆ ಮಾರಯ್ಯ, ನುಲಿಯ ಕಾಯಕದ

ಚಂದಯ್ಯ, ಮಡಿವಾಳ ಕಾಯಕದ ಮಾಚಯ್ಯ, ಬಾಚೀ ಕಾಯದ ಬಾಚರಸ ಮುಂತಾದವುಗಳು. ವಚನಕಾರರಲ್ಲಿರುವ ಸ್ಥಾವರಲಿಂಗ ಪೂಜಾ ನಿರಾಕರಣೆ ಇದ್ದಂತೆ ಸೂಫಿಗಳು ಕೂಡಾ ಮಸೀದಿಗಳಂತಹ ಸ್ಥಾವರಗಳನ್ನು ಕಟ್ಟಲಿಲ್ಲ. ವಚನಕಾರರಂತೆ ಶಿಷ್ಯ ಪರಂಪರೆ, ತತ್ವ ಪರಂಪರೆ, ಗ್ರಂಥಗಳ ಬಗ್ಗೆ ಗೌರವ, ಮಸೀದಿಗಳಲ್ಲಿ ಮಾಡುವ ನಮಾಜು, ಅರ್ಥರಹಿತವಾದದ್ದು ಎಂದಂತೆ ವಚನಕಾರರು ಕೂಡಾ ಗುಡಿ ಸಂಸ್ಕೃತಿಯನ್ನು ತಿರಸ್ಕರಿಸಿ ನಿರಾಕಾರ ಸ್ವರೂಪ ಇಷ್ಟಲಿಂಗವನ್ನು ಪೂಜಿಸಿದರು. ಅಲ್ಲಲ್ಲಿ ಸಾಕಾರ ಸ್ವರೂಪ ಶಿವನನ್ನು ಕಂಡರೂ ಕೂಡಾ ಬಹುತೇಕವಾಗಿ ನಿರಾಕಾರ ಶಿವನ ಉಪಾಸನೆಯನ್ನೇ ಮಾಡುವರು. ಈ ನಿರಾಕಾರತ್ವದಲ್ಲಿ ಇಬ್ಬರ ದೇಹವು ಒಂದೆ. ಧರ್ಮಪ್ರಚಾರ, ಮತಾಂತರಗಳಲ್ಲಿ ಪರಿಣಾಮ ಹೊಂದಬಹುದಾದರೆ ಅನುಭಾವ ಪದ್ಧತಿಯಲ್ಲಿ ಸ್ವಇಚ್ಛೆಯಿಂದ ದೀಕ್ಷೆಯ ಪರಂಪರೆಯನ್ನು ಅನುಸರಿಸಿದೆ. ಮೊದಮೊದಲು ಸೂಫಿಗಳು ಹೊರಗಿನಿಂದ ಬಂದವರಾದರೂ ನಂತರದಲ್ಲಿ ಇಲ್ಲಿಯೇ ಹುಟ್ಟಿಬೆಳೆದರು. ೧೨ನೇ ಶತಕದಲ್ಲಿ ವಚನಕಾರರ ಚಳುವಳಿ ಪ್ರಾರಂಭವಾದಂತೆ ಸೂಫಿ ವಾದ ೧೧ನೇ ಶತಮಾನದಲ್ಲಿ ಭಾರತಕ್ಕೆ ಬಂದದ್ದು ತಿಳಿಯುತ್ತದೆ. ''ಗಜನಾ (ಅಫಘಾನಿಸ್ತಾನ) ದಿಂದ ಬಂದ ಶೇಖ್ ಅಬುಲ್ ಹಸನ್ ಹುಜ್ವೇರಿಯಾ ಭಾರತಕ್ಕೆ ಆಗಮಿಸಿದ (೧೦೭೦) ಮೊದಲ ಸೂಫಿ ಇವನ ಸಮಾಧಿ ಲಾಹೋರಿನಲ್ಲಿದೆ.[೮] ವ್ಯಾಪಾರಿ ಸಮುದಾಯದ ಮೂಲಕ, ಆಳುವ ಅರಸರ ಮೂಲಕ, ಇಸ್ಲಾಂ ಕೂಡಾ ಅರಬ್ ರಾಷ್ಟ್ರಗಳಿಂದ ಬಂದುದಾಗಿದೆ. ಹಾಗೆ ಸೂಫಿ ಬಂದಿತು. ಇಸ್ಲಾಂ ಮತ್ತು ಸೂಫಿ ವಾದಗಳು ಉತ್ತರದ ರಾಜಕೀಯ ವಿಸ್ತರಣಾ ಚಟುವಟಿಕೆಗಳ ಮುಖಾಂತರವಾಗಿ ದಕ್ಷಿಣದತ್ತ ಬಂದಿತು. ಆದರೆ ಪರ್ಶಿಯಾದಲ್ಲಿ ಸೂಫಿವಾದ ತಲೆ ಎತ್ತಿದ್ದು ೧೧ನೇ ಶತಮಾನದಲ್ಲಿ.

ಕರ್ನಾಟಕಕ್ಕೆ ಸೂಫಿಗಳ ಆಗಮನ ಕಡಲು ವ್ಯಾಪಾರಿಗಳ ಮೂಲಕ, ಸೈನಿಕ ದಂಡಯಾತ್ರೆಗಳ ಧರ್ಮ ಯೋಧರ ರೂಪದಿಂದ, ಒತ್ತಡದಿಂದ ಹೊಸ ಆಶ್ರಯ ರೂಪದ ರಾಜಕೀಯ ಆಹ್ವಾನಿತ ರಾಜಗುರುಗಳ ರೂಪದಲ್ಲಿ, ಜ್ಞಾನದ ಹುಡುಕಾಟ, ಗುರುವನ್ನೋ ಅಥವಾ ಶಿಷ್ಯರನ್ನೋ ಹುಡುಕಿಕೊಂಡು ಬಂದಿತು. ಸೈನಿಕ ಸೇವೆಯನ್ನು ಮಾಡುವ 'ಜೆಹಾದ್' ಧರ್ಮಯುದ್ಧ ಅಂದರೆ ದೊರೆ ಮತ್ತು ಧರ್ಮಕ್ಕಾಗಿ ಯುದ್ಧವನ್ನು ಮಾಡಿದ ಸೂಫಿಗಳು ಧರ್ಮಯುದ್ಧವನ್ನು ಮಾಡಿ ತಮ್ಮ ಸಾಮ್ರಾಜ್ಯ ವಿಸ್ತರಣೆಗಾಗಿ ಸತ್ತು ಸೇಹಿದ (ಹುತಾತ್ಮ)ರಾದರು. ಈ ಹುತಾತ್ಮ ಪರಂಪರೆ ಸಗರ, ಕಾಜುರ, ಬಾಬಾ ಬುಡನಗಿರಿ, ತಾಳಿಕೋಟೆ, ಗೋರಿಗಂಡಿಗಳಲ್ಲಿ ಸಾಮೂಹಿಕ ಸಮಾಧಿಗಳನ್ನು ಕಾಣುತ್ತೇವೆ. ಆದರೆ ವಚನಕಾರರು ಯಾವುದೇ ಸಾಮ್ರಾಜ್ಯ ವಿಸ್ತರಣೆಗೆ ಹೋರಾಡಿದವರಲ್ಲ. ಧಾರ್ಮಿಕದಲ್ಲಿ ರಾಜಕೀಯವನ್ನು ಕೂಡ ತಂದವರಲ್ಲ. ರಾಜಕೀಯದಲ್ಲಿ ಧರ್ಮ ಇರಬೇಕು, ಆದರೆ ಧರ್ಮದಲ್ಲಿ ರಾಜಕೀಯ ಇರಬಾರದು ಅನ್ನುವ ರೀತಿ ಇವರದ್ದಾಗಿದೆ. ಆದರೆ ಸೂಫಿಗಳ ಧರ್ಮದಲ್ಲಿ ರಾಜಕೀಯವಿದೆ. ವಚನಕಾರರಲ್ಲಿ ವರ್ಣ ಸಂಕರದ ವಿರೋಧತೆಯನ್ನು ಬಿಟ್ಟರೆ ಯಾವುದೇ ರಾಜಕೀಯ ವಿಪ್ಲವಗಳನ್ನು ಅನುಭವಿಸಿಲ್ಲ. ಜಾತೀಯತೆಯನ್ನು ಹೋಗಲಾಡಿಸಲು ಶ್ರಮಿಸಿದರೇ ವಿನಹ ರಾಜ್ಯಕಟ್ಟಲು, ಕೆಡುವಲು ಇವರು ಸಹಾಕಾರಿಗಳಾಗಲಿಲ್ಲ. ಈ ಜಾತಿಯ ಸಂಕರ ಬಿಜ್ಜಳರಾಜ ಪ್ರಭುತ್ವದ ವಿಪ್ಲವಕ್ಕೆ ಕಾರಣವಾಯಿತ್ತಾದರೂ ಸೂಫಿಗಳಂತೆ ನೇರವಾಗಿ ರಾಜಕೀಯ ಹೊಂದಿಕೊಂಡಿಲ್ಲ. ಜಾತಿ ಸಂಕರದ ವಿಪ್ಲವದಿಂದ ವಚನ ಚಳುವಳಿ ಕೊನೆಗೊಂಡರೆ ಧರ್ಮಬದ್ಧರಲ್ಲದ ಸೂಫಿಗಳು ದೇಶದಿಂದ ಹೊರಹಾಕುವುದ

ರಲ್ಲಿ ತೃಪ್ತಿ ಕಂಡಿದೆ. ವಡಬಾಳದ ನಾಗನಾಥ (ಸೋಲಾಪುರ) ಬೀದರ ಸೀಮೆಯ ಮಾಣಿಕಪ್ರಭು, ಬಕಪ್ರಭು ಮುಂತಾದವರಲ್ಲಿ ನಾಶಿರುದ್ದೀನನ ದೊಸ್ತಾರ ಕಂಡುಬರುವುದು. ಸಾವಳಗಿ ಶಿವಲಿಂಗೇಶ್ವರ, ಬಂದೇ ನವಾಜ್, ಶಿರಹಟ್ಟಿ ಫಕೀರೇಶ ಇವರ ಆಚರಣೆಯಲ್ಲಿ ಅಮೀನುದ್ದೀನ್‌ನ ದೀನ ಜಗಾಯಿಸಲಾಗುತ್ತದೆ. ಅಂದರೆ ಚಿಸ್ತ ಸೂಫಿಗಳು ದೇಶೀಯ ಸಂತರ ಜೊತೆ ಆತ್ಮೀಯ ಸಂಬಂಧ ಪಡೆದಿದ್ದರು. ಬಿಜಾಪುರದ ಶಾಮೀರಂಜಿ, ದೆಹಲಿಯ ನಿಜಾಮುದ್ದೀನ್, ಪಂಜಾಬ್‌ದ ಬಾಬಾ ಫರೀದ್, ಬಳ್ಳಾರಿಯ ಹೊನ್ನೂರ ಸ್ವಾಮಿ ಮುಂತಾದ ಚಿಸ್ತ ಸೂಫಿಗಳು ಸಾಹಿತ್ಯ, ಸಂಗೀತದಲ್ಲಿ ದೇಶೀಯ ಸಂತರೊಂದಿಗೆ ಹೊಂದಿಕೊಳ್ಳುತ್ತಾರೆ. ಇಸ್ಲಾಂದ ಸರಳೀಕರಣಗೊಂಡ ದೇಶಿಯ ಅನುಭಾವ ಪಂಥದ ಜೊತೆ ಹೊಂದಿಕೊಂಡ ಈ ಸೂಫಿಗಳು ಗುರು - ಶಿಷ್ಯತ್ವದಲ್ಲಿ ಜಾತೀಯತೆಯನ್ನು ನಿವಾರಿಸುತ್ತವೆ. ಕಾಡ ಸಿದ್ದೇಶ್ವರ - ಸಾಯಬಣ್ಣತಾತ, ಶೇಖಶಾವಲಿ - ಗಾದಿಲಿಂಗ, ಅಲ್ಲೀಸಾಬು - ಶಿಲವೇರಿಶಿವಪ್ಪ, ಕಡಕೋಳ ಮಡಿವಾಳಪ್ಪ - ಚನ್ನೂರ ಜಲಾಲಸಾಬ್, ರುಕ್ಮಾಂಗದ ಪಂಡಿತ - ಇಬ್ರಾಹಿಂ ಆದಿಲ್ ಶಾಹಿ, ನಂಗಾಶಾಹ - ಮಹಿಪತಿರಾಯ ಮುಂತಾದ ಗುರು - ಶಿಷ್ಯರ ಸಂಪ್ರದಾಯಗಳಿಗೆ ಯಾವುದೇ ಮತೀಯತೆ ಅಡ್ಡಬರಬಾರದೆಂಬುದಕ್ಕೆ ಸೂಫಿವಾದ ಎನಿಸಿಕೊಂಡಿದೆ. ಈ ಸೂಫಿ ಹಲವಾರು ಶತಮಾನಗಳವರೆಗೆ ಸಾಗಿ ಬಂದಿದೆ. ಇಷ್ಟು ಮಾತ್ರ ಇಸ್ಲಾಂನ್ನು ಬಿಟ್ಟು ಸೂಫೀಕರಣವನ್ನು ಹೇಳಲಿಕ್ಕೆ ಬರುವುದಿಲ್ಲ. ಇದಕ್ಕೆ ಕಾರಣ ಸೂಫಿಯ ಬೇರು ಇಸ್ಲಾಂದಲ್ಲಿದೆ. ಈ ತತ್ವ ದ್ವಿಭಾಷಾ ತೃತೀಯಭಾಷಾದಲ್ಲಿ ಕಂಡುಬಂದರೆ ವಚನಕಾರರ ತತ್ವವು ಅಪ್ಪಟವಾಗಿ ಕನ್ನಡವನ್ನೇ ಉಪಯೋಗಿಸಿದೆ. ಇವರಲ್ಲಿ ಯಾವುದೇ ಧರ್ಮದಿಂದ ಸರಳೀಕರಣಗೊಂಡ ಅಥವಾ ಯಾವುದೇ ಧರ್ಮದ ಜೊತೆ ಅನಿವಾರ್ಯವಾಗಿ ಹೊಂದಿಕೊಳ್ಳುವ ಮನೋಧರ್ಮ ಇಲ್ಲವೇ ಇಲ್ಲ. ತಮ್ಮ ತತ್ವಕ್ಕೆ ದಕ್ಕೆ ಬಂದಾಗ ಆ ಸ್ಥಳವನ್ನೇ ತ್ಯಜಿಸಿದರೇ ವಿನಹ ತತ್ವವನ್ನು ಬಿಟ್ಟುಕೊಡಲಿಲ್ಲ ಇದು ವಚನಕಾರರ ನಿಷ್ಠೆ, ಸೂಫಿಗಳಲ್ಲಿ ಇದನ್ನು ಕಾಣಲಾಗುವುದಿಲ್ಲ.

ವಚನಕಾರರು ಬಹುತೇಕವಾಗಿ ಹಳ್ಳಿಗಳಲ್ಲಿ ಆಶ್ರಯ ಪಡೆದರೆ, ಸೂಫಿಗಳು ನಗರವಾಸಿ ಸುಖಮಯ ಮಧುರ ಜೀವನವನ್ನು ನಡೆಸುವವರಾಗಿದ್ದರು. ಇದಕ್ಕೆ ಆರ್ಥಿಕ ಹಿನ್ನಲೆಯು ಕೂಡಾ ಉಂಟು. ವಚನಕಾರರಲ್ಲಿ ಕಾಣುವ ಸತ್ಯಶುದ್ಧಕಾಯಕ ಸೂಫಿಗಳಿಗೆ ಸಂಬಂಧಿಸಿಲ್ಲ. ವಚನಕಾರರಲ್ಲಿ ನಡೆ - ನುಡಿ ಒಂದಾದರೇ, ಸೂಫಿಗಳಲ್ಲಿ ನುಡಿ ಪ್ರಧಾನವಾಗಿದೆ. ಬಗ್ದಾದ್, ಕಂದಹಾರ್, ಲಾಹೋರ್, ದೆಹಲಿ ಇವು ಉತ್ತರದ ಸೂಫಿನೆಲೆಗಳಾದರೆ ದೌಲತಾಬಾದ್, ಗುಲ್ಬರ್ಗಾ, ಬೀದರ, ಬಿಜಾಪುರ ಇವು ದಕ್ಷಿಣದ ನೆಲೆಗಳಾಗಿವೆ. ಹಲವಾರು ಸಂಸ್ಕೃತಿ, ಜಾತಿಮತ ಭಾಷೆಗಳುಳ್ಳ ಈ ಪಂಥ ಸಾಂಸ್ಕೃತಿಕ ಕಲಬೆರಕೆ ಉರ್ದುವಿನಂತಹ ಭಾಷೆಯನ್ನು ಹೊಂದಿ ಏಕರೂಪದ ಆಚರಣೆಯನ್ನು ಕೂಡಾ ಹೊಂದಿಲ್ಲ. ಈ ಸೂಫಿ ತತ್ವಗಳು ಸಂಕರ ರೂಪದಲ್ಲಿ ಹುಟ್ಟಿದವುಗಳು. ಮೂಲತ: ಇಸ್ಲಾಂ ದ್ವೈತಿಯಾದಾಗ ಈ ಸೂಫಿ ತತ್ವ ಅದ್ವೈತವನ್ನು ಅನುಸರಿಸಿ ಸಾಂಪ್ರದಾಯಿಕ ಇಸ್ಲಾಂದ ವಿರೋಧವನ್ನು ಕಟ್ಟಿಕೊಂಡಿದೆ. ಅರಬಸ್ತಾನದಲ್ಲಿ ಜ್ಞಾನ ಮಾರ್ಗವಾಗಿ, ಪರ್ಸಿಯಾದಲ್ಲಿ ಪ್ರೇಮಮಾರ್ಗವಾಗಿ ಇದ್ದ ಈ ಸೂಫಿ ಭಾರತದ ಭಕ್ತಿ ಪಂಥಗಳ ಜೊತೆ ಹೊಂದಿಕೊಂಡು ಅನುಭಾವ ಪಂಥವಾಗಿ ಗೋಚರಿಸಿತು. ೧೨ನೇ ಶತಮಾನದಲ್ಲಿ ಹೆಚ್ಚುಹೆಚ್ಚಾಗಿ ಭಾರತಕ್ಕೆ ಬಂದ ಸೂಫಿಗಳು ನಂತರದಲ್ಲಿರುವ ಮಹಾರಾಷ್ಟ್ರದ ಮಹಾನುಭಾವ ಪಂಥ, ಬಂಗಾಲದ ಚೈತನ್ಯ ಪಂಥ, ಓರಿಸ್ಸಾದ ಸತ್ನಾಮೀಗಳು, ಪೂರ್ವಭಾರತದ ಕಬೀರ ಪಂಥಿಗಳೊಂದಿಗೆ ಹೊಂದಿಕೊಂಡು ಕಾಶ್ಮೀರದ ಶೈವಯೋಗಿಗಳ

ಜೊತೆ ಕೂಡಾ ಒಡನಾಟ ಹೊಂದಿ 'ಋಷಿನಾಮ' ಎಂದು ಕರೆಸಿಕೊಳ್ಳುತ್ತಿದ್ದರು. ಶೇಖ್ ನ್ಯೂರುದ್ದೀನ್ (೧೪೩೯) ನಂದಋಷಿಯಾಗಿ ಪರಿಣಮಿಸುತ್ತಾನೆ. ಹಾಗೆ ಕರ್ನಾಟಕದಲ್ಲಿ ಅಲ್ಲಮಪ್ರಭುವಿನ ಲಿಂಗಾಯತಪಂಥ, ಸಿದ್ಧ ಪರಂಪರೆ ಜೊತೆಗೆ, ನಾಥ ಪಂಥ ಮುಂತಾದವುಗಳು ಒಡಗೂಡಿ ಈ ತತ್ವ ಹಲವು ಭಾಷೆಗಳ ಸಂಕರ ರೂಪಿಯಾಗಿದೆ. ಹಲವು ಪಂಥಗಳ ಆಚಾರ - ವಿಚಾರಗಳನ್ನು ಹೊಂದಿ ಹಲವು ಭಾಷಾ - ಸಂಸ್ಕೃತಿಯಾದ ಈ ತತ್ವ ವಚನಕಾರರಿಗಿಂತ ಸ್ವಲ್ಪ ವಿಭಿನ್ನವಾಗಿದೆ. "ಈ ಮಿಶ್ರ ಸಂಪ್ರದಾಯದ ಸೂಫಿ ಸಂತರುಗಳಲ್ಲಿ 'ಅಹಂ ಬ್ರಹ್ಮಾಸ್ಮಿ' ತತ್ವವು ಅಡಗಿದೆ. ಅನಲ್ ಹಕ್ ಎಂದರೆ ಅವನೇ ನಾನು ಅಥವಾ ನಾನೇ 'ಅಲ್ಲಾಹ' ಎಂದು ಹೇಳಿದ ಮನ್ಸೂರ್ ಅಲ್ - ಹಲ್ಲಾಜನು ಸೂಲಕ್ಕೇರಿದ ಘಟನೆಯನ್ನು ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು. ಇಸ್ಲಾಂ ಧರ್ಮದಲ್ಲಿ ಅಲ್ಲಾಹನ ಸಮತ್ವಕ್ಕೆ ಈ ಸೃಷ್ಟಿಯ ಯಾವ ವಸ್ತುವು ಸಮನಾಗಲಾರದು ಎಂಬ ಸ್ಪಷ್ಟ ನಿಲುವು ಇರುವುದನ್ನು ಎಲ್ಲರೂ ತಿಳಿದ ವಿಷಯವೇ ಆಗಿದೆ. ಸೂಫಿ ಸಂತರುಗಳು ಇಸ್ಲಾಂ ಧರ್ಮವನ್ನು ಪೂರ್ಣವಾಗಿ, ಹೃತ್ಪೂರ್ವಕವಾಗಿ ನಂಬಿರುವವರಾಗಿದ್ದರೂ ಅವರಲ್ಲಿ ಸೋಹಂ (ಅನಲ್ ಹಕ್) ತತ್ವವು ಅವರ ಅಂತರಂಗದಲ್ಲಿ ಮನೆ ಮಾಡಲು ಇದಕ್ಕೆ ಕಾರಣ ಭಾರತದ ಪ್ರಭಾವವೇ ಆಗಿದೆ. ಸೂಫಿ ಮತ್ತು ಭಾರತದ ಸಂಬಂಧದಿಂದ ಈ ಕೊಡುಗೆಯು ಅವರಿಗೆ ಲಭ್ಯವಾಗಿವೆ. ಎನ್ನುವುದಕ್ಕೆ ಅನೇಕ ಪುರಾವೆಗಳು ಸಿಗುತ್ತವೆ.[೯] ಅಂದರೆ ಸೂಫಿಗಳು ಇಸ್ಲಾಂದವರಾದರೂ ಕೂಡಾ ತಾತ್ವಿಕವಾಗಿ ಸ್ವಲ್ಪ ವಿಭಿನ್ನ ರೀತಿಯಿಂದ ಬೇರೆಯಾಗಿಯೇ ನಿಲ್ಲುವರು. ಯಾವಾಗಲೂ ದಾಸನಾಗಿಯೇ ಇರುವ ಮನುಷ್ಯ ಎಂದಿಗೂ ಕೂಡಾ ಭಗವಂತನೊಂದಿಗೆ ಕೂಡಿಕೊಳ್ಳಲಾಗದು ಎನ್ನುವುದಕ್ಕೆ ತೃಪ್ತಿಪಡದ ಸೂಫಿಗಳು ಭಗವಂತನಲ್ಲಿ ಕೂಡಿಕೊಳ್ಳುವ 'ಅಹಂ ಬ್ರಹ್ಮಾಸ್ಮಿ', ಸೋಹಂ (ನಾನೇ ಶಿವ) ಅನ್ನುವ ಭಾರತದ ಆಧ್ಯಾತ್ಮಿಕ ಪ್ರಭಾವ ಈ ಸೂಫಿಗಳ ಮೇಲೆ ಆದಂತಿದೆ. ವಚನಕಾರರಲ್ಲಿರುವ ಅದ್ವೈತ ಭಾವನೆ ಹಾಗೂ ಜೀವನದ ಕೊನೆಯ ಗುರಿಯಲ್ಲಿ ಸ್ವಲ್ಪ ಮಾತ್ರ ವ್ಯತ್ಯಾಸ ಕಾಣಬಹುದು. ವಚನಕಾರರಲ್ಲಿ ಈ ಐಕ್ಯತ್ವ ಲಿಂಗಾಂಗ ಸಾಮರಸ್ಯ ಎಂದಾದರೆ ಸೂಫಿಗಳಲ್ಲಿ 'ವಾಸಿಲೆರಬ್' ಎಂದಾಗಿದೆ. ಸೂಫಿಗಳು ನಾಥ ಪಂಥದ ಜೊತೆ ಹೊಂದಿ ಕೆಲವು ಆಚರಣೆಗಳನ್ನು ಪಡೆದುಕೊಂಡಿದೆ. ೧೧ನೇ ಶತಮಾನದಲ್ಲಿ ಈ ನಾಥರ ಪ್ರಭಾವ ಬಹಳಷ್ಟಿತ್ತು. ಮಂಗಳೂರಿನ ಕದರಿಬೆಟ್ಟ, ಬಂಗಾಲ ನೇಪಾಳಗಳಲ್ಲಿ, ಪಂಜಾಬ, ಗುಜರಾತ, ಸಿಂದ್, ಜಲಂದರ್, ರಾವಲ್ಪಿಂಡಿ, (ರಾವಲರು = ಸೂಫಿನಾಥರು), ಪೇಶಾವರ ಮುಂತಾದವು ಈ ಪರಂಪರೆಯ ಸ್ಥಳಗಳಾಗಿದ್ದವು. ಈ ನಾಥ ಮತ್ತು ಸೂಫಿಗಳ ಸಂಗಮ ಸ್ಥಿತಿಯನ್ನು ಧರಿಯಾನಾಥ ಅಥವಾ ಶೇಖ್ ತಾಹಿರ್, ಖಾಜಾಖಿಜ್ರ ಮುಂತಾದ ಸೂಫಿ ಹೆಸರುಗಳಾಗಿವೆ. ಧರಿಯಾನಾಥ ಶೇಖ್ ತಾಹಿರ್ (ಶೇಖ = ಸೂಫಿ ಗುರು) ಅಂದರೆ ನಾಥ ಹೆಸರುಗಳು ಮುಸ್ಲಿಂ ಹೆಸರುಗಳೊಂದಿಗೆ ಸೇರಿಹೋಗಿವೆ. ಕಾಯಾನಾಥ ಮುಸ್ಲಿಂರಲ್ಲಿ ಖಯಾಮುದ್ದೀನ್, ಮೋನಪ್ಪ ಮೌನೋದ್ದೀನ್ ಆಗಿ ಪರಿವರ್ತಿತಗೊಂಡಿವೆ. ಇವರ ದರ್ಗಾ ಮತ್ತು ಗುಡಿಗಳು ಪೇಶಾವರದಿಂದ ಕಾಬೂಲ್‌ದವರೆಗೆ ಕಾಣಬರುತ್ತವೆ. ದರ್ಗಾಗುಡಿ ಈ ಎರಡನ್ನು ಹೊಂದಿದ ಪದ್ಧತಿಗೆ ಕಾರಣ ಇವರು ಸತ್ತಾಗ ಹಿಂದೂ - ಮುಸ್ಲಿಂರು ಇವ ನಮ್ಮವ ಇವನಮ್ಮವ ಎಂದು ಜಗಳವನ್ನು ಪ್ರಾರಂಭಿಸಿದಾಗ ಇಬ್ಬರ ನಡುವೆ ಒಪ್ಪಂದವಾಗಿ ದರ್ಗಾಗುಡಿ ಎರಡನ್ನೂ ಕಟ್ಟಿಕೊಂಡರು. ಇದರಂತೆ ಗೋರಖನಾಥನ ಶಿಷ್ಯ ಗೂಗಾಫೀರ್ ಹೀಗೆ ಹಲವಾರು ನಾಥ ಸಂಪ್ರದಾಯಗಳ ಸಂತರು ಸೂಫಿ ಸಂತರಾಗಿದ್ದಾರೆ. ಈ ಸೂಫಿಗಳ ಮೇಲೆ ನಾಥರ ಪ್ರಭಾವವಾದಂತೆ ಹಲವಾರು ಭಕ್ತಿಪಂಥದ ಸಂತರ ಪ್ರಭಾವವೂ ಆಗಿದೆ. ಗೋರಖನಾಥನನ್ನು ಅವನ

ಶಿಷ್ಯಪರಂಪರೆಗಳು ಅಥವಾ ಮೋಷನ್ ಫಾನೀಯ 'ದಬಿಸ್ಥಾನ್ ' ಗ್ರಂಥದ ಪ್ರಕಾರ ಗೋರಕ್ಷನ ಹೆಸರು ಬಾಬರತನ್ ಹಾಜೀ ಎಂದಾಗಿದೆ.

ಹೀಗೆ ಪುರಾಣ ಸಂಸ್ಕೃತಿ ಸೂಫಿಗಳಲ್ಲಿ ಎದ್ದುಕಾಣುವವು. ಈ ಗೋರಖಪಂಥಗಳ ಘೋಷಣೆ "ಅಲಖ್, ಅಲಖ್ ನಿರಂಜನ್" ಇದು ಅಲಖ್ ಹಲ್ಲಾಜನು ಹೇಳಿದ 'ಅಲ್ಲಹಕ್ 'ದ ರೂಪಾಂತರವಾಗಿದೆ. ಈ ಗೋರಖ ಅಲ್ಲಮಪ್ರಭುವನ್ನು ಭೆಟ್ಟಿಯಾಗುತ್ತಾನೆ. ವಾದದಲ್ಲಿ ಸೋತು ಪ್ರಭುವಿನ ಪ್ರಭಾವಕ್ಕೊಳಗಾಗಿ ಯೋಗವಿದ್ಯೆಯನ್ನು ಕಲಿಯುವನು. ಸೂಫಿ ಪಂಥ ನಾಥ ಪಂಥದಿಂದ ಪ್ರಭಾವಕ್ಕೊಳಗಾದರೆ, ನಾಥ ಮತ್ತು ಸೂಫಿ ಪಂಥಗಳೆರಡು ಪ್ರಭುವಿನ ಪ್ರಭಾವಕ್ಕೆ ಒಳಗಾಗಿವೆ. ಪ್ರಭು ಈ ಲಿಂಗಾಯತ ದಿಗ್ದರ್ಶಕ ಆದರೆ ವಚನಕಾರರು ತಮ್ಮದೇ ಆದ ಪ್ರಭಾವವನ್ನು ಇತರರ ಮೇಲೆ ಹಾಕಿದ್ದೇ ಹೆಚ್ಚು, ಮತ್ತೊಬ್ಬರ ಪ್ರಭಾವಕ್ಕೆ ಒಳಗಾದದ್ದು ಕಡಿಮೆ. ಈ ನಾಥ ಪ್ರಭಾವಕ್ಕೆ ಒಳಗಾದ ಸೂಫಿ ಸಾಹಿತ್ಯ ಬಂಗಾಳದಲ್ಲಿ ಸಿಗುತ್ತದೆ. ಪಂಜಾಬದಿಂದ ಬಂಗಾಳದವರೆಗೆ ತಿರುಗಿದ ನಾಥರು ಸೂಫಿಗಳ ಜೊತೆ ಕೂಡಿಕೊಂಡು ಸಂಕರ ರೂಪಿ ಪರಂಪರೆಯನ್ನು ಬೆಳೆಸಿದರು. ಹಲವಾರು ಕಲಂದರ್ ಸೂಫಿಗಳು ನಾಥ ಪ್ರಭಾವಕ್ಕೆ ಒಳಗಾಗಿ ಕಿವಿಗೆ ಕುಂಡಲವನ್ನು ಧರಿಸುತ್ತಿದ್ದರು. ಅಂದಾಗ ಈ ಸೂಫಿ ಹೋದ ಕಡೆಯಲ್ಲಾ ಇರುವ ಸ್ಥಳೀಯ ಪಂಥಗಳ ಪ್ರಭಾವಕ್ಕೆ ಒಳಪಟ್ಟರೆ, ವಚನಕಾರರು ಹೋದಲೆಲ್ಲಾ ತಮ್ಮ ಪ್ರಭಾವವನ್ನೇ ಬೀರಿದ್ದಾರೆ. ಇದು ಇವರೀರ್ವರ ನಡುವಿನ ವ್ಯತ್ಯಾಸ. ಯೋಗದ ಹೊಲಬಿನಲ್ಲಿ ಸೂಫಿಗಳು ನಾಥವನ್ನು ಬಹುವಾಗಿ ಅನುಕರಿಸಿದ್ದಾರೆ. ಪ್ರಾಣಾಯಾಮ ಯೋಗದ ಮೂಲಕ 'ಫನಾ' ಅಂದರೆ ಸಹಜಯೋಗ ಶೂನ್ಯವನ್ನು ಕಂಡುಕೊಂಡರು. ಹೀಗೆ ಈ ಶೂನ್ಯದ ಪರಿ ಬಹುಶಃ ಪ್ರಭುದರ್ಶನದ ಪ್ರಭಾವವಾಗಿರಬಹುದು. ನಾಥರಿಂದೊಡಗೂಡಿದ ನಿಜಾಮುದ್ದೀನ್ ಈ ಉಸಿರಾಟದ ರೀತಿಯಲ್ಲಿ ಚಿಂತನೆಗೈದಿರುವನು. 'ಯೋಗವಾಸಿಷ್ಠ', ಯೋಗಸೂತ್ರ ಪತಂಜಲಿಯ ಈ ಯೋಗ ಸೂತ್ರಗಳಿಗೆ ಅಲ್ಬೆರೂನಿ, ಪತಂಜಲಿಯ ಸೂತ್ರ, ಸಾಂಖ್ಯತತ್ವ ಮತ್ತು ಸೂಫಿ ಚಿಂತನೆಗಿರುವ ಸಾಮ್ಯತೆಯನ್ನು ಗುರುತಿಸುವನು. "ಕೆಲವು ವಿದ್ವಾಂಸರು ಈ ಗೋರಖ ಪಂಥದ ಸೂಫಿಗಳನ್ನು ಬಹುದೇವತಾರಾಧಕರು ಎಂದು ಬಣ್ಣಿಸಿ ಬಿಡುತ್ತಾರೆ. ರಿಜ್ವಿ ಇದನ್ನು ಅಲ್ಲಗಳೆಯುತ್ತ ಸೂಫಿಗಳು ಇಸ್ಲಾಮೇತರ ಅನುಭಾವ ಪಂಥಗಳಿಂದ ಚಿಂತನೆ ಹಾಗೂ ಆಚರಣೆಗಳನ್ನು ಪಡೆದುಕೊಳ್ಳುವ ಪರಂಪರೆ ಪ್ರಾಚೀನವಾದುದು."[೧೦] ಅಂದರೆ ಸೂಫಿಗಳು ಹಿಂದೂಗಳ ಹಲವಾರು ಯೋಗ ಸಾಹಿತ್ಯಕ್ಕೆ ಒಳಗಾದರೆ ವಚನಕಾರರು ಹಲವರ ಯೋಗಗಳನ್ನು ಶಿವಯೋಗದ ಮೂಲಕ ನೋಡಿರುವರು. ಈ ಶಿವಯೋಗ ಇವರದೇ ಆದ ಕಾಣಿಕೆ. ಈ ಸೂಫಿ ಸಂತರ ಮೇಲೆ ಶೈವನಾಯನ್ಮಾರರ ಸತಿ - ಪತಿ ಭಾವದ ಪ್ರಭಾವವಾಗಿದೆ. ಅದರಂತೆ ಸರ್ವ ಪ್ರಾಣಿಗಳಲ್ಲಿಪ್ರೇಮವನ್ನು ವ್ಯಕ್ತಪಡಿಸುವದು, ಪ್ರತಿ ವಸ್ತು ಪ್ರಾಣಿಗಳಲ್ಲಿ ಭಗವಂತನ ಅಂಶ ಕಾಣುವುದು ಈ ಅಂಶವನ್ನು ಪ್ರಚಾರಪಡಿಸಲು ಎಲ್ಲಕಡೆ ತಿರುಗಿದ್ದಾರೆ. ಈ ಸೂಫಿ ಹಿಂದೂ - ಮುಸ್ಲಿಂರ ವೈಚಾರಿಕ ಸಾಮರಸ್ಯತೆಯನ್ನುಂಟು ಮಾಡಲು ಹುಟ್ಟಿತೆನ್ನಬಹುದಾಗಿದೆ.

ಇದಕ್ಕೆ ಉದಾಹರಣೆ ಮೊಘಲರ ಪ್ರಸಿದ್ಧ ದೊರೆ ಅಕ್ಬರ್. ಜೈನುಲ್ ಅಬದೀನ್ ಹಾಗೂ ಷಹಜಾನ್‌ನ ಮಗನಾದ ದಾರಾಸಿಕೋಹ ಮುಂತಾದವರು ತಮ್ಮ ಜೀವಿತ ಕಾಲಮಾನವನ್ನು ಇದಕ್ಕೆ ಸವೆಸಿದರು. ಆದರೆ ವಚನಕಾರರಿಗೆ ಈ ಕೋಮು ಸಾಮರಸ್ಯದ ಅವಶ್ಯಕತೆ ಇರಲಿಲ್ಲ. ದರ್ವೇಶಿ ಸೂಫಿಗಳು ಮತ್ತು ಹಿಂದೂ

ಯೋಗಿಗಳು ಧಾರ್ಮಿಕ ಸಾಧನ ಮಾರ್ಗಗಳ ಬಗ್ಗೆ ಚರ್ಚಿಸಿ ಸರಿ ಎನಿಸಿದ ತತ್ವಾಚರಣೆಗಳನ್ನು ಉಭಯ ಪಕ್ಷದವರು ಸ್ವೀಕರಿಸಿರುವರು. ೧೧ - ೧೨ನೇ ಶತಮಾನದ ಮುತಜಲಿ, ಅಲ್ ಗಜಾಲಿ ಇವರ ಸಂಪ್ರದಾಯದಲ್ಲಿ ಶಿವಶರಣರ ಸತಿ - ಪತಿಯ ಬದಲಾಗಿ, ಪತಿ - ಸತಿ ಭಾವ ಕಾಣಬರುವದು. ಶಿವಭಕ್ತ ಕೇರಳದ ಚೇರಮಾನ್ ಪೆರುಮಾಳನು ಸೂಫಿ ಪ್ರಭಾವದಿಂದ ಇಸ್ಲಾಂ ಸ್ವೀಕರಿಸಿ ಮೆಕ್ಕಾಕ್ಕೆ ಹೋದನು. ಶಿವಶರಣ ಮಹಿಳೆ ಮಲ್ಲೇಶ ೮೦೦ ಸೂಫಿ ಕಲಂದರರೊಡಗೂಡಿ ಮೆಕ್ಕಾ ಕ್ಷೇತ್ರಕ್ಕೆ ಹೋದಪರಿಯನ್ನು ನೋಡಿದಾಗ, ಹಲವು ಶಿವಭಕ್ತರು ಸೂಫಿ ಸಂತರಾಗಿದ್ದನ್ನು ಕಾಣಬಹುದು. ಈ ಮುಸ್ಲಿಂ ಸೂಫಿ ಸಂತರು ಹಿಂದೂಗಳೊಂದಿಗೆ ಪ್ರೇಮಭಾವವನ್ನು ಹೊಂದುವ ಹೊಸದಾದ ಮಾನವೀಯ ಗುಣಗಳಿಂದ ಕೂಡಿದ ಧರ್ಮವನ್ನು ಕಟ್ಟಬೇಕೆಂದುಕೊಂಡಿದ್ದರು. ಅಂದಾಗ ಈ ಸೂಫಿಗಳ ಮೇಲೆ ಹಿಂದೂಗಳ ಧಾರ್ಮಿಕ ಪ್ರಭಾವಗಳು ಆಗಿದ್ದವು. ಈ ಸೂಫಿ ಸಂತರು ಜ್ಞಾನಿಗಳೂ ಹಾಗೂ ವಿದ್ಯಾವಂತರು ಆಗಿದ್ದರಿಂದ ಹಿತಕರವಾದ ಹಿಂದೂಧರ್ಮದ ಸಾಹಿತ್ಯ ಹಿಡಿಸಿ ರಚಿಸಿದ ಈ ಮಧ್ಯಕಾಲೀನ ಸಾಹಿತ್ಯ ಹಿಂದೂ - ಮುಸ್ಲಿಂ ಸಂಗಮಕಾಲವಾಗಿದೆ. ಶರಣರು ಅನುಭಾವಿಕ ವಚನಗಳಿಂದ ಜನಪ್ರಿಯರಾಗಿದ್ದರೆ ಸೂಫಿಗಳು ಷೇರ್, ಮಸ್ ನವಿ, ಕವ್ವಾಲಿ ಮುಂತಾದ ಛಂದಸ್ಸು ಕಾವ್ಯಗಳಿಂದ ಜನಪ್ರಿಯರಾಗಿದ್ದಾರೆ. ಸೂಫಿ ಸಂತರಲ್ಲಿರುವ 'ಸೋಹಂ' ಭಾವ ಶಿವಶರಣ ಯೋಗಿ ಸಿದ್ಧರಿಂದ ಪಡೆದುಕೊಂಡುದುದೇ ಆಗಿದೆ. ಅಷ್ಟೇ ಅಲ್ಲ ಮರಣದಂಡನೆಗೂ ಗುರಿಪಡಿಸುತ್ತಿದ್ದರೆನ್ನಲಾಗಿದೆ. ಶಿವಭಕ್ತರಲ್ಲಿ ಭಾವಪರವಶರಾಗಿ ಭಗವಂತನ ಮೇಲೆ ಪ್ರೇಮಗೀತೆಗಳ ಈ ಗುಣ ಸತಿ - ಪತಿ ರೀತಿಯದಾಗಿತ್ತು. ಶಿವಭಕ್ತರ ಈ ಭಾವ ೧೨ನೇ ಶತಮಾನದಲ್ಲಿ ಶರಣಸತಿ - ಲಿಂಗಪತಿಯಾಗಿ ಪರಿಪೂರ್ಣಗೊಂಡಿದೆ. ಈ ಸೋಹಂ ಭಾವದಿಂದ ಅಹಂಕಾರ ಮಧ - ಮತ್ಸರ ಮುಂತಾದ ವಿಕಾರಗಳು ಆಗುವ ಭಯವನ್ನು ಕಂಡ ವಚನಕಾರರು ಅದಕ್ಕೆ 'ದಾಸ್ಯ' ಭಾವವನ್ನು ಕೂಡಿಸಿ ವಿನಯಶೀಲತೆ, ಸೌಮ್ಯತೆ, ನಮ್ರತೆಗಳನ್ನು ತರಲು ಪ್ರಯತ್ನಿಸಿದರು. ಇದಕ್ಕೆ ವಚನ 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬುದೇ ಆಗಿದೆ. "ಸೋಹಂ ಎಂದೊಡೆ ಅಂತರಂಗದ ಗರ್ವ, ಶಿವೋಹಂ ಎಂದರೆ ಬಹಿರಂಗದ ಗರ್ವ. ಈ ಉಭಯವನಳಿದು ದಾಸೋಹಂಭಾವನೇ ಕರುಣಿಸಿ ಬದುಕಿಸಿ ಕರುಣಿಸಯ್ಯ ಅಖಂಡೇಶ್ವರ"[೧೧] ಹೀಗೆ ದಾಸ್ಯ ಭಾವವನ್ನು ಅಹಂಕಾರದ ಮಾತ್ರೆ ಅಧಿಕವಾಗಬಹುದೆಂದು ಉಪಯೋಗಿಸಿಕೊಂಡಿದ್ದಾರೆ. ಈ ದಾಸೋಹಂ ಭಾವವೆಂದರೆ ಎಲ್ಲ ಚರಾಚರಾ ವಸ್ತುಗಳು ಆ ಭಗವಂತನಿಗೆ ಸೇರಿದವುಗಳು ಎಂಬುದಾಗಿದೆ. ಆದರೆ ಸೂಫಿಗಳಲ್ಲಿ ಈ ಸೋಹಂ ತತ್ವವು 'ಸೋಹಂ' ಆಗಿಯೇ ಉಳಿದು ದಾಸ್ಯ ಭಾವ ವಿಕಾಸವಾಗದೇ ಅನಲ್ ಹಕ್ (ನಾನೇ ಅವನು) ಎಂಬ ಮನ್ಸೂರ - ಅಲ್ - ಹಲ್ಲಾಜ್ ಎಂಬುವನನ್ನು ಮತ್ತು ಸರಮದ್ ಎಂಬುವರು ಶೂಲಕ್ಕೇರಿಸಲ್ಪಟ್ಟರು. ಇದಕ್ಕೆ ಕಾರಣ ಅಲ್ಲಾನ ಸರಿಸಮ ಮುಟ್ಟಲಾರವೆಂಬ ಇಸ್ಲಾಂ ವೇ ಕಾರಣ. ಒಂದು ವೇಳೆ ಈ ಸಂತರು ಸೋಹಂದೊಂದಿಗೆ ದಾಸೋಹಂ ಭಾವವನ್ನು ಅಳವಡಿಸಿಕೊಂಡಿದ್ದಲ್ಲಿ ಮರಣದಂಡನೆಗೆ ಒಳಗಾಗುವ ಪ್ರಮೇಯ ಬರುತ್ತಿರಲಿಲ್ಲ ಎನ್ನಬಹುದು. ಜಾತಸ್ಯ ಮರಣಂ ಧ್ರುವಂ ಎಂಬ ಅಭಿಪ್ರಾಯವನ್ನು ಇವರೀರ್ವರು ಕೂಡಾ ಅನ್ವಯಿಸಿಕೊಂಡಿದ್ದಾರೆ. "ಈ ಶೂಲಕ್ಕೆ ನಾನು ಮುತ್ತಿಡುವದು ಏಕೆಂದರೆ ನನ್ನ ಆಸೆ ಇಂದು ಈಡೇರುತ್ತಿದೆ, ಇಂತಹ ಅಪೂರ್ವ ಗಳಿಗೆಯನ್ನು ನಾನು ಕಳೆದುಕೊಳ್ಳಲು ಇಷ್ಟಪಡಲಾರೆ. ನನ್ನನ್ನು ಸಾಯಿಸಿರಿ"[೧೨] ಇಂತಹ ಜೀವನದ ಕೊನೆಯ ಗಳಿಗೆಗಳನ್ನು ಪುರಾತನ ಗ್ರೀಕ್ ಸಂಪ್ರದಾಯದಲ್ಲಿಯೂ ಕಾಣುತ್ತೇವೆ. ಸಮಾಜ ಸಮಾನತ್ವದಲ್ಲಿ ಜಾತಿ - ಬೇಧಗಳನ್ನು ನಿವಾರಣೆಮಾಡಿದ ವಚನಕಾರರಲ್ಲಿಯೂ ಕಾಣಬರುವದು. ಪದ್ಮಾವತ್‌ದ

ನಾಯಕ ಗೋರಖನಾಥ ಪಂಥದಯೋಗಿ ಆಧ್ಯಾತ್ಮಿಕ ಯಾತ್ರೆಯನ್ನು ಕೈಗೊಂಡು ಪ್ರೇಯಸಿ ಪದ್ಮಾನಲ್ಲಿ ಸೇರಲು ತವಕಿಸುತ್ತಾನೆ. ಪದ್ಮಾವತಿ ಎಂದರೆ ಪ್ರೇಯಸಿ ರೂಪದ ಭಗವಂತ. ಶಿವಶರಣರ ಐಕ್ಯ ತತ್ವಕ್ಕೂ ಮತ್ತು ಸೂಫಿ ಸಂತರ ಐಕ್ಯ ತತ್ವಕ್ಕೆ ಸ್ವಲ್ಪ ವ್ಯತ್ಯಾಸವಿದೆ. ವಚನಕಾರರಲ್ಲಿ ಉಪ್ಪಿನಗೊಂಬೆ ಸಮುದ್ರವನ್ನು ಸೇರಿ ಲಯವಾಗುವಂತಿದ್ದರೆ ಸೂಫಿ ಪದ್ಧತಿ ಅದ್ವೈತದಲ್ಲಿ ದ್ವೈತಪ್ರತಿಪಾದನೆ, ನೀರಿನಲ್ಲಿ ಶರಾದಮಿಶ್ರಣ ಮಾಡಿದಂತಿದೆ. ಇದರಲ್ಲಿ ನಿರಾಕಾರ ಭಗವಂತನನ್ನು ನೆನೆದು ಅಪರಿಮಿತ ಸೂರ್ಯನ ಬೆಳಕಿನಲ್ಲಿ ಹಣತೆಯ ಬೆಳಕು ಕೂಡಿಕೊಂಡಂತಿದೆ. ಅಂದರೆ ಸೂಫಿಗಳಲ್ಲಿ ಅಂತ್ಯ ಐಕ್ಯವಾಗಿ ಸ್ವಲ್ಪಮಟ್ಟಿನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತದೆ. ಆದರೆ ವಚನಕಾರರಲ್ಲಿ ಐಕ್ಯವು ತನ್ನ ಅಸ್ತಿತ್ವವನ್ನು ಇಟ್ಟುಕೊಳ್ಳದೇ ಕೂಡಿ ಲಯವಾಗುವದು. ಹುಳಿ, ಕ್ಷಾರ, ಸಿಹಿ, ಕ್ಷೀರ, ಮುಂತಾದ ಆರು ಸ್ಥಿತಿಗಳನ್ನು ದಾಟಿ ಅಂತಿಮ ಗುರಿಯನ್ನು ತಲುಪುವುದು. ಹಕೀಕತ್ ಎಂದಾದರೆ ವಚನಕಾರರಲ್ಲಿ ಐಕ್ಯಸ್ಥಲವೆನ್ನುವರು "ಹಾಲ್" ವಖ್ತ್ ಇವು ಸೂಫಿಗಳ ಅಂತಿಮ ಸ್ಥಿತಿಗಳು ಇಲ್ಲಿ ಆ ಸಾಧಕನ ಹೃದಯಬಡಿತ ಹೆಚ್ಚಾಗುತ್ತದೆ. ಅಂತಿಮ ಬಯಕೆ ಇಡೇರಿಸಿಕೊಳ್ಳುವ ಕ್ಷಣಕ್ಕೆ ಕಾತುರನಾದಾತ ಹಿಂದೂ ಪ್ರೇಮವ್ಯಾಖ್ಯಾನ ಸಂಯೋಗ, ವಿಯೋಗ ಮುಂತಾದ ಚರಮ ಸ್ಥಿತಿಯ ಸಾಧನೆಗಳು ವಚನಕಾರ ಹಾಗೂ ಸೂಫಿಗಳೆರಡರಲ್ಲಿಯೂ ಕಂಡುಬರುತ್ತವೆ. ಸೂಫಿಗಳು ಪ್ರೇಮವ್ಯಾಖ್ಯಾನಗಳೊಂದಿಗೆ ಪ್ರಕೃತಿ ಸೌಂದರ್ಯದ ವರ್ಣನೆಯನ್ನು ಕೂಡಿಸಿದಂತೆ ವಚನಕಾರರಲ್ಲಿಯೂ ಕೂಡಾ ಸಗುಣ ಶಿವನ ಸೌಂದರ್ಯದ ವರ್ಣನೆಯನ್ನು ಕಾಣುತ್ತೇವೆ.

ವಚನಕಾರರಂತೆ ಸೂಫಿಗಳು ಏಕೇಶ್ವರ ವಾದಿಗಳು. ವಚನಕಾರರಲ್ಲಿ ಕೇವಲ ಆಧ್ಯಾತ್ಮಸಾಧನೆ ಮಾಡುವದೊಂದೆ ಇರದೇ ತಾತ್ವಿಕ ಸುಧಾರಣೆ ಮತ್ತು ಸಾಮಾಜಿಕ ಸುಧಾರಣೆ ಮಾಡುವದಾಗಿತ್ತು ಇವುಗಳಿಂದ ಕೂಡಿದ ಸಮಾನತೆಯ ಆಧಾರದ ಮೇಲೆ ಧರ್ಮವನ್ನು ಕಟ್ಟುವ ಈ ಕೆಲಸ ಸೂಫಿಗಳಿಗೆ ಅವಶ್ಯಕತೆಯಿರಲಿಲ್ಲ. ಸೂಫಿಗಳಲ್ಲಿ ವಚನಕಾರರಂತೆ ಲೋಕದ ಕೊಳೆಯನ್ನು ತೆಗೆದು ಹಾಕುವ ಪ್ರಮೇಯ ಇರದೇ ಕೇವಲ ಖಂಡಿಸುವದಕ್ಕೆ ಮಾತ್ರ ಸೀಮಿತವಾಗಿದೆ. ಸೂಫಿ ಸಂತರ ಧರ್ಮಪ್ರಚಾರ ಇಸ್ಲಾಂವೇ ಆಗಿದೆ. ದುಃಖಿತ, ಬಡವ ಬಲ್ಲಿದ ಎಲ್ಲರ ಹತ್ತಿರ ಹೋಗಿ ಅವರವರ ಕಷ್ಟ ಸುಖದಲ್ಲಿ ಭಾಗಿಯಾಗುತ್ತಿದ್ದರು. ದೇಶಸಂಚಾರ ಕಾಲದಲ್ಲಿ ಜಂಗಮರ ಸಾಧು - ಸಂತರ ಬೆಟ್ಟಿಯಿಂದ ಉಂಟಾದ ಜ್ಞಾನದ ಫಲವನ್ನು ಜನಸಾಮಾನ್ಯರಿಗೆ ಹಂಚುತ್ತಿದ್ದರು. ಶರಣರಲ್ಲಿ ವೈದ್ಯ ಸಂಗಣ್ಣನಿದ್ದಂತೆ ಬಹುತೇಕ ಎಲ್ಲ ಸಂತರು ವೈದ್ಯರೇ ಆಗುತ್ತಿದ್ದರು. ಇವರೀರ್ವರಲ್ಲಿ ಕಂಡುಬರುವ ವ್ಯತ್ಯಾಸವೆಂದರೆ ಸೂಫಿಗಳಲ್ಲಿ ಕಲೀಫ್ , ಬಾದಶಹಾರ ಆಸ್ಥಾನಕ್ಕೆ ಹೋಗಿ ಅವರ ಯಾವುದೇ ಆಸೆ ಆಮಿಶಕ್ಕೆ ಒಳಗಾಗುವದರಿಂದ ಆ ದೊರೆಗಳ ಶತ್ರುಗಳೆಂದೇ ಪರಿಗಣಿಸಲ್ಪಡುತ್ತಿದ್ದರು. ಆದ್ದರಿಂದ ಸೂಫಿಗಳಲ್ಲಿ ರಾಜಕೀಯ ಪ್ರವೇಶ ಕಡಿಮೆ. ಆದರೆ ವಚನಕಾರರಾದ ಬಸವ, ಚನ್ನಬಸವರು ರಾಜಕೀಯದ ಆಶ್ರಯದಲ್ಲಿ ಅಲಿಪ್ತವಾಗಿದ್ದು ಅದನ್ನು ಹೆಚ್ಚಿಗೆ ಅಂಟಿಸಿಕೊಳ್ಳದೆ ನಿರ್ಲಿಪ್ತ ಆಧ್ಯಾತ್ಮ ಸಾಧಕರೆನಿಸಿದ್ದಾರೆ. ಅಧಿಕಾರದ ಸುಖಭೋಗದಿಂದ ದೂರವಿದ್ದು ಆಧ್ಯಾತ್ಮಿಕ ಸಾಧನೆ ಮಾಡಿದವರು ಬಹಳ ಕಡಿಮೆ. ಯಾವುದೇ ಧರ್ಮ ತನ್ನ ಸ್ಥಿತಿಯನ್ನು ಕಾಯ್ದುಕೊಳ್ಳಬೇಕಾದರೆ ರಾಜಾಶ್ರಯದ ಅವಶ್ಯವಾದರೂ ಬಯಸದೇ ಬಂದ ಮಂತ್ರಿ ಪದವಿಗಳನ್ನು ಲಿಂಗಭೋಗೋಪ ಭೋಗವಾಗಿಸಿದ್ದಾರೆ. ಸೂಫಿಗಳಲ್ಲಿ ರಾಜರಾಗಿಯೇ ಇದ್ದುಕೊಂಡು ತತ್ವವನ್ನು ಹೇಳುವವರಿದ್ದರೆ ವಚನಕಾರರಲ್ಲಿ ರಾಜ ಪದವಿಯನ್ನು ತ್ಯಾಗಮಾಡಿ

ವಚನಕಾರರಾಗಿದ್ದಾರೆ. ಸೂಫಿಗಳಲ್ಲಿ ಸಂಸಾರ ತ್ಯಾಗಮಾಡಿ ಸಂತರಾದರೆ ವಚನಕಾರರಲ್ಲಿ ಸಂಸಾರದಲ್ಲಿದ್ದುಕೊಂಡೇ ಆಧ್ಯಾತ್ಮವನ್ನು ಸಾಧಿಸಿದರಾದರೂ ಜಂಗಮ ವಿರಕ್ತ ಅನ್ನುವ ನಿರಾಭಾರಿ ಮಠಾಧಿಕಾರಿಗಳು ಹುಟ್ಟಿನಿಂದಲೇ ಮದುವೆಯಾಗದೆ ಹಾಗೆಯೇ ಉಳಿಯುತ್ತಾರೆ. "ಹಜರತ್ ಸುಲ್ತಾನ್ ಇಬ್ರಾಹಿಂ ಉದಮ್ ಬಲಖ್ ದೇಶದ ಬಾದಶಹಾರಾಗಿದ್ದರೆ ಹಜ್ರತ್ ಶೇಖ್ ಅಬುಬಕ್ರ್ ಸಿಬ್ಲಯವರ ಬಗ್ದಾದ ಹತ್ತಿರದ ನಾಹವಂದ್ ಪ್ರಾಂತದ ಗವರ್ನರ್ ಆಗಿ ಸುಖಭೋಗಗಳನ್ನು ಅನುಭವಿಸಿ ಅವುಗಳಲ್ಲಿ ರಸವನ್ನು ಕಾಣದೇ ರಾಜಬೋಗಗಳನ್ನು ತ್ಯಜಿಸಿ ಸನ್ಯಾಸವನ್ನು ಸ್ವೀಕರಿಸಿರುವ ಉದಾಹರಣೆಗಳು ನಮಗೆ ಸಿಗುತ್ತವೆ. ರಾಜಕೀಯ ಜೀವನದಿಂದ ನಿವೃತ್ತಿ ಪಡೆದು ಆಧ್ಯಾತ್ಮ ಸಾಧನೆಯೊಂದಿಗೆ ಸಾಮಾಜಿಕವಾಗಿ ಸಮರತೆಯನ್ನು ಕಾಣುವ ಹಂಬಲ ಶರಣಸೂಫಿಗಳಲ್ಲಿ ಸಮಾನವಾಗಿ ಕಂಡುಬರುತ್ತದೆ."[೧೬] ಇದು ಸಾಮಾನ್ಯವೆನಿಸಿದರೂ ಕೂಡ ಲೌಕಿಕ ಬದುಕಿನ ಯಾವ ಕಾರ್ಯವನ್ನು ಆಧ್ಯಾತ್ಮಿಕ ಫಲವತ್ತತೆಗೆ ಪರಿವರ್ತಿಸಿ ಕಾಯಕವೆನಿಸಿಕೊಂಡ ವಿಶೇಷ ವಚನಕಾರರದು. ಆಧ್ಯಾತ್ಮಿಕ ಅನುಭಾವವನ್ನು ವಚನಕಾರರು ಸಮಾಜದ ಪರಿವರ್ತನೆಗೆ ಉಪಯೋಗಿಸಿಕೊಂಡಂತೆ ಸೂಫಿಗಳು ಉಪಯೋಗಿಸಿಲ್ಲ. ಅನುಭಾವಿಕ ವಚನಗಳಿಂದ ಸಮಾಜದಲ್ಲಿರುವ ಓರೆ ಕೋರೆಗಳನ್ನು ತಿದ್ದಿ ಸರಳವಾದ ಶೈಲಿಯ ಈ ವಚನಗಳು ಜನಸಾಮಾನ್ಯರ ಮನಸ್ಸಿನ ಮೇಲೆ ಮೂಡುವಂತಿದ್ದವು. ಸಂಪ್ರದಾಯಸ್ತ ಬ್ರಾಹ್ಮಣರಾದಿಯಾಗಿ ಎಲ್ಲ ಹಿರಿಯರೆನಿಸಿಕೊಂಡವರನ್ನು ಜರಿದು, ಜಾತಿ - ಬೇಧಗಳ ನಿವಾರಣೆಗಾಗಿ ದುಡಿದರು. ಅದರಂತೆ ಲಿಂಗ ಶಕ್ತಿಯ ಉಪಾಸನೆಯೊಂದಿಗೆ ಏಕದೇವೋಪಾಸನೆ ಮತ್ತು ಪುರೋಹಿತ ಶಾಹಿಗಳನ್ನು ತೊಡೆದುಹಾಕಿದರು. ಹಲವು ದೇವರಗಳಲ್ಲಿಟ್ಟ ನಂಬಿಕೆಗಳನ್ನು ಬದಲಿಸಿ ದೇವನೊಬ್ಬನೆಂದು ಸಾರಿ ಹೇಳುವದು ವಚನಕಾರರಿಗಿದ್ದ ಅವಶ್ಯಕತೆ. ಇದು ಸೂಫಿಗಳಿಗಿರಲಿಲ್ಲ. ಏಕೇಶ್ವರ ವಾದವನ್ನು ಒಪ್ಪಿದ ಸೂಫಿ ಅರ್ಧಕ್ಕಿಂತ ಹೆಚ್ಚು ಭಾಗ ಅಂಧಃಶ್ರದ್ಧೆಯನ್ನು ತೊಡೆದು ಹಾಕುವಲ್ಲಿ ಶ್ರಮಿಸಿತು. ಸೂಫಿ ತನ್ನನ್ನು ಅಲೌಕಿಕ ಮಾರ್ಗದಲ್ಲಿ ತೊಡಗಿಸಿಕೊಂಡು ಜನತೆಯನ್ನು ಆಸೆ ಆಮಿಶೆಗಳಿಂದ ದೂರವಿರಲು ಪ್ರೇರೇಪಿಸಿತು. ಮೂಲತಃ ಸೂಫಿ ಇಸ್ಲಾಂ ಧರ್ಮದ ತತ್ವಗಳನ್ನು ಪಾಲಿಸಿ ಅದರೊಂದಿಗೆ ಕೂಡಿದ ಅಂಧಾನುಕರುಣೆಯನ್ನು ವಿರೋಧಿಸಿತು. ವಚನಕಾರರಂತೆ ಧರ್ಮಾಚರಣೆಯೊಂದಿಗೆ ಲೌಕಿಕವನ್ನು ಕೂಡಾ ಸಾಧಿಸಬೇಕೆಂದು ಹೇಳುತ್ತದೆ. ಈ ಏಕದೇವೋಪಾಸನೆಯಿಂದ ರೋಮ ಸಾಮ್ರಾಜ್ಯ ಶಕ್ತಿಶಾಲಿ ಸಾಮ್ರಾಜ್ಯವಾಗಿ ಬೆಳೆಯಲು ೬೦೦ ವರ್ಷ ತೆಗೆದುಕೊಂಡರೆ ಇಸ್ಲಾಂ ಕೇವಲ ೬೦ ವರ್ಷಗಳಲ್ಲಿ ಸಾಧಿಸಿದೆ. ಇಸ್ಲಾಂದಲ್ಲಿಯ ಶರಿಯತ್‌ರು ರೋಜಾ, ದರ್ಗಾ, ಮಜಾರ್‌ಗಳಿಗೆ ಹೋಗಿ ಸಂಕಷ್ಟ ನಿವಾರಣೆ ಮಾಡುವದನ್ನು ವಿರೋಧಿಸಿದರೆ ಮಾರಿಫತ್ ಸೂಫಿಗಳು ಇದನ್ನು ಆಚರಿಸಿಕೊಂಡು ಬರುತ್ತಲೇ ಇರುವರು. ಮೂಲ ಸೂಫಿಗಳು ಶರಿಯತ್ ವಾದವನ್ನು ಪಾಲಿಸಿದರೆ ಮಿಶ್ರ ಸೂಫಿಗಳಲ್ಲಿ ಮೌಲ್ಯಗಳ ಅಭಾವವಿದೆ. ಈ ಸೂಫಿಗಳು ಪ್ರೇಮ ಉಪಾಸಕರಾದರೂ ಅದನ್ನು ಸಾಮಾನ್ಯರೊಂದಿಗೆ ಹಂಚಿಕೊಳ್ಳುತ್ತಿದ್ದರು. ಇವರು ಪೂರ್ಣ ಸನ್ಯಾಸಿಗಳಲ್ಲ, ಎಲ್ಲ ಸಂತರು ಮದುವೆಯಾಗಿ ಮಡದಿ ಮಕ್ಕಳ ಜೀವನ ನಡೆಸಿ ಸಾಮಾಜಿಕದಲ್ಲಿ ಬೆರೆತು ಕಷ್ಟ - ಸುಖಗಳ ಅನುಭವವನ್ನು ಶರಣರಂತೆ ಆಧ್ಯಾತ್ಮಿಕ ಸಮ್ಮಿಳಿತ ಜೀವನವನ್ನು ಸಾಮಾಜಿಕದಲ್ಲಿದ್ದೇ ಪಡೆದುಕೊಂಡವರು. ಆದರೆ ವಚನಕಾರರಲ್ಲಿ ಶರಣರೆಂದರೆ ಮದುವೆ ಆಗುವವರೆಂದು ಇದರಲ್ಲಿಯೇ ವಿಶೇಷವಾಗಿ ಪೀಠ ಮಠಾಧಿಕಾರಿಯಾಗುವ ಸನ್ಯಾಸಿಗಳೆಂದರೆ ಮದುವೆಯಾಗದೆ ಜೀವನಪರ್ಯಂತರ ಆಧ್ಯಾತ್ಮಿಕದಲ್ಲಿ ತೊಡಗಿಸಿಕೊಂಡವರಂತೆ ಸೂಫಿಗಳಲ್ಲಿ ಕಾಣಲಾಗುವದಿಲ್ಲ. ತನ್ನನ್ನು ತಾನು ತಿಳಿ ಎನ್ನುವ

“ಕರ್ ಪಚನತ್ ಅಪಕೀ ತಟ್ ಹೋಗಿ ಪಚಾನತ್ ಸೂ ಬಾಹಾನಕಿ”[೧೪] ಇದು ಈರ್ವರಲ್ಲಿ ಕಂಡುಬರುವ ಸಾಮಾನ್ಯತೆ ಮೊದಲು ತಮ್ಮನ್ನು ತಾವು ಶುದ್ಧೀಕರಿಸಿ ತದನಂತರ ಸಮಾಜ ಪರಿಸರಗಳನ್ನು ಜಾತಿ - ಬೇಧಗಳನ್ನು ಹೋಗಲಾಡಿಸಲು ಶ್ರಮಿಸಿದ ಇವರೀರ್ವರು ಬಹಳಷ್ಟು ವಿರೋಧವನ್ನು ಎದುರಿಸಬೇಕಾದರೂ ಜಗದ್ ಒಂದೇ ಜನಪ್ರಿಯರಾಗಿದ್ದಾರೆ. ಇವರೀರ್ವರ ನಡುವೆ ತಾತ್ವಿಕ ದೃಷ್ಟಿಯಲ್ಲಿ ಬಹುತರವಾದ ಸಮಾನತೆಗಳು ಕಂಡುಬರುತ್ತವೆ. ಇವರೀರ್ವರು ಅದ್ವೈತಿಗಳು ನಿಜ. ಜಗತ್ತಿನಲ್ಲಿ ಬದುಕಿ ಕೊನೆಗೆ ಆ ಭಗವಂತನಲ್ಲಿಯೇ ಲೀನವಾಗಿ ಸೂಫಿಗಳು ಹೇಳಿದರೆ ಆತ್ಮ ಪರಮಾತ್ಮನಲ್ಲಿ ಬೇಧವಿಲ್ಲದೆ ಲೀನವಾಗುವುದನ್ನು ಹೇಳುವರು. ಜಗತ್ತಿನ ಪ್ರತಿಯೊಂದು ಅಣು ಕಣದಲ್ಲಿಯೂ ಪರಮಾತ್ಮನ ಅಂಶವನ್ನೇ ಇವರಿಬ್ಬರು ಕಾಣುವರು. ಈ ಅಂಶಾತ್ಮಕದಲ್ಲಿ ಮಹಾಶಕ್ತಿ ಶಕ್ತಿ ವೈಶಿಷ್ಟ್ಯದಂತೆ ಅಡಗಿರುವುದಾಗಿ ಈರ್ವರು ಹೇಳುವರು. ಮಹಮ್ಮದ್ ಪೈಗಂಬರ ಅಲ್ಲಾಹನೇ ಇಡೀ ಜಗತ್ತಿನ ಒಡೆಯ ತಾನು ಮಾತ್ರ ಸೇವಕ ಎನ್ನುವ ದಾಸ್ಯಭಾವವನ್ನು ಸೂಫಿಗಳು ಅದನ್ನೇ ಪ್ರೇಮ ಭಾವಕ್ಕೆ ಪರಿವರ್ತಿಸಿದರು. ಮೊದಲ ಪುರುಷನಾದ ‘ಅದಮ್’ ಅಲ್ಲಾಹನಾಗದಿದ್ದರೂ ಆತನ ಅಂಶವೇ ಆಗಿರುವನೆಂದು ಸೂಫಿಗಳ ನಂಬುಗೆಯಾಗಿದೆ. ಇದು ಸೂಫಿಗಳಲ್ಲಿ ಅವ್ಯಕ್ತವಾದ ಅದ್ವೈತರೂಪ. ಇದೇ ಇಸ್ಲಾಂಕ್ಕೆ ವಿರೋಧ ಕಟ್ಟಿಕೊಂಡದ್ದು. ಹಾಗೆಯೇ ವಚನಕಾರರಿಗೆ ಸಮೀಪವಾಗಿದೆ. ಶಕ್ತಿವಿಹೀನನಾದ ಶಿವ ನಿರ್ಜೀವ ಎನ್ನುವ ವಚನಕಾರರ ತತ್ವವು ಶಕ್ತಿ ಅಥವಾ ಸ್ತ್ರೀ ಎನ್ನುವ ಸ್ವರೂಪ ಶಿವನಲ್ಲಿ ಅಡಗಿ, ಸೃಷ್ಟಿ - ಸ್ಥಿತಿ - ಲಯಗಳಿಗೆ ಆಧಾರವಾಗಿರುವ ಶಕ್ತಿ ವಿಶಿಷ್ಟ ಶಿವನ ಕಲ್ಪನೆ ಸ್ತ್ರೀಗೆ ಸಂಬಂಧಿಸಿರುವಂತೆ ಸೂಫಿಗಳಲ್ಲಿಯೂ ಕೂಡಾ “ಇಷ್ಕೆ ಮಿಜಾಜಿ ಶೆ = ಇಷ್ಕೆ ಹಕೀಖಿ”[೧೫] ಇದೆ. ವಚನಕಾರರು ವಿಭಿನ್ನ ಶಿವಯೋಗಾತ್ಮಕ ಷಟಸ್ಥಲವನ್ನು ಪ್ರತಿಪಾದಿಸಿದರೆ ಸೂಫಿಗಳು ಷರೀಯತ್, ತರೀಕತ್, ಮಾರೀಪತ್, ಹಕೀಖತ್, ಇವುಗಳ ಮುಖಾಂತರ ಅದ್ವೈತಭಾವವನ್ನು ಪ್ರತಿಪಾದಿಸುತ್ತಾರೆ. ಅದರಂತೆ ಅನುಭಾವದ ಹಿನ್ನೆಲೆಯಲ್ಲಿ ತಲೆದೋರಿದ ಇವೆರೆಡು ಧರ್ಮಗಳು ಅನುಭಾವಕ್ಕೆ ‘ಸಿರ್ಗ್’ ಅಥವಾ ‘ಇಲ್ಮ’ ಎಂದು ಕರೆಯುವುದರ ಜೊತೆಗೆ ಮೂರು ಭಾಗಗಳನ್ನು ಮಾಡಿದ್ದಾರೆ.

೧. ಇಲ್ಮುಲ್ ಯಖೀನ್

೨. ಹಕ್ಕುಲ್ ಯಖೀನ್

೩. ಐನುಲ್ ಯಖೀನ್

‘ಯಖೀನ್’ ಎಂದರೆ ನಿಶ್ಚಿತ ದೃಢಜ್ಞಾನ ಎಂದು. ಇದರಿಂದ ಹೊರಹೊಮ್ಮುವುದೇ ಅನುಭಾವ. ಇದಕ್ಕೆ ‘ಇಲ್ಮುಲ್ ಯಖೀನ್’ ಎಂದು ಕರೆದರೆ ಈ ಸೃಷ್ಟಿಯ ಚರಾಚರವೆಲ್ಲವೂ ಅಲ್ಲಾಹನಿಂದ ರಚಿತವಾಗಿ ಅವನ ಗುಣಾಂಶವನ್ನು ಕಾಣುವ ಈ ಜ್ಞಾನವೇ ‘ಹಕ್ಕುಲ್ ಯಖೀನ್’ ಎಂದಾಗಿದೆ. ಈ ಜಗತ್ತು ಅಲ್ಲಾಹನ ಸ್ವರೂಪ ಇದರಲ್ಲಡಗಿದ ಸೌಂದರ್ಯ ಸತ್ಯವನ್ನು ಪ್ರೇಮ ಭಾವದಲ್ಲಿ ಕಾಣಲು ತವಕಪಡುವುದೇ ‘ಐನುಲ್ ಯಖೀನ್’ ಎಂದು ಹೇಳಲ್ಪಟ್ಟಿದೆ. ಇವು ವಚನಕಾರರ ಇಷ್ಟ, ಪ್ರಾಣ, ಭಾವ ಈ ಮೂರು ತರಗಳನ್ನು ನೆನಪಿಗೆ ತರುತ್ತವೆ. ವಚನಗಳೆಲ್ಲವೂ ಅನುಭಾವದ ಹಿನ್ನಲೆಯಲ್ಲಿಯೇ ರಚಿತವಾದವುಗಳು. ಶರಣರ ಅರಿವು ಮತ್ತು ಸೂಫಿಗಳ ಪ್ರೇಮ ಇವೆರಡು ಅನುಭಾವದಿಂದಲೇ ಜನ್ಯವಾದವುಗಳು. ಈ ಸೂಫಿಗಳ ಮೇಲೆ ಪಾಶ್ಚಾತ್ಯ ಗ್ರೀಕ್ ತತ್ವಜ್ಞಾನಿಗಳ ಪ್ರಭಾವ ಬಿದ್ದರೂ ಕೂಡಾ ಭಾರತೀಯ ದರ್ಶನಗಳ ಪ್ರಭಾವ ಹೇರಳವಾಗಿ ಬಿದ್ದಿದೆ.

ವಚನಕಾರರು ಜ್ಞಾನಕ್ರಿಯಾ ಮಾರ್ಗವನ್ನು ಹೇಳಿದರೆ ಸೂಫಿಗಳು ಕೇವಲ ಪ್ರೇಮ ಪ್ರಧಾನವಾದ ಮಾರ್ಗವನ್ನು ಹೇಳುತ್ತಾರೆ. ಸಮಾಜ ಪ್ರವೃತ್ತಿ ಮಾರ್ಗವನ್ನು ಸದೃಢಗೊಳಿಸಲು ಅನುಭಾವದ ವಚನಗಳನ್ನು ಉಪಯೋಗಿಸಿಕೊಂಡರು. ಆದರೆ ಸೂಫಿಗಳು ಜೀವನತ್ಯಾಗವನ್ನು ಹೇಳಿ ಭಗವಂತನ ಧ್ಯಾನಮಾಡುತ್ತಾ ಜೀವಾತ್ಮ ಪರಮಾತ್ಮವನ್ನು ಹೊಂದುವ ಪ್ರೇಮ ಮಾರ್ಗವನ್ನು ಹಿಡಿದಿರುವರು. ಇವರಿಗೆ ಪ್ರೇಮ ಮಾರ್ಗಿಗಳೆಂದು ಕರೆದರೂ ಅಡ್ಡಿಯಿಲ್ಲ. ಪತಿ - ಸತಿಯ ರೂಪದ ಪ್ರೇಮೋನ್ಮಾದದಲ್ಲಿ ಇಡೀ ಸೂಫಿ ಸಾಹಿತ್ಯ ನಿರ್ಮಾಣಗೊಂಡಿದೆ. ಭಗವಂತನನ್ನು ಪ್ರೇಯಸಿಯ ರೂಪದಲ್ಲಿ ಕಂಡು ಮನದಲ್ಲಿಯೇ ಆನಂದಿಸಿ ಯಾವಾಗ ಅದರೊಡನೆ ಬೆರೆಯುತ್ತೇನೆ ಎಂದು ಹಾತೊರೆಯುವ ಸ್ಥಿತಿಯನ್ನು ಜುಲ್ ನೂನ್ ಮಿಸ್ರಿ, ಮನ್ಸೂರ್ ಹಲ್ಲಾಜ ಅವರ ಜೀವನ ಚರಿತ್ರೆಗಳು ಹೇಳುತ್ತವೆ. ಆದರೆ ವಚನಕಾರರಲ್ಲಿ ಭಗವಂತ ಪತಿಯಾಗಿಯೂ ತಾನು ಸತಿಯಾಗಿ ನಲ್ಲನೊಡನೆ ಕೂಡಿಕೊಳ್ಳುವ ಸಮರಸವನ್ನು 'ಹರನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸ್ಸಿದ್ದೇ ನೋಡಾ ..... ಅನ್ನುವ ಅಕ್ಕನ ವಚನವನ್ನು ನೋಡಬಹುದು. ಈ ವಚನಕಾರರಾದರೂ ಕೂಡಾ ಸಮಾಜದ ಓರೆ ಕೋರೆಗಳನ್ನು ತಿದ್ದುವಲ್ಲಿ ಒತ್ತಾಯದ ಮಾರ್ಗವನ್ನು ಅನುಸರಿಸದೇ ಪ್ರೇಮ ಮಾರ್ಗವನ್ನೇ ಅನುಸರಿಸಿರುವರು. ಜಗತ್ತಿನ ಇಹಲೋಕ ಸುಖಗಳಲ್ಲಿಯೇ ಗುಲಾಮನಾಗಿ ಬದುಕುವ ದಾರಿಯನ್ನು ತಿರಸ್ಕರಿಸಿ, ಅಂತಿಮ ಸತ್ - ಚಿತ್ ಆನಂದದಲ್ಲಿ ಸಮರಸವಾಗುವ ಭಾವವನ್ನು ಈರ್ವರು ಹೇಳುತ್ತಾರೆ. ವಚನಕಾರರ ಸಾಮರಸ್ಯವು ಸೂಫಿಗಳ 'ಫನಾ' ಹಾಗೂ 'ಬಖಾ' ತತ್ವಗಳಲ್ಲಿ ಅಡಗಿದೆ. ಫನಾ ಅಂದರೆ ದೇಹಿ ಅಲ್ಲ, ನಿರ್ದೇಹಿ ಅಲ್ಲ ಎಂದಂತೆ. ಇದ್ದು ಇಲ್ಲದಂತಿರುವ ಈ ಶರೀರ ಭಾವನೆ ತ್ಯಜಿಸಿ ಪರಮನಲ್ಲಿ ತನ್ನನ್ನು ಸಮರ್ಪಿಸಿಕೊಳ್ಳುವ ಭಾವ ಅಥವಾ ತನ್ನನ್ನು ನಾಶಪಡಿಸಿಕೊಳ್ಳುವ ಕ್ರಿಯೆ. ಇದಕ್ಕೆ 'ಫನಾ' ಎಂದು ಕರೆಯುವರು. ಅಲ್ಲಾಹನೊಂದಿಗೆ ಬೆರೆತು ಲೀನವಾಗಿ ಇರದಂತೆ ಇರುವ ಈ ದೇಹಿ ಸ್ಥಿತಿಗೆ 'ಬಖಾ' ಎಂದು ಕರೆಯುವರು. ಹೀಗೆ ತನ್ನ ತನವನ್ನು ಐಕ್ಯದಲ್ಲಿಯೂ ಉಳಿಸಿಕೊಳ್ಳುವ ಇಂತಹ ಅನುಭಾವ ಸ್ಥಿತಿಯನ್ನು ಕಬ್ಬಿಣ ಉರಿಯೊಂದಿಗೆ ಕೆಂಪಾದರೂ ತನ್ನ ಕಬ್ಬಿಣ ಅಸ್ತಿತ್ವ ಉಳಿಸಿಕೊಳ್ಳುವ ಹಾಗೆ ಶರಾಭನ್ನು ನೀರಿನಲ್ಲಿ ಬೆರೆಸಿದಾಗ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬೆರೆಯುವಂತಿರುವ ಈ ಪ್ರೇಮ ತತ್ವವನ್ನು ಸೂಫಿಗಳು ಜಗತ್ತಿಗೆ ವಿಶಿಷ್ಟವಾದ ಕಾಣಿಕೆಯನ್ನು ನೀಡಿರುವರು. ಆದರೆ ವಚನಕಾರರಲ್ಲಿ ಐಕ್ಯವನ್ನು ಹೇಳುವಾಗ ಅಸ್ತಿತ್ವವನ್ನು ಉಳಿಸಿಕೊಳ್ಳದೇ ಸಮರಸ ಹೊಂದುವರು. ಇದು ಇವರೀರ್ವರಲ್ಲಿಯ ಸೂಕ್ಷ್ಮ ವ್ಯತ್ಯಾಸ. ವಚನಕಾರರ ಐಕ್ಯ ಉಪ್ಪಿನಗೊಂಬೆಯ ಸಮುದ್ರದಲ್ಲಿ ಸೇರಿದಂತೆ ಜೀವಾತ್ಮ ಪರಮಾತ್ಮನಲ್ಲಿ ಸೇರಿಹೋಗುವ ಪ್ರಕ್ರಿಯೆ ವಚನಕಾರರದ್ದು. ಆದರೆ ವಚನಕಾರರು ಹಾಗೂ ಸೂಫಿಗಳಿಗೆ ಸಮಾನಾಂತರವಾದ ಸೂಫಿಗಳ ಹಾಗೂ ವಚನಕಾರರ ನಿಲುವುಗಳು

> "ಬೇನಿಶಾನ್ ಹೋಕರ್ ಮಿಲಾ ತೇರಾನಿಶಾನ್,
> ಹಾಂ ನಿಶಾನ್, ಬೇ ನಿಶಾನ್ ತೂಹೀ ತೂಹೈ"[೧೬]

ಅಂದರೆ ಭಗವಂತನೇ ಭಕ್ತನಲ್ಲಿ ಅಡಗಿದ ಪರಿ. ಅಥವಾ ಭಕ್ತ ಭಗವಂತನಲ್ಲಿ ಅಡಗುವ ಪರಿಯು ಇದರಂತೆಯೇ

> ಘೃತ ಘೃತವ ಬೆರಸಿದಂತೆ, ಕ್ಷೀರ ಕ್ಷೀರವ ಬೆರಸಿದಂತೆ,
> ಜ್ಯೋತಿ ಜ್ಯೋತಿಯ ಬೆರಸಿದಂತೆ, ಬಯಲಬಯಲ ಬೆರಸಿದಂತೆ,
> ಕರ್ಪೂರದ ಉರಿ ಉರಿಯ ಕೊಂಡಂತೆ.

ಮುಂತಾಗಿ ನಿರಪೇಕ್ಷೆಯಿಂದ ಅವಗುಣಗಳ ನಿವೃತ್ತಿ ಮಾಡಿ ಶುದ್ಧಾತ್ಮ ನಿರಾಕಾರ ಭಗವಂತನಲ್ಲಿ ಲೀನವಾಗುವ ಈ ಸ್ಥಿತಿಗೆ ವಚನಕಾರ ಸೂಫಿಗಳೆರಡು ಒಂದೇ ಅರ್ಥವನ್ನು ಹೇಳುತ್ತವೆ. ಸೂಫಿಗಳ ಉಪಾಸನೆ ಸೌಂದರ್ಯೋಪಾಸನೆ, ರೂಪ ರಹಿತ ಜ್ಯೋತಿ ಸ್ವರೂಪ ಅಲ್ಲಾಹನನ್ನು ಸ್ತುತಿಸುವರು. ಆತ್ಮಜ್ಯೋತಿ ಪರಮಜ್ಯೋತಿಯಲ್ಲಿ ಸೇರಿಯು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವ ಉಪಾಸನೆ ಆಗಿದೆ. ಇಲ್ಲಿ ನಿರಾಕಾರ ಅಲ್ಲಾಹನ ಉಪಾಸನೆಯಿದ್ದರೇ ವಚನಕಾರರಲ್ಲಿ ಕೂಡಾ ಇದೇ ಉಪಾಸನೆ ಇದ್ದು ಕೆಲವು ಸಾರಿ ಸಗುಣೋಪಾಸನೆ ಕೂಡಾ ವಚನಕಾರರಲ್ಲಿ ಕಾಣಬಹುದು. ಇದಕ್ಕೆ ಅಕ್ಕಮಹಾದೇವಿಯ

ಅಕ್ಕ ಕೇಳವ್ವ ನಾನೊಂದು ಕನಸು ಕಂಡೆ .........

........... ಚಿಕ್ಕ ಚಿಕ್ಕ ಜಡೆಗಳ ಸುಲಿಫಲ್ಲಾ ಗೊರವನು .....

........... ಬೆಂಬತ್ತಿ ಕೈ ಹಿಡಿದೆನಾಗಿ.

ಹೀಗೆ ಶಿವನನ್ನು ಗಂಡನೊಂದಿಗೆ ಸಮೀಕರಿಸಿ ವೇಷ ಭೂಷಣಗಳಿಂದ ಅಲಂಕರಿಸಿ ಹೇಳುವ ಪ್ರಕ್ರಿಯೆ ದಾರ್ಶನಿಕ ವೈಶಿಷ್ಟ್ಯತೆಯನ್ನು ತಂದುಕೊಡುತ್ತದೆ. ಅಲ್ಲಲ್ಲಿ ಸಗುಣಶಿವನನ್ನು ಉಪಾಸಿಸಿದಂತೆ ಕಂಡುಬಂದರು. ನಿರ್ಗುಣ ನಿರಾಕಾರ ಶಿವನನ್ನು ಹೆಚ್ಚಾಗಿ ಹೇಳುತ್ತಾರೆ. ನಿರಾಕಾರ ಮೀರುವ ಸಾಕಾರ ಉಂಟೆ? ಗುಹೇಶ್ವರ ಲಿಂಗವಮೀರುವ ಒಡೆತನವುಂಟೆ?[೧೭] ಹೀಗೆ ನಿರ್ಗುಣ ಉಪಾಸನೆ ಹೆಚ್ಚಾಗಿ ಈ ಈರ್ವರಲ್ಲಿಯೂ ಇದೆ. ವಚನಕಾರರಲ್ಲಿ ಭಗವಂತನ ಭಕ್ತಿಭಾವನೆ ಅಡಗಿದ್ದರೆ ಸೂಫಿಗಳಲ್ಲಿ ಪೂಜ್ಯಭಾವನೆಯಿಲ್ಲದ ಪ್ರೇಮ ಪೂರ್ವಕವಾದ ಪತಿ - ಸತಿಯರ ರಸಿಕತನವಿದೆ. ಚರಮ ಸ್ಥಿತಿಯನ್ನು ಕೂಡುವ ಬಯಕೆಗಿಂತ ದುರ್ಗಮ ಪ್ರೇಮ ಮಾರ್ಗವೇ ಸ್ವೀಕೃತವಾಗಿದೆ. ಪ್ರೇಮ ಜಗತ್ತಿನಲ್ಲಿರದಿದ್ದರೆ ಈ ಸೃಷ್ಟಿಯ ರಚನೆಯಾಗುತ್ತಿರಲಿಲ್ಲ. ಅದರೊಂದಿಗೆ ಹೃದಯವನ್ನು ಭಗವಂತನಿಗೆ ಅರ್ಪಿಸಬಹುದು. ಇದು ಜ್ಯೋತಿ ಸ್ವರೂಪ, ಜಾಗ್ರತ ಜೀವನದ ಸ್ಥಿತಿ, ಆದರೆ ಮರಣ ಪ್ರೇಮದ ನಿರ್ಜೀವ ಸ್ಥಿತಿ. ಜೀವಿಗಳು ಹುಟ್ಟಬಹುದು ಸಾಯಬಹುದು, ಪ್ರೇಮ ಮಾತ್ರ ಶಾಶ್ವತ. ಭಗವಂತನನ್ನು ಬೇಸರವಾಗದ ಹಾಗೆ ಸ್ತುತಿಸಿರುವರು. ಈ ಮಾನವ ಜನ್ಮ ಕೊನೆಯದು. ಆದ್ದರಿಂದಲೇ ಪರಮ ಸೌಂದರ್ಯ ಕೂಡಲು ಅಷ್ಟು ಕಾತುರವಿದೆ. ಆದರೆ ವಚನಕಾರರಲ್ಲಿ ಹಲವಾರು ಜನ್ಮಾಂತರಗಳಿವೆ. ಈ ಕೊನೆಯ ಮಾನವ ಜನ್ಮದಿಂದ ಭಗವಂತನನ್ನು ಆರಾಧಿಸಿ ಆನಂದ ಸಮರಸವನ್ನು ಹೊಂದಿ ಮುಕ್ತಿ ಪಡೆಯುವದಾಗಿದೆ. ಅಲ್ಲಾಹ ಅದು ಜ್ಯೋತಿ ಸ್ವರೂಪ ಲಿಂಗ ಬೇಧ ಹೇಳಲಾಗದು ಎನ್ನುವ ಇದು ದೇವರದಾಸಿಮಯ್ಯನ ''ಮೊಲೆ ಮೂಡಿ ಬಂದರೆ ಹೆಣ್ಣೆಂಬರು .......... ಒಳಗೆ ಸುಳಿವಾತ್ಮ ಗಂಡು ಅಲ್ಲ, ಹೆಣ್ಣು ಅಲ್ಲ''[೧೮] ಎನ್ನುವ ಮಾತನ್ನು ನೆನಪಿಸುತ್ತದೆ. ಇವರೀರ್ವರಲ್ಲಿಯು ಸಂಯೋಗ ಶೃಂಗಾರಕ್ಕಿಂತಲೂ ವಿನಿಯೋಗದ ಶೃಂಗಾರ ರಸವೇ ಮಹತ್ವವನ್ನು ಪಡೆದಿದೆ. ವಿರತಿ ಅನ್ನುವ ಭಾವ ವಚನಕಾರರಲ್ಲಿ ಗುರುತಿಸಿದಂತೆ ಸೂಫಿಗಳಲ್ಲಿ ರತಿ ಭಾವವಿದೆ. ಈ ಜಗತ್ತಿನ ಪ್ರತಿಯೊಂದು ಕಣಕಣದಲ್ಲಿ ಭಗವಂತನ ಅಸ್ತಿತ್ವವಿದೆ. ಹಲವಾರು ಈ ಸೃಷ್ಟಿಯ ರಹಸ್ಯವನ್ನು ಕಂಡು ಅದರಲ್ಲಿ ಹುದುಗಿರುವ ಶಕ್ತಿ ಕಂಡುಕೊಳ್ಳಬೇಕಿದೆ. ಆ ಮಹಾನ್ ಶಕ್ತಿಯಲ್ಲಿ ಲೀನವಾಗಲು ಅಪರಿಮಿತ ಕಷ್ಟವನ್ನು ಸಹಿಸಿ ಈ ಜಗತ್ತನ್ನು ತೃಣ ಸಮಾನವಾಗಿ ತಿಳಿದು ಗಿರಿ ಗಹ್ವರಗಳಲ್ಲಿ ಕೊಳ - ಕೆರೆಗಳಲ್ಲಿ ಶಕ್ತಿಯನ್ನು ಹುಡುಕಲು ಇವರೀರ್ವರು ತವಕಿಸಿದ್ದಾರೆ. 'ಅಳಿಲು ಸಂಕುಳವೇ ಮಾಮರವೆ .....' ಎನ್ನುವ ಅಕ್ಕಮಹಾದೇವಿ ವಚನ ಇದಕ್ಕೆ ಸಾಕ್ಷಿಯಾಗಿದೆ.

ವಿಯೋಗ ಶೃಂಗಾರಕ್ಕೆ ಮಹಾದೇವಿ ಅಕ್ಕನ ಅತ್ಯುತ್ತಮ ಭಾವನೆಗಳು ವಚನಗಳಲ್ಲಿ ಹುದುಗಿವೆ. ಅಕ್ಕಮಹಾದೇವಿ ತನ್ನ ಗಂಡ ಚನ್ನಮಲ್ಲಿಕಾರ್ಜುನ ಎಂದು ಹೇಳುವದು ಹೆಣ್ಣಿನ ಜೀವನಕ್ಕೆ ಯೋಗ್ಯವಾದರೂ ಗಂಡು ತನ್ನನ್ನು ಹೆಣ್ಣಾಗಿ ಭಾವಿಸಿ ಲಿಂಗದೇವನನ್ನು ಗಂಡಾಗಿ ಭಾವಿಸುವುದು ವಿಚಿತ್ರವಾದರೂ ಸಚಿತ್ರದ ಮಾತು, ಇಲ್ಲಿ ಶರಣಸತಿ ಲಿಂಗಪತಿ ಭಾವ ಹುದುಗಿದೆ. ಸೂಫಿ ಇಸ್ಲಾಂ ತತ್ವಗಳನ್ನು ಅಡಗಿಸಿಕೊಂಡಿದೆ. ಇವರಲ್ಲಿ ಸ್ವರ್ಗ - ನರಕ ಕಲ್ಪನೆಗಳು ಇಲ್ಲ. ಅಲ್ಲಾಹನ ಪ್ರೇಮ ಬಂಧನದಲ್ಲಿ ಇರುವಾಗ ಈ ಸ್ವರ್ಗ ನರಕಗಳ ಬೆದರಿಕೆ ಇಲ್ಲದ ಸೂಫಿ ಮಾರ್ಗವಾಗಿದೆ. ಸ್ವರ್ಗ ನರಕಗಳಿಗೆ ಹೆದರಿ ಭಯ ಭಕ್ತಿಯನ್ನು ತೋರುವ ಅವಶ್ಯಕತೆ ಇವರೀರ್ವರಲ್ಲಿಯೂ ಇಲ್ಲ. ಸತ್ಯವ ನುಡಿಯುವುದೇ ಸ್ವರ್ಗ ಮಿಥ್ಯವ ನುಡಿಯುವುದೇ ನರಕ ಎನ್ನುವ ಮಾತು ಈರ್ವರಿಗೂ ಅನ್ವಯವಾಗುವಂತಿದೆ. 'ಸ್ವರ್ಗ - ನರಕ', 'ಪುಣ್ಯ - ಪಾಪ', 'ಕಾಯಕವೇ ಕೈಲಾಸ' ಆಚಾರ ಅನಾಚಾರಗಳ ಕಲ್ಪನೆ ಇವರಲ್ಲಿಯೂ ಕೂಡಾ ಒಂದೇ ಆಗಿದೆ. ಪ್ರಾಣಿ ದಯೆಯ ವಿಚಾರದಲ್ಲಿ ದಯವಿಲ್ಲದ ಧರ್ಮ ಆವುದು ಎಂದು ವಚನಕಾರರು ಹೇಳಿದರೆ, ಸೂಫಿಗಳಲ್ಲಿ ಪ್ರಾಣಿ ಬಲಿ ಇರದಿದ್ದರೂ ಯಾರಾದರೂ ಕರೆದು ಆಹಾರಕ್ಕೆ ಮಾಂಸವನ್ನು ಕೊಟ್ಟರೆ ತಿನ್ನುವ ಮಾಂಸಾಹಾರಿಗಳಾಗಿರುವರು ಆದರೆ ವಚನಕಾರರು ಶುದ್ಧ ಶಾಖಾಹಾರಿಗಳು.

## ಆ. ದಾಸರು ಮತ್ತು ವಚನಕಾರರು

ಎರಡು ಸಾಹಿತ್ಯಗಳನ್ನು ತೌಲನಿಕವಾಗಿ ಅಧ್ಯಯನಮಾಡುವಾಗ, ಅವುಗಳ ಉಗಮ ಹೇಗಾಯಿತು? ಉಗಮಕ್ಕೆ ಮೂಲ ಪ್ರೇರಣೆಗಳು ಯಾವವು? ಸಾಹಿತ್ಯದಲ್ಲಿ ಹುದುಗಿದ ಆಶಯ - ಅಭಿವ್ಯಕ್ತಿ. ಶೈಲಿ - ಛಂದಸ್ಸು ಅನ್ಯೋನ್ಯ ಪ್ರಭಾವಗಳನ್ನು ನೋಡಬೇಕಾಗುತ್ತದೆ. ವಚನ ಸಾಹಿತ್ಯದ ಉಗಮ ೧೨ನೇ ಶತಮಾನದಲ್ಲಿ ಹಾಗೂ ೧೧ನೇ ಉತ್ತರಾರ್ಧದಲ್ಲಿ ರಚಿತವಾದದ್ದು ಕಂಡುಬರುವುದು. ೧೧ - ೧೨ನೇ ಶತಮಾನಗಳು ವಚನಕಾರರ ಕಾಲವಾದರೇ, ದೇವರ ದಾಸಿಮಯ್ಯ ಹಿರಿಯ ವಚನಕಾರ, ಆ ದೇವರ ದಾಸಿಮಯ್ಯನು ತನಗಿಂತ ಹಿಂದಿನ ಓಹಿಲ, ಉದ್ಭಟ, ಮಾದರಚನ್ನಯ್ಯ ಕೊಂಡಗುಳಿ ಕೇಶಿರಾಜ, ಡೋಹರ ಕಕ್ಕಯ್ಯ ಮತ್ತು ಕೆಂಭಾವಿ ಭೋಗಯ್ಯ ಈ ಶಿವಶರಣರ ಸ್ಮರಣೆ ಮಾಡಿದ್ದಾನೆ.[೧೯] ಅಂದರೆ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಇವರಿಬ್ಬರೂ ವಚನಕಾರರು. ಅವರ ವಚನಗಳು ದೊರೆಯುವವು.[೨೦] ಆದರೆ ಕೊಂಡಗುಳಿ ಕೇಶಿರಾಜ, ಓಹಿಲ, ಉದ್ಭಟ ವಚನಕಾರರಲ್ಲ. ಕೆಂಭಾವಿ ಭೋಗಣ್ಣನ ವಚನಗಳು ಸ್ಪಷ್ಟತೆಯನ್ನು ಪಡೆದುಕೊಂಡಿಲ್ಲ, ಓಹಿಲ ಮತ್ತು ಉದ್ಭಟರು ಕನ್ನಡಿಗರಲ್ಲ. ಇದು ವಚನ ಸಾಹಿತ್ಯ ಉಗಮದ ಅಂಶವಾಗಿದೆ.

ವಚನಕಾರರು ಮತ್ತು ದಾಸರು ಅನ್ನುವಲ್ಲಿ, ೧೨ನೇ ಶತಮಾನದ ಪ್ರಮುಖ ವಚನಕಾರರನ್ನು ತೆಗೆದುಕೊಂಡು ದಾಸರಲ್ಲಿ ಸಾಹಿತ್ಯ ಪ್ರಾರಂಭವಾದದ್ದು ೧೪ನೇ ಶತಮಾನದಲ್ಲಿ. ದಾಸರೆಂದರೆ ಪ್ರಮುಖರಾದ ಪುರಂದರದಾಸ ಮತ್ತು ಕನಕದಾಸರನ್ನು ಮುಖ್ಯವಾಗಿಟ್ಟುಕೊಂಡು ಆ ವಚನಕಾರರೊಂದಿಗೆ ಹೊಂದಿಸಿ ನೋಡಲಾಗಿದೆ. ವಚನಕಾರರಲ್ಲಿ ಮತ್ತು ದಾಸರಲ್ಲಿರುವ ಭಿನ್ನತೆ ಮತ್ತು ಸಾಮ್ಯತೆ, ವಚನಕಾರರ ಮೇಲೆ ಬಿದ್ದಿರುವ ವೇದ - ಉಪನಿಷತ್ತು - ಪುರಾಣಗಳ ಪ್ರಭಾವ ದಾಸರ ಮೇಲೆಯು ಆಗಿದೆಯೋ ಹೇಗೆ ಅದರಂತೆ ವಚನಕಾರರ ಪ್ರಭಾವ ದಾಸರ ಮೇಲೆ ಯಾವ ರೀತಿಯಾಗಿದೆ ಇಬ್ಬರಲ್ಲಿ ಕಾಣಬರುವ ದರ್ಶನದಲ್ಲಿ ಸಾಮ್ಯ, ಭಿನ್ನತೆಗಳು ದಾಸರಲ್ಲಿ ಕೀರ್ತನೆ, ಸುಳಾದಿ, ಉಗಾಭೋಗಗಳಿರುವಂತೆ ಮೊದಲಿನ ವಚನಕಾರರಲ್ಲಿ ಕೂಡಾ

ಪದ ಪದ್ಯಗಳಿವೆ. ಇದು ಒಂದು ಸಮಗ್ರವಾದ ತೌಲನಿಕ ಅಧ್ಯಯನವಲ್ಲದಿದ್ದರೂ ಸಮಗ್ರತೆಯ ಕಿರು ಕುರುಹನ್ನು ಅರಿಯುವಲ್ಲಿ ಸಹಾಯಕವಾಗುವಂತೆ ನೋಡಿದೆ. ಎರಡು ಸಾಹಿತ್ಯಗಳು ಸತ್ಯದ ದರ್ಶನ ಮಾಡಿಸುವ ಉದ್ದೇಶವನ್ನು ಹೊಂದಿವೆ. ವಚನ ಚಳುವಳಿ ಸಾಹಿತ್ಯದಲ್ಲಿ ಮಿಗಿಲಾದರೆ ದಾಸ ಚಳುವಳಿ ಸಂಗೀತದಿಂದ ಮಿಗಿಲೆನಿಸಿದೆ. ವಚನಕಾರರು ಸಮಾಜದಲ್ಲಿರುವ ಅಸಮಾನತೆಯ ಬಗ್ಗೆ ಹೋರಾಡಿ, ಚಳುವಳಿ ಮೂಲಕ ತಮ್ಮ ಸಾಹಿತ್ಯವನ್ನು ಪ್ರಚುರಪಡಿಸಿದರು. ದಾಸರು ಜಾತೀಯತೆಯನ್ನು ತಿರಸ್ಕರಿಸಿ ಸಾಹಿತ್ಯವನ್ನು ಸಂಗೀತದ ಮೂಲಕ ಹೊರಗೆಡವಿದರು. ಶರಣರದು ಹೋರಾಟ, ದಾಸರದು ಹುಡುಕಾಟ. ೧೨ನೇ ಶತಮಾನ ಕನ್ನಡದ ವಿಶಿಷ್ಟ ಗದ್ಯ ಪದ್ಯ ಮಿಶ್ರಿತ ಸಾಹಿತ್ಯ ಸಂಸ್ಕೃತಿಗೆ ಕೊಡುಗೆಯನ್ನು ಕೊಟ್ಟರೆ, ೧೬ನೇ ಶತಮಾನ ಕರ್ನಾಟಕ ಸಂಗೀತಕ್ಕೆ ದೇಣಿಗೆಯನ್ನು ನೀಡಿದೆ ಎನ್ನಬಹುದು. ಸಮಾಜ ಮತ್ತು ಧಾರ್ಮಿಕತೆಯಲ್ಲಿ ಹೇಗೆ ಬಾಳಬೇಕೆಂಬುದನ್ನು ಶರಣರು ಕಲಿಸಿದರೆ, ಪ್ರತಿ ಮನೆ ಮನೆಗೆ ಸಂಗೀತದ ಮುಖಾಂತರ ಆಧ್ಯಾತ್ಮಿಕ ಬದುಕಿನ ದಾರಿಯನ್ನು ದಾಸರು ತೋರಿಸಿಕೊಟ್ಟರು. ವಚನಕಾರರು ಧಾರ್ಮಿಕತೆಯಲ್ಲಿ ಉತ್ಕೃಷ್ಟ ಮಾರ್ಗೋಪಾಯಗಳನ್ನು ಹಾಕಿಕೊಟ್ಟರೆ ಇದ್ದ ಧಾರ್ಮಿಕವನ್ನೇ ಮನೆಮನೆ ಮುಟ್ಟಿಸುವಲ್ಲಿ ಒಂದು ಹೆಜ್ಜೆಯನ್ನು ದಾಸರು ಮುಂದೆ ಇಟ್ಟರೆನ್ನಬಹುದು. ೧೨ನೇ ಶತಮಾನದಲ್ಲಿ ವಚನಕಾರರ ಚಳುವಳಿ ಅಲ್ಲೋಲ ಕಲ್ಲೋಲಕ್ಕೆ ಕಾರಣವಾದರೆ, ದಾಸರಲ್ಲಿ ಅಂತಹ ಕ್ರಾಂತಿಯ ಅವಶ್ಯಕತೆಯಿರಲಿಲ್ಲ. ನುಡಿದಂತೆ ನಡೆಯುವ ಆದರ್ಶ ಜೀವನ ಇವರಲ್ಲಿ ಪ್ರಮುಖರು ಬಸವ, ಪ್ರಭು, ಚನ್ನಬಸವ, ಅಕ್ಕಮಹಾದೇವಿ ಇವರೊಂದಿಗೆ ಪುರಂದರದಾಸ, ಕನಕದಾಸರನ್ನು ತೆಗೆದುಕೊಂಡು ವಚನಕಾರರ ಪ್ರಭಾವ ದಾಸ ಸಾಹಿತ್ಯದ ಮೇಲೆ ಆಗಿರುವದನ್ನು ವಿಶ್ಲೇಷಿಸಲಾಗಿದೆ. ಪ್ರಭು ತಾತ್ವಿಕ ನಿಲುವನ್ನು ಹೊಂದಿದ್ದರಿಂದ ಆತನ ವಚನಗಳು ಗಡಸಾಗಿವೆ. 'ದಾಸರೆಂದರೆ ಪುರಂದರ ದಾಸರಯ್ಯ' ಎಂದು ವ್ಯಾಸರಾಯರು ಹೇಳಿದಂತೆ. ಈತ ದಾಸರಲ್ಲಿ ಪ್ರಮುಖ. ಈ ಪುರಂದರರ ಬಗ್ಗೆ ಹೇಳಿದರೆ ದಾಸರ ಬಗ್ಗೆ ಹೇಳಿದಂತೆಯೇ ಆಗುವದು. ಚಾರಿತ್ರಿಕ, ಧಾರ್ಮಿಕ ವಿಷಯಗಳಿಗೆ ಹಾಗೂ ಸಾಮಾಜಿಕಕ್ಕೆ ಸಂಬಂಧಿಸಿದಂತೆ ಸಾಮ್ಯತೆ ಇದ್ದಂತೆ ಭಿನ್ನತೆಯೂ ಕೂಡಾ ಇದೆ. ಮೊದಲು ಧರ್ಮಗಳಾಗಿ ಉದಿಸಿ ಕಾಲಾನಂತರದಲ್ಲಿ ಮತಗಳಾಗಿ ಸಂಘರ್ಷಕ್ಕೆ ಎಡೆಮಾಡಿಕೊಟ್ಟವು. ಯಾವ ಮತ ಹೆಚ್ಚು ನೇಮಗಳಿಂದ ಕೂಡಿತ್ತೊ, ನಿಬಂಧನೆಗಳನ್ನು ಹೊಂದಿತ್ತೊ, ಅದು ಆಚರಣೆಗೆ ಕಠಿವಾಗುವದರಿಂದ ಜನಸಾಮಾನ್ಯರಿಂದ ಬಹುದೂರ ಉಳಿಯಿತೆನ್ನಬಹುದು. ವೀರಶೈವ ಮಹಾಮತ ಸ್ಥಾಪನಾಚಾರ್ಯ ಮಹಾಗುರು ಬಸವಾದಿ ಅಲ್ಲಮಪ್ರಭು ಪ್ರಮಥರೆನ್ನಬಹುದು. ಇದು ವಚನಕಾರರ ಧಾರ್ಮಿಕ ಉಗಮದ ಹಿನ್ನಲೆಯಾದರೆ ಹರಿದಾಸರ ಪರಂಪರೆ ವಿಭಿನ್ನ ರೀತಿಯದ್ದಾಗಿದೆ. ಉಪನಿಷತ್ತಿನ ಭಕ್ತಿಮಾರ್ಗವನ್ನು ಮುಂದೆ ಬರಿಸುವಲ್ಲಿ ಆಚಾರತ್ರಯರು ಶ್ರಮಿಸಿದರಾದರೂ ದಕ್ಷಿಣಭಾರತದಲ್ಲಿ ಮದ್ವಾಚಾರ್ಯರ ಭಕ್ತಿಮಾರ್ಗಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆಯಿತು. ಈ ಮದ್ವರಲ್ಲಿ "ಭಾಗವತದ ನವವಿಧ ಭಕ್ತಿ ಮಾರ್ಗಗಳಾದ ಶ್ರವಣ, ಕೀರ್ತನ, ಸ್ಮರಣ, ಪಾದಸೇವನೆ, ಅರ್ಚನೆ, ವಂದನೆ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನೆ."[೨೧] ಕೀರ್ತನ, ದಾಸ್ಯ, ಸಖ್ಯ ಆತ್ಮನಿವೇದನೆಗಳು ಹೆಚ್ಚು ಮಹತ್ವವನ್ನು ಪಡೆಯುತ್ತಾ ಬಂದವು. ಈ ಭಕ್ತಿಮಾರ್ಗವನ್ನೇ ಹರಿದಾಸರು ಅಳವಡಿಸಿಕೊಂಡು 'ದ್ವೈತ' ದಾಸರೆನಿಸಿದರು. ದಾಸ ಪದ ಇದು ಒಂಭತ್ತು ತರದ ಭಕ್ತಿ ವಿಧಾನಗಳಲ್ಲಿ ಒಂದಾದ ದಾಸ್ಯ ಪದದಿಂದ ಬಂದುದು.

ತಾನು ಹರಿಯ ದಾಸ, ಆ ಪರಂಪರೆ ಹರಿದಾಸ ಪರಂಪರೆ. ಈ ಪರಂಪರೆಯ ಉಗಮ ಮದ್ವಾಚಾರ್ಯರಿಂದಾಯಿತು. ವೀರಶೈವ ಧಾರ್ಮಿಕ ಪ್ರಭು ಬಸವರಿಂದ ಆದಂತೆ ಹರಿದಾಸ ಪರಂಪರೆ (ಧಾರ್ಮಿಕ) ಮದ್ವರಿಂದಾಯಿತೆನ್ನಬಹುದು. ಈ ಮದ್ವರ ಕಾಲ ೧೩೨೪ ರಿಂದ ೧೩೩೩[೨೨] ಅಂದರೆ ೧೪ನೇ ಶತಮಾನ. ಈ ಮದ್ವ ಪೀಠಕ್ಕೆ, ಓರಿಸ್ಸಾ ರಾಜಧಾನಿಯಲ್ಲಿದ್ದ ನರಹರಿ ತೀರ್ಥರು[೨೩] ಮದ್ವಾಚಾರ್ಯರ ಶಿಷ್ಯರಾಗಿ ಮದ್ವಪೀಠವನ್ನು ಮೂರನೆಯದಾಗಿ ಅಲಂಕರಿಸಿದರು. ಈ ನರಹರಿ ತೀರ್ಥರು ಕನ್ನಡವನ್ನು ಕಲಿತು ಮೊಟ್ಟ ಮೊದಲನೆಯದಾಗಿ ಕೀರ್ತನಗಳನ್ನು ರಚಿಸಿದ್ದು ಕಂಡುಬರುತ್ತದೆ. 'ಹರಿಯೇ ಇದು ಸರಿಯೆ', 'ಎದುರ್ಯಾರೋ ಗುರುವೆ ಎದುರ್ಯಾರೋ', 'ನಿ ತಿಳ್ಯೋ ನಿನ್ನೊಳಗೆ', 'ಎಂತು ಮರುಳಾದೆ'[೨೪] ಮೊದಲಾದ ಕೀರ್ತನೆಗಳನ್ನು ರಚಿಸಿ ಹರಿದಾಸ ಪರಂಪರೆಯಲ್ಲಿ ಮೊದಲನೆಯ ಕೀರ್ತನಕಾರರೆನಿಸಿದರು. ಇವರ ನಂತರದಲ್ಲಿ ದ್ವೈತ ಮತದ ಪ್ರಚಾರಕರಾಗಿ ಕೀರ್ತನೆಗಳನ್ನು ರಚಿಸಿದವರಲ್ಲಿ ಶ್ರೀಪಾದರಾಯರು ಮತ್ತು ವ್ಯಾಸರಾಯರು ಪ್ರಮುಖರಾಗಿದ್ದಾರೆ. ವಿಜಯನಗರ ಸಾಮ್ರಾಜ್ಯದ ಮೂಡಲು ಬಾಗಿಲಿನಂತಿದ್ದ ಸ್ಥಳ, ಮುಳಬಾಗಿಲಿನಲ್ಲಿ ಮಠವನ್ನು ಸ್ಥಾಪಿಸಿದರು. ಈ ಶ್ರೀಪಾದರಾಯರ ಶಿಷ್ಯ ವ್ಯಾಸರಾಯರು. ಈ ಶ್ರೀಪಾದರಾಯರು ಅನೇಕ ಆತ್ಮಗೀತೆಗಳನ್ನು ರಚಿಸಿದ್ದಾರೆ. 'ಕಾಡ ಬೆಳದಿಂಗಳು ಈ ಸಂಸಾರ', 'ಅಕಟಕಟಾ ಸಂಸಾರವನ್ನು ನೆಚ್ಚಿ ಕೆಡಬೇಡ' ಭಾಗವತದ ೧೭ ಶ್ಲೋಕಗಳಿಂದ ಕೂಡಿದ ಭ್ರಮರ ಗೀತೆಯಲ್ಲದೆ ಕೀರ್ತನೆ, ಸುಳಾದಿ ಉಗಾಬೋಗಗಳನ್ನು ರಚಿಸಿದ್ದಾರೆ. 'ಮದ್ವನಾಮ' ಎಂಬ ಕೃತಿಯನ್ನು ರಚಿಸಿ ದ್ವೈತ ಸಿದ್ಧಾಂತದ ಪ್ರಮುಖ ಪ್ರವರ್ತಕರಾಗಿದ್ದಾರೆ. ಇವರ ನಂತರದಲ್ಲಿ ಇವರ ಶಿಷ್ಯ ವ್ಯಾಸರಾಯರು ೧೫ನೇ ಶತಮಾನದಲ್ಲಿದ್ದು, ವಿಜಯನಗರ ಸಂಸ್ಕೃತಿಯ ಉನ್ನತಿಗೆ ಕಾರಣರಾಗಿದ್ದಾರೆ. ಅದ್ವೈತ ಮತ ಶಂಕರಾಚಾರ್ಯರ ದಾರಿಯಲ್ಲಿ ವಿದ್ಯಾರಣ್ಯರು ಸಾಗಿದರೆ, ದ್ವೈತ ಮದ್ವಾಚಾರ್ಯರ ಮಾರ್ಗದಲ್ಲಿ ವ್ಯಾಸರಾಯರು ಮುನ್ನಡೆದಿದ್ದಾರೆ. ವ್ಯಾಸಕೂಟ, ದಾಸಕೂಟಗಳೆರಡನ್ನು ಹೊಂದಾಣಿಕೆ ಮಾಡಲು ಇವರು ಪ್ರಯತ್ನಿಸಿದರು. ವ್ಯಾಸರಾಯರ ಶಿಷ್ಯ ಪುರಂದರದಾಸರು ಮದ್ವ ತತ್ವಗಳನ್ನು ಅಂದರೆ ೧೪ನೇ ಶತಮಾನದಲ್ಲಿ ಪ್ರಾರಂಭವಾದ ದ್ವೈತ ಮತ ೧೬ನೇ ಶತಮಾನದಲ್ಲಿದ್ದ ಪುರಂದರದಾಸರಿಂದ ದ್ವೈತ ಮತ ಉಚ್ಛ್ರಾಯ ಸ್ಥಿತಿಯನ್ನು ಹೊಂದಿತೆನ್ನಬಹುದು. ಹೀಗೆ ಪುರಂದರದಾಸರ ಧಾರ್ಮಿಕ ಹಿನ್ನಲೆ, ವಚನಕಾರರ ಧಾರ್ಮಿಕ ಹಿನ್ನಲೆಗಿಂತ ಭಿನ್ನವಾಗಿದೆ. ವಚನಕಾರರಿಗಿಂತ ಪೂರ್ವದಲ್ಲಿ ಕಂದಾಚಾರ, ಮೂಢನಂಬಿಕೆ, ಅಜ್ಞಾನ, ಧರ್ಮಾಂಧಕಾರಗಳನ್ನು ಕಂಡರೆ, ಪುರಂದರದಾಸರ ಪೂರ್ವದಲ್ಲಿ ಒಳ್ಳೆ ಪರಿಪೂರ್ಣವಾದ ಆಧ್ಯಾತ್ಮಿಕತೆ ಇದ್ದದ್ದನ್ನು ಕಾಣಬಹುದು. ಆದರೆ ಅಂಥ ಶ್ರದ್ದತೆಗಳು ಎರಡು ಸಂದರ್ಭದಲ್ಲಿ ಕಂಡುಬರುತ್ತವೆ. ವಚನಕಾರರು ಶೈವ ಪ್ರಭೇದದ ಆಚಾರ ಸಿದ್ಧಾಂತಗಳನ್ನು ತೆಗೆದುಕೊಂಡು ಧರ್ಮ ಸ್ಥಾಪನೆಯನ್ನು ಮಾಡಿ ಕಠಿಣ ನಿಯಮಗಳನ್ನು ಹೊಂದಿದ ಗೊಡ್ಡು ಆಚರಣೆಗಳನ್ನು ತಿರಸ್ಕರಿಸಿ ಸಾಮಾನ್ಯ ಜನಕ್ಕೆ ಮುಟ್ಟುವಂತೆ ಧರ್ಮವನ್ನು ಸರಳೀಕರಣಗೊಳಿಸಿದರೆ, ದಾಸರು ತಮಗಿಂತ ಮೊದಲೆ ಪ್ರಚಲಿತವಾದ ದ್ವೈತ ಮತದಲ್ಲಿ ಯಥಾರೀತಿ ಸಾಗಿದರು. ಇಲ್ಲಿ ಬದಲಾವಣೆಯ ಅವಶ್ಯಕತೆ ಇರಲಿಲ್ಲ.

ವಚನಕಾರರ ಹಾಗೂ ದಾಸರ ರಾಜಕೀಯ ಹಿನ್ನಲೆಯು ವಿಭಿನ್ನತೆಯನ್ನು ಪಡೆದುಕೊಂಡಿದೆ. ವಚನಕಾರರಲ್ಲಿ ಕಲಚೂರಿ ಬಿಜ್ಜಳ ಆಶ್ರಯದಾತನಾದ, ಈ ಬಿಜ್ಜಳನ ಅಧಿಕಾರದಲ್ಲಿ ಮಂತ್ರಿ ಹಾಗೂ

ವಚನಕಾರ ಬಸವೇಶ್ವರನ ಆಶ್ರಯದಲ್ಲಿ ವಚನ ಚಳುವಳಿ ನಡೆಯಿತು. "ಈ ಅವಧಿಯಲ್ಲಿ ನಡೆದ ಮಹತ್ವಪೂರ್ಣ ಘಟನೆಯೊಂದು ಬಸವೇಶ್ವರರ ನೇತೃತ್ವದಲ್ಲಿ ಉಂಟಾದ ಧಾರ್ಮಿಕ, ಸಾಮಾಜಿಕ ಕ್ರಾಂತಿ,"[೨೯] ಕಲ್ಯಾಣ ಚಾಲುಕ್ಯರನ್ನು ಸದೆಬಡೆದು ಕಲಚೂರಿ ಬಿಜ್ಜಳ ಅಧಿಕಾರಕ್ಕೆ ಬಂದ ಸಂದರ್ಭವೇ ವಚನ ಚಳುವಳಿಯ ಉಚ್ಛ್ರಾಯಸ್ಥಿತಿ. ಈ ಬಿಜ್ಜಳನ ಹೆಸರು ಬಸವೇಶ್ವರನ ಮೂಲಕವಾಗಿಯೇ ಗಮನ ಸೆಳೆಯುವಂತಾಗಿದೆ. ಬಸವೇಶ್ವರನ ಮಂತ್ರಿ ತ್ಯಾಗವೇ ಈ ಬಿಜ್ಜಳನ ಆಳ್ವಿಕೆಯ ಕೊನೆ. ಹೀಗೆ ಧರ್ಮ ರಾಜಕೀಯದೊಂದಿಗೆ ಬೆರೆತು ಹೋಗಿತ್ತು. ರಾಜಕೀಯ ಧರ್ಮದೊಂದಿಗೆ ಕೂಡಿಕೊಂಡಿತ್ತೆನ್ನಬಹುದು. ವಚನಕಾರರ ರಾಜಕೀಯ ಹಿನ್ನಲೆ ಈ ತೆರನಾದರೆ, ಹರಿದಾಸರಿಗಿಂತ ಮೊದಲು ಮಹಮ್ಮದ ಬಿನ್ ತುಘಲಕರ, ಬಹುಮನಿ ಅರಸರ ಆಳ್ವಿಕೆಗಳಿದ್ದವು. ದಕ್ಷಿಣದಲ್ಲಿ ಮೊಗಲ್ ಸಾಮ್ರಾಜ್ಯದ ನಂತರ ಹೊಯ್ಸಳರು ನಂತರದಲ್ಲಿ ವಿಜಯನಗರ ಸ್ಥಾಪನೆಯಾಯಿತು. ಈ ವಿಜಯನಗರ ಅರಸರು ಮೂರು ಶತಮಾನಗಳ ಕಾಲ ರಾಜ್ಯವಾಳಿದರು. ೧೫ನೇ ಶತಮಾನದ ಪ್ರೌಢದೇವರಾಯನ ಕಾಲ ವಚನ ಚಳುವಳಿಯ ಪುನರುತ್ಥಾನದ ಸುವರ್ಣಯುಗವಾದರೇ, ೧೬ನೇ ಶತಮಾನದ ಕೃಷ್ಣದೇವರಾಯನ ಕಾಲ ಅಪೂರ್ವವಾದದ್ದು. ಈ ಕಾಲದಲ್ಲಿಯೇ ದಾಸರು ತಮ್ಮ ಸಾಹಿತ್ಯಗಳನ್ನು ರಚಿಸಿದರು. ವಚನಕಾರ ಪೂರ್ವದ ರಾಜಕೀಯ ಇತಿಹಾಸ ಕಲ್ಯಾಣ ಚಾಲುಕ್ಯರ ಮತ್ತು ಕಲಚೂರಿಗಳ ಮಧ್ಯೆ ದಂಗೆಗಳಾದರೆ ದಾಸರ ಪೂರ್ವ ಹಿಂದೂ - ಮುಸ್ಲಿಂ ದಂಗೆಗಳು ನಡೆದಿವೆ. ವಚನಕಾರರ ಧರ್ಮದ ಹೆಸರಿನಲ್ಲಿ ನಡೆದ ಜಾತಿ ಕಲಹ ರಾಜಕೀಯ ಅಸ್ಥಿರತೆಯನ್ನುಂಟುಮಾಡಿದರೇ ದಾಸ ಸಾಹಿತ್ಯದಲ್ಲಿ ಅಂತಹ ಸ್ಥಿತ್ಯಂತರ ಕಂಡುಬರುವುದಿಲ್ಲ. ಸಮೃದ್ಧ ಕೃಷ್ಣದೇವರಾಯನ ಆಳ್ವಿಕೆ ಸಮೃದ್ಧ ದಾಸ ಸಾಹಿತ್ಯಕ್ಕೆ ಕಾರಣವಾದುದೇ ಆಗಿದೆ. ಹಾಗೆ ಪುರಂದರದಾಸರ ಹಾಡುಗಳಲ್ಲಿ ಸಾಮಾಜಿಕ ಕಳಕಳಿಯನ್ನು ಕಾಣಬಹುದು. ದಾಸ ಸಾಹಿತ್ಯದ ಧಾರ್ಮಿಕ ಹಿನ್ನಲೆ ರಾಜಕೀಯ, ಸಾಮಾಜಿಕ ಕ್ಷೇತ್ರಗಳೊಂದಿಗೆ ಹೊಂದಿಕೆಯಾಗಿ ಬೆಳೆದುಬಂದಿದೆ. ವಚನ ಸಾಹಿತ್ಯ ಧಾರ್ಮಿಕಕ್ಕೆ ರಾಜಕೀಯವನ್ನು ಹೊಂದಿಸಿಕೊಂಡಿದೆ.

ಸಾಮಾಜಿಕ ಹಿನ್ನಲೆಯಾಗಿ ವಚನಕಾರರ ಪೂರ್ವದ ಸ್ಥಿತಿಯನ್ನು ನೋಡಿದರೆ ಅಸಮಾನತೆಯಿಂದ ಕೂಡಿದ, ಸಾಮಾಜಿಕ ಮೌಲ್ಯಗಳು ಕುಸಿದು ನೆಮ್ಮದಿ ಇರದ ಸಾಮಾಜಿಕ ಬದುಕುಯಿತ್ತು. ಜಾತಿ ಪದ್ಧತಿಯೊಂದಿಗೆ ಬ್ರಾಹ್ಮಣ, ಕ್ಷತ್ರಿಯರಿಗೆ ಸಮಾಜದಲ್ಲಿ ಹೆಚ್ಚಿನ ಅಧಿಕಾರ ಸೌಲಭ್ಯಗಳಿದ್ದು, ಶೂದ್ರರನ್ನು ಅತ್ಯಂತ ಕೀಳಾಗಿ ಕಾಣಲಾಗುತ್ತಿತ್ತಲ್ಲದೆ, ಅಸ್ಪೃಶ್ಯರೆಂಬ ಪಂಚಮವರ್ಣ, ಆ ಪಂಚಮರ ಸ್ಥಿತಿಯಂತೂ ಪ್ರಾಣಿಗಿಂತಲೂ ಕೀಳಾಗಿತ್ತು. ಹುಟ್ಟಿನಿಂದ ಜಾತಿ ನಿರ್ಧಾರವಾಗುತ್ತಿದ್ದರಿಂದ ಬ್ರಾಹ್ಮಣರಿಗೆ ಹೆಚ್ಚಿನ ಸೌಲಭ್ಯ ಸಿಗುತ್ತಿತ್ತು. 'ಸಮಾಜದಲ್ಲಿ ಅಂತರ್ಜಾತಿ ವಿವಾಹಕ್ಕೆ ಸಂಪೂರ್ಣ ವಿರೋಧವಿತ್ತು. ಧರ್ಮಶಾಸ್ತ್ರಗಳು ಅನುಲೋಮ ಪದ್ಧತಿಯ ವಿವಾಹಕ್ಕೆ ಒಪ್ಪಿಗೆಯನ್ನಿತ್ತಿದ್ದವು. ರಾಜನು ಅನೇಕ ರಾಣಿಯರನ್ನು ಹೊಂದಿರುತ್ತಿದ್ದ. ಒಂದೊಂದು ಜಾತಿಯಲ್ಲಿ ಹಲವಾರು ಉಪಜಾತಿಗಳಿದ್ದು ಆಯಾ ಒಳಪಂಗಡಗಳಲ್ಲಿಯೇ ಮದುವೆಯಾಗಬೇಕೆಂಬ ನಿಯಮಗಳಿದ್ದವು. ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡುವ ಪದ್ಧತಿಯಿತ್ತು.[೨೦] ಆ ಸಮಾಜದಲ್ಲಿ ಸ್ತ್ರೀಗೆ ಮೋಕ್ಷದಲ್ಲಿ ಅಧಿಕಾರವಿದ್ದಿಲ್ಲ. ಸೌಲತ್ತುಗಳಿಂದ ವಂಚಿತಳಾಗಿದ್ದು ಪುರುಷನ ನೆರಳಾಗಿ ಬದುಕಬೇಕಾಗಿತ್ತು. ವಿಧವೆಯಾಗಿ ಉಳಿಯಲು ಒಪ್ಪದಿದ್ದರೆ ಪತಿಯೊಂದಿಗೆ ಚಿತೆಯನ್ನು ಏರಬೇಕಾದ ಅನಿವಾರ್ಯತೆ ಇತ್ತು. ಈ ಸಹಗಮನ ಪದ್ಧತಿ ಹೆಚ್ಚಾಗಿ ಕ್ಷತ್ರಿಯರಲ್ಲಿತ್ತು. ಸಮಾಜವನ್ನು ಭಾಗಮಾಡುವ

ಅಂಶಗಳೆಂದರೆ ಉದ್ಯೋಗ ಬೇಧಗಳು. ಇವೆಲ್ಲವುಗಳಿಂದ ವಚನಕಾರರು ಅಂದಿನ ಸಮಾಜದ ವ್ಯವಸ್ಥೆಯ ವಿರುದ್ಧ ದನಿ ಎತ್ತಲು ಕಾರಣವಾಯಿತು. ಅಸಮಾನತೆಯಿಂದ ಕೂಡಿದ ತೀವ್ರ ಶೋಷಣೆಗೆ ಒಳಗಾದ ಕಾರ್ಯ ಜೀವಿಗಳೆಲ್ಲಾ ಬಸವೇಶ್ವರನ ನೇತೃತ್ವದಲ್ಲಿ ಪ್ರಭುವಿನ ಅಧ್ಯಕ್ಷತೆಯಲ್ಲಿ ಚಳುವಳಿ ಸಂಘಟಿತವಾಯಿತು. ಬಸವೇಶ್ವರರ ಪೂರ್ವದಲ್ಲಿರುವ ಈ ಸಾಮಾಜಿಕ ದಾರುಣಸ್ಥಿತಿಯು ಪುರಂದರದಾಸರ ಕಾಲಕ್ಕಿರಲಿಲ್ಲ. ಆದರೆ ಜಾತಿಕಲಹಗಳಿಂದ ಸಮಾಜ ಮುಕ್ತವಾಗಿರಲಿಲ್ಲ. ಆದರೆ ದಾಸರ ಪೂರ್ವ ಸಾಮಾಜಿಕ ಸ್ಥಿತಿ ಮಹಮ್ಮದೀಯರ ಆಕ್ರಮಣದಿಂದ ಬಹುಮನಿ ಸುಲ್ತಾನರ ಆಳ್ವಿಕೆಯಿಂದ ಸಾಮಾನ್ಯ ಜನರ ಬದುಕು ತೃಪ್ತಿಕರವಾಗಿರಲಿಲ್ಲ. ಸುಲ್ತಾನರು ಹಿಂದೂ ಮಹಿಳೆಯನ್ನು ಮದುವೆಯಾದರೂ ಜಾತಿಯ ಸಂಘರ್ಷಗಳು ಅಲ್ಲಲ್ಲಿ ಕಂಡುಬರುತ್ತಿದ್ದವು. ಅಸ್ಪೃಶ್ಯರು ಊರ ಹೊರಗಿನ ಗುಡಿಸಲುಗಳಲ್ಲೇ ಇರಬೇಕಾಗಿತ್ತು. ಊರ ಬಾವಿಯಿಂದ ನೀರನ್ನು ತರುವ ಹಕ್ಕು ಇರಲಿಲ್ಲ. ವಚನಕಾರರ ಚಳುವಳಿಯಿಂದ ಸರಿಸಮಾನವಾಗಿ ಬಾಳಿದ ಅಂತ್ಯಜರು ಪುರಂದರದಾಸರ ಕಾಲಕ್ಕೆ ಹೊರಗೆ ಉಳಿಯಬೇಕಾಗಿತ್ತು. ಇದಕ್ಕೆ ಪುರಂದರದಾಸರ 'ಹೊಲೆಯ ಊರ ಹೊರಗಿಹನೇ? ಊರೊಳಗಿಲ್ಲವೆ'[೨೭] ಎಂಬುದನ್ನು ಹಾಡುತ್ತಾರೆ. ಮೂರನೇ ಮಹಮ್ಮದ್ ಷಾಹನ ಆಳ್ವಿಕೆ ಮುಗಿಯುತ್ತಾ ಬಂದಿತ್ತು. ಶ್ರೀಕೃಷ್ಣದೇವರಾಯ ವ್ಯಾಸರಾಯರ ಶಿಷ್ಯನಾಗಿದ್ದರಿಂದ ಪುರಂದರದಾಸ ಮತ್ತು ಶ್ರೀಕೃಷ್ಣದೇವರಾಯ ಇಬ್ಬರು ಸಮಕಾಲೀನರಾಗಿದ್ದಾರೆ. ದಾಸ ಸಾಹಿತ್ಯಕ್ಕಿಂತ ಎರಡು ಶತಮಾನಗಳ ಹಿಂದೆ ವಚನ ಸಾಹಿತ್ಯ, ತತ್ವಜ್ಞಾನ, ಆಧ್ಯಾತ್ಮಿಕ ಸಾಧನೆ ಸಮಾನತೆಯ ನವಸಮಾಜ ನಿರ್ಮಾಣ, ನಿಸ್ಸಂಕೋಚಾತ್ಮಕವಾದ ಆತ್ಮ ವಿಮರ್ಶೆಯೊಂದಿಗೆ ಸಂಪ್ರದಾಯ ಸಂಕೋಲೆಗಳನ್ನು ಹರೆದೊಗೆದ ವಚನಕಾರರ ದರ್ಶನವೇ ವಚನ ಸಾಹಿತ್ಯಕ್ಕೆ ಮೂಲ ಪ್ರೇರಣೆಯಾಗಿದೆ. ಉನ್ನತ ಜೀವನ ಆದರ್ಶ ಜೀವನವನ್ನು ಎತ್ತಿ ಹಿಡಿದು, ಸಮಾಜಕ್ಕೆ ಮಾರಕವಾದ ನಡೆನುಡಿಗಳನ್ನು ಅಲ್ಲಗಳೆಯುವ, ವ್ಯಷ್ಠಿ, ಸಮಷ್ಠಿಗಳ ಆಧ್ಯಾತ್ಮ ಗುರಿಯನ್ನಾಗಿಸಿ ಎಲ್ಲರು ಇದನ್ನು ಅನುಸರಿಸಬೇಕೆಂಬ ಆಗ್ರಹವಿಲ್ಲದೆ ತನ್ನನ್ನು ತಾನು ತಿಳಿದು ಆರು ಸ್ಥಲಗಳ ಮೆಟ್ಟಿಲುಗಳನ್ನೇರಿ ಅನುಭಾವದ ಪರಮ ಸಿದ್ಧಿಯನ್ನು ಮುಟ್ಟುವ ಅನನ್ಯ ಸಾಹಿತ್ಯವಾಗಿದೆ. ಆದರೆ ದಾಸ ಸಾಹಿತ್ಯಕ್ಕೆ ಮಧ್ವಮತದ ತತ್ವಜ್ಞಾನವು ಭಾಗವತ ದೃಷ್ಟಿಯೊಂದಿಗೆ ಪ್ರೇರಣೆ ಕಂಡುಕೊಂಡಿದೆ. ಅಲ್ಲಿ ನವಸಮಾಜ ನಿರ್ಮಾಣದ ತೊಡಕಿಲ್ಲ. ಮೌಲ್ಯ ಸತ್ಯಗಳನ್ನು ಎತ್ತಿಹಿಡಿದು ಅನರ್ಥದ ವಿಚಾರಗಳನ್ನು ಖಂಡಿಸುತ್ತದೆ. ಸಮರ್ಪಣ ಮನೋಭಾವದಲ್ಲಿಯೇ ದನ್ಯತೆಯನ್ನು ಪಡೆಯುವದನ್ನು ಕಾಣಬಹುದು. ದಾಸ ಸಾಹಿತ್ಯ ಮತ್ತು ವಚನ ಸಾಹಿತ್ಯ ಇವೆರಡರಲ್ಲಿ ಮೂಲ ತುಡಿತ ಸಮರ್ಪಣೆ ಮನೋಭಾವದ್ದಾಗಿದೆ. ಎರಡಕ್ಕೂ ಸಮಾನವಾದದ್ದು ಪರಮಾತ್ಮನಲ್ಲಿ ನಿಶ್ಚಲ ಭಕ್ತಿಯನ್ನು ಇಡುವುದಾಗಿದೆ. ಹರಿದಾಸ ಪದ ಮತ್ತು ಶಿವಶರಣ ಪದಗಳು ಒಂದೇ ಅರ್ಥವನ್ನು ಹೇಳುವಂತಿವೆ. ವಿಶಾಲಾರ್ಥದಲ್ಲಿ ನೋಡಿದಾಗ ಶರಣ ಸಾಹಿತ್ಯವೇ ದಾಸ ಸಾಹಿತ್ಯಕ್ಕೆ ಮೂಲ ಪ್ರೇರಣೆಯೆಂಬುದು ವಿಧಿತವಾಗುವುದು. ಆಧ್ಯಾತ್ಮಿಕ ಸಾಧನೆಯಲ್ಲಿ ಈ ಎರಡಕ್ಕೂ ವಿಶ್ವಾಸವಿದೆ. ಇಬ್ಬರಲ್ಲಿಯೂ ತತ್ವಕ್ಕಿಂತ ಹೆಚ್ಚು ಆಂತರಿಕ ಅನುಭವಕ್ಕೆ ಮಹತ್ವವನ್ನು ಕೊಟ್ಟಿವೆ. ಜೀವನದ ನಶ್ವರತೆಯ ಅರಿವನ್ನು ಹುಟ್ಟಿಸಿ ವೈರಾಗ್ಯ ಮುಖವಾದರೂ ಕೂಡಾ ಭಕ್ತಿ, ಸಮರ್ಪಣ ಪ್ರಜ್ಞೆಯಿಂದ ಸಾಗಿದೆ. ಸಮಾಜದಲ್ಲಿಯ ದೋಷಗಳನ್ನು ಖಂಡಿಸಿ ಆಧ್ಯಾತ್ಮಿಕ ನೈತಿಕ ಮೌಲ್ಯಗಳನ್ನು ಪ್ರಚುರ ಪಡಿಸುವ ಹಂಬಲ ಎರಡರಲ್ಲಿಯೂ ಕಂಡುಬರುತ್ತದೆ. ವಚನ ಸಾಹಿತ್ಯದ ತತ್ವಸಿದ್ಧಾಂತ ಶಕ್ತಿ ವಿಶಿಷ್ಟಾದ್ವೈತವಾದರೇ ದಾಸ ಸಾಹಿತ್ಯದ ತತ್ವ ಮಧ್ವಪ್ರಣೀತ ದ್ವೈತದರ್ಶನವಾಗಿದೆ. ಇದರ ಸಾಧನ ಸಿದ್ಧಿಗಳ ಮೂಲ ಭಾಗವತವಾದರೇ

ವೇದ ವೇದಾಂತಗಳ ಪ್ರಾಮಣ್ಯವನ್ನು ಒಪ್ಪುತ್ತದೆ. ಇದು ಚಾತುರ್ವರ್ಣವನ್ನು ಒಪ್ಪಿಕೊಂಡರೆ, ವಚನಸಾಹಿತ್ಯ ಹರನ ಪರವಾಗಿದ್ದು ಶೈವಾಗಮಗಳನ್ನು ಒಪ್ಪಿ ವರ್ಣಾಶ್ರಮವನ್ನು ಧಿಕ್ಕರಿಸುತ್ತದೆ. ಆದರೆ ದಾಸ ಸಾಹಿತ್ಯ ಹರಿ ಪರವಾಗಿದೆ.

ಪಂಡಿತರ ಸೊತ್ತಾಗಿದ್ದ ದರ್ಶನ ಸಾಹಿತ್ಯ ವಚನಕಾರರ ಕಾಲದಲ್ಲಿ ಪಾಮರರ ಕಡೆಗೆ ಧಾವಿಸಿ ಬಂದಂತಾಯಿತು. "ಸಂಸ್ಕೃತ ಪ್ರಭಾವದಿಂದ ದೂರನಿಂತು ರೂಪ ತುಂಬಾ ವಿಶಿಷ್ಟವಾದುದು. ಭಾಷೆ, ಸ್ವರೂಪ, ಛಂದಸ್ಸು, ಲಯ, ಶೈಲಿ ಎಲ್ಲ ರೀತಿಯಿಂದಲೂ ವಿಶಿಷ್ಟವಾಗಿ ಕಾಣುವ 'ವಚನ' ಗದ್ಯದ ಸೊಗಡನ್ನು, ಪದ್ಯದ ಲಯವನ್ನು ಏಕಕಾಲಕ್ಕೆ ಸಮೀಕರಿಸಿಕೊಂಡ ಕನ್ನಡ ಸಾಹಿತ್ಯದ ನವೀನ ರೂಪ."[೨೮] ಈ ವಚನ ಚಳುವಳಿ ಪ್ರಾರಂಭವಾದದ್ದು ಪ್ರಭು ಬಸವಾದಿ ಪ್ರಮಥರ ಕಾಲದಲ್ಲಿಯೆ. ಬಸವೇಶ್ವರರು ತನ್ನ ವಚನದಲ್ಲಿ ಕಿನ್ನರಿ ಬೊಮ್ಮಯ್ಯ, ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ, ಚಿಕ್ಕಯ್ಯ ಮುಂತಾದವರನ್ನು ಅಪ್ಪ, ಬೊಪ್ಪ, ಅಯ್ಯಾ ಎಂದು ಸಂಭೋದಿಸಿದ್ದರಿಂದ ಬಸವೇಶ್ವರ ಹಿರಿಯ ಸಮಕಾಲೀನ ವಚನಕಾರರಾಗಿರಬಹುದು. ಆ ಕಾಲಕ್ಕೆ ಹಳೆಯದಾದ ಚಂಪೂ ಸಾಹಿತ್ಯ ಜನತೆಯಿಂದ ದೂರಾಗಿ ಹೊಸದಾಗಿ ರಚಿತವಾದ ವಚನ ಸಾಹಿತ್ಯ ಸರಳತೆ ಸ್ಪಷ್ಟತೆಯಿಂದ ಜನ ಸಾಮಾನ್ಯರನ್ನು ಬಹುಬೇಗ ಆಕರ್ಷಿಸಿತು. ಶೌರ್ಯ ಸಾಹಸ ಮಹತ್ವಾಕಾಂಕ್ಷೆಗಳ ಕಾಲ ಮುಗಿದು ವಂಚನೆ, ಕಪಟಗಳು ಕಾಣಿಸಿಕೊಂಡು ಸಾಮಾಜಿಕವನ್ನು ಅಲ್ಲೋಲ ಕಲ್ಲೋಲವಾಗಿಸಿರುವಾಗ ಈ ವಚನ ಸಾಹಿತ್ಯ ಹುಟ್ಟಿಕೊಂಡಿತ್ತೆನ್ನಬಹುದು. ಧಾರ್ಮಿಕದಿಂದಲೇ ಈ ಚಳುವಳಿ ಪ್ರಾರಂಭವಾದರೂ ಕೂಡಾ ಸಾಹಿತ್ಯಕ್ಕೆ ವಿಶೇಷ ಚಳುವಳಿಯನ್ನು ನೀಡಿದೆ. ಹರಿಹರ, ರಾಘವಾಂಕ, ಚಾಮರಸ, ತೋಂಟದ ಸಿದ್ಧಲಿಂಗೇಶ, ಶೂನ್ಯ ಸಂಪಾದನೆಕಾರರು ಈ ವಚನ ಸಿದ್ಧಾಂತವನ್ನು ಸಾಹಿತ್ಯವನ್ನು ಪುನರುಜ್ಜೀವನ ಮಾಡಿದರೆ, ಕುಮಾರವ್ಯಾಸ ವಾಲ್ಮೀಕಿಯರಂತಹ ಕವಿಗಳು ವೈಷ್ಣವ ಧರ್ಮವನ್ನು ಕಾವ್ಯದ ಮೂಲಕ ತಿಳಿಸಿದ್ದಾರೆ. ವಿಜಯನಗರ ಅರಸರ ಕಾಲದಲ್ಲಿ, ಅದರಲ್ಲಿ ಎರಡನೇ ದೇವರಾಯನು ವಚನಸಾಹಿತ್ಯದ ಪುನರುಜ್ಜೀವನಕ್ಕೆ ಕಾರಣನಾದವನೆಂದು ತಿಳಿದುಬರುತ್ತದೆ. ಈ ಅರಸನ ದಂಡನಾಯಕರಾದ ಲಕ್ಕಣ ಮತ್ತು ಜಕ್ಕಣ ವೀರಶೈವ ಕವಿಗಳಾಗಿದ್ದರು. ಅದರಂತೆ ಚಾಮರಸನು ಕೂಡಾ ಇವರ ಸಮಕಾಲೀನ. ಆದರೆ ಹರಿದಾಸ ಸಾಹಿತ್ಯದಲ್ಲಿ ಪುರಂದರದಾಸರು ಕೀರ್ತನೆಗಳನ್ನು ರಚಿಸುವುದಕ್ಕಿಂತ ಪೂರ್ವ ೧೨ನೇ ಶತಮಾನದಲ್ಲಿ ಶಿವಶರಣರು ರಚಿಸಿರುವ ಸ್ವರ ವಚನಗಳಲ್ಲಿ ಈ ಕೀರ್ತನೆಗಳ ಹಾದಿಯನ್ನು ಕಾಣಬಹುದು. ಈ ಸ್ವರ ವಚನಕಾರರಲ್ಲಿ ಮೊದಲು ಕೀರ್ತನಕಾರನಾಗಿ ಸಕಲೇಶ ಮಾದರಸ ಕಾಣಿಸಿಕೊಳ್ಳುತ್ತಾನೆ. ಎಲ್ಲ ಪ್ರಮುಖ ವಚನಕಾರರು ಸ್ವರ ವಚನಗಳನ್ನು ರಚಿಸುವುದಾದರೂ ಕೀರ್ತನ ಎಂಬ ಹಾಡುಗಬ್ಬವನ್ನು ಕನ್ನಡದಲ್ಲಿ ದಾಖಲಿಸಿದವರು ಹರಿದಾಸರೇ ಎನ್ನಬಹುದು. ಪುರಂದರದಾಸರಿಗಿಂತ ಪೂರ್ವದಲ್ಲಿ ನರಹರಿ ತೀರ್ಥರು, ಶ್ರೀಪಾದರಾಯರು ಮತ್ತು ವ್ಯಾಸರಾಯರ ಕೀರ್ತನೆಗಳನ್ನು ನೋಡಬಹುದು. ಹರಿದಾಸ ಪರಂಪರೆಯಲ್ಲಿ ನರಹರಿತೀರ್ಥರೇ ಮೊದಲ ಕೀರ್ತನಕಾರರಾಗಿದ್ದಾರೆ. ಇವರ ನಾಮಾಂಕಿತ ನರಹರಿ - ರಘುಪತಿ. ಇವರು ಒಂದು ಶತಮಾನದ ನಂತರ ಶ್ರೀಪಾದರಾಯರು 'ರಂಗವಿಠಲ' ಎಂಬ ನಾಮಾಂಕಿತದಿಂದ ಸುಳಾದಿ, ಉಗಾಬೋಗಗಳನ್ನು ರಚಿಸಿದ್ದಾರೆ. ಇವರ ಶಿಷ್ಯ ವ್ಯಾಸರಾಯ. 'ಶ್ರೀಕೃಷ್ಣ' ಎಂಬ ಅಂಕಿತದೊಂದಿಗೆ ದಾಸ ಸಾಹಿತ್ಯ ಪ್ರಖರವಾಗಿ ಬೆಳಗಿತ್ತೆನ್ನಬಹುದು. ಈ ಕೀರ್ತನೆ ಪ್ರಾರಂಭ ನರಹರಿ ತೀರ್ಥರಿಂದಾದರೂ ಪುರಂದರ ಕಾಲದಲ್ಲಿ ಅವರದೇ

ಆದ ಸ್ವಂತಿಕೆಯಿಂದ ಉಚ್ಛ್ರಾಯ ಸ್ಥಿತಿಯನ್ನು ಪಡೆದುಕೊಂಡಿದೆ. ೧೨ನೇ ಶತಮಾನದ ವೀರಶೈವವು ವಚನ ಪರಂಪರೆಯಾಗಿ ೧೫ನೇ ಶತಮಾನದವರೆಗೆ ಮುಂದುವರೆದರೆ ೧೫ನೇ ಶತಮಾನದ ಹರಿದಾಸಪರಂಪರೆ ವ್ಯಾಸಕೂಟದಿಂದ ದಾಸಕೂಟದ ಕಡೆಗೆ ಸಾಗಿದ್ದನ್ನು ಕಾಣಬಹುದು. ವಚನಕಾರರು ಹಳೆಗನ್ನಡವನ್ನು ನಡುಗನ್ನಡಕ್ಕೆ ತಂದರೆ, ದಾಸರು ನಡುಗನ್ನಡವನ್ನು ಹೊಸಗನ್ನಡಕ್ಕೆ ತಂದಿದ್ದಾರೆ. ಸಾಂಪ್ರದಾಯಿಕವಾದ ಸಂಸ್ಕೃತದ ಸಾಹಿತ್ಯಕ ರೂಪಗಳನ್ನು ಕೈಬಿಟ್ಟ ವಚನಕಾರರು ವಚನ ಸ್ವರ ವಚನಗಳನ್ನು ಬರೆದರೆ, ಸಂಸ್ಕೃತದಲ್ಲಿ ಕೀರ್ತನೆಗಳನ್ನು ರಚಿಸುತ್ತಿದ್ದ ವ್ಯಾಸಕೂಟಕ್ಕೆ ಪರ್ಯಾಯವಾಗಿ ದಾಸಕೂಟವನ್ನು ಕಟ್ಟಿ ಕನ್ನಡದ ಕೀರ್ತನೆಗಳನ್ನು ರಚಿಸಿದರು. ವೀರಶೈವ ಸಾಹಿತ್ಯಕ್ಕೆ ಸಂಸ್ಕೃತದ ಹಿನ್ನಲೆ ಇದ್ದರೂ ಕೂಡಾ ''ಲಲಿತವಾದ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೇ, ಸಂಸ್ಕೃತದೊಳಿನ್ನೇನು? ಎಂಬಂತಹ ಸಂಸ್ಕೃತದ ವಿರುದ್ಧ ವೀರ ನಿರ್ಣಯಕ್ಕೂ ಬಂದರೂ ಸಹಿತ ಬಸವಾದಿ ಪ್ರಮಥರಿಗಾಗಲೀ ಸಂಸ್ಕೃತದ ಬಗ್ಗೆ ದ್ವೇಷವಾಗಲೀ, ವ್ಯಾಮೋಹವಾಗಲೀ, ಇಲ್ಲದೆ, ಕನ್ನಡದ ಬಗ್ಗೆ ಅಭಿಮಾನವು ಭರವಸೆಯು ಇದ್ದುದು ಅವರ ಸಮ ಚಿತ್ತವನ್ನು, ಸಾಮಾನ್ಯದಲ್ಲಿ ಹುದುಗಿರುವ ಸಾಧ್ಯತೆಗಳನ್ನು ಗುರುತಿಸುವ ಜಾಣ್ಮೆಯನ್ನು ತೋರಿಸುತ್ತದೆ.''[೨೯]

ಕನ್ನಡವನ್ನು ಆಧ್ಯಾತ್ಮಿಕ ಭಾಷೆಯನ್ನಾಗಿ ಮೊಟ್ಟಮೊದಲಬಾರಿಗೆ ಅಳವಡಿಸಿಕೊಂಡವರು ಬಸವಾದಿ ವಚನಕಾರರೇ ಆಗಿದ್ದಾರೆ. ಬ್ರಾಹ್ಮಣ ಸಾಹಿತ್ಯ ಒಂದು ಶತಮಾನಗಳ ನಂತರದಲ್ಲಿ ಆಧ್ಯಾತ್ಮಿಕವಾಗಿ ಕನ್ನಡ ಭಾಷೆಯನ್ನು ಉಪಯೋಗಿಸಿಕೊಂಡಿತು. ಶ್ರೀಪಾದರಾಯ ಮತ್ತು ವ್ಯಾಸರಾಯರಂತಹ ದಿಟ್ಟತನ ಔದಾರ್ಯ ವಿವೇಕಗಳಿಂದ ಕೂಡಿದ ಮಠಾಧೀಶರು, ಭಾವಜ್ಞರು, ಭಾಷಾವಿಧನು, ಭಾಗವತದ ಶಿರೋಮಣಿಯಾದ ಪುರಂದರದಾಸರಂತಹ ಅಪೂರ್ವ ಚೇತನಗಳು ಬಾರದೇ ಹೋಗಿದ್ದರೆ ಇನ್ನೂ ತಡವಾಗುತ್ತಿತ್ತು.[೩೦] ಹೀಗೆ ದಾಸರು ವಚನಕಾರರ ನಂತರದಲ್ಲಿ ಕನ್ನಡವನ್ನು ಆಧ್ಯಾತ್ಮ ಭಾಷೆಯನ್ನಾಗಿ ಬೆಳಸಿದರು. ವ್ಯಾಸಕೂಟದ ಕೀರ್ತನೆ ಸಂಸ್ಕೃತಗಳಲ್ಲಿದ್ದಂತೆ ವೀರಶೈವ ವಚನಕಾರರಿಗೆ ಸಾಕಷ್ಟು ಸಂಸ್ಕೃತ ಪಾಂಡಿತ್ಯವಿತ್ತು. ಬಸವನ ವಚನಗಳಲ್ಲಿ ಲಿಂಗದೀಕ್ಷೆಯನ್ನು ಹೇಳುವಾಗ, ಮದ್ಯ ಮಾಂಸಾದಿಗಳನ್ನು ವರ್ಜಿಸಬೇಕೆನ್ನುವಾಗ ಜಂಗಮ ಲಿಂಗದಲ್ಲಿ ವೀರಶೈವದಾಸ ಮನೋಭಾವವುಳ್ಳವನೆನ್ನುವಾಗ ಮಹೇಶ್ವರ ಎನ್ನುವಾಗ, ಶಿವಭಕ್ತನಾದ ಬಳಿಕ ಕುಲವನರಿಸಬಾರದು ಎಂದಾಗ, ಕ್ರಮವಾಗಿ ಗಣಬಾಷಿತರತ್ನ ಮಾಲೆಯ ಪುಟ - ೧೭೭, ೨೫೫, ೨೬೫, ೨೬೮. ಆಗಮಗಳನ್ನು ಬಳಸಿಕೊಂಡದ್ದು ಕಾಣಬರುತ್ತದೆ. ಅದರಂತೆ ಅಲ್ಲಮಪ್ರಭು ಜಂಗಮಲಕ್ಷಣವನ್ನು ಹೇಳಲು ಶಿವ ರಹಸ್ಯದ ಉಲ್ಲೇಖ ಮಾಡಿದ್ದಾರೆ. "ವೀರಶೈವ ಕನ್ನಡ ಸಾಹಿತ್ಯಕ್ಕೆ ಬಹಳ ಪ್ರಾಚೀನ ಕಾಲದಿಂದಲೂ ವಿಪುಲವಾದ ಸಂಸ್ಕೃತ ಭಂಡಾರದ ಹಿನ್ನಲೆ ಇತ್ತೆಂಬುದನ್ನು ಮನಗಾಣಬಹುದು.''[೩೧] ಅಂದರೆ ಅನೇಕ ವಚನಕಾರರು ತಮ್ಮ ವಚನದಲ್ಲಿ ಸಂಸ್ಕೃತ ಆಕರಗಳನ್ನು ಬಳಸಿದ್ದಾರೆ. ಶೈವ ಮತ್ತು ವೀರಶೈವ ಒಟ್ಟಾಗಿಯಿದ್ದಾಗ ಬಳಸಿದ ಕೆಲವು ಸಂಸ್ಕೃತಭಾಗಗಳನ್ನು ಬಸವಾದಿ ವಚನಕಾರರು ಜ್ಞಾನ ಪಿಪಾಸೆಗಾಗಿ ಮಾತ್ರ ತೆಗೆದುಕೊಂಡು, ವಚನ ಚಳುವಳಿಯ ಸಮರ್ಥನೆಗೆ ಬಳಸಿಕೊಂಡರೂ ಕೂಡಾ ತಮ್ಮದೇ ಆದ ಸ್ವಂತಿಕೆಯನ್ನು ಇಟ್ಟುಕೊಳ್ಳುವಲ್ಲಿ ಯಶಸ್ವಿಯಾದರು. ಷಟಸ್ಥಲದ ಕೆಲವು ಕ್ರಮಗಳು, ವೀರಾಗಮ, ಮುಂತಾದವುಗಳಲ್ಲಿ ಬಂದರೂ ಕೂಡಾ ಅವುಗಳಿಗೆ ವಿಶಿಷ್ಟಾರ್ಥವನ್ನು ಕಲ್ಪಿಸಿದವರು ವಚನಕಾರರೇ ಆಗಿದ್ದಾರೆ. ಹಲವಾರು ಪಾರಮಾರ್ಥಿಕ ವ್ಯವಹಾರಗಳಲ್ಲಿ ವಚನಕಾರರು ಪುರಾಣ ಆಗಮಗಳನ್ನು ಬಳಸಿಕೊಂಡಿದ್ದಾರೆ.

ಆದರೆ ಆಧ್ಯಾತ್ಮಿಕ ಮೇಲ್ಮಟ್ಟದಲ್ಲಿ ತಮ್ಮದೇ ಆದ ಮಾರ್ಗವನ್ನು ತೋರಿಸಿದ್ದಾರೆನ್ನಬಹುದು. ಹೀಗೆ "ಸಂಸ್ಕೃತದ ಕಡೆಯಿಂದ ಜ್ಞಾನತದ ರಾಜವನ್ನು, ತಮಿಳು ಕಡೆಯಿಂದ ಭಕ್ತಿ ಪಿಯೂರವನ್ನು ಸಮರುಚಿಯಾಗಿ ಬೆಳಸಿ ಉಂಡು ಬೆಳೆದ ಪುಣ್ಯಶಾಲಿಗಳು ಶಿವಶರಣರು."[೩೨] ಹೀಗೆ ವಚನ ಸಾಹಿತ್ಯದ ಆಕರಗಳು ಸಂಸ್ಕೃತ ಕಾವ್ಯಗಳಾಗಿದ್ದಂತೆ, ದಾಸ ಪರಂಪರೆಯಲ್ಲಿ ವಚನ ಸಾಹಿತ್ಯದ ಆಕರಗಳು ಸಂಸ್ಕೃತ ಕಾವ್ಯಗಳಾಗಿದ್ದಂತೆ, ದಾಸ ಪರಂಪರೆಯಲ್ಲಿ ಇಲ್ಲವೆನ್ನಬಹುದು. ತಮಗಿಂತ ಪೂರ್ವದಲ್ಲಿದ್ದ ಸಂಪ್ರದಾಯದ ಅವಶೇಷಗಳನ್ನು ಕೈಬಿಟ್ಟು ಹೊಸ ಆಯಾಮಗಳನ್ನು ನೀಡಿದ ವಚನಕಾರರು ಮತ್ತು ಹರಿದಾಸರು ಕನ್ನಡ ಸಾಹಿತ್ಯಕ್ಕೆ ವಿಶೇಷ ಕೊಡುಗೆಯನ್ನು ನೀಡಿದ್ದಾರೆನ್ನಬಹುದು. ಬಸವಾದಿ ವಚನಕಾರರೇ ಆಗಲೀ ಹರಿದಾಸ ಪರಂಪರೆಯಲ್ಲಿಯೇ ಆಗಲೀ ತಮ್ಮ ವೈಯಕ್ತಿಕ ಜೀವನವನ್ನು ಅಷ್ಟಾಗಿ ಹೇಳಿಕೊಂಡಿಲ್ಲ. ಆದರೆ ಪ್ರಭು ಮಾತ್ರ ತನ್ನ ವಚನಗಳಲ್ಲಿ ಕೆಲವು ಚಾರಿತ್ರಿಕ ವಿಷಯಗಳನ್ನು ಹೇಳಿಕೊಂಡಿದ್ದಾನೆ. ಬಸವಾ ಚನ್ನಬಸವ, ಪ್ರಭು, ಅಕ್ಕಮಹಾದೇವಿ ಮುಂತಾದವರು ಜನಿಸಿದ ಸ್ಥಳದ ಸ್ಪಷ್ಟತೆಯಿದ್ದಷ್ಟು ದಾಸರಲ್ಲಿ ಕಾಣುತ್ತಿಲ್ಲ. "ಕ್ರಿ.ಶ. ೧೧೩೧ರಲ್ಲಿ ಮಾದರಸ ಮಾದಲಾಂಬಿಕೆಯರ ಮಗನಾಗಿ ಇಂಗಳೇಶ್ವರದಲ್ಲಿ ಬಸವೇಶ್ವರರ ಜನನವಾಯಿತು.[೩೩] ಈ ರೀತಿಯ ಸ್ಪಷ್ಟತೆ, ಪುರಂದರದಾಸರು ಕ್ರಿ.ಶ. ೧೪೮೦ ರಿಂದ ೧೫೬೪ರವರೆಗೆ ೮೪ ವರ್ಷಗಳ ಕಾಲ ಜೀವಿಸಿದರೂ[೩೪] ಕೂಡಾ ಹುಟ್ಟಿದ ಸ್ಥಳ ಪುರಂದಘಡವೆಂದು ಕೆಲವರು ಅಲ್ಲವೆಂದು ಹೇಳಿ ಗೊಂದಲಕ್ಕೀಡುಮಾಡಿದ್ದಾರೆ. ಬಸವರ ವೈಯಕ್ತಿಕ ಜೀವನ ಸಾಂಸಾರಿಕವಾಗಿದ್ದು ನೀಲಲೋಚನೆ, ಗಂಗಾಂಬಿಕೆ ಎಂಬ ಇಬ್ಬರನ್ನು ಮದುವೆಯಾಗಿ ಸಂತೃಪ್ತಿಯ ಸಹಚಾಚರಣೆಯಲ್ಲಿಯೇ ಆಧ್ಯಾತ್ಮಿಕವನ್ನು ಕಂಡುಕೊಂಡರೆ ವರದಪ್ಪನಾಯಕ ಲಕ್ಷ್ಮಿದೇವಿಯ ವರ ಪುತ್ರನಾಗಿ ಸೀನಪ್ಪನಾಯಕ ಎಂಬ ಹೆಸರಿನಿಂದ ಹುಟ್ಟಿ, ಸರಸ್ವತಿಬಾಯಿ ಎಂಬ ಹೆಂಡತಿಯನ್ನು ಮದುವೆಯಾಗಿ, ಹೆಂಡತಿಯಿಂದ ಪ್ರೇರಣೆ ಪಡೆದು ಸಾಂಸಾರಿಕವನ್ನು ತ್ಯಾಗಮಾಡಿ ಹರಿದಾಸ ಪರಂಪರೆಯಲ್ಲಿ ಗುರುತಿಸಿಕೊಂಡು ಪುರಂದರದಾಸರಾದರು.

ವಚನಕಾರರಲ್ಲಿ ಸಾಂಸಾರಿಕದೊಂದಿಗೆ ಆಧ್ಯಾತ್ಮಿಕತೆ ಅಳವಟ್ಟರೆ, ದಾಸರಲ್ಲಿ ಸಾಂಸಾರಿಕ ತ್ಯಾಗದೊಂದಿಗೆ ಆಧ್ಯಾತ್ಮ ಪರಂಪರೆ ಮುಂದುವರೆದಿದೆ. ಧರ್ಮಕ್ಕಾಗಿ ವಚನಕಾರರು ತಮ್ಮ ಜೀವನವನ್ನೇ ತೆತ್ತಿದ್ದಾರೆ. ಅಷ್ಟೇ ಏಕೆ? ಸಮಾಜದ ಪರಿವರ್ತನೆಗಾಗಿ ಆಧ್ಯಾತ್ಮವನ್ನು ಉಪಯೋಗಿಸಿಕೊಂಡವರು. ತಮ್ಮ ಅಧಿಕಾರ ಸಂಪತ್ತುಗಳನ್ನು ತ್ಯಾಗಮಾಡಿದರೆ ದಾಸರಲ್ಲಿ ಆಗರ್ಭ ಶ್ರೀಮಂತರಾಗಿದ್ದ ಪುರಂದರದಾಸರು ಕೂಡಾ ತಮ್ಮ ಶ್ರೀಮಂತಿಕೆಯನ್ನು ತ್ಯಾಗ ಮಾಡಿದರು. ಧರ್ಮದಿಂದ ವಚನಕಾರರ ರಾಜಕೀಯ ಭದ್ರವಾಗಿ ನೆಲೆ ನಿಂತಿತ್ತು. ಆದ್ದರಿಂದ ಅದು ಚಳುವಳಿ ಎನಿಸಿಕೊಂಡಿತು. ದಾಸರಲ್ಲಿ ಅಂತಹ ಚಳುವಳಿ ಇರಲಿಲ್ಲ. ವಚನಕಾರರು ಸಮಾಜದ ಪರಿವರ್ತನೆಗೆ ಹೋರಾಟ ಮಾಡಿದರೆ ದಾಸರು ಕೇವಲ ಮಾತಿನಲ್ಲಿ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ಇವರು ಕೇವಲ ಆಧ್ಯಾತ್ಮ ಕ್ಷೇತ್ರಕ್ಕೆ ಮಾತ್ರ ಸೀಮಿತವಾದಂತವರು. ಉಳಿದ ಸಮಾಜ ಕ್ಷೇತ್ರದಲ್ಲಿರುವ ಲೋಪದೋಷಗಳ ಬಗ್ಗೆ ಕೇವಲ ವಿಷಾದ ವ್ಯಕ್ತಪಡಿಸುತ್ತಾರೆ. ಆದರೆ ವಚನಕಾರರು ಕೃತಿಯಲ್ಲಿ ಇಳಿದು ಕಾರ್ಯತತ್ಪರೆನಿಸಿದ್ದಾರೆ. ಕನಕದಾಸರು, ಪುರಂದರದಾಸರ ಸಮಕಾಲೀನರು. ಪುರಂದರದಾಸರು ಕನಕದಾಸರ ಬಗ್ಗೆ ಕೀರ್ತನೆಗಳನ್ನು ರಚಿಸಿದ್ದರೆ, ಕನಕದಾಸರು ಪುರಂದರದಾಸರ ಬಗ್ಗೆ ಒಂದು ಉಗಾಭೋಗವನ್ನು ಮಾತ್ರ ಹೇಳಿದ್ದಾರೆ. ಪುರಂದರದಾಸರು ಕೀರ್ತನೆಗಳಲ್ಲಿ ಕೆಲವು ಪವಾಡಗಳು ಕೂಡಿರುವದರಿಂದ ಇವುಗಳನ್ನು

ಪುರಂದರದಾಸರು ರಚಿಸಿದರೆ ಅಥವಾ ನಂತರದಲ್ಲಿ ಇವುಗಳನ್ನು ಬರೆದು ಸೇರಿಸಿದರೆ ಎಂಬುದು ಸಂದೇಹಾಸ್ಪದವಾಗಿದೆ. ವಚನಕಾರರು ಸ್ವಂತ ಅನುಭವದಿಂದ, ಶ್ರಮ ಗೌರವ ಬುದ್ಧಿಯಿಂದ ಜಾತಿ - ವೃತ್ತಿ ಬೇಧಗಳನ್ನು ನಿವಾರಿಸಿ "ಮನೆಕಟ್ಟುವ ಕೂಲಿಯವನು, ಮರಗೆಲಸದವನು, ಕಮ್ಮಾರ, ಚಮ್ಮಾರ, ಮೇದಾರ, ಬಳೆಗಾರ, ಕಟ್ಟಿಗೆಯನ್ನು ಕಡಿದು ಮಾರುವಾತ, ಮಡಿವಾಳ, ನೂಲುವವ, ನೇಯ್ಗೆಯವ, ಚಿಪ್ಪಿಗ, ಬೀದಿಯಲ್ಲಿ ಮಾರಿ ಮಸಣಿಯನ್ನು ಹೊತ್ತು ತಿರುಗಿ ತಿನ್ನುವಾತ, ಆಯ್ದು ತಿನ್ನುವಾತ, ವೈದ್ಯ, ವೇದಮೂರ್ತಿ, ಸಿದ್ಧಾಂತಿ, ಕಿನ್ನರಿ ವಿದ್ವಾಂಸ, ವೈಣಿಕ, ಕಿಲಾರದವ, ಕೊಟ್ಟಣ ಕುಟ್ಟುವ ಕೂಲಿಯಾಕೆ, ಹೊಲ ಉಳುವವನು, ದನ ಕಾಯುವವನು, ತಳವಾರ, ಲೆಂಖ, ಸಿಪಾಯಿ, ಸುಂಕದ ಕಟ್ಟೆಯವ, ಅರಮನೆಯ ಉಳಿಗದವನು, ಧಣಾಯಕ, ಭಂಡಾರಿ, ಮಾಂಡಳಿಕ, ಡೊಂಬ, ವ್ಯಾಧ"[೩೫] ಹೀಗೆ ಎಲ್ಲ ಜಾತಿಯ ವಚನಕಾರರಾಗಿದ್ದರೆ ದಾಸರಲ್ಲಿ ಸೀಮಿತ ಕೀರ್ತನೆಗಳನ್ನು ರಚಿಸಿದ್ದಾರೆ. ಲೌಕಿಕ ಜಂಜಾಟದಲ್ಲಿ ವಿಷಯಾಸಕ್ತವಾದ ಜನರಿಗೆ ಪುರಂದರದಾಸರು ಭಕ್ತಿಯ ಮೂಲಕ ಅಂತರಾಳದ ಶೋಧನೆಗೆ ಮುನ್ನಡೆದರು. ತಿರುಪತಿ, ಕಂಚಿ, ಹಸ್ತಗಿರಿ, ಸಿಂಹಗಿರಿ, ಕಾಳಹಸ್ತಿ, ಶ್ರೀರಂಗಪಟ್ಟಣ, ಉಡುಪಿ, ಮುಂತಾದೆಡೆಗಳಲ್ಲಿ ತಿರುಗಿ ಹರಿದಾಸ ಪರಂಪರೆಯನ್ನು ಪ್ರಚಾರಗೊಳಿಸಿ ಹಂಪಿಯಲ್ಲಿ ನೆಲೆ ನಿಂತರೆ, ವಚನಕಾರರು ಕಲ್ಯಾಣದ ಒಂದೇ ಕಡೆ ಇದ್ದು, ಸಮಾಜವನ್ನು ಕಟ್ಟಿದ ಚಳುವಳಿಯ ನಂತರವೇ ಎಲ್ಲ ಕಡೆ ಚದುರಿ ಹೋಗಿದ್ದಾರೆ. ದಾಸರು ತಿರುಗಿ ಪ್ರಚಾರಮಾಡಿದರೆ, ವಚನಕಾರರ ಸಂಘಟನೆ ಒಂದೇ ಕಡೆ ಇದ್ದು ಕಾಶ್ಮೀರದ ಜನತೆಯನ್ನು ಕೂಡಾ ಆಕರ್ಷಿಸುವಷ್ಟು ಆಧ್ಯಾತ್ಮಿಕತೆಯಲ್ಲಿ ಪ್ರಮುಖತ್ವವನ್ನು ಪಡೆದಿದ್ದಾರೆ. ಇವರೀರ್ವರ ಜೀವನ ಚರಿತ್ರೆಯ ಬಗ್ಗೆ ಅನೇಕ ಪವಾಡ ಕತೆಗಳು ಹುಟ್ಟಿಕೊಂಡಂತೆ, ಬಸವೇಶ್ವರ ನಂದಿಯ ಅವತಾರವಾದರೆ, ಪುರಂದರರನ್ನು ನಾರದನ ಅವತಾರವೆನಿಸಿದ್ದಾರೆ. ಸಾಮಾನ್ಯ ಮನೆತನದಲ್ಲಿಯೇ ಹುಟ್ಟಿ ಮೂಢ ಸಂಪ್ರದಾಯಗಳ ನಾಡಿಯಲ್ಲಿಯೇ ಬೆಳೆದು ಸಾಧನೆಯ ಮೇಲ್ಮಟ್ಟಕ್ಕೆ ಏರಿ ಕರ್ನಾಟಕಕ್ಕೆ ತಮ್ಮದೇ ಆದ ಅದರಲ್ಲೂ ಕನ್ನಡ ಸಾಹಿತ್ಯಕ್ಕೆ ವಿಶೇಷ ಕೊಡುಗೆಯನ್ನು ಕೊಟ್ಟಿದ್ದಾರೆನ್ನಬಹುದು.

ವಚನ ಸಾಹಿತ್ಯ ಹಾಗೂ ದಾಸ ಸಾಹಿತ್ಯಗಳ ಆಶಯ ಅಭಿವ್ಯಕ್ತಿಗಳಲ್ಲಿ ಛಂದಸ್ಸುಗಳಲ್ಲಿ ವ್ಯತ್ಯಾಸವಿದ್ದಂತೆ ಸಾಮ್ಯತೆಗಳು ಕೂಡಾ ಇವೆ. ಭೌದ್ಧಿಕ ಆಧ್ಯಾತ್ಮಿಕ ಮನೋಧರ್ಮದಲ್ಲಿ ಎಷ್ಟೇ ಮತ ಬೇಧಗಳು ಇದ್ದರೂ ಕೂಡಾ ಆಶ್ಚರ್ಯಕರ ಸಾಮ್ಯತೆ ಕಂಡುಬರುತ್ತದೆ. ವಿಭಿನ್ನ ಕಾಲ ದೇಶಗಳಲ್ಲಿ ರಚಿತವಾದ ಸಾಹಿತ್ಯಗಳು ಕೃತಿಯಲ್ಲಿ ಸಾಮ್ಯ ಕಂಡುಬಂದರೆ ಅದು ಆಕಸ್ಮಿಕವಾಗಿರಬಹುದು. ಅದರಂತೆ ಸಂಪರ್ಕ ಪ್ರಭಾವಗಳ ಸಾಧ್ಯತೆಯಿದ್ದರೇ ಆಕಸ್ಮಿಕವೆಂದು ಹೇಳಲಿಕ್ಕೆ ಬರದು. ಇವೆರಡೂ ಸಾಹಿತ್ಯಗಳ ಆಶಯ ಅಭಿವ್ಯಕ್ತಿಗಳಲ್ಲಿ ನೇರ ಪರ್ಯಾಯವಾಗಿ ಸಾಮ್ಯತೆ ಕಂಡುಬರುತ್ತದೆ. "ಬಸವರ ಎನಗೆ ನಿಮ್ಮ ಮರಹಾದಾಗಲೇ ಅಸ್ತಮಾನ, ಎನಗೆ ನಿಮ್ಮ ನೆನಹೇ ಜೀವನ, ಎನಗೆ ನಿಮ್ಮನೆನಹವೇ ಪ್ರಾಣ ........ ನಿಮ್ಮ ಚರಣ ದಂಡಿಗೆಯನೊತ್ತಯ್ಯ! ವದನದಲ್ಲಿ ಷಡಕ್ಷರಿಯ ಬರೆಯಯ್ಯಾ ಕೂಡಲ ಸಂಗಮದೇವಾ" ಎನ್ನುವ ವದನದೊಂದಿಗೆ ಪುರಂದರದಾಸರ "ನಾರಾಯಣ ನಿಮ್ಮ ನಾಮದ ಸ್ಮರಣೆಯ| ಸಾರಾಮೃತವೆನ್ನ ನಾಲಿಗ್ಗೆ ಬರಲಿ| ಕೂಡುವಾಗಲಿ ನಿಂತಾಡುವಾಗಲೀ ಮತ್ತೆ ........ ಸಂತಸಹರಿ ನಿಮ್ಮ ಸಾವಿರ ನಾಮವು| ಅಂತರಂಗದೊಳಗಿರಿಸಿ ಎಂತೋ ಪುರಂದರ ವಿಠಲರಾಯನೇ| ಅಂತ್ಯಕಾಲದಲ್ಲಿ ಚಿಂತಿಸುವಹಾಂಗೆ||"[೩೬] ಹೀಗೆ ಒಂದಕ್ಕೊಂದು ಹೋಲಿಸಿ ನೋಡಿದಾಗ ಇಬ್ಬರಲ್ಲಿಯೂ ಕೂಡಾ ಭಗವಂತನ ಬಗ್ಗೆ ಹಂಬಲಿಕೆ ಕಾಣಿಸುತ್ತದೆ. ಗದ್ಯ ಪದ್ಯ ಮಿಶ್ರಿತ ವಿನೂತನ ಕನ್ನಡ ಸಾಹಿತ್ಯವನ್ನು

ರಚಿಸಿದ ವಚನಕಾರರು, ವಚನ ರಚನೆಯ ಪ್ರೌಢಿಮಾರಾದ್ಯರಾದರೇ, ಕೀರ್ತನೆಯನ್ನು ರಚಿಸಿದವರು ದಾಸರಾಗಿದ್ದಾರೆ. ವಚನ ಇದರ ಅರ್ಥ ಸಂಸ್ಕೃತದಲ್ಲಿ ಮಾತನಾಡು, 'ನುಡಿ', 'ಮಾತು', 'ಆಡುವ ಮಾತು' ಆಗಿರದೇ 'ಕೊಟ್ಟಮಾತು' ಆಗಿದೆ. ಇಂಗ್ಲೀಷಿನ ಶಬ್ದ Promise ಎಂಬ ಅರ್ಥವಿದು. ಕೇವಲ ಬುದ್ಧಿವಂತಿಕೆಯ ಮಾತಾಗದೇ ಹೃದಯವಂತಿಕೆಯ ಮಾತು. ನಿರ್ಭಯದಿಂದ ನಿರಹಂಕಾರದಿಂದ, ನಿಸ್ವಾರ್ಥದಿಂದ ಸರಳವಾಗಿ, ಸ್ಪಷ್ಟವಾಗಿ, ಕೇವಲ ಪದಪುಂಜವಾಗದೇ ಅಭಿವ್ಯಕ್ತಿಯನ್ನು ಒಳಗೊಂಡು, ಸುಮ್ಮನೆ ಆಡಿಬಿಡುವ ಹುಸಿ ಮಾತಾಗದೇ ಹೃದಯದ ಮೂಲಕ ಹರಿದುಬರುವ ಮಾನವೀಯತೆಯನ್ನು ಒಳಗೊಂಡಿದೆ. "ಅಂತರಂಗ ಹುಡುಕಾಟವಾಗಿದೆ, ಅದು ಬರಿ ಬಡಿವಾರದ ಮಾತಾಗಿರದೆ ಬಂಡಾಯದ ಮಾತಾಗಿದೆ. ಶರಣರು ಜನಪರ ಆಶೆಗಳಿಗೆ ಬದ್ಧರಾಗಿದ್ದರಿಂದ ಅವರ ಮಾತು ಜನಪರ ಮಾತಾಗಿದೆ, ಜನ ಸಾಮಾನ್ಯರ ಮಾತಾಗಿದೆ."[೩೭] "ವಚನದಲ್ಲಿ ನಾಮಾಮೃತ ತುಂಬಿ", "ಆದ್ಯರ ವಚನ ಪುರುಷ ಕಂಡಣ್ಣ", "ಹಾಲು ತೊರೆಗೆ ........ ಆದ್ಯರ ವಚನವಿರಲು", ಹೀಗೆ ವಚನಗಳನ್ನು ನೋಡಿದಾಗ ಇದು ಒಂದು ಬಗೆಯ ವಿಶಿಷ್ಟ ರಚನೆಯನ್ನು ಕಂಡಂತಾಗುತ್ತದೆ. ಎನ್ನ ಕಾಯಕವ ದಂಡಿಗೆಯ ಮಾಡಯ್ಯ ....... ಎನ್ನ ಬೆರಳ ಕಡ್ಡಿಯ ಮಾಡಯ್ಯ ...... ಬತ್ತೀಸರಾಗವ ಹಾಡಯ್ಯ ...... ಉದರಲೊತ್ತಿ ಬಾರಿಸು ಕೂಡಲಸಂಗಮದೇವಾ, "ಅರವತ್ತೆಂಟು ವಚನಗಳ ಹಾಡಿ ಹಾಡಿ ಸೋತಿತೆನ್ನಮನ ಎನ್ನುವ ಸಿದ್ಧರಾಮನ ವಚನಗಳನ್ನು ನೋಡಿದಾಗ ವಚನ ಅನ್ನುವ ಅರ್ಥ ಗದ್ಯದ ಹಾಗೆ ಓದಲಿಕ್ಕೆ ಬಂದರು, ಪದ್ಯದ ಹಾಗೆ ಹಾಡಲಿಕ್ಕೆ ಬರುತ್ತದೆಂಬ ಅರ್ಥವು ಇದೆ. ಆದ್ದರಿಂದ ವಚನಗಳನ್ನು ಗೀತೆಗಳೆಂದು ಕರೆದರೂ ಅಡ್ಡಿಯಿಲ್ಲ. " 'ವಚನ' ಬರಿ ಪದ್ಯವಾಗಿರದೇ, ಒಣ ಗದ್ಯವಾಗಿರದೇ, ಪದ್ಯದಷ್ಟು ಬಿಗಿ ಅಲ್ಲದ, ಗದ್ಯದಷ್ಟು ಸಡಿಲವಲ್ಲದ, ಗದ್ಯಪದ್ಯಗಳ ನಡುವಿನ ಒಂದು ವಿಸಿಷ್ಟಮಾದರಿಯಾಗಿ ಕಾಣಿಸುತ್ತದೆ. ಗದ್ಯದ ಸರಳತೆ, ಸಂಕೀರ್ಣತೆಗಳನ್ನು ಬಿಟ್ಟುಕೊಡದ ವಚನ ಗದ್ಯ - ಪದ್ಯಗಳೆರಡರ ಸಮನ್ವಯ ಸಾಧ್ಯತೆ ಆಗಿದೆ."[೩೮] ಹೀಗೆ ಈ ವಚನಗಳ ನಿಷ್ಕರ್ಷೆ ಮಾಡುವಾಗ "ವಚನಗಳು ಯಾವುದೇ ಹೊರಗಿನ ಮಾದರಿಯನ್ನನುಸರಿಸಿ ಹುಟ್ಟಿದವಲ್ಲ"[೩೯] ಎಂದು ಎಂ.ಚಿದಾನಂದಮೂರ್ತಿಯವರು ಹೇಳಿದಂತೆ ಈ ವಚನ ಸಾಹಿತ್ಯ ವಚನಕಾರರ ಕನ್ನಡದ ಸೊತ್ತಾಗಿದೆ. ಈ ವಚನಕಾರರ ಮೂಲ ಉದ್ದೇಶ, ಯಾವುದೇ ಸಾಹಿತ್ಯವನ್ನು ರಚಿಸಬೇಕೆಂದಾಗಿರಲಿಲ್ಲ. ಯಾವುದೇ ಹಿಂದಿನ ಸಾಹಿತ್ಯಗಳನ್ನು ಬಳಸಿ ಶಾಸ್ತ್ರೀಯವಾದ ಚೌಕಟ್ಟನ್ನು ರೂಪಿಸಿ ಪ್ರಚಾರ ಮಾಡಬೇಕೆಂಬ ಹವ್ಯಾಸವಂತು ಮೊದಲೇ ಇಲ್ಲ. ಈ ಸಾಹಿತ್ಯ ಕನ್ನಡ ಸ್ವಾತಂತ್ರಿಕ ವಿಶ್ವ ಸಾಹಿತ್ಯದಲ್ಲಿಯೇ ವಿನೂತನವಾದ ಪ್ರಯೋಗ. ಇದು ಇವರಿಂದಲೇ ಉಗಮವಾಯಿತು. 'ಇಂತಪ್ಪ ಆದ್ಯರ ವಚನವಿರಲು' ಎನ್ನುವ ಪದವನ್ನು ಬಳಸಿ ವಚನಕಾರರ ಕಾಲಕ್ಕಿಂತ ಹಿಂದೆ ವಚನ ರಚನೆಯಾಯಿತೆಂದರೆ ತಪ್ಪಾಗುತ್ತದೆ. ನಮ್ಮ ವಚನಗಳು ಇಂತಹು ಇರಲು ಆಕಡೆ ಈಕಡೆ ಹರಿಯುವ ಅವಶ್ಯಕತೆಯಿಲ್ಲ ಎಂಬುದಕ್ಕೆ ಮೇಲಿನ ವ್ಯಾಖ್ಯೆಯನ್ನು ಉದಾಹರಿಸಿದ್ದಾರೆನ್ನಬಹುದು. ಆದರೆ ಬಸವರ ಕಾಲಕ್ಕೆ ಹಿರಿಯ ಸಮಕಾಲೀನ ವಚನಕಾರರು ಇದ್ದರೆಂಬುದು ಒಪ್ಪತಕ್ಕ ಸಂಗತಿ. ಈ ವಚನಗಳು ಸಾಹಿತ್ಯದ ರೂಪವಾಗಿ ಮಾತ್ರ ಬಳಕೆಯಾಗಿಲ್ಲ. ಆ ಕಾಲಮಾನದ ಅಂತರ ತುಡಿತಗಳನ್ನು ಹುದುಗಿಸಿಕೊಂಡು ತೀವ್ರ ಪರಿಣಾಮವನ್ನು ಮಾಡುವ ಸಾಮಾಜಿಕ ಪರಿಕಲ್ಪನೆಗಳಾಗಿವೆ. ಮೌನ ಪರಂಪರೆ ಮುರಿದು ಮಾತನಾಡುವ ಸಾಂಸ್ಕೃತಿಕ ಕಲೆಯನ್ನು ಹೇಳಲು ಈ ವಚನಗಳು ಆಧಾರವಾಗಿವೆ. ನುಡಿದ ಈ ವಚನಗಳೇ ಶಿವತತ್ವಗಳಾಗಿ, ಅನುಭಾವ ಅನುಭವವನ್ನು ಭಾಷೆಯಲ್ಲಿ ಹಿಡಿಯುವ ಸಾಂಕೇತಿಕ ರೂಪಗಳಾಗಿವೆ.

ಹೀಗೆ ಈ ಶಿವಶರಣರು ವಚನಗಳನ್ನು ಮಾತ್ರ ಬರೆಯದೇ 'ಸ್ವರವಚನ'ಗಳನ್ನು ಕೂಡಾ ರಚಿಸಿದ್ದಾರೆ. ಅಂದರೆ ಇವುಗಳಿಗೆ ಹಾಡಿನ ರೂಪದ ವಚನಗಳು ಎನ್ನಬಹುದು. ಕನ್ನಡದಲ್ಲಿ ಮೊದಲಬಾರಿ ಈ ತರಹದ ಹಾಡು ಗಬ್ಬಗಳನ್ನು ರಚಿಸಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ. ಗೀತೆ, ಪದ, ಸ್ವರವಚನ ಮುಂತಾಗಿ ಈ ಹಾಡುಗಳಿಗೆ ಕರೆದರೆ ಇವುಗಳು ದಾಸರ ಕೀರ್ತನೆಗಳಿಗೆ ಮೂಲ ಪ್ರೇರಣೆಯಾಗಿವೆ ಎಂಬುದನ್ನು ಅರ್ಥೈಸಬಹುದಾಗಿದೆ. ಈ ಹಾಡುಗಳು ತಾಳ, ಲಯ, ಸಂಗೀತ ಸಂಯೋಜನೆಯೊಂದಿಗಿವೆ. ಈ ಸ್ವರ ವಚನಗಳನ್ನು ಬಸವಾದಿ ಶರಣರು ರಚಿಸಿದ್ದಾರೆಂಬುದಕ್ಕೆ "ವಚನ ಮತ್ತು ಹಾಡು ಇವೆರಡರ ಜೋಡಣೆಯಿಂದ ನಿರೂಪಿತವಾದ ಮಹಾಲಿಂಗನ ಏಕೋತ್ತರ ಸ್ಥಲ, ಕೇವಲ ಹಾಡುಗಳ ಜೋಡಣೆಯಿಂದಾದ ಜಕ್ಕಣ್ಣನ ಏಕೋತ್ತರ ಶತಸ್ಥಲ ಮತ್ತು ಜಕ್ಕಣ್ಣನು ಸಂಗ್ರಹಿಸಿದ ಹಾಡುಗಳನ್ನೇ ಇಟ್ಟುಕೊಂಡು, ಜೊತೆಗೆ ಸ್ಥಲಕ್ಕೆ ಒಂದೊಂದರಂತೆ ವನ ಮತ್ತು ವೃತ್ತಗಳನ್ನು ಸೇರಿಸಿರುವ ಸಿದ್ಧಲಿಂಗನ ಏಕೋತ್ತರ ಶತಸ್ಥಲ."[೮೦] ಹೀಗೆ ಈ ಸ್ವರ ವಚನಗಳ ಸಂಗ್ರಹ ಮಹಾಲಿಂಗ, ಜಕ್ಕಣ್ಣ, ಶೂನ್ಯ ಸಂಪಾದನೆಗಳು, ಸಿದ್ಧಲಿಂಗೇಶ್ವರಾಂಕಿತದ ಏಕೋತ್ತರ ಶತಸ್ಥಲಗಳು ಮತ್ತು ಶಿವಯೋಗ ಪ್ರದೀಪಿಕೆ. ಸಿಂಗಿರಾಜ ಪುರಾಣದಂತಹ ಕಾವ್ಯಕೃತಿಗಳಿಂದ ಕಾಣಬಹುದು. ಸ್ವರ - ವಚನ, ಸ್ವರವಚನವೆಂದರೆ ಸ್ವರ ಸಂಗೀತ ಪ್ರಧಾನವಾದುದು. ಸ್ವರವೆಂದರೆ ಸಂಗೀತವೆಂದು ಅರ್ಥ. ಮೊದಲ ಸ್ವರವಚನಕಾರ ಸಕಲೇಶ ಮಾದರಸನಿಂದ ಹಿಡಿದು ಪ್ರಭುದೇವ, ಬಸವಣ್ಣ, ಚನ್ನಬಸವಣ್ಣ, ಅಕ್ಕಮಹಾದೇವಿ, ಮಡಿವಾಳ ಮಾಚಯ್ಯ, ಸಿದ್ಧರಾಮ, ಅಮುಗೆ ದೇವಯ್ಯ, ಸೊಡ್ಡಳ ಬಾಚರಸ, ಬಹುರೂಪಿ ಚೌಡಯ್ಯ, ನಿಜಲಿಂಗ ಚಿಕ್ಕಯ್ಯ, ನೀಲಲೋಚನೆ ಮುಂತಾದ ವಚನಕಾರರೆಲ್ಲಾ ಸ್ವರ ವಚನಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಹರನಸ್ಥಿತಿ ಕಂಡುಬಂದರೆ, ದಾಸ ಪರಂಪರೆಯ ಹಾಡುಗಳಲ್ಲಿ ಹರಿಸ್ತುತಿ ಕಾಣುತ್ತದೆ. ಈ ದಾಸ ಪರಂಪರೆಯ ಕೀರ್ತನೆಯ ಪ್ರೇರಣೆ ವಚನಕಾರರಿಂದ ಆಗಿದೆ ಎಂಬುದಕ್ಕೆ ಸ್ವರವಚನ ಮತ್ತು ಕೀರ್ತನೆಗಳನ್ನು ನೋಡಿದರೆ ಕಂಡುಬರುತ್ತದೆ. ವಚನಗಳಲ್ಲಿ ಧಾರ್ಮಿಕ ಅಂಶಗಳ ಜೊತೆಗೆ ಸಾಮಾಜಿಕ ವಿಷಯಗಳು ಕೂಡಾ ಬಂದರೆ ಸ್ವರ ವಚನಗಳು ಕೇವಲ ಆಧ್ಯಾತ್ಮಿಕ ಅಂಶಗಳಿಗೆ ಸೀಮಿತವಾಗಿವೆ. ಪ್ರತಿಯೊಂದು ಸ್ವರ ವಚನದಲ್ಲಿ ರಾಗ, ಪಲ್ಲವಿ ಮುಂತಾದ ವಿಶೇಷಣಗಳು ಕಂಡುಬರುತ್ತವೆ. ಬಿಡಿ ಬಿಡಿಯಾದ ಸ್ವರ ವಚನಗಳು ಇನ್ನೂ ಅನೇಕ ಇವೆ. ಆದರೆ ಬಸವರ ೨೩ ಸ್ವರ ವಚನಗಳು ಈ ಗೀತಾಂಜಲಿಯಲ್ಲಿ ಪ್ರಕಟಗೊಂಡಿವೆ. ಹಲಿಗೆದೇವರ ಶೂನ್ಯ ಸಂಪಾದನೆಯಲ್ಲಿಯೂ ಕೂಡಾ ಈ ಸ್ವರವಚನಗಳನ್ನು ಗುರುತಿಸಬಹುದು. ಸ್ವರ ವಚನಗಳು ಅಂತರಂಗದವುಗಳಾದರೆ, ವಚನಗಳು ಬಹಿರಂಗದ ನುಡಿಗಳಾಗುತ್ತವೆ. ಅಂತರಂಗ - ಬಹಿರಂಗ ಶುದ್ಧಿಗಾಗಿ ಇವೆರಡು ತರಹದ ವಚನಗಳನ್ನು ಶರಣರು ರಚಿಸಿದ್ದಾರೆನ್ನಬಹುದು.

ಕೀರ್ತನೆ ಅನ್ನುವ ಪದದ ಅರ್ಥ ಸ್ತುತಿ, ಸ್ತೋತ್ರ, ಕೀರ್ತಿ, ಹೊಗಳು, ವರ್ಣಿಸು ಎಂದಾಗುತ್ತವೆ. ದಾಸರು ಹೇಳಿದ ನವವಿಧಗಳಲ್ಲಿ ಈ ಕೀರ್ತನೆಯು ಒಂದು. ಕೀರ್ತನೆ ಎಂದಾಗ ಹರಿಕಥೆ ನೆನಪು ಬರುವಷ್ಟು ಒಂದಕ್ಕೊಂದು ಸಂಬಂಧ ಪಡೆದುಕೊಂಡಿವೆ. ಕೀರ್ತನೆಯನ್ನು ಮಾಡುವವರಿಗೆ ಕೀರ್ತನಕಾರರೆಂದು, ಹರಿದಾಸರೆಂದು ಕರೆಸಿಕೊಳ್ಳುವರು. ಕನ್ನಡದಲ್ಲಿ ಈ ಕೀರ್ತನೆ ಶಬ್ದ ಭಗವಂತನೊಂದಿಗೆ ತನ್ಮಯತೆ, ತೀವ್ರತರ ಭಾವವಾಗಿ ಉಕ್ಕಿ ಸಂಗೀತದೊಂದಿಗೆ ಹರಿದು ಭಕ್ತ - ಭಗವಂತನ ನಡುವಿನ ಸಂಬಂಧ ಸಾಕಾರ ರೂಪವಾಗಿದೆ. "ಕೀರ್ತನೆಗಳನ್ನು ಪದಗಳೆಂದು ದೇವರ ನಾಮಗಳು ಎಂದು ಕರೆಯುವ ರೂಢಿಯಿದೆ. ಭಗವಂತನನ್ನು

ಭಕ್ತಿಕೀರ್ತಿಸುವುದೇ ಇಲ್ಲಿ ಮುಖ್ಯವಾಗಿರುವುದರಿಂದ 'ಕೀರ್ತನೆ'ಯಂತಹ ಸಾಹಿತ್ಯರೂಪ ಭಕ್ತಿಪಂಥದ ಸಾಹಿತ್ಯದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಹೀಗಾಗಿ ಇದರ ಸ್ವರೂಪ ಉದ್ದೇಶವನ್ನು ಕುರಿತು ಚರ್ಚಿಸುವಂತಹ ಸಂದರ್ಭದಲ್ಲಿ ಭಕ್ತ - ಭಗವಂತನ ನಡುವಿನ ಸಂಬಂಧದ ಹಿನ್ನಲೆಯಲ್ಲಿಯೆ ಇದನ್ನು ವಿಶ್ಲೇಸಿಸಬೇಕಾಗುತ್ತದೆ."[೪೦] ಹೀಗೆ ಇವು ಭಕ್ತಾನುರಾಗದ ಹಾಡುಗಳಾಗಿವೆ. ವಚನಗಳ ಕೊನೆಗೆ ಅಂಕಿತ ಇರುವಂತೆ ಸ್ವರ ವಚನ ಮತ್ತು ಕೀರ್ತನಗಳಲ್ಲಿ ಅಂಕಿತಗಳಿವೆ. ಈ ಕೀರ್ತನಗಳು ಸ್ವರ ವಚನಗಳಂತೆ ಪಲ್ಲವಿ, ಅನುಪಲ್ಲವಿಗಳನ್ನು ಹೊಂದಿವೆ. ಕನ್ನಡಸಾಹಿತ್ಯಕ್ಕೆ ವಚನ ಎಂಬ ಅಭೂತಪೂರ್ವ ಕಾಣಿಕೆಯನ್ನು ಕೊಟ್ಟ ಶಿವದಾಸರು ಕನ್ನಡದಲ್ಲಿದ್ದ ಪದ್ಯಗಳನ್ನು ಆಧ್ಯಾತ್ಮಿಕದಲ್ಲಿ ಕಾವ್ಯಗಳನ್ನು ಬಳಸಿದ ಮೊದಲಿಗರು ಅಂದರೆ ಆಧ್ಯಾತ್ಮಿಕ ಪದ್ಯಗಳನ್ನು ಬರೆದ ಪ್ರಪ್ರಥಮ ಕೀರ್ತನಕಾರರಾಗಿದ್ದಾರೆ. "ಶಿವಶರಣರು ಬರೆದ ಈ ಹಾಡು ( = ಪಲ್ಲವಿ) ಗಳಿಂದ ಕೂಡಿ ಬೇರೆ ಬೇರೆ ರಾಗಗಳಲ್ಲಿ ಹಾಡಲು ಅನುವರಿತು ರಚಿತವಾದ ಗೇಯ ಕೃತಿಗಳು. ಮುಂದೆ ೧೫ - ೧೬ನೇ ಶತಮಾನಗಳಲ್ಲಿ ಹರಿದಾಸರು ಯಾವ ಕೀರ್ತನ ಪ್ರಕಾರ ಸಾಹಿತ್ಯದಿಂದ ಇಡೀ ದಕ್ಷಿಣಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡರಲ್ಲೂ ಅದ್ವಿತೀಯ ಕೀರ್ತಿಯನ್ನು ಗಳಿಸಿದರೂ ಕೀರ್ತನ ಪ್ರಕಾರಕ್ಕೆ ೧೨ನೇ ಶತಮಾನದ ಬಸವಾದಿ ಶಿವದಾಸ ಈ ಗೀತಾ ಪ್ರಕಾರವು ಮೂಲವೂ, ಮಾದರಿಯೂ ಆಗಿದ್ದವು."[೪೨] ಅಂದರೆ ಕೀರ್ತನಗಳ ಮೂಲ ೧೨ನೇ ಶತಮಾನದ ವಚನಕಾರರೆಂಬುದನ್ನು ಸ್ಪಷ್ಟವಾಗಿ ಹೇಳಬಹುದು. ಇದಕ್ಕೆ "೧೨ನೇ ಶತಮಾನದಲ್ಲಿದ್ದ ಶಿವಶರಣರಿಂದಲೇ ಈ ಕೀರ್ತನೆ ಪ್ರಕಾರ ಹುಟ್ಟಿತು, ಶಿವಶರಣರೇ ಕೀರ್ತನಕಾರರ ಪ್ರವರ್ತಕರೆಂದು ಎಲ್.ಬಸವರಾಜು ಸ್ಪಷ್ಟಪಡಿಸಿದ್ದಾರೆ."[೪೩] ಹಲವರು ಸಾಹಿತಿಗಳ ಅಭಿಪ್ರಾಯದಿಂದ ಶರಣರು ಬರೆದ ಸ್ವರ ವಚನದ ಬೆಳವಣಿಗೆಯನ್ನು ದಾಸರ ಕೀರ್ತನದಲ್ಲಿ ಕಾಣುತ್ತೇವೆ. ಈ ಸ್ವರ ವಚನ ಸಾಹಿತ್ಯ, ಶರಣರ ಶತಮಾನದಲ್ಲಿ ಹುಟ್ಟಿದರೂ ಸಹಿತ, ಈ ಕೀರ್ತನ ರೂಪಾತ್ಮಕವನ್ನು ವಿಸ್ತರಿಸಿದವರು ದಾಸರೇ ಆಗಿದ್ದಾರೆ. ಈ ಕೀರ್ತನೆಗಳು ತಾಳಗಳನ್ನು ಹೊಂದಿ, ತಾಳ ತಂಬೂರಿ ಸಮೇತವಾಗಿ, ಸಂಗೀತ ಸಾಹಿತ್ಯದೊಡನೆ ಮನೆಮನೆಗೆ ದಾಸ ಸಾಹಿತ್ಯವನ್ನು ಮುಟ್ಟಿಸುವಲ್ಲಿ ಯಶಸ್ವಿಯಾಗಿದ್ದಾರೆ. ಹಲವಾರು ಗೀತೆಗಳು, ಪದಗಳು ಸಂಸ್ಕೃತ, ಕನ್ನಡ, ತಮಿಳು ಮುಂತಾದ ಭಾಷೆಯಲ್ಲಿದ್ದರೂ ಕೂಡಾ ಕೀರ್ತನೆಗಳು ಮಾತ್ರ ಭಕ್ತಿ ವಿಷಯಕ್ಕೆ ಸಂಬಂಧಪಟ್ಟವುದಾಗಿದೆ. ಈ ಕೀರ್ತನ ಸಾಹಿತ್ಯಕ್ಕೆ ಮೂಲ ಪ್ರೇರಕರು ವಚನಕಾರರಾದರೂ ಅವುಗಳನ್ನು ವಿಸ್ತರಿಸಿ, ಬಹಳಷ್ಟು ಕೀರ್ತನೆಗಳನ್ನು ರಚಿಸಿದ ಕೀರ್ತಿ, ದಾಸರಿಗೆ ಸಲ್ಲುವದು. ೧೨ನೇ ಶತಮಾನದಿಂದ ಪ್ರಾರಂಭವಾದ ಈ ತರಹದ ಸಾಹಿತ್ಯ ೧೩ನೇ ಶತಮಾನದಲ್ಲಿ ಹರಿದಾಸರಿಂದ ಬೆಳೆದುಬಂದು, ೧೭ನೇ ಶತಮಾನದಲ್ಲಿ ವೈಷ್ಣವರಿಂದ, ಕ್ರೈಸ್ತ, ಜೈನ, ಮಹಮ್ಮದೀಯ ಹಾಡುಗಾರರ ಮೇಲೆ ಪ್ರಭಾವ ಬೀರಿತು. ಈ ಘಟ್ಟದಲ್ಲಿ ಬರುವ ಶಿಶುನಾಳಶರೀಫ, ಕಡಕೋಳ ಮಡಿವಾಳಪ್ಪ, ಬಾಲಲೀಲಾ ಮಹಾಂತ ಶಿವಯೋಗಿ, ಸ್ವಲ್ಪ ಹಿಂದಿನ ನಿಜಗುಣ ಶಿವಯೋಗಿಗಳ ಮೇಲೆ ಈ ಸಾಹಿತ್ಯದ ಪರಿಕಲ್ಪನೆ ಬಿದ್ದಿದೆ ಎನ್ನಬಹುದು. ಇಲ್ಲಿಯವರೆಗೆ "ಪುರಂದರದಾಸರ ಕೀರ್ತನೆಗಳ ಸಂಖ್ಯೆ ಈಗ ಉಪಲಬ್ಧವಿದ್ದ ಮಾಹಿತಿಯ ಪ್ರಕಾರ ಒಂದು ಸಾವಿರ ಎಂದು ಸ್ಪಷ್ಟಪಡಿಸಿದ್ದಾರೆ."[೪೪] ಸ್ವರೂಪ ಮತ್ತು ಸಾರದಲ್ಲಿ ಪುರಂದರದಾಸರ ಕೀರ್ತನೆಗಳಿಗೆ ಮಹತ್ವವಿದೆ. ಸ್ವರ ವಚನಗಳನ್ನು ಶರಣರ ನಂತರ ಕಾಲದ ಕವಿಗಳು ಕೂಡಾ ತಮ್ಮ ಕಾವ್ಯದಲ್ಲಿ ರಚಿಸಿದ್ದಾರೆಂಬುದಕ್ಕೆ, ಹರಿಹರನ ಬಸವರಾಜ ದೇವರ ರಗಳೆ (೨೭ ರಿಂದ ೩೬) ಈ ಪದಗಳು ಹಾಗೂ ಶಿವದಾಸ ಗೀತಾಂಜಲಿಯ ೧೭೬ನೇ ಹಾಡಿನೊಂದಿಗೆ ಹೋಲಿಸಿದಾಗ ಸ್ವರ ವಚನಗಳ ಬಳಕೆ ಕಾವ್ಯದಲ್ಲಿಯೇ

ಆಗಿದೆಯೆಂಬುದು ತಿಳಿಯುವುದು. ಬಸವಣ್ಣನ ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ, ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ, ಇಂತಿ ತ್ರಿವಿಧಿ ನಿಮ್ಮದೆಂದ ಬಳಿಕ ಎನಗೆ ಬೇರೆ ವಿಚಾರವುಂಟೇ ಕೂಡಲಸಂಗಮದೇವಾ. ಈ ವಚನವನ್ನು ತನು ನಿನ್ನದು, ಜೀವ ನಿನ್ನದು, ಸ್ವಾಮಿ ಅನುದಿನದಲಿ ಬಾ ಸುಖದುಃಖ ನಿಮ್ಮದಯ್ಯಾ ಎಂಬ ಕನಕದಾಸರ ಕೀರ್ತನೆಯೊಂದಿಗೆ ಹೋಲಿಸಿನೋಡಿದಾಗ ಸಮರ್ಪಣಾಭಾವ ಹಾಗೂ ಒಂದರ ಪ್ರಭಾವ ಇನ್ನೊಂದರ ಮೇಲೆ ಆಗಿದೆ ಅನ್ನಬಹುದು.

ಹೀಗೆ ಅನೇಕಾನೇಕ ವಚನಗಳನ್ನು ಕೀರ್ತನೆಗಳು ಹೋಲುತ್ತವೆ. "ಊರ ಮುಂದೆ ಹಾಲ ಹಳ್ಳ ಹರಿಯಿತ್ತರಲಿ, ವರೆಯಾವಿನ ಬೆನ್ನ ಹರಿಯಲೇಕಯ್ಯ? ಲಜ್ಜೆಗೆಡಲೇಕೆ? ನಾಣಗೆಡಲೇಕೆ? ಕೂಡಲಸಂಗಮದೇವವುಳ್ಳನ್ನಕ್ಕ ಬಿಜ್ಜಳನ ಭಂಡಾರ ನಮಗೇಕಯ್ಯಾ, ಎಂಬುದರ ಜೊತೆಗೆ ನಾನೇಕೆ ಬಡವನು ನಾನೇಕೆ ಪರದೇಸಿ ಶ್ರೀನಿಧಿ ಹರಿ ಎನಗೆ ನೀನಿರುವತನಕ"[೯೫] ಹೀಗೆ ಕೀರ್ತನೆಗಳು, ಯಾವುದೇ ಸಾಧು - ಸಂತರು, ಯಾವುದೇ ಪಂಥಕ್ಕೆ ಸೇರಿದವರಾದರೂ ತಮ್ಮ ಹಿಂದಿನ ಕಾಲದ ಅನುಭಾವ ಸಾಹಿತ್ಯವನ್ನು ಅಳವಡಿಸಿಕೊಂಡಿದ್ದಾರೆನ್ನಬಹುದು. ಕರ್ನಾಟಕದಲ್ಲಿ ದಾಸ ಸಾಹಿತ್ಯ ರಚಿತವಾದಾಗ ಕನ್ನಡಕ್ಕೆ ಹೆಚ್ಚಿನ ಮಹತ್ವವು, ಸಂಸ್ಕೃತಕ್ಕೆ ಅಲಕ್ಷವು ಆಯಿತೆನ್ನಬಹುದು. ಇದನ್ನು ವಚನಕಾರರ "ಸುಲಿದ ಬಾಳೆಯ ಹಣ್ಣಿನಂದದಿ, ತೆಗೆದ ಸಿಬುರಿನ ಕಬ್ಬಿನಂದದಿ, ಕನ್ನಡ ಸುಲಭವಾಗಿರುವಾಗ ಸಂಸ್ಕೃತದಲ್ಲಿನ್ನೇನು"[೯೬] ಎಂದು ಹೇಳಿರುವುದನ್ನು ನೋಡಿದಾಗ, ವಚನಸಾಹಿತ್ಯದ ಪ್ರಭಾವ ದಾಸರ ಮೇಲೆ ಆಗಿದೆ ಎಂಬುದನ್ನು ಕಾಣುತ್ತೇವೆ. ವಚನಕಾರರು ಮತ್ತು ಹರಿದಾಸರು ಇವರ ಮೇಲೆ ಕ್ರಮವಾಗಿ ಆಗಮ, ಪುರಾಣ ಹಾಗೂ ಉಪನಿಷತ್ತು, ವೇದ, ಪಾಂಚರಾತ್ರ, ಭಾಗವತ ಇವುಗಳ ಪ್ರಭಾವ ಆಗಿದೆ ಎನ್ನಬಹುದು. ವಚನಕಾರರು ಆಗಮ - ಪುರಾಣ - ಉಪನಿಷತ್ತುಗಳಿಂದ ಸ್ಫೂರ್ತಿಯನ್ನು ಪಡೆದಿದ್ದರೆ, ವೇದದ ಕರ್ಮ ಭಾಗವನ್ನು ತಿರಸ್ಕರಿಸಿದ್ದಾರೆ. ಆದರೆ ದಾಸರು ವೇದದ ಯಾವುದೇ ಭಾಗವನ್ನು ತಿರಸ್ಕರಿಸದೇ ಭಾಗವತ ಮುಂತಾದ ವಿಷ್ಣು ಪುರಾಣಗಳನ್ನು ಅವಲಂಬಿಸಿದೆ. ಭಾಗವತ ಮುಂತಾದವುಗಳಿಂದ ಸ್ಫೂರ್ತಿ ಪಡೆದಿದ್ದಾರೆ. ಇನ್ನು ಬಸವರ ತಾಳಮಾನ ಸರಿಸಮ ನಾನರಿಯೇ ಎನ್ನುವ ತಾಳದ ಗೌಣತೆಯು ಪುರಂದರದಾಸರ 'ತಾಳ ಬೇಕು ತಕ್ಕ ಮೇಳ ಬೇಕು' ಎಂಬ ಕೀರ್ತನೆಯನ್ನು ನೋಡಿದರೆ ವಿಭಿನ್ನರೀತಿಯಲ್ಲಿ ಸಾಗಿದ್ದನ್ನು ಗುರುತಿಸಬಹುದು. ಹರಿದಾಸರು 'ಸುಳಾದಿ' ಎಂಬ ತಾಳ ಪ್ರಧಾನವಾದ ಸಾಹಿತ್ಯವನ್ನು ಕೂಡಾ ರಚಿಸಿದ್ದಾರೆ. ಸಪ್ತ ತಾಳಗಳಿಂದ ಹೊಂದಿಸಿ ಒಂದೇ ರೂಪದಲ್ಲಿರುವ ಈ 'ಸುಳಾದಿ'ಗಳು ೧೫ನೇ ಶತಮಾನದ ದಾಸ ಸಾಹಿತ್ಯದ ಸ್ವತಂತ್ರ ಕೊಡುಗೆ. ಇದರ ಅರ್ಥ ಕಟ್ಟಿದಹಾಡು, ಜ್ಞಾನಿಗಳು ತಮ್ಮ ಮನಸ್ಸಿಗೆ ಹೊಳೆದ ವಿಷಯವನ್ನು ಸಮಾಧಿ ಭಾಷೆಯಲ್ಲಿ ಯಥಾರ್ಥವಾಗಿ ವಿವರಿಸುವುದೇ ಸುಳಾದಿ[೯೭] ಸಪ್ತ ತಾಳಗಳೆಂದರೆ ಸುಳಾದಿ ಸಪ್ತ ತಾಳಗಳು ಎನ್ನುವಷ್ಟರ ಮಟ್ಟಿಗೆ ಅಭಿನ್ನತೆಯಿದೆ. ಹರಿದಾಸ ಪರಂಪರೆಯಲ್ಲಿ ಈ ಸುಳಾದಿಗಳನ್ನು ಮೊದಲಬಾರಿಗೆ ರಚಿಸಿದವರು ಶ್ರೀಪಾದರಾಯರು. ಇದು ಹರಿದಾಸ ಪರಂಪರೆ ಕನ್ನಡ ಸಾಹಿತ್ಯಕ್ಕೆ ಕೊಟ್ಟ ವಿಶೇಷ ಕೊಡುಗೆ. ಈ ಸುಳಾದಿಗಳ ಮೊದಲ ಪಾದದ ಮೊದಲು ಅಕ್ಷರ ಗುರುವಾಗಿದ್ದರೆ ಪದದ ಎಲ್ಲ ಸಾಲಿನ ಮೊದಲ ಅಕ್ಷರಗಳು ಗುರುವಾಗಿರುವವು, ಲಘುವಾಗಿದ್ದರೆ ಲಘುವಾಗಿರುವವು. ಈ ರೀತಿಯ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಹರಿದಾಸರು ನೀಡಿದ ಕೊಡುಗೆಯಾಗಿದೆ. ಈ ಸುಳಾದಿಗಳಲ್ಲಿ ಭಾವಾವೇಶ ಸೂತ್ರದಂತಿರುವ ಮಾತುಗಳು ಆಧ್ಯಾತ್ಮ ಅಡಗಿರುವದನ್ನು ಕಾಣುತ್ತೇವೆ. ಈ ತರಹದ ಸಾಹಿತ್ಯವನ್ನು ಅಂದರೆ

ತುಂಬೂರಿಯ ಸಾಹಿತ್ಯವನ್ನು ಸಂಗೀತಕ್ಕೆ ಒಳಪಡಿಸಿದಾಗ ಆಗುವ ಸಾಹಿತ್ಯವೇ ಸುಳಾದಿ. ಕರ್ನಾಟಕ ಸಂಗೀತದಲ್ಲಿ ಸುಳಾದಿಯು ಕೂಡಾ ಒಂದು. ಆದರೆ ಈ ಸುಳಾದಿಯು ಸ್ವಲ್ಪ ಕಠಿಣವೆನಿಸುವದರಿಂದ ಜನಪ್ರಿಯತೆಯಿಂದ ಹಿಂದೆ ಸರಿದವು. ಸುಳಾದಿ ಮತ್ತು ಉಗಾಭೋಗಗಳು ಒಂದಕ್ಕೊಂದು ಸಾಮ್ಯತೆ ಇದ್ದು, ಹಲವು ಉಗಾಭೋಗಗಳು ಸುಳಾದಿಯಲ್ಲಿ ಬೆರತಿವೆ. ಅರಳಯ್ಯನ ವಚನ ಎರಡೆಂಬತ್ತು ಕೋಟಿ ಅನ್ನುವಂತೆ, ಪುರಂದರದಾಸರ ಅರವತ್ನಾಲ್ಕು ಸಾವಿರ ಸುಳಾದಿಗಳು ಇವೆ ಎಂದು ಹೇಳುತ್ತಾರೆ. ಆದರೆ ಪುರಂದರರ ಸುಳಾದಿಗಳ ಸಂಖ್ಯೆ ನಮಗೆ ದೊರತಂತೆ ೫೫ ಮಾತ್ರ. ''ಕೀರ್ತನೆಗಳು ಶಿವಶರಣರ ಸ್ವರ ವಚನಗಳನ್ನು ಹೋಲುತ್ತಿದ್ದು ಅಲ್ಲಿಯ ರೂಪ ದಾಟಿಗಳಿಗೆ ಋಣಿಯಾಗಿದ್ದಾರೆ. ಉಗಾಭೋಗಗಳು ಶರಣರ ವಚನಗಳನ್ನು ಹೋಲುತ್ತಿದ್ದು ಅವುಗಳಿಂದ ಪ್ರಭಾವಿತಗೊಂಡಿವೆ. ಆದರೆ ಸುಳಾದಿ ಮಾತ್ರ ಹರಿಹರ ದಾಸರಿಂದಲೆ ಹುಟ್ಟಿದ ಹೊಸ ರೂಪ ಸಾಹಿತ್ಯವಾಗಿದೆ''[೪೮]

ಹೀಗೆ ಕೀರ್ತನೆ ಮತ್ತು ಉಗಾಭೋಗಗಳ ಮೂಲ ವಚನಕಾರರಲ್ಲಿ ಕಂಡಂತೆ, ಸುಳಾದಿಗಳಲ್ಲಿ ಕಾಣಲಾಗುವುದಿಲ್ಲ. ಅದು ಹರಿದಾಸ ವೈಶಿಷ್ಟ್ಯ ಪರಂಪರೆ. ಜಕ್ಕಣಾರ್ಯನ ಏಕೋತ್ತರ ಶತಸ್ಥಲದಲ್ಲಿ ಹಾಡುಗಳೇ ಇದ್ದು ವಚನಗಳಿಲ್ಲದೇ ಇದ್ದರೂ ಕೂಡಾ ಈ ಹಾಡುಗಳನ್ನು ವಚನ ಎಂದು ಕರೆಯುವ ರೂಢಿ ಇತ್ತೆಂದು ತಿಳಿದು ಬರುವುದು. ನೂರಾಒಂದು ಸ್ಥಲಕ್ಕೆ ಆಯಾ ಸ್ಥಲಗಳನ್ನು ಸೂಚಿಸುವ ಪದಗಳನ್ನು ತೆಗೆದುಕೊಂಡು ಅಂದರೆ ಶರಣರ ಹಾಡುಗಳಿಂದ ಸಾರವಾದ ಒಂದೊಂದು ಪದಗಳಿಂದ ಸ್ಥಲಗಳನ್ನು ಹೆಣೆದಿರುವುದಾಗಿ ಜಕ್ಕಣ್ಣ ಹೇಳಿರುವುದರಿಂದ ಇಂತಹ ಹಾಡುಗಳು ಬಹಳಷ್ಟಿವೆ ಎನ್ನಬಹುದು. ಇವನ ಏಕೋತ್ತರ ಶತಸ್ಥಲ ಸ್ವರ ವಚನ ಎಂದು ಕರೆಯಲಾಗಿದೆ. ವಚನ ಎಂಬ ಪದದಿಂದ ಪದ್ಯಕ್ಕೆ ಹೊಂದುವಂತಿರುವ ಹಾಡುಗಳನ್ನು ಸ್ವರ ವಚನ ಎಂದು ಕರೆಯುವ ರೂಢಿಯಿತ್ತು. ಶರಣರ ಹಾಡುಗಳನ್ನು ಖಚಿತವಾಗಿ ಹೇಳಲು ವಚನ ಎಂಬ ಪದ ರೂಢಿಯಲ್ಲಿದ್ದರೂ 'ಸ್ವರ' ಎನ್ನುವ ವಿಶೇಷಣವನ್ನು ಸೇರಿಸಿ ಸ್ವರ ವಚನ ಎಂದು ಕರೆಯುತ್ತಿದ್ದರೆನ್ನಲಾಗಿದೆ. ಅಂದರೆ ಇವು ಗದ್ಯಗಳೇ, ಹಾಡುಗಳೇ ಎಂಬ ಸಂಶಯ ಬಾರದಿರಲೆಂದು, ಸ್ವರ ಪದಗಳೆಂದು ಕರೆದರು. ಸರ್ವಜ್ಞನ ವಚನ ಎಂದೆನ್ನುವಾಗ ವಚನ ಎಂಬ ಅರ್ಥ ತ್ರಿಪದಿಗೂ ಉಪಯೋಗವಾಗಿದೆ. ವಚನ ಈ ಪದ ಕೇವಲ ಛಂದಸ್ಸಿನ ಗದ್ಯ ಕೃತಿ ಮಾತ್ರ ಎಂದು ತಿಳಿಯದೆ, ಲಿಂಗ ಲೀಲಾವಿಲಾಸ ಚಾರಿತ್ರ್ಯ'ದಲ್ಲಿ ವಚನದ ಹಾಗೆ ಇರುವ ಕೆಲವು ಷಟ್ಪದಿಗಳನ್ನು ಹೊಂದಿಕೊಳ್ಳುವ, ಸಿದ್ಧರಾಮ, ದೇವರ ದಾಸಿಮಯ್ಯನ ಎಷ್ಟೋ ವಚನಗಳು ಸಿಗುತ್ತವೆ.[೪೯] ಅದರಂತೆ ಗೂಳೂರಿನ ಶೂನ್ಯ ಸಂಪಾದನೆಯಲ್ಲಿ ಈ ಷಟ್ಪದಿಯಂತಿರುವ ವಚನಗಳು[೫೦] ದೊರೆಯುತ್ತವೆ. ಅಂದರೆ ತ್ರಿಪದಿ, ಷಟ್ಪದಿ, ಕೀರ್ತನೆ ರೂಪದ ಹಾಡು ಗಬ್ಬಗಳು ಎಲ್ಲವನ್ನು ಸೇರಿಸಿ ವಚನ, ಸ್ವರವಚನ ಎಂದು ಕರೆಯುವ ರೂಢಿ ಇತ್ತೆಂದು ತಿಳಿದುಬರುವುದು. ''ಹರಿದಾಸರ ಕೀರ್ತನೆಗಳಂತಹ ಯಾವ ಸಾಹಿತ್ಯ ಪ್ರಕಾರವನ್ನು ನಾವು ಹಾಡು ಎಂದು ಕರೆಯುತ್ತಿದ್ದೇವೋ ಅದನ್ನು ಮೊದಲು ವಚನವೆಂದೇ ಕರೆಯುವ ರೂಢಿಯಿದ್ದು, ಆಮೇಲೆ ಖಚಿತತೆಗೋಸ್ಕರ ಅಂದರೆ ಛಂದೋಗಂಧಿ ಮಾತ್ರವಾದ ವಚನಗಳನ್ನು ಬಿಟ್ಟು, ಛಂದೋ ಬದ್ಧವಾದ ಮತ್ತು ರಾಗ ತಾಳ ಸಹಿತವಾದ ಹಾಡುಗಳನ್ನು ಮಾತ್ರ ನಿರ್ದೇಶಿಸಲು ಸ್ವರವಚನ, ಸ್ವರಪದ ಎಂದು ಕರೆದರು.''[೫೧] ಅಂದರೆ ಸ್ವರಪದ, ಸ್ವರವಚನ, ಹಾಡು ವಚನ ಇವೆಲ್ಲವೂ ಪರ್ಯಾಯ ಪದಗಳೆಂದು ತಿಳಿಯಬಹುದು. ಈ ಸ್ವರ ವಚನಕ್ಕೆ ಹೊಂದಿಕೆಯಾದಂತೆ

ಒಂದು ವಸ್ತುವನ್ನು ಪ್ರತಿಪಾದಿಸುವದಕ್ಕಾಗಿ ಏಳು ಹಾಡುಗಳ ಗೀತಾ ಪ್ರಬಂಧವನ್ನು ನೋಡಿದಾಗ "ಚನ್ನಬಸವ ದೇವರು ನಿರೂಪಿಸಿದ ಸ್ಥಲ ಮಂತ್ರಗೌಪ್ಯ. ಅಂದರೆ ಶಿವದಾಸ ಗೀತಾಂಜಲಿಯ ೧೮೦ - ೧೮೭ರ ವರೆಗಿನ ಏಳು ಪದಗಳ ಪ್ರಬಂಧದ ಮಾದರಿಯನ್ನೇ, ಶ್ರೀಪಾದರಾಯರ ಭ್ರಮರಗೀತೆ, ಗೋಪಿಗೀತೆ, ವೇಣುಗೀತೆ ಅನುಸರಿಸಿವೆ ಎಂದು ಹೇಳಬಹುದಾಗಿದೆ. 'ಶಿವ ಯೋಗ ಪ್ರದೀಪಿಕೆ' ಯಲ್ಲಿ ರಚಿಸಿದ ಶಿವಲಿಂಗದೇವನು ಸಕಲ ಪುರಾತನರ ಗೀತೆಗಳನ್ನು ತೆಗೆದುಕೊಂಡು ಸ್ಥಲ ಕಟ್ಟಿಗೆ ಹೊಂದಿಸಲಾಗಿದೆ ಎಂದು ತನ್ನ ಪ್ರಾರಂಭದ ಟಿಪ್ಪಣೆಯಲ್ಲಿ ಹೇಳಿದ್ದಾನೆ. ಇದರಲ್ಲಿ ೭೩ ಹಾಡುಗಳು ಇದ್ದು ಅಧಿಕ ಸಂಖ್ಯೆಯ ಹಾಡುಗಳನ್ನು ಹೊಂದಿದ ಗ್ರಂಥ ಇದಾಗಿದೆ. ಹೀಗೆ ದಾಸರ ಕೀರ್ತನೆಗಳ ಮೂಲ ಸ್ವರ ವಚನಗಳಲ್ಲಿದೆ ಎಂಬುದನ್ನು ಗುರುತಿಸಬಹುದು.

ಉಗಾಭೋಗಗಳೆಂದು ಕರೆಯುವ ಇವು ಐದು ರಾಗಗಳಿಂದ ಕೂಡಿದ ತಾಳರಹಿತ ಸ್ವರ ಪ್ರಧಾನವಾದ ಸಂಗೀತ ರಚನೆಗಳಾಗಿವೆ. ಉಕ್ + ಆಭೋಗ = ಉಗಾಭೋಗ. ಅನುಭವಕ್ಕೆ ಬಂದ ಅಂಶಗಳನ್ನು ಸಂಕ್ಷಿಪ್ತವಾಗಿ ಮಾತಿನಲ್ಲಿ ಹೇಳುವುದೇ ಉಗಾಭೋಗ. ಸಂಗೀತಕ್ಕೆ ಚಿಕ್ಕ ಚಿಕ್ಕ ವಾಕ್ಯಗಳನ್ನು ಕವಿತೆಗಳನ್ನು ಹೊಂದಿಸಿ ಆಗುವ ಗೀತೆಗೆ ಉಗಾಭೋಗ ಎಂತಲೂ ಕರೆಯುವರು. ವಚನದ ಶೈಲಿಯನ್ನು ಈ ಉಗಾಭೋಗಗಳಲ್ಲಿ ಕಾಣಬಹುದು. "ಶರಣರ ವಚನಗಳನ್ನೇ ಅನುಸರಿಸಿ ಪುರಂದರ ದಾಸಾದಿಗಳು ಬರೆದ ವಚನಗಳು ಉಗಾಭೋಗಗಳೆಂದರೆ ತಪ್ಪಾಗುವುದಿಲ್ಲ."[೨೨] ಎಂದು ಎಲ್ .ಬಸವರಾಜು ಹೇಳಿದ್ದಾರೆ. "ದಾಸರ ಉಗಾಭೋಗಗಳಿಗೂ ಶರಣರ ವಚನಗಳಿಗಿರುವ ಸಾಮ್ಯ ಗಣನೀಯವಾದದ್ದು"[೨೩] ಹೀಗೆ ಎಲ್ಲ ಸಾಹಿತ್ಯ ತಜ್ಞರನ್ನು ಗಮನಿಸಿದಾಗ ವಚನಗಳ ಮುಂದುವರಿಕೆಯ ಭಾಗವೇ ಉಗಾಭೋಗ ಎನ್ನಬಹುದು. ಶರಣರಲ್ಲಿ ಮರುಳಸಿದ್ಧನ ಕಿನ್ನರಿ, ಸಕಲೇಶ ಮಾದರಸರ ವೀಣೆ, ಬಾಹುರು ಬ್ರಹ್ಮಯ್ಯಗಳ ತಾಳ ಹಾಗೂ ಬಸವರ ದಂಡಿಗೆಗಳು, ದಾಸರ ತಂಬೂರಿಯನ್ನು ನೆನಪಿಗೆ ತರುವಂತಿವೆ. ಈ ಶರಣ ಸಾಹಿತ್ಯ ಸಂಗೀತಕ್ಕೆ ಕೊಡುಗೆಯನ್ನು ಕೊಟ್ಟಂತೆ ದಾಸ ಸಾಹಿತ್ಯವೂ ಕೂಡಾ ಕೊಡುಗೆಯನ್ನು ನೀಡಿದೆ. ನವವಿಧ ಭಕ್ತಿಗಳಲ್ಲಿ ಒಂದಾದ ಕೀರ್ತನವೂ ೧೨ನೇ ಶತಮಾನದ ಶರಣರಿಂದ ಉಪಯೋಗವಾಗಿದೆ. ದಾಸರು ಭಕ್ತಿಯ ಆಡಂಬರತೆಯನ್ನು ಖಂಡಿಸುವಂತೆ, ಶರಣರು ಕೂಡಾ ಖಂಡಿಸಿದ್ದಾರೆ. ದೇವಾಲಯ ನಿರ್ಮಾಣಕ್ಕೆ ಅಥವಾ ಸ್ಥಾವರ ಲಿಂಗಕ್ಕೆ ಬಹಿಷ್ಕಾರವನ್ನು ಹಾಕಲಿಲ್ಲ, ಆದರೆ ಅಲ್ಲಿ ನಡೆಯುವ ಆಡಂಬರದ ಪೂಜೆ ಕಪಟತನವನ್ನು ಧಿಕ್ಕರಿಸಿದ್ದಾರೆ. ಹಾಗೆಯೇ ಷರೆದರೆ ನೆನೆಯದು, ಮರೆದರೇ ಬಾಡದು, ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ ಎಂದಾಗ ಇಷ್ಟಲಿಂಗಪೂಜೆಯನ್ನೇ ತಿರಸ್ಕರಿಸಿದ್ದಾರೆಂದು ತಿಳಿಯಬಾರದು. ಆದರೆ ಮನಸ್ಸಿಗೆ ಮುಟ್ಟದ ಪೂಜೆಯನ್ನು ತಿರಸ್ಕರಿಸಿದ್ದಾರೆ. ಹಲವಾರು ವಚನಗಳನ್ನು ಹರಿಹರಾದಿಗಳು ತಮ್ಮ ರಗಳೆಯಲ್ಲಿ ಅಳವಡಿಸಿಕೊಂಡಿದ್ದಾರೆ. ಬಸವರ - ಕಟ್ಟದೇವರೆಯ, ಬಟ್ಟೆ ಚನ್ನಿಗೆಯರ, ಮುಟ್ಟಿ ಬಂದಿರಿದರೆ ಓಸರಿಸುವನಲ್ಲ ....... ಎಲೆ ಎಲೆ ಸ್ವಾಮಿ, ಎಲೆ ಎಲೆ ತಂದೆ ಕೂಡಲಸಂಗಮದೇವಾ. ಇದನ್ನು "ಅಂಜದಿರ ಅಂಜದಿರ್ ದೇವಾ, ಪರೀಕ್ಷೆಗೆ ತೆರಹಿಲ್ಲಂ, ....... ಎಲೆ ತಂದೆ, ಎಲೆ ಎಲೆ ತಂದೆ, ಕೂಡಲಸಂಗ ಸ್ವೂಯವಾಗು ಸ್ವೂಯವಾಗು"[೨೪] ಎನ್ನುವದನ್ನು ನೋಡಿದಾಗ ಪೂರ್ತಿಯಾಗಿ ವಚನವನ್ನೇ ರಗಳಿಕರಿಸಿದ್ದಾನೆ ಹರಿಹರ ಎಂಬುದು ತಿಳಿಯುವದು. ಸುಳಾದಿಗಳು ತಾಳ ಪ್ರಧಾನವಾದಂತೆ ಉಗಾಭೋಗಗಳು ರಾಗ ಪ್ರಧಾನವೆನಿಸಿವೆ. ಶರಣರ ವಚನಗಳನ್ನು ಮತ್ತು ದಾಸರ ಉಗಾಭೋಗಗಳನ್ನು ತುಲನಾತ್ಮಕವಾಗಿ ಅಭ್ಯಾಸಮಾಡುವಾಗ ಅಂಕಿತಗಳನ್ನು ತೆಗೆದು ಹಾಕಿದರೆ, ಇದರಲ್ಲಿಯ

ವಚನಗಳಾವವು, ಉಗಾಭೋಗಗಳಾವವು ಎಂಬುದು ತಿಳಿದುಬರುವುದಿಲ್ಲ. ಅಷ್ಟು ಉಗಾಭೋಗಗಳಾವವು ವಚನಗಳ ಪಾಠಾಂತರವಾಗಿವೆ ಏನೋ ಎಂಬುವಂತೆ ಸಾದೃಶ್ಯವಾಗಿವೆ. ಈಗ ಬಸವಣ್ಣನ ವಚನ ಅಚಲಾನಂದರ ಉಗಾಭೋಗಗಳನ್ನು ತಾಲನಿಕವಾಗಿ ನೋಡಬಹುದು.

| ವಚನ | ಉಗಾಭೋಗ |
|---|---|
| "ನಾಳೆ ಬಪ್ಪುದುನಮಗಿಂದೆ ಬರಲಿ, | "ಇದಕಾರಂಜುವರೋ ಗೋಪಾಲ? |
| ಇಂದು ಬಪ್ಪುದು ನಮಗೀಗಲೆ ಬರಲಿ: | ಇದಕಾರಂಜುವರೋ; ನಾಳೆ ಬಾಹೋದು |
| ಇದಕಾರಂಜುವರು, ಇದಕಾರಳುಕುವರು? | ಎಮಗಿಂದೆ ಬರಲಿ ಇಂದೇ ಬಾಹೋದು |
| "ಜಾತಸ್ಯಮರಣಂ ಧ್ರುವಂ" ಎಂದುದಾಗಿ, | ನಾಳೆ ಬರಲಿ ಆಗ ಬಾಹೋದು |
| ನಮ್ಮ ಕೂಡಲ ಸಂಗಮದೇವರು ಬರೆದ | ಎಮಗೀಕ್ಷಣ ಬರಲಿ ಯಾತರಭಯವು |
| ಬರೆಹವ ತಪ್ಪಿಸುವಡೆ ಹರಿಬ್ರಹ್ಮಾದಿಗಳಿಗಳವಲ್ಲ" | ಅಚಲಾನಂದ ವಿಠಲ" |

ಹೀಗೆ ಹಲವಾರು ಉಗಾಭೋಗಗಳು ವಚನಕಾರರಿಂದ ಪ್ರಭಾವಿತವಾಗಿವೆ. ಆ ವಚನಗಳಿಗೆ ಛಂದಸ್ಸು, ತಾಳ ನೇಮಗಳಿಲ್ಲದೇ ರಾಗದಿಂದ ಹಾಡಲಾಗುತ್ತದೆ. ಅದರಂತೆ ಉಗಾಭೋಗಗಳನ್ನು ಕೂಡಾ ರಾಗ ಪ್ರಧಾನವಾಗಿ ದಾಸರು ಹಾಡಿದ್ದಾರೆ. ಈ ಉಗಾಭೋಗದ ಮೊದಲ ರಚನಾಕಾರರು ಶ್ರೀಪಾದರಾಯರು. ವಚನಕಾರರಿಗೂ ದಾಸರಿಗೂ ಉಗಾಭೋಗ ತೆರನಾದ ಸಾಹಿತ್ಯ ಪ್ರಿಯವೆನಿಸಲು ಅದರಲ್ಲಿರುವ ಸರಳವಾದ ಲಹರಿಯೇ ಕಾರಣವಾಗಿರಬಹುದು. ವಚನಗಳಲ್ಲಿ ಬಹಳ ಮಟ್ಟಿಗೆ ಆದಿ ಅಂತ್ಯ ಪ್ರಾಸಗಳನ್ನು ಕಾಣಬಹುದು. ಶಬ್ದಾಲಂಕಾರ ಅರ್ಥಾಲಂಕಾರಗಳಂತೂ ದಾಸರ ಕೃತಿಗಳಿಗಿಂತಲೂ ವಚನಗಳಿಗೆ ಹೆಚ್ಚಾಗಿದೆ ಎನ್ನಲಡ್ಡಿಯಿಲ್ಲ.[xx] ಅಂದರೆ 'ಸುಳಾದಿ'ಗಳಂತೆ ಇಲ್ಲಿಯೂ ಕೂಡಾ ಛಂದಸ್ಸನ್ನು ಕಾಣಬಹುದು. ಇವೆರಡರಲ್ಲಿಯ ಉಪಮೆ - ರೂಪಕಗಳು, ವಚನಕಾರರಲ್ಲಿ ಹಲವಾರು ಉಪಮೆಗಳಿಂದ ಕೂಡಿ ಮುಖ್ಯ ತತ್ವಕ್ಕೆ ಮುಟ್ಟಿದರೆ, ದಾಸರು ಪಲ್ಲವಿ, ಅನುಪಲ್ಲವಿಯಲ್ಲಿಯೇ ಮುಖ್ಯ ತತ್ವವನ್ನು ಹೇಳಿ ನಂತರ ಉಪಮೆ ದೃಷ್ಟಾಂತಗಳಿಂದ ತಿಳಿಸುವರು. ಹಲವಾರು ಬಾರಿ ವಚನಗಳಲ್ಲಿಯೂ ಕೂಡಾ ತತ್ವ ಮೊದಲಿನಿಂದಲೇ ಪ್ರಾರಂಭವಾಗಿದೆ. 'ಕರಿಘನ ಅಂಕುಶ ಕಿರಿದೆನ್ನಬಹುದೇ'? ಎನ್ನುವ ವಚನದಲ್ಲಿ ದೀಪಕಾಲಂಕಾರದ ಲಕ್ಷಣಹೊಂದಿ ಆಧ್ಯಾತ್ಮಿಕ ವಿಮರ್ಶರೂಪವಾಗಿದೆ. ವಚನಕಾರರು ಭಗವಂತನನ್ನು ನಿರಾಕಾರನೆಂದು ಬಣ್ಣಿಸಿದರೂ ಅಪರೂಪವೆಂಬಂತೆ, ಮಹಾದೇವಿ ಅಕ್ಕನ 'ಚಿಕ್ಕ ಚಿಕ್ಕ ಜಡೆಗಳು ಸುಲಿಪಲ್ಲ ಗೊರವನ .....' ಅನ್ನುವಲ್ಲಿ ಸಾಕಾರ ರೂಪದ ಶಿವನನ್ನು ಕೂಡಾ ಕಂಡಿದ್ದಾರೆ. ಆದರೆ ದಾಸರು ಆ ಸಾಕಾರ ರೂಪ ಹರಿಯನ್ನು ಕಂಡು ಮೈಮರೆಯುತ್ತಾರೆ. ಇವರಿಬ್ಬರ ಮಾರ್ಗದ ಗುರಿಯು ಹಾಗೂ ಮೂಲಗಳು ಒಂದೇ ತೆರನಾಗಿದ್ದುದರಿಂದ ಸಾಮ್ಯತೆ ಕಂಡುಬರಬಹುದಾಗಿದೆ. ಆದರೆ ಕಾಲ, ಸಮಾಜ, ಸಿದ್ಧಾಂತಗಳಿಂದ ಭಿನ್ನ. ಆಗ ಕಾಲದ ಸಾಮಾಜಿಕಕ್ಕೆ ಬೇಕಾದ ಸಾಹಿತ್ಯಗಳನ್ನು ಒದಗಿಸಿವೆ. ಇದರಲ್ಲಿ ಯಾವುದೇ ಸಾಹಿತ್ಯ ಕಡಿಮೆಯಲ್ಲ. ಯಾವುದು ಹೆಚ್ಚಲ್ಲ. ಬಸವಣ್ಣನವರ 'ತಾಳಮಾನಸರಿಸವನರಿಯೆ' ಅನ್ನುವ ಇದು ತಾಳದ ನಿಯಮಕ್ಕೆ ಒಳಪಡದೇ ರಾಗಬದ್ಧವಾಗಿ ಹಾಡಬಹುದೆಂದು ಹೇಳುತ್ತದೆ. ಅಂದರೆ ಉಗಾಭೋಗಗಳಂತೆ ಮೊದಲಿನಿಂದಲೂ ವಚನಗಳನ್ನು ಹಾಡುವ ಸಂಪ್ರದಾಯವಿತ್ತೆಂದು ತೋರುತ್ತದೆ. ಸುಳಾದಿಗಳು ತಾಳ ಪ್ರಧಾನವಾದರೆ ಉಗಾಭೋಗಗಳು ರಾಗಪ್ರಧಾನ ಮತ್ತು ಕೀರ್ತನೆ -

ರಾಗ, ತಾಳ ಎರಡನ್ನೂ ಪ್ರಧಾನವಾಗಿ ಹೊಂದಿದೆ. ಆದರೆ ಕೆಲವು ವಚನಗಳು ಮತ್ತು ಉಗಾಭೋಗಗಳು ರಾಗ - ತಾಳ ಬದ್ಧವಾಗಿ ಹಾಡಲೂಬಹುದು. ಇಂತಹ ಹಾಡುಗಾರಿಕೆ ಸೊಗಸಾಗಿರುವಂತೆ ಹಿಗ್ಗಾ - ಮುಗ್ಗಾ ಜಗ್ಗಾಡಿ ವಿಕಾರವಾಗಲೂಬಹುದು. ಆದರೆ ರಾಗ ಪ್ರಧಾನವಾಗಿ ಹಾಡುವದಂತೂ ಉಚಿತ. ಹಲವಾರು ಉಗಾಭೋಗ ಮತ್ತು ವಚನಗಳಲ್ಲಿ ಕಂಡುಬರುವ ಸಾಮ್ಯ ಒಂದರಮೇಲೆ ಇನ್ನೊಂದರ ಪ್ರಭಾವವಿದ್ದಂತೆ ಆಕಸ್ಮಿಕವಾಗಿಯೂ ಕೂಡಾ ಸಾಮ್ಯತೆಯಿರಬಹುದು. 'ಇಂದಿಗೆಂತೊ ನಾಳಿಗೆಂತೊ'' ಎನ್ನುವ ವ್ಯಾಸರಾಯರ ಉಗಾಭೋಗ ಬಸವರ 'ಇಂದಿಗೆಂತೊ ನಾಳಿಗೆಂತೊ' ಎನ್ನುವ ವಚನವನ್ನು ಹೋಲಿಸಿ ನೋಡಿದಾಗ ಪ್ರಭಾವ ವ್ಯಾಸರಾಯರ ಮನಸ್ಸಿನ ಮೇಲೆ ಬಿದ್ದಿತ್ತು ಎನ್ನುವುದಕ್ಕೆ ಸಾಕ್ಷಿಯಾಗಿದೆ. ಆದರೆ ಎಲ್ಲ ಹರಿದಾಸರಿಗಿಂತ ಪುರಂದರದಾಸರ ಮೇಲೆ ಬಸವ ವಚನ ಪ್ರಭಾವ ಅಧಿಕವಾಗಿದೆ.

ವಚನಕಾರರ ಮೂರು ಶತಮಾನಗಳ ನಂತರ ಶ್ರೀಪಾದರಾಯ, ವ್ಯಾಸರಾಯ, ಪುರಂದರದಾಸ ಮುಂತಾದ ಹರಿದಾಸರಿಗೆ ವಚನ ಸಾಹಿತ್ಯದ ಸಂಪರ್ಕ ಹಲವಾರು ರೀತಿಯಲ್ಲಿ ಆಗಿದೆ. ವಿಜಯನಗರ ಅರಸರ ನೂರೊಂದು ವಿರಕ್ತರ ಕಾಲದಲ್ಲಿಯೇ ಈ ಹರಿದಾಸರ ಪರಂಪರೆ ಇರುವುದರಿಂದ ಇವರಿಂದಲೇ ವಚನ ಸಾಹಿತ್ಯ ದಾಸರಿಗೆ ದೊರಕಿರಬಹುದು. ೧೨ನೇ ಶತಮಾನದಲ್ಲಿ ಈ ವಿನೂತನ ಸಾಹಿತ್ಯ ಪ್ರಾರಂಭವಾಗಿದ್ದನ್ನು ಹರಿದಾಸ ಸಂಪ್ರದಾಯ ಬೆಳೆಸಿಕೊಂಡು ಬಂದಿದ್ದು ಭಕ್ತಿಪಂಥದ ಹೆಮ್ಮೆ ಎನ್ನಬಹುದು. ಈ ಉಗಾಭೋಗಗಳು ಎತ್ತರ ಮಟ್ಟದ ತಾತ್ವಿಕವನ್ನು ಹೇಳಿವೆ. ಸಂಸ್ಕೃತ ಶ್ಲೋಕದ ಮಾದರಿಯಂತಿದ್ದರೂ ಕೂಡಾ ವಚನಕಾರರು ವಚನದಲ್ಲಿ ಸಂಸ್ಕೃತವನ್ನು ಬಳಸಿದಂತೆ, ದಾಸರೂ ಬಳಸಿಲ್ಲ. ಹೀಗೆ ಗಾತ್ರದಲ್ಲಿ ಕಿರಿಯಾಗಿ, ಅರ್ಥದಲ್ಲಿ ಹಿರಿಯಾಗಿ, ಭಾವನೆಗಳನ್ನು ಘನೀಕರಿಸಿ, ತಾತ್ವಿಕ ವಿಚಾರವನ್ನು ವಿಶ್ಲೇಷಿಸುವ ಈ ಹಾಡು ಗಬ್ಬಗಳೇ ಉಗಾಭೋಗಗಳಾಗಿವೆ. ಬಾಹುರ ಬ್ರಹ್ಮಯ್ಯನ ರಗಳೆಯನ್ನು ನೋಡಿದಾಗ ಅಲ್ಲಿ ಕಲ್ಯಾಣದ ತ್ರಿಪುಂತಾಕ ದೇವಾಲಯದಲ್ಲಿ "ತಾಳಮಂ ಕೊಂಡು ನಾದ ಪ್ರಿಯನ ಉರೆಪಾಡಿ, ಅಳಾಪದಿಂ ಪುರಾತನರ ಗೀತಂ"[೫೬] ಎನ್ನುವ ಗೀತವನ್ನು ಹಾಡುತ್ತಿದ್ದಾಗ ಆ ಮಂಟಪದಲ್ಲಿ ರಾಜ ರಾದಿಯಾಗಿ ಎಲ್ಲ ಶಿವಶರಣರು ಕೂಡಿದ್ದರೂ ಎಂಬುದನ್ನು ನೋಡಿದರೆ ದಾಸರ ಕೀರ್ತನೆಯ ನೆನಪು ಆಗುವದು. ಇದೇ ಕೀರ್ತನ ಪದ್ಧತಿಯನ್ನು ೧೯ನೇ ಶತಮಾನದವರೆಗೆ ಮುಂದುವರೆದಿದ್ದು, ೧೩ನೇ ಶತಮಾನದಲ್ಲಿ ಹರಿಹರ ರಾಘವಾಂಕ, ೧೪ನೇ ಶತಮಾನದಲ್ಲಿ ಗುರುಪುರದ ಮಲ್ಲಯ್ಯ, ೧೫ನೇ ಶತಮಾನದಲ್ಲಿ ಗುರುಬಸವ, ಕರಸ್ಥಲದ ನಾಗಿದೇವ, ನಿರ್ವಾಣಿ ಭೋಳೇಶ, ಶಂಕರದೇವ ಮತ್ತು ಹರಿದಾಸರು. ೧೬ನೇ ಶತಮಾನದಲ್ಲಿ ಎರಡನೇ ನಿಜಗುಣ, ೧೭-೧೮-೧೯ನೇ ಶತಮಾನಗಳಲ್ಲಿ ಮುಪ್ಪಿನ ಷಡಕ್ಷರಿ, ಸಪ್ಪಣ್ಣ, ಬಾಲಲೀಲಾ ಮಹಾಂತಶಿವಯೋಗಿ ಹಾಗೂ ಆನಂದ ಸಿದ್ದೇಶ್ವರ, ಹುಲಿಗೆರೆಯ ವರದ ಸೋಮೇಶ್ವರ ಮುಂತಾದವರು ಮುಂದುವರೆಸಿಕೊಂಡು ಬಂದಿದ್ದಾರೆ. ೧೫ನೇ ಶತಮಾನದ ಈ ನೂರೊಂದು ವಿರಕ್ತರ ಹಾಡುಗಳು ವಿಶೇಷವಾಗಿವೆ. ಗುರುಪರದ ಮಲ್ಲಯ್ಯನ ಹಾಡುಗಳು ಮಹಾಲಿಂಗ ಜಕ್ಕಣ್ಣರ ಶತಸ್ಥಲದಲ್ಲಿ ಸಿಗುತ್ತವೆ. ಈ ನೂರೊಂದು ವಿರಕ್ತರ ನಂತರ ಈ ಕನ್ನಡ ವಿಶಿಷ್ಟ ಗೀತಸಾಹಿತ್ಯವನ್ನು ಶಂಭುಲಿಂಗ ಎಂಬ ನಾಮಾಂಕಿತದಲ್ಲಿ ನಿಜಗುಣ ಶಿವಯೋಗಿಯ ಕೈವಲ್ಯ ದರ್ಪಣದಲ್ಲಿ ನೋಡಬಹುದು. ಕೊಳ್ಳೆಗಾಲದ ಶಂಭುಲಿಂಗನ ಬೆಟ್ಟದಲ್ಲಿಯ ಮುಪ್ಪಿನ ಷಡಕ್ಷರಿ ಎರೆಗಂಬಳಿಯ ಮಠಾಧೀಶನಾಗಿ 'ತಿರುಕನೋರ್ವನೂರಮುಂದೆ' ಎನ್ನುವ ಪದ ಪ್ರಸಿದ್ಧಿಯನ್ನು ಹೊಂದಿದೆ. ಮುಳುಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು ಕೈವಲ್ಯ ದರ್ಪಣವು ಈ ತೆರದ ಸಾಹಿತ್ಯದ ಕೊನೆಯ ಕಿಂಡಿ.

ಕಾಲ ಚಕ್ರದಲ್ಲಿ ಯಾವುದೇ ಸಾಹಿತ್ಯದ ಮೇಲೆ ಇನ್ನಾವುದೇ ಸಾಹಿತ್ಯದ ಪ್ರಭಾವವನ್ನು ಹೊಂದಿರಬಹುದು. ಆದಿಕವಿ ಪಂಪನ ಪ್ರಭಾವ ರನ್ನನ ಮೇಲಾದಂತೆ, ಇವರೀರ್ವರ ಪ್ರೇರಣೆ ಹರಿಹರ ರಾಘವಾಂಕರ ಮೇಲಾಗಿದೆ. ವಚನಕಾರರು ಮತ್ತು ದಾಸರು ಈ ತೆರನ ಸಾಹಿತ್ಯಕ್ಕೆ ಮೂಲ ಪ್ರೇರಕರು. ಬಸವೇಶ್ವರ ಮತ್ತು ಪುರಂದರದಾಸ ಅಥವಾ ವಚನಕಾರರು ಮತ್ತು ಹರಿದಾಸರ ಇವರೀರ್ವರ ಪ್ರಭಾವ ಇತರ ಸಾಹಿತ್ಯಗಳ ಮೇಲೆ ಆದದ್ದನ್ನು ನೋಡ ಹೊರಟರೆ ಅದು ಮತ್ತೊಂದು ಅಧ್ಯಯನವೇ ಆಗುವದು. ಕನಕದಾಸ ಮತ್ತು ಪುರಂದರದಾಸರ ವಚನಕಾರರಂತೆ ಭಕ್ತಿಪಂಥಕ್ಕೆ ಸೇರಿದವರು. ಪುರಂದರದಾಸರ ಕೀರ್ತನೆಗಳು ವಚನಕಾರರನ್ನು ನೆನಪಿಗೆ ತಂದಂತೆ ಉಗಾಭೋಗಗಳು ವಚನ ಸಾಹಿತ್ಯದ ಮುಂದುವರೆದ ಭಾಗಗಳಂತೆ ಕಾಣಿಸುವುದು.

| ಬಸವೇಶ್ವರ | ಪುರಂದರದಾಸ |
|---|---|
| ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ | ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ |
| ಆಕಳ ಹಾಲನೆರೆದು ಜೇನು ತುಪ್ಪವ ಹೊಯ್ದಡೆ | ಬೀಜವ ಬಿತ್ತಿ ಜೇನ ಮಳೆಗರೆದರೆ |
| ಸಿಹಿಯಾಗ ಬಲ್ಲುದೆ, ಕಹಿಯಾಹುದಲ್ಲದೆ | ವಿಷಹೋಹುದೇನಯ್ಯಾ. |

ಬೇವಿನ ಬೀಜ, ಬೆಲ್ಲದ ಕಟ್ಟೆ, ಜೇನಮಳೆ ಇಬ್ಬರಲ್ಲಿಯೂ ಒಂದೇ ತೆರನಾಗಿ ಬಳಕೆಯಾಗಿದೆ. ಅದೇ ತೆರನಾಗಿ ಷಟ್ಪದಿಗಳಂತೆ ಕಾಣುವ ವಚನ ಮತ್ತು ಉಗಾಭೋಗಗಳು ಅರ್ಥ ಆಶಯ ಅಭಿವ್ಯಕ್ತಿಗಳಲ್ಲಿ ಒಂದೇ ತೆರನಾಗಿರುವುದು.

"ಹರಿವ ಹಾವಿಗಂಜೆ ಉರಿಯ ನಾಲಗೆಗಂಜೆ
ಸುರಗಿಯ ಮೊನೆಗಂಜೆ,
ಒಂದಕ್ಕಂಜುವೆ, ಒಂದಕ್ಕಳಕುವೆ
ಪರಸ್ತ್ರೀ ಪರಧನವೆಂಬೆ ಜೂಜಿಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ
ಅಂಜುವೆನಯ್ಯಾ ಕೂಡಲಸಂಗಮದೇವಾ"

"ಉರಿಗಂಜೆ ನರೆಗಂಜೆ ಶರೀರದ ಭಯಕಂಜೆ |
ಹಾವಿಗಂಜೆ ಚೇಳಿಗಂಜೆ ಕತ್ತಿಯ ಧಾರೆಗಂಜೆ |
ಇನ್ನೊಂದಕ್ಕಂಜುವೆ ಇನ್ನೊಂದಕ್ಕಳಕುವೆ |
ಪರಧನ ಪರಸತಿಗೆರಡಕ್ಕಂಜುವೆನಯ್ಯಾ |
ಹಿಂದೆ ಕೌರವ ರಾವಣರೇನಾಗಿ ಪೋದರು |
ಮುಂದೆ ಸಲಹೋ ಪುರಂದರ ವಿಠಲ |"

| | |
|---|---|
| ತಂದೆ ನೀನು ತಾಯಿ ನೀನು<br>ಬಂಧು ನೀನು ಬಳಗನೀನು | ತಂದೆ ತಾಯಿಗಳು ನೀನೆ ಬಂಧು ಬಳಗವ ನೀನೆ |
| ಇಬ್ಬರು ಮೂವರು ದೇವರೆಂದು<br>ಉಬ್ಬಿ ಮಾತನಾಡ ಬೇಡ<br>ದೇವನೊಬ್ಬ ಕಾಣಿರೋ. | ನಮ್ಮ ದೇವ ನಿಮ್ಮ ದೇವ ಎನಬೇಡ<br>ಬೊಮ್ಮನ ಪಡೆದ ದೇವನೊಬ್ಬನೆ ಕಾಣಿರೋ |
| ನಾಳೆ ಬಪ್ಪುದು ನಮಗಿಂದೆ ಬರಲಿ. | ಅಂದು ಬಾಹೋದು ನಮಗಿಂದೇ ಬರಲಿ. |

ಹೀಗೆ ಜನರ ನಾಲಿಗೆ ಮೇಲೆ ನಡಿದಾಡುವ ಸಹಜ ಗಾದೆಗಳಂತಿರುವ ಈ ಸಾಮ್ಯವನ್ನು ಗುರುತಿಸಿದಾಗ, ಅದರಂತೆ ಅಕ್ಕಮಹಾದೇವಿಯ ಸ್ವರವಚನ ಪುರಂದರ ಕೀರ್ತನೆಗಳಲ್ಲಿ ಹೀಗಿದೆ.

| ಮಹಾದೇವಿ | ಪುರಂದರದಾಸ |
|---|---|
| ನಂಬಿದೆ ಗುರುವೆ ನಂಬಿದೆ. ನಂಬಿದೆ ಸ್ವಾಮೀ<br>ನಂಬಿದೆ, ಅಂಬಿಕಾ ರಮಣ, ನಿನಂಬಿಗ. | ಅಂಬಿಗನಾ ನಿನ್ನ ನಂಬಿದೆ ಜಗದಂಬಾ<br>ರಮಣನಿನ್ನ ಹೊಂದಿದೆ. |

ಒಂದಕ್ಕೊಂದು ನುಡಿಗಳಲ್ಲಿ ವ್ಯತ್ಯಾಸವಾದರೂ ಕೂಡಾ ಅರ್ಥ, ಛಂದಸ್ಸುಗಳಲ್ಲಿ ಸಾಮ್ಯತೆಯನ್ನು ಹೊಂದಿವೆ. ಕನಕದಾಸರು ಪುರಂದರದಾಸರ ಹಿರಿಯ ಸಮಕಾಲೀನರು. ಕನಕದಾಸರ ಎಷ್ಟೋ ಕೀರ್ತನೆಗಳು, ಯಥಾವತ್ತಾಗಿ ಪುರಂದರ ಕೀರ್ತನೆಯಂತಿವೆ. ಇದು ಆಕಸ್ಮಿಕವಾಗಿರಬಹುದು. ಇಲ್ಲವೇ ಪ್ರಭಾವ ಬೀರಿರಬಹುದು. ಇವರಿಬ್ಬರೂ ಕೂಡಾ ಅನುಭಾವದ ತಾತ್ವಿಕ ನೆಲೆಯನ್ನು ಹೊಂದಿರುವುದಕ್ಕೆ ಕೊನೆಯಲ್ಲಿ ಚರ್ಚಿಸಲಾಗಿದೆ. ವಚನಕಾರರ ಪ್ರಭಾವವು ಪುರಂದರ ಕನಕರ ಮೇಲೆ ಆಗಿರುವಂತೆ ಕನಕರ ಪ್ರಭಾವ ಪುರಂದರ ಮೇಲು ಆಗಿರುವುದನ್ನು ವಿದ್ವಾಂಸರು ಒಪ್ಪಿಕೊಂಡಿದ್ದಾರೆ.

"ಪುರಂದರದಾಸ ಕನಕದಾಸರ ಕೆಲವೊಂದು ಗೀತೆಗಳು ಪರಸ್ಪರ ಅಂಕಿತಗಳನ್ನು ಬದಲಿಸಿಕೊಂಡು ಮುದ್ರಿತವಾಗಿವೆ. ಇವುಗಳ ನಿಜವಾದ ಕರ್ತೃ ಯಾರು ಎಂಬುದನ್ನು ನಿರ್ಣಯಿಸುವುದಕ್ಕೆ ಪ್ರಾಚೀನ ಹಸ್ತಪ್ರತಿಗಳೇ ಸಹಕಾರ ನೀಡಬಲ್ಲವುಗಳಾಗಿವೆ."[೭] ಈ ರೀತಿಯಾಗಿ ಕೀರ್ತನೆಗಳು ಅದಲು - ಬದಲು ಮಾಡಿರುವವರು ಅವರವರ ಹಿಂಬಾಲಕರ ಕೆಲಸ. ಸೃಷ್ಟಿಯ ವಿಸ್ಮಯಕ್ಕೆ ಇವರಿಬ್ಬರು ಬೆರಗಾದರೂ, ಅದರಿಂದ ಹೊರಬಂದ ಗೀತೆ ಕೇವಲ ಸೌಂದರ್ಯವನ್ನು ಕುರಿತ ಪರಿಭಾವನೆಯಿಂದ ಬಂದುದಲ್ಲ. ಅದರ ಹಿಂದೆ ಇರುವ ಪ್ರೇರಕ ಶಕ್ತಿಯನ್ನು ಅರಿಯುವ ಜಿಜ್ಞಾಸೆಯಿಂದ ಕೂಡಿದುದು ಆದರೆ ಕವಿಗೆ ಚಲ್ವಿಕೆ ರಮಣೀಯ ದೃಶ್ಯಗಳನ್ನು ಹೇಳಿರುವದಕ್ಕೆ ಸೀಮಿತವಾಗಿರುತ್ತದೆ. ಕವಿಗೂ ಅನುಭಾವಿಗೂ ಇರುವ ಅಂತರ ಇದೆ. ಸಾಮಾಜಿಕ, ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ಇವರೀರ್ವರಲ್ಲಿ ಸಾಮ್ಯತೆ ಕಂಡುಬರುವುದು. ಇವರು ಸಾಹಿತ್ಯ ರಚನೆಯನ್ನು ಭಕ್ತಿಯ ಜಾಡಿನಲ್ಲಿ ಮಾಡಿದವರಾಗಿದ್ದಾರೆ. ಬಸವೇಶ್ವರರನ್ನು ಪುರಂದರದಾಸರು ಬಹುವಾಗಿ ಅನುಕರಿಸಿದ್ದುಂಟು. ವಚನಕಾರರು ಷಟಸ್ಥಲ ಭಕ್ತಿಮಾರ್ಗವನ್ನು ಅನುಸರಿಸಿದರೆ ಹರಿದಾಸರು ನವವಿಧ ಭಕ್ತಿಮಾರ್ಗಗಳನ್ನು ಅನುಸರಿಸುವರು. ಇಬ್ಬರಲ್ಲಿಯೂ ಕೂಡಾ ಮಾನವೀಯತೆ, ಅನುಕಂಪ, ದಯೆ ವಿನಯಗಳನ್ನು ಕಾಣಬಹುದು. ಅಹಂಕಾರ ಭಾವ ಹೋಗಿ ನಿರಹಂಕಾರ ಭಾವವನ್ನು ಪಡೆದು ತಮ್ಮನ್ನು

ತಾವೇ ಆತ್ಮ ವಿಮರ್ಶೆಗೆ ಎಡೆಮಾಡಿಕೊಂಡು ದೇವರನ್ನು ಪ್ರಾರ್ಥಿಸುವ ದಾರಿ ಇಬ್ಬರದು ಒಂದೇ. ಆಶೆ - ಆಮಿಷ, ತಾಪ - ತಾಮಸ, ಹುಸಿ - ವಿಷಯ, ಕುಟಿಲ - ಕುಹಕ, ಅರಿಷಡ್ವರ್ಗ, ಮಿಥ್ಯೆ ಕ್ಷುದ್ರಗಳನ್ನು ದೂರೀಕರಿಸಯ್ಯ ಎಂದು ವಚನಕಾರರು ಭಗವಂತನಲ್ಲಿ ಭಿನ್ನವಿಸಿದಂತೆ ಮರುಳ ಬುದ್ಧಿಗಳನ್ನು ಬಿಡಿಸಿ ಕರುಣ - ಕವಚವನ್ನು ತೊಡಿಸಿ ಎಂದು ಪುರಂದರದಾಸರು ವಿಠಲನಲ್ಲಿ ಪ್ರಾರ್ಥಿಸಿದ್ದಾರೆ. ದುಶ್ಚಟಗಳಿಂದ ದೂರಾದಂತೆ ವಿಷಯಗಳ ಗುಲಾಮಗಿರಿಯನ್ನು ಸಮೀಪ ಬರದಂತೆ ಭಗವಂತನಲ್ಲಿ ಮೊರೆ ಇಟ್ಟಿದ್ದಾರೆ. ಭವರೋಗ ವೈದ್ಯ ನೀನು, ಭವವಿರಹಿತನೀನು, ಗುರುಪದೇಶ ಮಂತ್ರವೈದ್ಯ ಜಂಗಮೋಪದೇಶ ಶಸ್ತ್ರ ವೈದ್ಯ ಭವರೋಗ ಕಳೆವ ಪರಿಯನೋಡಾ ಎಂದು ಈ ಭವರೋಗದ ಬಗ್ಗೆ ವಚನಕಾರರು ಬೇಡಿಕೊಂಡಂತೆ, ಭವರೋಗ ವೈದ್ಯನೇ ಭಕ್ತರ ಪ್ರಿಯನೆ ಎಂದು ಪುರಂದರರು ವಿಠಲನಲ್ಲಿ ಪ್ರಾರ್ಥಿಸಿದ್ದಾರೆ. ಅರಸರ ಮನೆಯ ಅರಸಿಯಾಗಿರುವದಕ್ಕಿಂತ ಭಕ್ತರ ಮನೆಯ ತೊತ್ತಾಗಿರುವುದು ವಚನಕಾರರಿಗೆ ಸರಿಕಂಡರೆ ದಾಸನ ಮಾಡಿಕೋ ಎಂದು ಐಶ್ವರ್ಯ ಅಂತಸ್ತುಗಳಿಗಿಂತ ಸೇವಾ ಲಾಭವನ್ನೇ ಬೇಡಿಕೊಂಡಿದ್ದಾರೆ. ಕಷ್ಟಗಳು ಬರಲಿ ಏನೂ ಸಿಗದಂತಾಗಲೀ, ಈ ಶರೀರಕ್ಕೆ ತೊಂದರೆಯಾಗಲಿ, ಇದಕ್ಕೆ ಪ್ರಾಯಶ್ಚಿತವಾಗಲಿ, ಎಂದು ಇಬ್ಬರು ಬೇಡಿಕೊಂಡಿದ್ದಾರೆ. ಸ್ವಾರ್ಥವನ್ನು ತ್ಯಾಗಮಾಡಿ ಪರಾರ್ಥದಿಂದಲೆ ಭಕ್ತಿ ಸಾಧ್ಯವೆಂದು ಅನ್ನುವ ಅಲ್ಲಮಪ್ರಭು ಮತ್ತು ವ್ಯಾಸರಾಯರು ಕ್ರಮವಾಗಿ ಬಸವೇಶ್ವರ ಮತ್ತು ಪುರಂದರರನ್ನು ಹೊಗಳಿದ್ದಾರೆ. ಅಕ್ಕಮಹಾದೇವಿಯು ಕೂಡಾ ತನ್ನ ಮನೆ ಮನೆ ತಪ್ಪದೇ ಕೈವಡ್ಡಿ ಬೇಡುವಂತೆ ಮಾಡಯ್ಯಾ, ಬೇಡಿದಡೆ ಇಕ್ಕದಂತೆ ಮಾಡಯ್ಯಾ, ಇಕ್ಕಿದಡೆ ನೆಲಕ್ಕೆ ಬೀಳುವಂತೆ ಮಾಡಯ್ಯಾ, ನಾನೆತ್ತಿ ಕೊಂಬುವ ಮುನ್ನ ಸುನಿಯೆತ್ತಿ ಕೊಂಬಂತೆ ಮಾಡಾ ಎನ್ನುವ ಈ ಬೇಡಿಕೊಳ್ಳುವಿಕೆಯನ್ನು ಈ ಎರಡು ಪರಂಪರೆಯಲ್ಲಿ ಕಾಣಬಹುದು. ಅಂದರೆ ದುಃಖ ಬರಲಿ, ಬೇಡಿದಲ್ಲಿ ನಿರಾಶೆಯಾಗಲೀ, ಜೀವಗುಣಗಳನ್ನು ಕಡಿಮೆಮಾಡಿ ದೇವಗುಣಗಳನ್ನು ಪಡೆಯುವ ವಿಶಿಷ್ಟ ಭಕ್ತಿಯ ದ್ಯೋತಕರಾಗಿದ್ದಾರೆ. ಸಮಾಜವನ್ನು ನೋಡುವ ದೃಷ್ಟಿಯಲ್ಲಿ ಇವರಿಬ್ಬರದು ವಿಭಿನ್ನ ನಿಲುವಾದರೂ ಮೂಢನಂಬಿಕೆ, ಅಂಧ ಸಂಪ್ರದಾಯಗಳನ್ನು ಖಂಡಿಸುವಲ್ಲಿ ಅದರಂತೆ ತಿಥಿ, ವಾರ, ನಕ್ಷತ್ರಗಳಿಗೆ ಮಹತ್ವ ಕೊಡದವರಾಗಿದ್ದಾರೆ. ನಾಳಿನದಿನಕಿಂದಿನ ದಿನ ಲೇಸೆಂದು ಹೇಳಿರುವ ಅವರೀರ್ವರ ಮಾತುಗಳಲ್ಲಿ ಅದರಂತೆ ವೇದ - ಪುರಾಣ - ಶಾಸ್ತ್ರಗಳಲ್ಲಿಯೇ ದಾರಿ ತಪ್ಪಿಸುವ ವಿಚಾರಗಳನ್ನು ಈರ್ವರು ಕೂಡಾ ಸರಿಯಾಗಿ ತಿಳಿದುಕೊಂಡಿದ್ದಾರೆ.

| | |
|---|---|
| ವೇದಕ್ಕೆ ವರೆಯ ಕಟ್ಟುವೆ | ಪರಿ ಪರಿ ಶಾಸ್ತ್ರವನೇಕವ ಓದಿ ವ್ಯರ್ಥವಾಯಿತು |
| ಶಾಸ್ತ್ರಕ್ಕೆ ನಿಗಳವನಿಕ್ಕುವೆ | ಭಕುತಿ ಆರು ಶಾಸ್ತ್ರಂಗಳನ್ನೋದಿದರೇನು? |
| ತರ್ಕದ ಬೆನ್ನ ಬಾಲನೆತ್ತುವೆ | ನೂರಾರು ಪುರಾಣ ಕೇಳಿದರೇನು? |
| ಆಗಮದ ಮೂಗ ಕೊಯ್ಯುವೆ ನೋಡಯ್ಯಾ. | |

ಹೀಗೆ ವೇದ - ಶಾಸ್ತ್ರ - ಆಗಮ - ಪುರಾಣಗಳ ಬಗ್ಗೆ ಅರ್ಥೈಸುವ ರೀತಿ ಒಂದೇ ಆಗಿದೆ. ಅದರಂತೆಯೇ ಯಜ್ಞ - ಯಾಗ - ಹೋಮ - ನೇಮ - ಜಪ - ತಪಗಳನ್ನು ಅಲ್ಲಗಳೆದು ಶರಣರ ನುಡಿಗಳಿಗೆ ವಚನಕಾರರು ಮಹತ್ವವನ್ನು ಕೊಟ್ಟರೆ, ಯತಿ - ಯಜ್ಞಯಾಗಗಳು ನಿರರ್ಥಕವೆಂದು ದಾಸರು ಹೇಳಿ ಭಕ್ತಿಗೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. ಕೇವಲ ಹೋಮ - ನೇಮಗಳಿಗೆ ಮಹತ್ವವನ್ನು ಕೊಟ್ಟು ನಿಜ ಮಾನವತಾವಾದವನ್ನು ಮರೆತವರಿಗೆ ಎಚ್ಚರಿಸಿ ನಿಜ ಆಧ್ಯಾತ್ಮಿಕ ಕೈವಲ್ಯವನ್ನು ಅಗತ್ಯವಾದ ದಯ ಭಕ್ತಿ, ವಿನಯಗಳಿಗೆ ಮಹತ್ವವನ್ನು ಕೊಟ್ಟು,

ಮಹತ್ವದ ವ್ಯಕ್ತಿಗಳಾಗಿದ್ದಾರೆ. ಆಗಿನ ಜಾತಿ ವಾದವನ್ನು ಪುರಂದರದಾಸರು ಕೇವಲ ಖಂಡಿಸಿದ್ದಾರೆ. ವಚನಕಾರರು ಸಮಾನತೆಯನ್ನು ತರಲು ಹೋರಾಟ ಮಾಡಬೇಕಾಯಿತು. 'ಕೊಲುವವನೇ ಮಾದಿಗ'ದಂತೆ ನಡೆಯದ ಪರಧನ ಪರಸತಿಗೆ ಆಶಿಸುವವ ಹೊಲೆಯನೆಂದು ಪುರಂದರದಾಸರು ಹೇಳಿದ್ದಾರೆ. ಭಕ್ತಿಯಿಲ್ಲದ ಕುಟಿಲತನದಿಂದ ಗೀತೆಯನ್ನೋದಿದರೇನು ಫಲ. ಮೋಸ - ವಂಚನೆ, ಅಧಿಕಾರಗಳಿಂದ ಭಗವಂತ ಒಲಿಯಲಾರ. ಇವರೀರ್ವರು ಅರಸೊತ್ತಿಗೆಯ ವ್ಯಾಮೋಹಕ್ಕೆ ಎಂದಿಗೂ ಒಳಗಾದವರಲ್ಲ. ಧರ್ಮ ಸಾಮಾಜಿಕ ಮೌಲ್ಯಗಳನ್ನು ಎತ್ತಿ ಹಿಡಿದವರು. ದೇವಭಕ್ತ, ಧರ್ಮ, ಸಮಾಜ, ಪ್ರಾಮುಖ್ಯತೆಯನ್ನು ಪಡೆದಷ್ಟು, ಅಧಿಕಾರ, ರಾಜ ಸಾಮ್ರಾಜ್ಯಗಳಿಗೆ ಮಹತ್ವವನ್ನು ಕೊಡಲಿಲ್ಲ. ಅರಸೊತ್ತಿಗೆಯ ಡಾಂಬಿಕ ಬದುಕಿಗಿಂತ ಮಾನವೀಯ ಮೌಲ್ಯಗಳು ಬಹಳ ದೊಡ್ಡವು. ಈರ್ವರು ಕೂಡಾ ಸ್ವವಿಮರ್ಶೆಗೆ ಒಳಗಾಗಿ ಸಮಾಜದ ಒಳಿತಿಗಾಗಿ ಚಿಂತನೆ ಮಾಡಿದ್ದರಿಂದ ಬಹಳ ಮಹತ್ವಿಕರೆನಿಸಿದ್ದಾರೆ. ಸಜ್ಜನರ ಸಂಗವನ್ನು ಬಯಸುತ್ತಾ ದುರ್ಜನರ ಸಂಗವನ್ನು ತಿರಸ್ಕರಿಸಿದ್ದಾರೆ. ಮಾನವ ಜನ್ಮಕ್ಕೆ ಮಹತ್ವವನ್ನು ಕೊಟ್ಟರೆ, ಮಾನವ ಜನ್ಮ ಬಹುದೊಡ್ಡದು ಇದನ್ನು ಹಾಳು ಮಾಡಬೇಡ ಹುಚ್ಚಪ್ಪಗಳಿರಾ ಎಂದು ದಾಸರು ಹೇಳಿದ್ದಾರೆ. ಆಚಾರ - ವಿಚಾರ, ನಡೆ - ನುಡಿ, ಸರಳತೆ - ಸ್ಪಷ್ಟತೆ, ದಯ - ಅಂತಃಕರಣ, ಮಾತು - ಮೌನಗಳಿಗೆ, ಮಹತ್ವವನ್ನು ಕೊಟ್ಟು ಇವರು ಭಗವಂತನ ಭಕ್ತರಾಗಿ ಧರ್ಮದ ಕೃಷಿಕರಾಗಿ ತೊಡಗಿಸಿಕೊಂಡಿದ್ದಾರೆ. ಇವರೀರ್ವರಲ್ಲಿ ಸಾಮ್ಯತೆಯಿದ್ದಂತೆ ಭಿನ್ನತೆಯೂ ಕೂಡಾ ಇದೆ. ಕಾಲ, ಪರಿಸರ, ಧರ್ಮ, ಮತ, ರಾಜಕೀಯ, ಸಾಮಾಜಿಕಗಳು ಬೇರೆ ಬೇರೆಯಾಗಿರುವುದರಿಂದ ಈ ಭಿನ್ನತೆಗಳು ಸ್ವಾಭಾವಿಕ. ಇವರೀರ್ವರು ಧರ್ಮಕ್ಕೆ ಪ್ರಾಶಸ್ತ್ಯವನ್ನು ನೀಡಿದರೆ ವಿನಹ ಮತಕ್ಕಲ್ಲ. ಇಬ್ಬರೂ ಕೂಡಾ ವೈದಿಕ ಧರ್ಮದಲ್ಲಿ ಹುಟ್ಟಿದರೂ ಬಸವ ಆ ವೈದಿಕ ಮತದ ಕಟ್ಟಳೆಗಳನ್ನು ಮೀರಿ, ವರ್ಣಾಶ್ರಮವನ್ನು ತಿರಸ್ಕರಿಸಿವರು. ಆದರೆ ಪುರಂದರದಾಸರು ತಮ್ಮ ಮತದಲ್ಲಿಯೇ ಇದ್ದುಕೊಂಡು ಅದರಲ್ಲಿಯ ಲೋಪದೋಷಗಳನ್ನು ಖಂಡಿಸಿ ಅದರ ಪ್ರಚಾರವನ್ನೇ ಮಾಡಿದರು. ವಚನಕಾರರದು ಧಾರ್ಮಿಕ ಚಳುವಳಿ ಎನಿಸಿದರೆ, ದಾಸರದು ಮತಧರ್ಮ ಸುಧಾರಣೆ ಎನ್ನಬಹುದು. ಪ್ರತಿಯೊಬ್ಬ ವಚನಕಾರರು ಚಳುವಳಿಯ ನೇತೃತ್ವ ವಹಿಸಲು ಅಪೇಕ್ಷಿಸಿದರೆ ದಾಸರು ಚಳುವಳಿಯಿಂದ ದೂರವಿದ್ದವರು. ಒಬ್ಬರದು ಕ್ರಾಂತಿಕಾರಕ ಮನಸ್ಸಾದರೇ ಇನ್ನೊಬ್ಬರದು ಸುಧಾರಣೆ ಮನಸ್ಸಾಗಿದೆ. ಒಬ್ಬರು ಸಂಸಾರದಲ್ಲಿದ್ದುಕೊಂಡು ಆಧ್ಯಾತ್ಮ ಸದ್ಗತಿಯನ್ನು ಪಡೆದರೆ, ಇನ್ನೊಬ್ಬರು ಸಂಸಾರವನ್ನು ತೊಡೆದು ಆಧ್ಯಾತ್ಮಕವನ್ನು ಸಾಧಿಸ ಹೊರಟರು. ವಚನ ಚಳುವಳಿ ವಿಶಾಲವಾದಷ್ಟು ಈ ದಾಸಕೂಟವು ಸಣ್ಣ ಪ್ರಮಾಣದಲ್ಲಿ ಎಂದು ಗುಂಪಿನೊಂದಿಗೆ ಪುರಂದರರು ಗುರುತಿಸಿಕೊಂಡಂತಾಗಿದೆ. ಇಬ್ಬರು ಧರ್ಮದ ಮೂಲದಿಂದಲೇ ಕಾಣಿಸಿಕೊಂಡರು ಕೂಡಾ ತಾತ್ವಿಕತೆಯಲ್ಲಿ ಭಿನ್ನತೆಯುಂಟು. ಒಬ್ಬರದು ಏಕದೇವೋಪಾಸನೆಯ ಇಷ್ಟಲಿಂಗ ಪೂಜೆಯಾದರೆ, ಇನ್ನೊಬ್ಬರದು ಶೋಷಣೆಗೆ ಅವಕಾಶವಿರುವ ಮೂರ್ತಿ ಪೂಜೆಯಾಗಿದೆ. ಈ ಜೀವಿಯು ಶಿವನ ಅಂಶ, ಸಾಧನೆ ಮಾಡಿ ಜೀವಿ ಶಿವನಾಗಬಹುದು. ಶಿವನಿಗಿಂತ ಶಿವಶರಣರು ಶ್ರೇಷ್ಠ ಇದು ವಚನಕಾರರ ನಿಲುವಾದರೆ, ಜೀವಿಯು ಬೇರೆ, ಶಿವನೇ ಬೇರೆ. ಜೀವಿ ಶಿವನಾಗಲು ಸಾಧ್ಯವಿಲ್ಲ. ಜೀವಿಯು ಯಾವಾಗಲೂ ಕೂಡಾ ಆ ಹರಿಯ ದಾಸನಾಗಿಯೇ ಇರಬೇಕು ಎಂದು ಪುರಂದರದಾಸರ ನೀತಿ. ವಚನಕಾರ ಪ್ರಮುಖ ಜನಿವಾರವನ್ನು ಕಿತ್ತಸೆದರೆ, ಪುರಂದರರು ಜನಿವಾರವನ್ನು ಹಾಕಿಕೊಂಡೇ ದೇಹವನ್ನು ಸವೆಸಿದರು. ಒಬ್ಬರು ದೇಹವನ್ನೇ ದೇಗುಲವಾಗಿ ಮಾಡಿಕೊಂಡರೆ, ಇನ್ನೊಬ್ಬರು ಅನೇಕ ದೇವಾಲಯಗಳನ್ನು ಕಟ್ಟಿ ಸುತ್ತಿದರು. ಒಬ್ಬರು ವೈದಿಕ,

ಸಾಂಸ್ಕೃತಿಕ, ದೇವಾಲಯ ಸಂಸ್ಕೃತಿ, ರಾಜಸಂಸ್ಕೃತಿ ಮೀರಿ ನಿಂತರೆ, ದಾಸರು ಸಂಸ್ಕೃತಿಯನ್ನು ಮೀರುವ ಗೊಡವೆಗೆ ಹೋಗಲಿಲ್ಲ. ಕೊನೆಯವರೆಗೂ ತಾವು ಇರುವ ಮತಸಂಸ್ಕೃತಿಯ ಅಡಿಯಲ್ಲೇ ಇದ್ದು ಲೋಪದೋಷಗಳ ಕಡೆ ಗಮನಹರಿಸಲಿಲ್ಲ. ಹಾಗಾಗಿ ಈ ದಾಸರಲ್ಲಿ ಮತ ಧರ್ಮದ ಪ್ರಚಾರಮಾಡುವ ಕಾರ್ಯವೇ ಹಿರಿದಾಗಿದೆ. ವಚನಕಾರರು ಕರ್ಮ ಸಿದ್ಧಾಂತವನ್ನು ತಿರಸ್ಕರಿಸಿದರೆ ದಾಸರು ಅದನ್ನು ಒಪ್ಪಿಕೊಂಡರು. ವಚನಕಾರರು ಧರ್ಮವನ್ನು ದಯೆ ಎಂದು ಕರ್ಮವನ್ನು ಕ್ರಿಯೆ ಎಂದು ಹೇಳಿದರೆ, ದಾಸರು ಅದೆಲ್ಲಾ ದೈವ ಲಿಖಿತವೆಂದು ಹೇಳಿ ಅಸಹಾಯಕತೆಯನ್ನು ತೋಡಿಕೊಂಡರು. ಮೊದಲಿನಿಂದಲೂ ಬಂದ ಶೋಷಣೆಯನ್ನು, ಅಂಧಶ್ರದ್ಧೆಯನ್ನು ವಚನಕಾರರು ತಿರಸ್ಕರಿಸಿದರೆ ಅದರ ಗೊಡವೆಗೆ ಹೋಗದೆ ಇದ್ದ ದ್ವೈತ ಮತದ ದಾರಿಯಲ್ಲೆ ನಡೆದರು. ಜನಸೇವೆಯೇ ಜನಾರ್ಧನನ ಸೇವೆಯೆಂದು, 'ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು' ವಚನಕಾರರು ಸಮಾಜಸೇವೆಗೆ ಮಹತ್ವವನ್ನು ಕೊಟ್ಟರೆ, ಪರಸೇವೆಯ ಮಾಡಿ ವ್ಯರ್ಥ ಆಯುಷ್ಯ ಹೋಯಿತು ಎಂದು ಹೇಳಿ, ಹರಿಯ ಧ್ಯಾನವನ್ನೇ ಅಂತಿಮವಾಗಿಸಿದ್ದಾರೆ. ಪರಸೇವೆ ಮಾಡುವುದರಲ್ಲಿ ಭಗವಂತನನ್ನು ಕಾಣುವ ವಚನಕಾರರಿಗೂ ಮತ್ತು ಪರಸೇವೆ ಮಾಡಿದ್ದಕ್ಕೆ ಪಶ್ಚಾತ್ತಾಪ ಪಡುವ ದಾಸರ ಪರಿಕಲ್ಪನೆಗೂ ವ್ಯತ್ಯಾಸವಿದೆ. ಒಬ್ಬರು ಉಳಿದ ಮತಧರ್ಮಗಳ ಸಾಂಪ್ರದಾಯಿಕ ಕರ್ಮಟತನವನ್ನು ಖಂಡಿಸಿದರೆ, ಪುರಂದರರು ಅದ್ವೈತವನ್ನು ಖಂಡಿಸಿದರು. ಒಬ್ಬರಲ್ಲಿ ತಾವು ಅನುಸರಿಸಲ್ಪಟ್ಟ ಮತವನ್ನು ಮೀರಿ ಧರ್ಮಸಾಹಸ ಮಾಡಿದರೆ, ಇನ್ನೊಬ್ಬರು ತಾವು ನಂಬಿದ ಮತಧರ್ಮದಲ್ಲಿಯೇ ಉಳಿದುಕೊಂಡರು. ವಚನಕಾರರು ಹುಟ್ಟಿಸುವ ಬ್ರಹ್ಮ, ರಕ್ಷಿಸುವ ವಿಷ್ಣು, ಎನ್ನುವದನ್ನು ತಿರಸ್ಕರಿಸಿದರೆ ಬ್ರಹ್ಮನೆ ಎಲ್ಲ ಜೀವಿಗಳ ಹುಟ್ಟಿಗೆ ಕಾರಣ ಎಂದು ದಾಸರು ಹೇಳಿದ್ದಾರೆ. ಒಬ್ಬರ ಮನಸ್ಸು ಹೋರಾಟ ಪ್ರಧಾನವಾದರೆ, ದಾಸರದು ಇದ್ದದ್ದನ್ನು ಮೌನದಿಂದ ಸ್ವೀಕರಿಸುವುದಾಗಿದೆ. ಪ್ರಶ್ನೆಗಳನ್ನು ಹಾಕಿ ತಿರುಳನ್ನು ಶೋಧಿಸಿ ತೆಗೆದು ಸೈದ್ಧಾಂತಿಕವಾಗಿ ವಚನ ಧರ್ಮವನ್ನು ಶರಣರು ಸ್ಥಾಪಿಸಿದರೆ, ದ್ವೈತ ಮತದ ಮಧ್ವರ ನಿಲುವನ್ನೇ ದಾಸರು ಮುನ್ನಡೆಸಿದರು. ಈ ಪ್ರಶ್ನೆ ಹಾಕುವ ಕ್ರಮ ಪ್ರಾಚೀನ ಗ್ರೀಕ್‌ರ ತತ್ವಜ್ಞಾನಿ ಸಾಕ್ರೇಟಿಸ್‌ನಲ್ಲಿ ಕಂಡುಬರುವುದು. ಪ್ರಶ್ನಿಸುವ ರೀತಿಯಲ್ಲೆ ಧರ್ಮ ಪ್ರಾರಂಭವಾದರೆ ಪುರಂದರರಲ್ಲಿ ಮೌನ ಸಮ್ಮತಿಯ ಮುಖಾಂತರ ಕಂಡುಬರುವುದು. ಧರ್ಮವನ್ನು ಸಮಾಜದ ನಿರ್ಮಾಣಕ್ಕೆ ವಚನಕಾರರು ಬಳಸಿಕೊಂಡರೆ ಇದ್ದ ಧರ್ಮದ ಅಡಿಯಲ್ಲಿ ಅನುಯಾಯಿಗಳು ಮೌನದಿಂದ ಆಚರಿಸಬೇಕೆಂಬುದು ದಾಸರ ನಿಲುವು. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವರು ಅಲ್ಲಿ ಸಲ್ಲುವರು.'' ಎಂದು ಇಹಲೋಕ ಪರಲೋಕಕ್ಕೆರಡು ಮಹತ್ವವನ್ನು ವಚನಕಾರರು ಕೊಟ್ಟರೆ, ದಾಸರು ಪರಲೌಕಿಕವನ್ನೇ ಶ್ರೇಷ್ಠವೆಂದು ತಿಳಿದು, ಮೋಕ್ಷ ಸಾಧನೆಯನ್ನೇ ಗುರಿಯಾಗಿಸಿದ್ದಾರೆ. ಕಾಯಕವೇ ಕೈಲಾಸವೆಂಬುದು ವಚನಕಾರರು ಸಾರಿದರೆ ಇದ್ದ ಕಾಯಕವನ್ನು ಕೈಬಿಟ್ಟು ಕಾಯಕದ ಮಹತ್ವವನ್ನು ಹೇಳದೇ ಹರಿಯ ಧ್ಯಾನವೇ ಅಂತ್ಯವಾಗಿಸಿಕೊಂಡರು ದಾಸರು. ಮದುವೆಯಾಗಿ ಸಾಂಸಾರಿಕ ಸುಖದೊಂದಿಗೆ ಮೋಕ್ಷ ಸಾಧನೆಯನ್ನು ಸಾಧಿಸಿ ತೋರಿಸಿದವರು ವಚನಕಾರರಾದರೇ, ಸಂಸಾರವನ್ನು ತೊರೆದು ದಾಸರಾಗಿದ್ದಾರೆ. ಕಾಯಕದಲ್ಲಿ ನಿರತನಾದಾಗ ಗುರುಲಿಂಗ ಜಂಗಮರು ಮುಂದೆ ಇದ್ದರೂ ಹಂಗು ಹರಿಯಬೇಕೆಂದು ಕರ್ತವ್ಯನಿಷ್ಠೆಯ ಬಗ್ಗೆ ಮಹತ್ವವನ್ನು ವಚನಕಾರರು ಕೊಟ್ಟರೆ, ದಾಸರಲ್ಲಿ ಹರಿಯೇ ಸರ್ವೋತ್ತಮನಾಗಿ, ಕರ್ತವ್ಯನಿಷ್ಠೆಯನ್ನು ಕೈಬಿಟ್ಟಿರುವರು. ಕರ್ತವ್ಯ ಕಾಯಕಗಳು ವಚನಕಾರರಿಂದ ಮಹತ್ವ ಪಡೆದಷ್ಟು ದಾಸರಲ್ಲಿ ಈ ಆರ್ಥಿಕಕ್ಕೆ ಮಹತ್ವವಿಲ್ಲದೇ ಕರ್ಮಾಚರಣೆ ಹರಿಭಕ್ತಿಗೆ

ಮಹತ್ವ ಕೊಟ್ಟಿರುವರು. ಕಾಯಕದಿಂದ ಮೋಕ್ಷ ಪದವಿ ವಚನಕಾರರಿಗೆ ಸಾಧ್ಯವಾದರೇ, ಕರ್ಮವಿಲ್ಲದೇ ಮೋಕ್ಷ ದೊರೆಯುವದಿಲ್ಲವೆಂದು ದಾಸರ ಅಭಿಪ್ರಾಯ. ಸ್ತ್ರೀ ವಿಷಯದಲ್ಲಿ ಮಹಿಳಾ ಸಮಾನತೆಯನ್ನು ವಚನಕಾರರು ಕೊಟ್ಟರೆ, ಪ್ರಾಚೀನ ಸಂಸ್ಕೃತಿಯ ಪರಂಪರೆಗೆ ಸ್ತ್ರೀಗೆ ಸ್ವಾತಂತ್ರ್ಯ ಕೊಡಬಾರದೆಂಬುದು ಪುರಂದರದಾಸರ ಆಶಯವಾಗಿದೆ. ಧಾರ್ಮಿಕ, ಆಧ್ಯಾತ್ಮಿಕ, ಸಾಮಾಜಿಕ ಕ್ಷೇತ್ರದಲ್ಲಿ ಮೊಟ್ಟಮೊದಲನೆಯ ಬಾರಿಗೆ ಮಹಿಳೆಗೆ ಸಮಾನತೆಯನ್ನು ವಚನಕಾರರು ಕೊಟ್ಟರೆ, ದಾಸರು ಈ ವಿಷಯದ ಬಗ್ಗೆ ಅಲಕ್ಷ ತಾಳಿರುವರು. ಪರ ವಧುವನ್ನು ಮಹಾದೇವಿ ಎನ್ನುವೇ, ಪರಧನ ಪರಸ್ತ್ರೀ ಎಂಬ ಜೂಜಿಗಂಜುವೆನಯ್ಯಾ ಮುಂತಾಗಿ ವಚನಕಾರರು ಹೇಳಿದರೆ, ಪರವಧುವನ್ನು ದಾಸರು ಟೀಕಿಸಿರುವರು. ವಚನಕಾರರಲ್ಲಿ ಅಕ್ಕಮಹಾದೇವಿಯಿಂದ ಹಿಡಿದು ಸೂಳೆ ಸಂಕವ್ವೆಯವರೆಗೆ ವಚನಕಾರರೆಲ್ಲಾ ಒಂದೇ ಆಧ್ಯಾತ್ಮಿಕದಡಿ ಒಟ್ಟುಗೂಡಿದರೆ ದಾಸರಲ್ಲಿ ಯಾವ ಒಬ್ಬ ಮಹಿಳೆಗೂ ಆಸ್ಪದವಿಲ್ಲ. ದಲಿತರು ಶೋಷಣೆಗೆ ಒಳಗಾದ ಮಹಿಳೆಯರಿಗೆ ವಚನಕಾರರು ಮಹತ್ವವನ್ನು ಕೊಟ್ಟರೆ, ಮಹಿಳೆಯರಿಂದ ಆಧ್ಯಾತ್ಮಿಕ ಬೆಳವಣಿಗೆಗೆ ಅಡ್ಡಿಯುಂಟಾಗುವದೆಂದು ದಾಸರ ಅಭಿಪ್ರಾಯ. ಜಾತೀಯತೆಯನ್ನು ಇಬ್ಬರು ಖಂಡಿಸಿದರೂ ಕೂಡಾ ಕೃತಿಗೆ ಇಳಿದವರು ಮಾತ್ರ ವಚನಕಾರರು. ವರ್ಣಾಶ್ರಮಗಳನ್ನು ತಿರಸ್ಕರಿಸಿದ ವಚನಕಾರರು, ಚಾತುರ್ವರ್ಣ ಮತ್ತು ವೈದಿಕವನ್ನು ಪುರಸ್ಕರಿಸಿದ ದಾಸರಿಗೆ ಬಹು ವ್ಯತ್ಯಾಸವಿದೆ. ಸಮಾಜದ ಯಾವುದೇ ತೊಡಕನ್ನು ಎದುರು ಹಾಕಿಕೊಳ್ಳದೇ ಕೇವಲ ಮಾತಿನಿಂದ ಮತ ಪ್ರಸಾರ ಕಾರ್ಯದಲ್ಲಿ ದಾಸರು ತೊಡಗಿಕೊಂಡಿದ್ದರಿಂದ ದೀರ್ಘಾಯುಷ್ಯವನ್ನು ಪಡೆದರು. ಆದರೆ ವಚನಕಾರರು ಹೋರಾಟದ ಬದುಕಿನಲ್ಲಿ ಬಾಳಿದ್ದರಿಂದ ಕಡಿಮೆ ಆಯುಷ್ಯವನ್ನು ಪಡೆಯಬೇಕಾಯಿತು. "ನುಡಿಯಲ್ಲಿ ಎಚ್ಚೆತ್ತು, ನಡೆಯಲ್ಲಿ ತಪ್ಪಿದರೆ ಹಿಡಿದಿದ್ದ ಲಿಂಗ ಘಟಸರ್ಪನೋಡಾ" ಎಂದು ವಚನಕಾರರು ಹೇಳಿದರೆ, ಕೇವಲ ನುಡಿಯಲ್ಲಿ ಮಾತ್ರ ಇದರ ಬಗ್ಗೆ ಹೇಳಿ ಮೌನ ವಹಿಸುತ್ತಾರೆ. ವಚನಕಾರರಲ್ಲಿ ಮಾತುಗಳು ಕೃತಿಗೆ ಅಳವಟ್ಟರೆ, ದಾಸರಲ್ಲಿ ಬೋಧನೆಯಲ್ಲಿ ಮಾತ್ರ ಉಳಿಯುತ್ತವೆ. ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಮೂಲಾಗ್ರ ಬದಲಾವಣೆಯನ್ನು ಮಾಡುವದು ವಚನಕಾರರ ಸಂಕಲ್ಪವಾದರೆ ದ್ವೈತಪ್ರಚಾರ ಮಾಡುವದೊಂದೇ ದಾಸರ ಕೆಲಸವಾಗಿತ್ತು. ಭಕ್ತಿ, ಧರ್ಮ ದಯಗಳಂತಹ ಕೆಲವು ವಿಷಯಗಳನ್ನು ಬಿಟ್ಟು ಅನೇಕ ವಿಚಾರಗಳಲ್ಲಿ ಭಿನ್ನತೆಯಿದೆ. "ಒಂದೊಂದು ಸಲ ಕೆಲವು ವಿಷಯಗಳಲ್ಲಿ ಇಬ್ಬರನ್ನು ತೌಲನಿಕವಾಗಿ ನೋಡುವುದೇ ಅಷ್ಟೊಂದು ಸಮಂಜಸವಲ್ಲವೆಂದು ತಿಳಿದು ಬರುತ್ತದೆ. ಅವರೀರ್ವರ ಉದ್ದೇಶ ಕೆಲವು ಹಂತದವರೆಗೆ ಮಾತ್ರ ಒಂದೇಯಾಗಿ ಕಂಡರು ಮುಂದೆ ಕ್ರಮಿಸಿದಂತೆಲ್ಲಾ ಅವೆರಡು ಭಿನ್ನ - ಭಿನ್ನ ಮಾರ್ಗಗಳೆಂದು ಸ್ಪಷ್ಟವಾಗುತ್ತದೆ." ಕೆಲವೊಂದು ಸೀಮಿತವಾದ ವಿಷಯಗಳಿಗೆ ಮಾತ್ರ ಇವರಿಬ್ಬರ ತೌಲನಿಕ ಅಧ್ಯಯನವನ್ನು ಮಾಡಬಹುದೇ ಹೊರತು ಸಮಗ್ರವಾಗಿ ಬರುವದಿಲ್ಲ. ಅನನ್ಯ ಪ್ರಭಾವವನ್ನು ಗುರುತಿಸುವಾಗ ಶರಣರಲ್ಲಿ ನಿರಾಕಾರದ ಸೌಂದರ್ಯ ಗೋಚರವಾದರೆ, ದಾಸರಲ್ಲಿ ಸಾಕಾರ ಸೌಂದರ್ಯ ಕಾಣುತ್ತದೆ. ವೀರಶೈವ ಕವಿ ಕೀರ್ತನಕಾರರನ್ನು ಬಿಟ್ಟರೆ ಎಲ್ಲ ವಚನಕಾರರು ಇಷ್ಟಲಿಂಗದ ಚಲುವನ್ನು ವರ್ಣಿಸುವರು. ಆ ಲಿಂಗ ಸಾಕಾರವು ಅಲ್ಲ, ನಿರಾಕಾರವೂ ಅಲ್ಲ. ಸಾಕಾರ ನಿರಾಕಾರಗಳ ಕೂಡಲ ಸಂಗಮಗಳ ಸಂಕೇತ. ಈ ವಚನ ಸಾಹಿತ್ಯ ತಾಳ - ಮೇಳವಿಲ್ಲದ "ಆದರೆ ಅಷ್ಟಾಗಿ ತಾಳಲಯಗಳ ಯೋಜನೆಯಿಲ್ಲದೇ ಹೊರಬಿದ್ದು ಅಪಾರ ವಚನ ರಾಶಿಯ ತರುವಾಯ, ತಾಳ-ಲಯ, ರಾಗ-ಪ್ರಾಸ ಛಂದೋಬದ್ಧವಾಗಿ, ಗಂಗೆಯ ಅಮೂಲತರಂಗಿಣಿಯಾಗಿ ಓತಪ್ರೋತವಾಗಿ, ಶುದ್ಧಸಲೀಲ ಶ್ರೋತೋವಾಹಿನಿಯಾಗಿ ಹರಿದು ಬಂದಿತು ಹರಿದಾಸ ವಾಙ್ಮಯ."[೮೮]

ಹೀಗೆ ವಚನ ಸಾಹಿತ್ಯದ ವಿವರಣೆಯೇ ಹರಿದಾಸ ಸಾಹಿತ್ಯದ ಕೀರ್ತನೆ ಉಗಾಭೋಗಗಳೆನ್ನಬಹುದು. ಇವರೀರ್ವರು ಧಾರ್ಮಿಕ ಕ್ಷೇತ್ರದ ಮೂಲದವರು. ವೈಚಾರಿಕತೆಯ ಪ್ರಾಮಾಣಿಕ ಮಾರ್ಗವನ್ನು ಅನುಸರಿಸುವದರಿಂದ ಎಂದೆಂದಿಗೂ ಪ್ರಸ್ತುತರಾಗುತ್ತಾರೆ. ಕೇವಲ ಸಂತರೆಂದಾಗಲೀ, ಅನುಭಾವಿಗಳೆಂದಾಗಲೀ, ಧಾರ್ಮಿಕ ಪುರುಷರೆಂದಾಗಲೀ ಗುರುತಿಸದೇ ಸಮಾಜದ ಹೋರಾಟಗಾರರೆಂದು ತಿಳಿಯಬೇಕಾಗುತ್ತದೆ. ನುಡಿದಂತೆ ನಡೆದು ಅಧಿಕಾರ ಸಂಪತ್ತು ಹೊಂದಿದ್ದರು ಕೂಡಾ ಸಾಮಾನ್ಯರೊಂದಿಗೆ ಗುರುತಿಸಿಕೊಂಡು, ಸರಳ ವಿರಳವಾಗಿ ಬದುಕಿದವರು. ಹುಟ್ಟಿನಿಂದ ಉಚ್ಚಜಾತಿಯವರಾದರೂ, ಆರ್ಥಿಕ ಸಬಲರಾದರೂ, ರಾಜರಾಗಿ ಮೆರೆಯಬಹುದಾದರೂ ಆಗರ್ಭ ಶ್ರೀಮಂತರಾಗಿ ಸಂಪತ್ತಿನ ಸಿರಿಯಲ್ಲಿ ವಿಜೃಂಭಿಸಬಹುದಾದರೂ ಅದನ್ನು ತೊರೆದು ಸಾಮಾನ್ಯರ ಬದುಕಿನಲ್ಲಿ ಸಾಗಿದವರು. ಕ್ಲಿಷ್ಟವಾಗಿದ್ದ ಧರ್ಮಾಚರಣೆಗಳನ್ನು ಸರಳಗೊಳಿಸಿ ದಯವೇ ಧರ್ಮವನ್ನಾಗಿ ಕ್ರಿಯೆಯೇ ಕರ್ಮವನ್ನಾಗಿ ಮನುಷ್ಯ ಪೋಷಣೆ ಮಾತಾಗಿ ಮಾನವೀಯ ಧರ್ಮವನ್ನು ಶರಣರು ಕೊಟ್ಟರು. ಜಾತಿ ಮೂಲಾಗಿದ್ದ ಮತಾವಸ್ಥೆಯನ್ನು ಮನುಷ್ಯ ಧರ್ಮಕ್ಕೆ ಇಳಿಸಿದರು. ಜಾತಿಬೇಧ ಲಿಂಗಬೇಧ, ವೃತ್ತಿಬೇಧ, ಪುರುಷ - ಸ್ತ್ರೀ ಬೇಧ, ಬಡವ ಬಲ್ಲಿದ ಬೇಧಗಳನ್ನು ಅಳಿಸಿಹಾಕಿ ಏಕದೇವೋಪಾಸನೆಯನ್ನು ಕೊಟ್ಟು, ಶೋಷಣೆಗೊಳಗಾದ ದೇವಾಲಯ ಸಂಸ್ಕೃತಿಯನ್ನು ಬಿಟ್ಟು ದೇಹವೇ ದೇವಾಲಯವನ್ನಾಗಿ ಮಾಡಿಕೊಂಡು ಜನ ಸಾಮಾನ್ಯರನ್ನು ಪ್ರಗತಿಪರರನ್ನಾಗಿ ಮಾಡಿ, ಅಂತ್ಯಜರನ್ನು ಅಪ್ಪ ಬಪ್ಪ ಎಂದು ಅಪ್ಪಿಕೊಂಡು, ಸಮಾನ ಸಂಸ್ಕೃತಿಯನ್ನು ಬೆಳೆಸುವಲ್ಲಿ ಮೊಟ್ಟ ಮೊದಲನೆಯ ಧರ್ಮ ಪುರುಷರಾಗಿದ್ದಾರೆ. ಹುಟ್ಟು ಜಾತಿಯ ನಿರ್ಧರಿತವಾದುದಲ್ಲ, ಶಿವಭಕ್ತಿಯೇ ಮನುಷ್ಯತ್ವದ ಮಾನದಂಡ ಎಂದು ಹೇಳಿ ಕುಲದ ಭ್ರಮೆಯನ್ನು ತೊಡೆದು ಹಾಕಿದರು. ಮಡಿ - ಮೈಲಿಗೆಯಂತಹ ಕೆಳತರದ ಆಚರಣೆಗಳನ್ನು ದೂರೀಕರಿಸಿ, ವಿನಯ ಮಾನವೀಯ ಬಾಳನ್ನು ಹಾಕಿಕೊಟ್ಟರು. ವೇದಾಗಮ ಪುರಾಣಗಳಲ್ಲಿಯ ಪೊಳ್ಳುತನವನ್ನು ಹೋಗಲಾಡಿಸಿ, ಮಾರಿ ಮಸಣಿಯ ಭಯಪೂರಿತ ಭಕ್ತಿಯನ್ನು ತೊಡೆದುಹಾಕಿ ವಾತ್ಸಲ್ಯ ಭಕ್ತಿಗಳನ್ನು ಹೇಳಿದರು. ಗುಡಿಗಳಲ್ಲಿ ಇರುವ ಪುರೋಹಿತಶಾಹಿ ಪದ್ಧತಿ ತಿಲಾಂಜಲಿಯನ್ನು ಹೇಳಿ, ಬಹುದೇವೋಪಾಸನೆಯನ್ನು ಹಿಂದಕ್ಕೆ ಸರಿಸಿ ಇದೇ ಹಿನ್ನಲೆಯಲ್ಲಿಯೇ ಸ್ಥಾವರ ಲಿಂಗೋಪಾಸನೆಯನ್ನು ನಿವಾರಿಸಿ, ಸಾಂಕೇತಿಕವಾದ ಇಷ್ಟಲಿಂಗ ದೇವೋಪಾಸನೆಯನ್ನು ಕೊಟ್ಟರು. ಧಾರ್ಮಿಕ ಆಚರಣೆಗಳಲ್ಲಿ ಹುದುಗಿದ ಜೈನರಂತಹ ಕಠಿಣ ವ್ರತಗಳನ್ನು ಶೈವರಂತಹ ವ್ಯರ್ಥ ಆಚರಣೆಗಳನ್ನು ಭಗವಂತನಿಗೆ ತನ್ನ ಕೈಕಾಲ ಶಿರಗಳನ್ನು ಕತ್ತರಿಸಿ ದಾನ ಮಾಡುವ ಪದ್ಧತಿಯನ್ನು ಹೀಗಳೆದು, ಭಗವಂತನಿಗೆ ಮನಸ್ಸಿನ ಸಮರ್ಪಣಾ ಭಾವನೆ ಒಂದೇ ಸಾಕು ಎಂಬುದನ್ನು ತೋರಿಸಿಕೊಟ್ಟರು. ಧರ್ಮದ ಹೆಸರಿನಲ್ಲಿ ಇರುವ ಪುರೋಹಿತತನ, ಸುಳ್ಳು ಜೋಯಿಸತ್ವ, ಕಪಟ ಸನ್ಯಾಸತ್ವ ಮುಂತಾದವರು ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು, ಈ ವಚನ ಚಳುವಳಿಯನ್ನು ಯಶಸ್ವಿಯಾಗದಂತೆ ಕುತಂತ್ರಗಳನ್ನು ನಡೆಸಿದರು. ಅದರ ಪರಿಣಾಮವೇ ಬಿಜ್ಜಳ ಚಕ್ರಾಧಿಪತ್ಯದ ಪತನ. ಮನುಷ್ಯನನ್ನು ಮನುಷ್ಯನನ್ನಾಗಿ ಕಾಣುವ ಸಾಚಾ ಧರ್ಮವಾಗಿದೆ. ದಾಸರೂ ಕೂಡಾ ದ್ವೈತಮತದ ಆಚರಣೆಯಲ್ಲಿದ್ದರೂ ಸಾಂಪ್ರದಾಯಿಕ ವ್ಯರ್ಥಾಚರಣೆಯನ್ನು ಬದಿಗೆ ಸರಿಸಿದ್ದಾರೆ. ಕೇವಲ ಸಂಸ್ಕೃತಭಾಷೆ ಒಂದೇ ದೇವಭಾಷೆಯಾಗಿ, ಅದರಲ್ಲಿಯೇ ಧರ್ಮದ ನಿಯಮಾವಳಿಗಳನ್ನು ಬರೆಯುವುದು ಕಡ್ಡಾಯವಾಗಿರುವಾಗ ಅದನ್ನು ಬಿಟ್ಟು ಕನ್ನಡ ಭಾಷೆಯಲ್ಲಿಯೇ ಕೀರ್ತನೆಗಳನ್ನು ರಚಿಸಿದ ಈ ವಿನೂತನ ದಾಸ ಸಾಹಿತ್ಯ ಪದ್ಧತಿ ಮೆಚ್ಚುವಂತದ್ದು. ಚಾತುರ್ವರ್ಣವನ್ನು ವೇದ ಸಂಸ್ಕೃತಿಯ ಕಪಟತನವನ್ನು, ಡಾಂಭಿಕತನವನ್ನು ಅಲ್ಲಗಳೆದದ್ದು ದಾಸರ

ಉದಾತ್ತತೆಗೆ ಸಾಕ್ಷಿಯಾಗಿದೆ. ತೀರ್ಥಕ್ಷೇತ್ರಗಳಿಗೆ ವ್ಯರ್ಥ ತಿರುಗುವದನ್ನು ಬಿಟ್ಟು ಒಮ್ಮನಸ್ಸಿನಿಂದ ಹರಿಪಾದವನ್ನು ನಂಬಿದರೆ ಸಾಕೆಂದು ಹೇಳಿ, ಧ್ಯಾನಕ್ಕೆ ಮಹತ್ವವನ್ನು ಕೊಟ್ಟರು. ಮಧುರ ಭಕ್ತಿಯ ಮೂಲಕ ಮುದ್ದುಕೃಷ್ಣನನ್ನು ಹೊಗಳಿದ ಇವರು ಮನುಸ್ಮೃತಿ, ವ್ಯಾಸಸ್ಮೃತಿಗಳನ್ನುಅಧ್ಯಯನ ಮಾಡಿ, ಕೆಳವರ್ಗದ ಕನಕದಾಸರಂತಹವರನ್ನು ದಾಸಕೂಟದ ಉನ್ನತಮಟ್ಟದಲ್ಲಿ ಬೆಳಸಿದ ಪುರಂದರರು ಧರ್ಮಗಳಲ್ಲಿ ಅನೇಕ ಸುಧಾರಣೆಗಳನ್ನು ತಂದರು. ಧಾರ್ಮಿಕ ಕ್ಷೇತ್ರದಲ್ಲಿ ಎಲ್ಲರಿಗೂ ಸಮಾನ ಅವಕಾಶ ಇರಬೇಕೆಂಬುದು ಇವರ ಅಪೇಕ್ಷೆಯಾಗಿತ್ತು. "ಧರ್ಮವನ್ನು ಸಮಾಜ ವ್ಯವಸ್ಥೆಯ ಬದಲಾವಣೆಗಾಗಿ ಬಳಸಿಕೊಂಡ ವಿಶಿಷ್ಟ ವ್ಯಕ್ತಿತ್ವದ ಕ್ರಾಂತಿಕಾರಿಗಳಾಗಿ ಕಾಣಿಸುತ್ತಾರೆ. ಬಸವೇಶ್ವರರಲ್ಲಿ ಕಾಣುವ ಸೈದ್ಧಾಂತಿಕ ಸ್ಪಷ್ಟತೆ, ಧರ್ಮದ ಅರ್ಥ ವಿವರಣೆ, ಧರ್ಮ ಸಮಾಜಕ್ಕಿರುವ ಅರ್ಥಪೂರ್ಣ ಸಂಬಂಧ ವಿಶ್ಲೇಷಣೆ ಉಳಿದವರಲ್ಲಿ ಕಾಣುವುದಿಲ್ಲ. ಹೀಗಾಗಿ ಬಸವೇಶ್ವರರು ಕೇವಲ ಪುರಂದರದಾಸರಿಗೆ ಮಾತ್ರವಲ್ಲ, ಇತರ ಯಾವುದೇ ಮಹಾವ್ಯಕ್ತಿಗಳಿಗಿಂತಲೂ ವಿಶಿಷ್ಟವಾಗಿ ಕಾಣುತ್ತಾರೆ"[೫೯]

ಈ ರೀತಿ ಆಚರಣೆಗೆ ತಂದ ಧಾರ್ಮಿಕ ಕ್ಷೇತ್ರ ಜಗತ್ತಿನಲ್ಲಿಯೇ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಅಸಮಾನತೆಗೆ ಕಾರಣವಾದ ಅಸ್ಪೃಶ್ಯ ನಿವಾರಣೆ, ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹ, ಸ್ನೇಹ ಸೌಹಾರ್ದತೆಯ ಮೂಲಕ ಸಾಮಾಜಿಕ ಬದಲಾವಣೆ, ಮಾನವಕುಲ ಒಂದೇ ಎಂಬ ಮನೋಭಾವನೆಯನ್ನು ಬೆಳೆಸಿ, ಉದ್ಯೋಗವನ್ನು ಕಾಯಕವನ್ನಾಗಿ ಮಾರ್ಪಡಿಸಿ, ಎಲ್ಲ ಕಾಯಕ ಜೀವಿಗಳು ಸಮಾನರೆಂದು ಹೇಳಿ, ಅಹಂಭಾವವನ್ನು ತೊರೆದು ದಾಸೋಹ ಎಂಬ ಸಮರ್ಪಣಾ ಭಾವದಿಂದ ಬದುಕಲು ಹೇಳಿದವರು ವಚನಕಾರರು. ಇನ್ನೊಂದು ಸಾಧನೆ ಸಾಂಘಿಕ ಜೀವನಕ್ಕೆ ಬಹಳ ಮಹತ್ವ ಕೊಟ್ಟಿದ್ದು. ಜಾತಿ, ದೇಶ, ಭಾಷೆ, ಲಿಂಗ, ವಯಸ್ಸು ಇವಾವುಗಳ ಬೇಧವಿಲ್ಲದೇ ಎಲ್ಲರೂ ಸಮಾನರಾಗಿ ಕುಳಿತುಕೊಂಡ ಮೊಟ್ಟಮೊದಲಿನ ಪಾರ್ಲಿಮೆಂಟ್ ಅಂದರೆ ಅನುಭವ ಮಂಟಪವಾಗಿದೆ. ಶೀಲ ಸದಾಚಾರಗಳಿಗೆ ನೈತಿಕ ವಿಚಾರಗಳಿಗೆ ಅಮೂಲ್ಯವಾದ ಬೆಲೆಯನ್ನು ದೊರಕಿಸಿ ಮಹಿಳೆ ಧರ್ಮಕ್ಕೆ ಅನಿವಾರ್ಯವೆಂಬುದನ್ನು ತೋರಿಸಿಕೊಟ್ಟರು. ವೇಶದ ಮೋಸಗಾರರನ್ನು ಅಹಂಕಾರದ ಕುದುರೆಗಳನ್ನು ಕೀಳರಿಮೆಯಿಂದ ನರಳುವವರನ್ನು ನೂರಾರು ದೇವರುಗಳನ್ನು ಶರಣರು ತಿರಸ್ಕರಿಸಿದರು. ದಾಸರು ಕೂಡಾ ಸಾಮಾಜಿಕ ಹೋರಾಟಗಾರರಾಗಿ ಕಾಣಿಸಿಕೊಂಡರೂ, ಸಮಾಜದಲ್ಲಿ ಹುದುಗಿರುವ ಅನೇಕಾನೇಕ ನ್ಯೂನ್ಯತೆಗಳನ್ನು ಕಂಡು ಅಸಹ್ಯಪಟ್ಟುಕೊಂಡಿದ್ದಾರೆ. ಹೊಲೆತನ ಇದು ಗುಣದಿಂದ ಬರುವುದೇ ಹೊರತು ಹುಟ್ಟಿನಿಂದಲ್ಲ ಎಂದು ತಿಳಿಸುವರು. ಸಂಸಾರವನ್ನು ತ್ಯಜಿಸಿ ಸಮಾಜ ಬದುಕಿನಿಂದ ವಿಮುಖರಾಗಲು ಹೇಳಿಲಿಲ್ಲವಾದರೂ ಸಂಸಾರ ವಿಮುಖತೆ ಇದ್ದೇ ಇದೆ. ದ್ವೇಷಾಸೂಯೆ ಅರಿಷಡ್ವರ್ಗಗಳನ್ನು ತಿರಸ್ಕರಿಸಿ ಭಾಗವತದ ಹರಿದಾಸ ಪರಂಪರೆಯಲ್ಲಿಯೇ ಮುನ್ನಡೆದಿದ್ದಾರೆ. ಶರಣರಲ್ಲಿದ್ದಂತೆ ಮಹಿಳೆಯರ ಸಮಾನತೆಯ ಕಲ್ಪನೆ ಇವರಲ್ಲಿ ಇಲ್ಲವೇ ಇಲ್ಲ. ಮಹಿಳೆಗೆ ಪ್ರಾಶಸ್ತ್ಯವಿಲ್ಲವೆಂದ ಮೇಲೆ ದಲಿತ ಮಹಿಳೆಯ ಕಲ್ಪನೆ ಇನ್ನೂದೂರ. ಇವರಲ್ಲಿ ಸಾಮಾಜಿಕ ಕಳಕಳಿವಿತ್ತ ವಿನಹ ಸಮಾಜದ ಸಾಧನೆ ಇರಲಿಲ್ಲ ಎಂಬುದು ಕೊರತೆಯಾಗಿದೆ. ಇವರೀರ್ವರು ಸಾಹಿತ್ಯ ಬರೆಯಬೇಕೆಂಬ ಅಪೇಕ್ಷೆವುಳ್ಳವರಲ್ಲ. ಧರ್ಮದ ಸರಳ ಕಲ್ಪನೆಗಳನ್ನು ಜನಸಾಮಾನ್ಯರಿಗೆ ತಿಳಿಯುವಂತೆ ಭಾಷೆಯಲ್ಲಿ ಹೇಳಿದುದೇ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾಯಿತು. ಆದರೆ ಯಾವುದೇ ಕೃತಿ ರಚನೆಗೆ ತಮ್ಮ

ಹಿಂದಿನ ಯಾವುದೋ ಒಂದು ಸಾಹಿತ್ಯ ಪ್ರೇರಣೆಯಾಗಬಹುದು. ಹಾಗೆ ಈ ದಾಸರ ಮೇಲೆ ''ರಾಗ ತಾಳಗಳಿಗೆ ಕಟ್ಟುಬೀಳದ ಸರಳ ಮಾತು, ಸ್ಪಷ್ಟ ನಿರೂಪಣೆಯ ನುಡಿಗಟ್ಟಿನಂತಹ ಚಿಕ್ಕ ಪದ್ಯ ಮುಂತಾದ ಕಾರಣಗಳಿಂದ ಇವು ವಚನಗಳನ್ನು ನೆನಪಿಗೆ ತರುತ್ತವೆ. ಮಾತ್ರವಲ್ಲ ಅಂಕಿತ ಬದಲಿಸಿದರೆ ಇವೆರಡು ಒಂದೇ ಎನ್ನುವಷ್ಟರ ಮಟ್ಟಿಗೆ ಹೋಲಿಕೆ ಇವುಗಳಲ್ಲಿರುವುದರಿಂದ ವಚನಗಳೇ ಈ ಉಗಾಭೋಗಗಳಿಗೆ ಮೂಲವೋ ಅಥವಾ ಇವೆರಡಕ್ಕೂ ಬೇರೊಂದು ಮೂಲ ಇರಬಹುದೋ ಎಂಬ ಚಿದಾನಂದಮೂರ್ತಿಯವರ ಸಂಶಯ ಸ್ವಾಭಾವಿಕವಾಗಿದೆ. ಉಗಾಭೋಗಗಳ ಮೇಲೆ ಶಿವಶರಣರ ವಚನಗಳ ಪ್ರೇರಣೆಯನ್ನು ಸಾರಾಸಗಟು ಅಲ್ಲಗಳೆಯುವುದು ಸಮಂಜಸವೆನಿಸದು''[೬೦] ಎಂದು ಡಾ.ಆರ್.ಜಿ.ಗುಡಿ ಹೇಳಿರುವುದಾದರೂ ಈ ಉಗಾಭೋಗಗಳಿಗೆ ಮೂಲಪ್ರೇರಣೆ ಶರಣರ ವಚನಗಳಾಗಿವೆ, ಎಂಬುದನ್ನು ಅರಿತಿದ್ದರೂ ಸಹಿತ ಇದನ್ನು ಸ್ವೀಕರಿಸಲು ಅವರ ಮನಸ್ಸು ನಾಚಿಕೊಂಡಂತೆ ತೋರುವದು.

ಅದು ಏನೇ ಆದರೂ ದಾಸ ಸಾಹಿತ್ಯಕ್ಕೆ ವಚನ ಸಾಹಿತ್ಯವೇ ಮೂಲ ಪ್ರೇರಣೆ. ಬದುಕಿನ ಅನುಭವದೊಂದಿಗೆ ಕೂಡಿ ಜನವಾಣಿಯನ್ನು ದೇವವಾಣಿಯನ್ನಾಗಿ ಪರಿವರ್ತಿಸಿದ ಅನುಭಾವ ಸಾಹಿತ್ಯಗಳಾಗಿವೆ. ಜನಸಾಮಾನ್ಯನಿಗೆ ನೀತಿ ಕ್ರಿಯಾಚಾರಗಳನ್ನು ಬೋಧಿಸಲು ಸಾರ್ವಕಾಲಿಕ ಮೌಲ್ಯಗಳ-ಪ್ರತಿಪಾದನೆಗೆ ಶಬ್ದ ಮಾಧ್ಯಮದ ಜೊತೆಗೆ ನಾದ ಮಾಧ್ಯಮವನ್ನಳವಡಿಸಿಕೊಂಡ ಮುಕ್ತ ಮನಸ್ಸಿನ ಸಾಹಿತ್ಯವಾಗಿದೆ. ಉಗಾಭೋಗಗಳು ವಚನ ಸ್ವರ ವಚನಗಳ ಮಾದರಿಯನ್ನೇ ಅನುಸರಿಸಿದರು ಕೂಡಾ ಸುಳಾದಿಯಂತಹ ಹೊಸ ಸಾಹತ್ಯವನ್ನು ಕನ್ನಡಕ್ಕೆ ವಿನೂತನ ಕೊಡುಗೆಯಾಗಿ ದಾಸರು ನೀಡಿದ್ದಾರೆ. ಈ ಕೀರ್ತನೆ ಸಾಹಿತ್ಯದ ಮುಖಾಂತರ ಕರ್ನಾಟಕ ಸಂಗೀತ ಮತ್ತು ಸಂಸ್ಕೃತಿಗೆ ಕೊಟ್ಟ ಕೊಡುಗೆ ಅನನ್ಯ ಅಪೂರ್ವ. ವಚನಕಾರರು ಭಕ್ತಿ ಭಾವಕ್ಕೆ ಮಹತ್ವವನ್ನು ಕೊಟ್ಟಿದ್ದಾರೆ. 'ಸಂಗನಬಸವಣ್ಣನ' ಸಾನಿಧ್ಯದಿಂದಾನು ಸದ್ಭಕ್ತನಾದೆನಯ್ಯ ಎಂದು ಅಲ್ಲಮಪ್ರಭು ಹೇಳಿದರೆ ವಚನಕಾರರಲ್ಲಿ ಭಕ್ತಿಯೆಂದರೆ ಬಸವಣ್ಣ ಅನ್ನುವಷ್ಟು ಭಕ್ತಿ ಬಸವಣ್ಣರ ಸಂಬಂಧವಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಸರ್ವಧರ್ಮಗಳು ಭಕ್ತಿಯ ಉದ್ದೇಶವನ್ನು ಮೋಕ್ಷ ಸಾಧನೆಗೆ ಬಳಸಿಕೊಂಡಿವೆ. ಭಕ್ತಿ ಮೋಕ್ಷ ಸಾಧನೆಗೆ ಮಾತ್ರ ಉಪಯೋಗವಾಗದೇ, ಸಾಮಾಜಿಕ ಬದಲಾವಣೆಗೆ ಒಂದು ಪ್ರಮುಖ ಮಾಧ್ಯಮವಾಗಿದೆ. ಭಗವಂತನಲ್ಲಿಯ ಪ್ರೇಮವೇ, ಆತ್ಮ ಪರಮಾತ್ಮನಾಗ್ರುವ ಮಾಧ್ಯಮವೇ ಭಕ್ತಿ. ಭಗವಂತನ ಹಂಬಲ, ನಂಬಿಕೆ, ತ್ಯಾಗ ಸೇವಾ ಮನೋಭಾವ ಮುಂತಾದವು ಭಕ್ತನ ಲಕ್ಷಣಗಳು. ಆತ್ಮನಲ್ಲಿ ಪರಮಾತ್ಮನನ್ನು ಕಾಣುವ ಈ ವಿಶಿಷ್ಟ ರೀತಿಯ ಭಕ್ತಿ ಪರಿಪಾಲನೆ ಶರಣರಲ್ಲಿ ಕಾಣುತ್ತದೆ. ಈ ಭಕ್ತಿ ಇಂದ್ರಿಯ ವಿಕಾರಗಳಿಂದ ಪಾರಾಗುವ ಮೌಢ್ಯತೆಯ ಸಂಪ್ರದಾಯವನ್ನು ಬಿಡಿಸುವ ಶಕ್ತಿಯನ್ನು ಪಡೆದುಕೊಂಡಿದೆ. ತನು ಮನ ಧನಗಳನ್ನು ಅರ್ಪಿಸುವ ಕ್ರಿಯೆ ಭಕ್ತಿಯ ಮೂಲಕ ನಡೆದು ದಾಸೋಹ ಭಾವನೆಯಾಗಿ ಪರಿವರ್ತನೆಗೊಂಡು ಪ್ರತಿಯೊಬ್ಬರು ತನು - ಮನ - ಧನಗಳಿಂದ ಸಂಪತ್ತು ದೇವರ ಹೆಸರಿನಲ್ಲಿ ಕೂಡಿಸಿದರೆ ದಾಸೋಹಕ್ಕೆ ಅನುಕೂಲವಾಗುವುದರ ಜೊತೆಗೆ ಜನ ಸಾಮಾನ್ಯರಿಗೆ ಸಹಾಯಮಾಡುವ ಸಾಧ್ಯತೆಯನ್ನು ಕಂಡುಕೊಂಡರು. ''ಭಕ್ತಿಯ ಪ್ರಾರಂಭದ ಕ್ರಿಯೆ ದಾಸೋಹದ ಮೂಲಕ ಕಾರ್ಯಗತವಾಗುವದನ್ನು ಗಮನಿಸಿದಾಗ ಬಸವೇಶ್ವರ ನೇತೃತ್ವದ ಈ ಚಳುವಳಿ ಆರ್ಥಿಕ ಸಮಾನತೆಯನ್ನು ತನಗರಿವಿಲ್ಲದಂತೆ ಸೂಕ್ಷ್ಮವಾಗಿ ತರಲು ಪ್ರಯತ್ನಿಸಿದ್ದನ್ನು ಗಮನಿಸಬಹುದಾಗಿದೆ.''[೬೧] ಮತ್ತೊಬ್ಬರ

ನ್ಯೂನ್ಯತೆಗಳನ್ನು ಎಣಿಸುವ ಮೊದಲು ತನ್ನ ಆತ್ಮ ಶೋಧನೆಯನ್ನು ಮಾಡುವದು ಮುಖ್ಯವೆಂದು ವಚನಕಾರರು ಹೇಳುವದು ಆರ್ಥಿಕ ಸಮಾನತೆಯೊಂದಿಗೆ ಮಾನಸಿಕ ಸಮಾನತೆಯನ್ನು ಕಾಣುವವರಾಗಿದ್ದಾರೆ. ವಿನಯ, ಏಕಾಗ್ರತೆಯಿಂದ ಭಕ್ತ ಮುಂದೆ ಶರಣನಾಗಿ ಮುಂದೆ ಭಗವಂತನಾಗಿ ಪರಿವರ್ತನೆಯಾಗುವ ಸ್ಥಿತಿಯನ್ನು ಕಂಡುಕೊಂಡಿದ್ದಾರೆ. ಶಿವಭಕ್ತಿಯಲ್ಲದ ಶ್ರೀಮಂತಿಕೆ ವ್ಯರ್ಥವೆಂದು ಹೇಳಿ ತನು ಮನ ಧನಗಳನ್ನು ಶಿವನಿಗೆ ಅಥವಾ ಸಮಾಜಕ್ಕೆ ಅರ್ಪಿಸಬೇಕೆಂಬ ವಿಶಾಲ ಮನೋಭಾವವನ್ನು ಬೆಳೆಸಿ, ಶ್ರೀಮಂತರ ಸಂಪತ್ತು ಭಕ್ತಿಯ ಮೂಲಕ ಸಮಾಜಕ್ಕೆ ಹರಿದುಬರುವಂತೆ ಮಾಡಿದರು. ಭಕ್ತಿ ಆಧ್ಯಾತ್ಮಗಳು ಕೇವಲ ಮೇಲ್ವರ್ಗದ ಜನರಿಂದ ಮಾತ್ರ ಸಾಧ್ಯವೆಂಬುದನ್ನು ಅಲ್ಲಗಳೆದು ಎಲ್ಲರಿಗೂ ಸಾಧ್ಯವೆಂಬುದನ್ನು ತೋರಿಸಿಕೊಟ್ಟರು. ವ್ಯಕ್ತಿಗಿಂತ ಸಮಾಜ ದೊಡ್ಡದೆಂದು ಹೇಳಿ, ಭಕ್ತಿಯಂಗಳವೇ ವಾರಣಾಸಿ ಎಂದು ಹೇಳಿ ಸತಿ - ಪತಿ ಭಾವಗಳ ಮಧುರ ಭಕ್ತಿಯನ್ನು ಬೆಳೆಸಿಕೊಂಡು ಭಕ್ತಿಸೇವೆ ಮಾಡುವ ಸಹಜ ಕ್ರಿಯೆ ಎಂದು ಶರಣರು ಹೇಳಿಕೊಟ್ಟರೆ, ದ್ವೈತ ಸಿದ್ಧಾಂತದ ಪರಿಕಲ್ಪನೆಯಲ್ಲಿ ಜಗತ್ತು ಸತ್ಯ, ಮಾಯೆ ಮಿಥ್ಯ. ಜೀವರಲ್ಲಿ ತಾರತಮ್ಯವಿದೆ. ಎಲ್ಲ ಜೀವಿಗಳು ಅಸ್ವತಂತ್ರರು ಭಗವಂತನ ದಯೆಯಿಂದ ಮಾತ್ರ ಜೀವಿ ಉದ್ಧಾರವಾಗಬೇಕು ಆದ್ದರಿಂದ ಅವನನ್ನು ಒಲಿಸಲು ದಾಸನಾಗಿ ಸೇವೆಗೆಯ್ಯಬೇಕು ಈ ಅರ್ಥದಲ್ಲಿ ದಾಸಪಂಥ ನಡೆದುಬಂದಿದೆ. ಜೀವ ಬೇರೆ - ಶಿವ ಬೇರೆ ಎಂದಿಗೂ ಕೂಡಾ ಒಂದಾಗಲು ಬರುವುದಿಲ್ಲ. ಮುಕ್ತಿಯಲ್ಲಿಯೂ ಕೂಡಾ ಭಗವಂತನ ಸೇವೆಯನ್ನು ಮಾಡಿಕೊಂಡಿರಬೇಕು ಎಂಬುದು ಇವರ ಸಿದ್ಧಾಂತ. ಇವರು ನವವಿಧ ಭಕ್ತಿಗಳನ್ನು ಅನುಸರಿಸಿದಂತೆ ದಾಸಭಕ್ತಿಗೆ ಹೆಸರಾದ ಹನುಮಂತ ದೇವರನ್ನು ಹೋಲಿಸುವರು. ಹನುಮನೊಲಿದರೆ ಹರಿಯು ಒಲಿಯುವ, ಹನುಮ ಮುನಿದರೆ ಹರಿಯು ಮುನಿಯುವ ಎಂದು ತಿಳಿದ ಇವರು ಹನುಮನನ್ನು ನಂಬಿದ ಸುಗ್ರೀವ ಗೆದ್ದ, ನಂಬದ ರಾವಣ ಬಿದ್ದ ಎಂದು ಹೇಳಿ ಮೊದಲನೆ ಯುಗದಲ್ಲಿ ಹನುಮ, ಎರಡನೆ ಯುಗದಲ್ಲಿ ಭೀಮ, ಮೂರನೇ ಯುಗದಲ್ಲಿ ಮಧ್ವಾಚಾರ್ಯರೆಂದು, ಮಧ್ವರನ್ನು ದೈವತ್ವಕ್ಕೆ ಏರಿಸಿದ್ದಾರೆ.

ಶಿವಶರಣರಲ್ಲಿ ತಪ್ಪಿಯು ಕೂಡಾ ಹರಿಯನ್ನು ಓಲೈಸುವ ಪ್ರಸ್ತಾಪ ಬರುವುದಿಲ್ಲ. ಆದರೆ ಪುರಂದರ ಕೀರ್ತನೆಯಲ್ಲಿ ಹರಿಹರ ಇಬ್ಬರನ್ನು ಓಲೈಸಿದ್ದು ಕಂಡುಬರುವ ವಿಶಾಲ ಮನೋಭಾವವಾಗಿದೆ. ಇದು ಪುರಂದರರ ವಿಶಾಲ ಆಧ್ಯಾತ್ಮಿಕಕ್ಕೆ ಸಾಕ್ಷಿ. ಮೊದಮೊದಲು ಅನೇಕ ದೇವರುಗಳನ್ನು ಪೂಜಿಸಿದ ವೈಷ್ಣವರಿರಬಹುದು. ಆದರೆ ದಾಸರು ಏಕದೇವೋಪಾಸನೆಯನ್ನು ಹೇಳಿದ್ದಾರೆ. ತಾವು ಮಾಡಿದ ತಪ್ಪುಗಳನ್ನು ತಾವೇ ತಿದ್ದಿಕೊಂಡು ಪಶ್ಚಾತ್ತಾಪ ಪಟ್ಟ ಇವರಲ್ಲಿ ನಿಜವಾದ ಭಕ್ತಿಯ ಕಳಕಳಿಯನ್ನು ಕಾಣಬಹುದು. ಈ ತೆರದ ಪಶ್ಚಾತ್ತಾಪ ಪಡೆಯುವಿಕೆ ಶರಣರಲ್ಲಿ ಕೂಡಾ ಇದೆ. ಅಹಂಕಾರವನ್ನು ಬಿಟ್ಟು ಎಲ್ಲವೂ ಭಗವಂತನದೆಂದು ಹೇಳುವ ಈ ಭಕ್ತಿಯ ದಾಸರ ಆಚರಣೆ ಜನಸಾಮಾನ್ಯರಿಗೆ ಸುಲಭವಾಗಿ ಎಟುಕುವಂತಾಗಿದೆ. 'ದಾಸನಮಾಡಿಕೋ ಎನ್ನ ದಾಸನ ಮಾಡಿಕೋ' ಅನ್ನುವ ನಿಷ್ಕಾಭಕ್ತಿಯನ್ನು ನಿನ್ನ ನಾಮದ ಸ್ಮರಣೆ ಇರಲಿ ಎನ್ನುವ ಅಚಲ ಭಕ್ತಿಯನ್ನು ಅದರಂತೆ ಭಗವಂತ ಭವರೋಗ ವೈದ್ಯ ಎಂದು ಹೇಳಿದರೆ ಶರಣರ ಗುರುಪದೇಶ ಮಂತ್ರವೈದ್ಯ - ಭವರೋಗ ಕಳೆವ ಪರಿಯನೋಡಾ ಅನ್ನುವ ವಚನ ನೆನಪಿಗೆ ಬರುವುದು. ವಾತ್ಸಲ್ಯ, ದಾಸ್ಯ, ಸಖ್ಯ, ಮಧುರ, ಶಾಂತಿ ಭಕ್ತಿಗಳಿಂದ ಶಕ್ತಿಯನ್ನು ಸಾಕ್ಷಾತ್ಕರಿಸಿಕೊಳ್ಳಲು ಉಪಯೋಗಿಸುವರು. ಹನುಮಂತನ ದಾಸ್ಯಭಕ್ತಿ, ಯಶೋಧೆಯ ವಾತ್ಸಲ್ಯ ಭಕ್ತಿ, ರಾಧೆಯ ಮಧುರ ಭಕ್ತಿ, ಅರ್ಜುನನ ಸಖ್ಯಭಕ್ತಿ ಇವು ದಾಸರ

ಆದಾರ್ಶಾತ್ಮಕ ಭಕ್ತಿಗಳಾಗಿವೆ. ಈ ಭಕ್ತಿಯಿಂದ ಮುಂದುವರೆದು ಈರ್ವರೂ ಕೂಡಾ ಅನುಭಾವಿಗಳೆಂಬುದು ಚಾರಿತ್ರಿಕ ಸತ್ಯವಾಗಿದೆ. ನಮ್ಮ ಪ್ರಬಂಧ ಅನುಭಾವದ ಹಿನ್ನಲೆಯಲ್ಲಿ ದರ್ಶನವನ್ನು ಕಾಣುವದಾಗಿದ್ದರಿಂದ ದಾಸರು ವಚನಕಾರರು ಈರ್ವರೂ ಕೂಡಾ ಅನುಭಾವದ ಹಿನ್ನಲೆಯುಳ್ಳವರು ಎಂಬುದು ಮತ್ತಷ್ಟು ಮೆರಗು ಮೂಡಿಸಿದೆ. ಭಾರತೀಯ ಸಂಸ್ಕೃತಿಯಲ್ಲಿ ಅನುಭಾವಕ್ಕೆ ಮಹತ್ವದ ಸ್ಥಾನವಿದೆ. ಅನುಭಾವವೇ ಭಕ್ತಿಗೆ ಆಧಾರ ಮುಕ್ತಿಗೆ ನೆಲಮನೆ, ಅನುಭಾವವಿಲ್ಲದವನ ಭಕ್ತಿ ಯಳತಟಗೊಳಿಸಿತ್ತು ಎಂದು ಅನುಭಾವದ ಬಗ್ಗೆ ವಚನಕಾರರು ಹೇಳಿದಷ್ಟು ಮತ್ತಾರು ಹೇಳಿಲ್ಲವೆನ್ನಬಹುದು. ಅನುಭವ, ಅನುಭಾವಕ್ಕೆ ವ್ಯತ್ಯಾಸವಿಷ್ಟೇ ಪಂಚೇಂದ್ರಿಯಳಿಗೆ ಗಮ್ಯವಾದದ್ದು 'ಅನುಭವ'ವಾದರೇ ಅತೀಂದ್ರಿಯ ಗಮ್ಯವಾದದ್ದು 'ಅನುಭಾವ'. ಪಂಚೆಂದ್ರೀಯಗಳ ಪ್ರತಿಕ್ರಿಯೆ ಅನುಭವಕ್ಕೆ ಸಂಬಂಧಿಸಿದರೆ ತನ್ನನ್ನು ತಾನು ಕಂಡುಕೊಳ್ಳುವಲ್ಲಿ ಉಂಟಾಗುವ ಪ್ರತಿಕ್ರಿಯೆ ಅನುಭಾವವಾಗಿದೆ. ಇತರ ಹೊರಗಿನ ವಸ್ತುಗಳನ್ನು ಕಂಡುಕೊಳ್ಳುವುದು ಅನುಭವವಾದರೇ, ತನ್ನನ್ನು ಕಂಡುಕೊಳ್ಳುವುದು ಅನುಭಾವವಾಗಿದೆ. "ಆಧ್ಯಾತ್ಮಿಕವಾದ ಸಾಧನ ಸಿದ್ಧಿಗಳ ಅನುಭವವೇ 'ಅನುಭಾವ'"[1] ಲಿಂಗನುಭಾವದಲ್ಲಿ ಭಕ್ತನ ಹಂತ ಪ್ರಥಮ ಶರಣನ ಹಂತ ಅಂತ್ಯವಾಗಿದೆ. ಇತರರ ವಸ್ತುವನ್ನು ಅರಿಯುವುದು ಸುಲಭ, ತನ್ನೊಳಗನ್ನರಿಯುವದು ಬಹು ಕಠಿಣ. ಅನುಭವ ಸುಲಭ, ಅನುಭಾವ ಕಠಿಣ. ಈ ಆತ್ಮ ಸಾಕ್ಷಾತ್ಕಾರ ಪದ್ಧತಿಗೆ ಹಿಂದೂ ದರ್ಶನದಲ್ಲಿ ಪ್ರಮುಖ ಸ್ಥಾನವಿದೆ. ಲೋಕಾನುಭವದ ಮೂಲಕ ಶಿವಾನುಭಾವದ ಕಡೆಗೆ, ಆತ್ಮನ ಅನುಭಾವವನ್ನು ಸಾಕ್ಷಾತ್ಕಾರ ಕರಿಸುವುದರ ಪರ, ಒಂದರ ಮೂಲಕ ಇನ್ನೊಂದನ್ನು ಕಂಡುಕೊಳ್ಳುವ ಈ ಅನುಭಾವ ವೈಶಿಷ್ಟ್ಯ ಲೌಕಿಕ ಆಧ್ಯಾತ್ಮಿಕವನ್ನೊಳಗೊಂಡಿದೆ. ಸಾಧನೆ, ಸಾಧರ ಮತ್ತು ಸಿದ್ಧಿ ಇವುಗಳ ಸಮಗ್ರ ಸಂಬಂಧ ಈ ಅನುಭಾವದಡಿ ಅರ್ಥವನ್ನು ಪಡೆದುಕೊಂಡಿದೆ. ಭಗವಂತನಿಗಾಗಿ ಪರಿತಪಿಸುವ ಕ್ರಮ ಹಲವು ಆಧ್ಯಾತ್ಮಿಕಗಳಲ್ಲಿ ಕಂಡರೆ ಅಂದರೆ ಹೊರಗೆ ಭಗವಂತನನ್ನು ಹುಡುಕಿದರೆ ತನ್ನಲ್ಲಿರುವ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು ಶಿವಶರಣರ ಹಂಬಲವಾಗಿದೆ. ಭಗವಂತನ ದರ್ಶನ ಕಾಣುವ ಇಚ್ಛೆ ಭಾರತೀಯ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಚಿರಪರಿಚಿತವಾದರೆ ತನ್ನ ಮೂಲಕ ಅನುಭವದಿಂದ ಅನುಭಾವದ ಪರಮಾತ್ಮನನ್ನು ಕಾಣುವ ವೈಶಿಷ್ಟ್ಯ ಈ ವಚನಕಾರರಿಂದಲೇ ಸಾಧಿಸಿದೆ. ತನು ಮನ ಧನಗಳನ್ನು ಕರಗಿಸಿ ಪಂಚೇಂದ್ರಿಯಗಳನ್ನು ಮೀರಿದಾಗ ಅನುಭಾವದ ಸುಖ ದೊರೆಯುವುದು ಅನುಭವದ ಮೂಲಕ ಅನುಭಾವದೆತ್ತರಕ್ಕೆ ಏರುವ ಇಷ್ಟೊಂದು ಸುಲಲಿತವಾದ ಅನುಭಾವ ಸಾಹಿತ್ಯ ಮತ್ತೆಲ್ಲಿಯೂ ಸಿಗಲಾರದೇನೋ ಅನ್ನಿಸುವುದು. ಬಯಲಿನಿಂದ ರೂಪಾತ್ಮಕ ಪದಾರ್ಥಗಳ ಉತ್ಪತ್ತಿಯಾದರೆ ಬಯಲು ಮತ್ತು ರೂಪ ಇವೆರಡು ಒಂದಾಗುವ ಪ್ರಕ್ರಿಯೆಯೇ ಅನುಭಾವವಾಗಿದೆ. ಭಾವ ತೀವ್ರತೆ ಭಕ್ತಿ, ಧ್ಯಾನ, ನಿಷ್ಠೆ, ಕಾಯಕ, ದಾಸೋಹ, ಅರಿವು, ಆಚಾರಗಳು ಈ ಅನುಭಾವದ ಪ್ರಕ್ರಿಯೆಗಳು ಸ್ನೇಹದ ಮೂಲಕ ಸಂಗಮನಾಥನನ್ನು ಕಾಣುವ ಈ ನಿಜಾನುಭವದ ವೈಶಿಷ್ಟ್ಯ ಸಂಸಾರದ ಜಂಜಾಟಗಳನ್ನು ತ್ಯಜಿಸದೇ ಲೋಕದ ಅನುಭವಗಳಿಂದ ಕೂಡಿ ಲಿಂಗದ ಆಧ್ಯಾತ್ಮ ಅರಿವನ್ನು ಮೂಡಿಸುವ ಈ ಕ್ರಮ ಭಕ್ತಿಪಂಥದಲ್ಲಿ ವಿಶೇಷವಾಗಿದೆ.

ಸ್ವರ್ಗಲೋಕ, ಮರ್ತ್ಯಲೋಕ ಎಂಬುದನ್ನು ಎಲ್ಲಿಯೋ ಪರಿಕಲ್ಪನೆಯಲ್ಲಿ ಗುರುತಿಸದೇ ಇಲ್ಲಿಯೇ ಅನುಭವಿಸುವ ಕೈಲಾಸವೆಂಬುದು 'ಹಾಳಬೆಟ್ಟ'ವೆಂದು ಹೇಳಿ ಈ ಮರ್ತ್ಯವೇ ಕೈಲಾಸವೆಂದು ಹೇಳಿದ ಶರಣರ ಅನುಭಾವದ ವಿಶಿಷ್ಟ ಕೊಡುಗೆ. ಅದರಂತೆ ನರನು ಹರಿಯನ್ನು ಸಾಕ್ಷಾತ್ಕರಿಸಿಕೊಳ್ಳಲು ಉಪಯೋಗಿಸುವ

ಉಪಾಸನೆಯ ಕ್ರಮವೇ ಬ್ರಹ್ಮ. ಸಾಕ್ಷಾತ್ಕಾರವೇ ಅನುಭಾವ ಪದದ ಅರ್ಥ ವಿಶೇಷತೆಯು ದಾಸರಲ್ಲಿ ಕಾಣಿಸಿಕೊಂಡಿದೆ. ಅನುಭಾವವೆಂಬದು ಕೇವಲ ದೈವ ಸಾಕ್ಷಾತ್ಕಾರವಾಗದೇ ಸತ್ಯದ ಕಡೆ ಮನಸ್ಸನ್ನು ವಿಕಾಸಗೊಳಿಸುವ ಸಾಧನೆಯಾಗಿದೆ. ಇವರೀರ್ವರ ಅನುಭಾವದಲ್ಲಿ ಸತ್ಯದ ಹುಡುಕಾಟ ನಡೆದು ಭಕ್ತಿಯ ಆನಂದ ಭಕ್ತನಾದವನಿಗೆ ಮಾತ್ರ ಗೋಚರವೆಂದು ಹೇಳಿದ್ದಾರೆ. 'ಅನುಭಾವದಡಿಗೆಯ ಮಾಡಿ ಅದಕ್ಕೆ ಅನುಭಾವಿಗಳು ಬಂದು ತನುವೆಂಬ ಭಾಂಡದಲ್ಲಿ ಹರಿಭಕ್ತಿಯೆಂಬ ನೀರಿನ ಹೆಸರಿಟ್ಟು ....., ಎಂದು ಅನುಭಾವ ಪೂರ್ಣ ಮಾತುಗಳನ್ನು ಪುರಂದರದಾಸರಲ್ಲಿ ಗುರುತಿಸಬಹುದು. ಶರಣರು ವಚನ ಸಾಹಿತ್ಯದಲ್ಲಿ ಅನುಭಾವದ ಪ್ರತಿಮಾರೂಪವನ್ನು ಗುರುತಿಸಿದಂತೆ ದಾಸರು ಕೂಡಾ ಗುರುತಿಸಿದ್ದಾರೆ. ಆದರೆ ಅನುಭಾವದ ಅರ್ಥ ದಾಸ್ಯ ಭಕ್ತಿಯಲ್ಲಿಯೇ ಮುಕ್ತಿಯನ್ನು ಕಂಡಿದೆ.

> ತುಂಟರೈವರ ತುಳಿದ ಕಂಟಕನೊಬ್ಬನ ಕಳೆದು |
> ಎಂಟು ಮಂದಿಯ ಗರುವನಳಿದು |
> ವೆಂಕಟ ನೀ ಬಂದೆನ್ನ ಕಂಟಕವನೆ ಬಿಡಿಸಿ |

ಇದರಂತೆ

> 'ಶರಧಿ ಸಡ್ಡಿಯ ಮಾಡಿ ಧರೆಯ ಕೂರಿಗೆಮಾಡಿ |
> ಹರಬೊಮ್ಮರೆಂಬ ಎರಡೆತ್ತು ಹೂಡಿ |
> ನರ ಜೀವರಾಶಿಗಳೆಂಬ ಬೀಜವ ತಕ್ಕೊಂಡು |

ಎನ್ನುವ ಈ ಒಕ್ಕಲುತನದ ಮಾದರಿಯ ಆಧ್ಯಾತ್ಮದಾಸಗೀತೆ ಪ್ರಭುವಿನ ತನುವ ತೋಂಟವ ಮಾಡಿ ಮನದ ಗುದ್ದಲಿಯ ಮಾಡಿ ..... ಎನ್ನುವ ವಚನವನ್ನು ಪ್ರತಿಧ್ವನಿಸುವಂತಿದೆ. ಲೌಕಿಕದ ಉದಾಹರಣೆಗಳಿಂದ ಪರಲೌಕಿಕವನ್ನು ತಿಳಿಸಿದ್ದಾರೆ. ಶರಣರಿಗೆ ಮರಣವೇ ಮಹಾನವಮಿಯಾದರೆ 'ಬಿತ್ತಿದಾತನೆ ಬೆಳೆಯನು ಒಕ್ಕಿಕೊಂಡು ಹೋಗುವಾಗ ದುಃಖವೇತಕೆ, ಎಂದು ದಾಸರು ಹೇಳಿದ್ದಾರೆ. ಈ ದೇಹ ಮೂಳೆ ಮಾಂಸದ ತಡಿಕೆ ಎಂದು ದೇಹದ ಅಸ್ಥಿರತೆಯನ್ನು ಹೇಳಿ ಮಾನವ ಜನ್ಮದ ಸಾಧನೆಯ ಕಡೆ ತಿರುಗುವಂತೆ ಮಾಡಿದ್ದಾರೆ. ಹಾರಿ ಹೋಗುವ ಜೀವಾತ್ಮಕ್ಕೆ ಹಾರಿಹೋಗುವ ಹಂಸವನ್ನು ಹೋಲಿಸಿದ್ದಾರೆ.[೬೪] ಹೀಗೆ ಜೀವ - ದೇಹಗಳ ಸಂಬಂಧವನ್ನು ದಾಸರು ಅರ್ಥೈಸಿದ್ದಾರೆ. ಭಕ್ತಿಯಿಲ್ಲದ ಬಡವ, ಉಳ್ಳವರು ಶಿವಾಲಯ ಮಾಡುವರು ನಾನೇನು ಮಾಡಲಿ ಬಡವನು ಎಂದು ಶರಣರು ನುಡಿದರೆ 'ನಾನೇಕೆ ಬಡವನು ನಾನೇಕೆ ಪರದೇಶಿ' ಎಂದು ದಾಸರು ಹೇಳಿದ್ದಾರೆ. "ಒಟ್ಟಿನಲ್ಲಿ ಅನುಭವ ಹೆಚ್ಚಾದಂತೆ ಮಾತು ಮಿತವಾಗುತ್ತದೆಂಬ ತತ್ವವನ್ನು ಶರಣ ಹಾಗೂ ದಾಸರೀರ್ವರು ತಮ್ಮ ವಚನ ಹಾಗೂ ಉಗಾಭೋಗಗಳ ಮೂಲಕ ಸತ್ಯವನ್ನಾಗಿಸಿ ಉನ್ನತ ಆಧ್ಯಾತ್ಮಿಕ, ತತ್ವದರ್ಶನ ನೀಡಿದ ಹಿರಿಯ ಅನುಭಾವಿಗಳೆನ್ನುವುದು ಸೂಕ್ತವೆನಿಸುತ್ತದೆ."[೬೪] ಹೀಗೆ ಇವರೀರ್ವರು ಅನುಭಾವದ ಹಿನ್ನಲೆವುಳ್ಳವರು ಎಂಬುದು ಸ್ಪಷ್ಟವಾಗುತ್ತದೆ. ಹರಿದಾಸರಲ್ಲಿ ಭಕ್ತ ಬೇರೆ, ಭಗವಂತ ಬೇರೆ. ದಾಸೋಹಂ ಭಾವ ಇಲ್ಲ. ಯಾವಾಗಲೂ ಭಗವಂತನಿಗೆ ದಾಸನಾಗಿರುವ ಪದ್ಧತಿ. ಇವರು ಕೀರ್ತನಕಾರರು. ಪ್ರಪಂಚದ ಎಲ್ಲ ವಸ್ತುಗಳು ಬೇರೆ ಬೇರೆ ಎಲ್ಲವೂ ಒಂದೇ ಅನ್ನುವುದಕ್ಕೆ ಆಧಾರವಿಲ್ಲ. ಲೌಕಿಕವನ್ನು ದ್ವೈತವೆಂದು ಭಾವಿಸಿದ್ದರಿಂದ ಪಾರಮಾರ್ಥವನ್ನು ದ್ವೈತವೆಂದೇ ಭಾವಿಸಲಾಯಿತು. ಇವರಲ್ಲಿ ಸಮಾಜ ಕಟ್ಟುವ

ಉದ್ದೇಶವಿರಲಿಲ್ಲ. ವೈದಿಕ ಪರಂಪರೆಯಲ್ಲಿದ್ದು ಜನಸಾಮಾನ್ಯರಿಗೆ ತಲುಪಿಸುವ ಉದ್ದೇಶವನ್ನು ಹೊಂದಿರುವವರು. ದಾಸ ಸಾಹಿತ್ಯ ಬ್ರಾಹ್ಮಣಕಾರರ ಉತ್ಪನ್ನಕಾರವಾಗಿದ್ದು ಎಲ್ಲ ವರ್ಗಗಳ ಮೇಲೂ ಪರಿಣಾಮ ಉಂಟಾಗುವಂತಾಯಿತು. ರಾಮದಾಸ (ಬಡೇಸಾಬ್) ಈತನು ಮುಸ್ಲಿಂನಾದರೆ ಕನಕದಾಸ ಕುರುಬರವನು. ಇವರಿಬ್ಬರನ್ನು ಬಿಟ್ಟರೇ ಎಲ್ಲರೂ ವೈದಿಕರೆ. ಮೇಲು ಜಾತಿಯವರ ಬಗ್ಗೆ ಟೀಕೆ ಟಿಪ್ಪಣೆಗಳಿಲ್ಲ. ಈ ದಾಸ ಸಾಹಿತ್ಯ ಒಂದು ವರ್ಗದ ಸಾಹಿತ್ಯವಲ್ಲ. ವಾದಿರಾಜ ಮತ್ತು ವಿಜಯದಾಸರು ಮಠಾಧಿಪತಿಗಳಾಗಿದ್ದರು. ಕನಕ ಪುರಂದರರ ಮೇಲೆ ಕುಮಾರವ್ಯಾಸರ ಪ್ರಭಾವ ಆಗಿದೆ. ಅದರಂತೆ ಭಾಗವತರ ದಶಮಸ್ಕಂದದಿಂದ ತಾಯಿ - ಮಗ ಭಾವನೆ, ರಾಸಲೀಲೆಯಿಂದ ಕೂಡಿದ ಗೀತಗೋವಿಂದ, ದಾಸರಲ್ಲಿ ಒಬ್ಬರನ್ನೊಬ್ಬರು ಕುರಿತು ಹೇಳುತ್ತಾರೆ. ಇವರಲ್ಲಿ ಸ್ತುತಿ ಪರಂಪರೆಯಿದೆ. ತಮಗೆ ಅಂಕಿತ ಇಡಲು ಪ್ರೇರಣೆ ನೀಡಿದ ಹಿರಿಯರನ್ನು ಕಂಡು ಹಾಡುವ ಪರಂಪರೆಯಿದೆ. ಸಾಹಿತ್ಯವನ್ನು ರಚನೆ ಮಾಡುವ ಉದ್ದೇಶ ಇಲ್ಲಿ ಇಲ್ಲ. ದೇವರಲ್ಲಿ ಮೊರೆಯಿದೆ. ಅದರಂತೆ ವಚನಕಾರರಲ್ಲಿಯೂ ಕೂಡಾ ಸಮಾಜೋದ್ಧಾರ, ವ್ಯಕ್ತಿ ಉದ್ಧಾರ, ಸಮಾಜ ಕಟ್ಟುವ ಉದ್ದೇಶ, ಇದಕ್ಕಾಗಿ ಪ್ರತಿಭಟನೆ, ಇದ್ದ ವ್ಯವಸ್ಥೆಯನ್ನು ಮುರಿದು ಕಟ್ಟುವುದು, ಚಾತುರ್ವರ್ಣ ನಿರಾಕರಣೆ, ವೈದಿಕ ಪರಂಪರೆಯನ್ನು ಕೆಡುವಬೇಕಾಯಿತು. ಉಪನಿಷತ್ತು ಆಗಮಗಳಿಂದ ಪ್ರಭಾವಿತರಾಗಿದ್ದಾರೆ. ಆದರೆ ಯಾವುದೇ ಸಾಹಿತಿಗಳಿಂದ ಪ್ರಭಾವವಾಗಿಲ್ಲ. ಸ್ತುತಿ ಮಾಡುವುದರ ಮೂಲಕ ಪೂಜ್ಯತೆಯನ್ನು ಆರಾಧಿಸುವುದು. ಅಂತರಂಗ ನಿರೀಕ್ಷೆಯಿದೆ, ಬಾಹ್ಯಪರಿವರ್ತನೆ, ಸಮಾಜ ಪರಿವರ್ತನೆ, ಇವುಗಳಿಗಾಗಿ ವಚನಗಳನ್ನು ಬರೆದರೆ ವಿನಹ, ಸಾಹಿತ್ಯಕ್ಕಾಗಿ ಬರೆಯಲಿಲ್ಲ. ಇವರೀರ್ವರಲ್ಲಿಯು ಭಕ್ತಿ, ಡಂಭಾಚಾರ ಹೊರಹಾಕುವುದು, ಈ ವಚನಕಾರರಲ್ಲಿ ಮಠಾಧಿಪತಿಗಳಿದ್ದಾರೆ. ಇಬ್ಬರು ಜನ ಭಾಷೆಯನ್ನು ಬಳಸಿದರು. ಇಬ್ಬರೂ ಕೂಡಾ ಜನಸಾಮಾನ್ಯರ ಬಗ್ಗೆ ಗಮನಹರಿಸಿದವರು. ದಾಸರಲ್ಲಿ ಮೇಲ್ವರ್ಗದರು ಹೆಚ್ಚಾಗಿದ್ದರೆ ವಚನಕಾರರಲ್ಲಿ ಎಲ್ಲ ವರ್ಗದವರು ಇದ್ದಾರೆ. ದಾಸರಲ್ಲಿ ಪುರುಷರಿಗೆ ಹೆಚ್ಚು ಅಧಿಕಾರ. ಸ್ವಲ್ಪ ಮಹಿಳೆಯರಿಗೆ ಕೂಡಾ ಇರುವದು. ವಚನಕಾರರಲ್ಲಿ ಮಹಿಳೆಯ ಪಾಲುಗಾರಿಕೆಯಿದೆ. ಮುಂತಾಗಿ ವಚನಕಾರರಲ್ಲಿದ್ದ ಹಲವಾರು ಪದ್ಧತಿಗಳಿದ್ದರು ದಾಸರಲ್ಲಿಯು ಕೂಡಾ ಇವೆ.

**ಅಡಿಟಿಪ್ಪಣಿಗಳು**

೧. ಕರ್ನಾಟಕದ ಸೂಫಿಗಳು, ಪು. ೨೩
೨. ಅದೇ, ಪು. ೨೭
೩. ಅದೇ, ಪು. ೨೬
೪. ಅದೇ, ಪು. ೯
೫. ಅದೇ, ಪು. ೧೨
೬. ಅದೇ, ಪು. ೧೩
೭. ಅದೇ, ಪು. ೧೪
೮. ಅದೇ, ಪು. ೩೫
೯. ಸೂಫಿಪಥ ಮತ್ತು ಶರಣಪಥಗಳು ಅಧ್ಯಯನ, ಪು. ೨೧೮
೧೦. ಕರ್ನಾಟಕದ ಸೂಫಿಗಳು, ಪು. ೫೦
೧೧. ಸೂಫಿ ಮತ್ತು ಶರಣಪಥ, ಪು. ೨೨೨
೧೨. ಅದೇ, ಪು. ೨೨೩
೧೩. ಅದೇ, ಪು. ೨೨೮

೧೪. ಅದೇ, ಪು. ೨೩೧
೧೫. ಅದೇ, ಪು. ೨೩೪
೧೬. ಅದೇ, ಪು. ೨೩೫
೧೭. ಅದೇ, ಪು. ೨೩೮
೧೮. ಅದೇ, ಪು. ೨೪೦
೧೯. ಅದೇ, ಪು. ೨೪೨
೨೦. ಶಿವದಾಸ ಗೀತಾಂಜಲಿ, ಪು. ೩೬
೨೧. ಅದೇ, ಪು. ೩೭
೨೨. ಅದೇ, ಪು. ೭
೨೩. ಅದೇ, ಪು. ೮
೨೪. ಅದೇ, ಪು. ೮
೨೫. ಅದೇ, ಪು. ೮
೨೬. ಅದೇ, ಪು. ೯
೨೭. ಅದೇ, ಪು. ೧೩
೨೮. ಅದೇ, ಪು. ೧೮
೨೯. ಅದೇ, ಪು. ೨೧
೩೦. ಅದೇ, ಪು. ೨೫
೩೧. ಶಿವದಾಸ ಗೀತಾಂಜಲಿ, ಪು. ೧೧
೩೨. ಅದೇ, ಪು. ೧೨
೩೩. ಅದೇ, ಪು. ೧೮
೩೪. ಅದೇ, ಪು. ೩೫
೩೫. ಬಸವೇಶ್ವರ ಮತ್ತು ಪುರಂದರದಾಸ, ಪು. ೩೩
೩೬. ಅದೇ, ಪು. ೩೯
೩೭. ಶಿವದಾಸ ಗೀತಾಂಜಲಿ, ಪು. ೩೯
೩೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಪು. ೪೯೮
೩೯. ಬಸವೇಶ್ವರ ಮತ್ತು ಪುರಂದರದಾಸ, ಪು. ೪೩
೪೦. ಅದೇ, ಪು. ೪೩
೪೧. ಅದೇ, ಪು. ೪೪
೪೨. ಶಿವದಾಸ ಗೀತಾಂಜಲಿ, ಪು. ೬೭
೪೩. ಬಸವೇಶ್ವರ ಮತ್ತು ಪುರಂದರದಾಸರು, ಪು. ೫೩
೪೪. ಶಿವದಾಸ ಗೀತಾಂಜಲಿ, ಪು. ೬೬
೪೫. ಬಸವೇಶ್ವರ ಮತ್ತು ಪುರಂದರದಾಸ, ಪು. ೫೩
೪೬. ಅದೇ, ಪು. ೫೬
೪೭. ಕನ್ನಡ ಸಾಹಿತ್ಯ ಚರಿತ್ರೆ, ಪು. ೪೯೯
೪೮. ಕನ್ನಡ ಸಾಹಿತ್ಯ ಚರಿತ್ರೆ, ಪು. ೪೯೯
೪೯. ಬಸವೇಶ್ವರ ಮತ್ತು ಪುರಂದರದಾಸರು, ಪು. ೫೮
೫೦. ಅದೇ, ಪು. ೬೦
೫೧. ಲಿಂಗಲೀಲಾ ವಿಲಾಸ ಚಾರಿತ್ರ್ಯ, ಪು. ೧೪೧, ವ - ೫೭
೫೨. ಗೂಳೂರಿನ ಸಂಪಾದನೆ, ಪು. ೨೩೦, ವ - ೬೯
೫೩. ಶಿವದಾಸ ಗೀತಾಂಜಲಿ, ಪು. ೭೦
೫೪. ಬಸವೇಶ್ವರ ಮತ್ತು ಪುರಂದರ, ಪು. ೬೨
೫೫. ಅದೇ, ಪು. ೬೨
೫೬. ಶಿವದಾಸ ಗೀತಾಂಜಲಿ, ಪು. ೯೫

೫೭. ಕನ್ನಡ ಸಾಹಿತ್ಯ ಚರಿತ್ರೆ, ಪು. ೪೯೯

೫೮. ಶಿವದಾಸ ಗೀತಾಂಜಲಿ, ಪು. ೯೮

೫೯. ಬೆಟಗೇರಿ ಕೃಷ್ಣಶರ್ಮ, ಕನಕದಾಸರ ಭಕ್ತಿಗೀತೆಗಳು, ಪು. ೫

೬೦. ಬಸವೇಶ್ವರ ಮತ್ತು ಪುರಂದರ, ಪು. ೨೫೨,

೬೧. ಕನ್ನಡ ಸಾಹಿತ್ಯ ಚರಿತ್ರೆ, ಪು. ೫೦೦

೬೨. ಬಸವೇಶ್ವರ ಮತ್ತು ಪುರಂದರ, ಪು. ೨೬೨

೬೩. ದಾಸ ಸಾಹಿತ್ಯ ಒಂದು ಸೈದ್ಧಾಂತಿಕ ಅಧ್ಯಯನ, ಪು. ೭೪

೬೪. ಬಸವೇಶ್ವರ ಮತ್ತು ಪುರಂದರದಾಸ, ಪು. ೧೦೪



# ೨೫

# ಅಲ್ಲಮ ಪ್ರಭುವಿನ ದಾರ್ಶನಿಕ ತತ್ವ

ದರ್ಶನ, ಮೀಮಾಂಸೆ ಇವೆರಡೂ ಚರ್ಚೆ ಅನ್ನುವ ಅರ್ಥವನ್ನು ಕೊಡುತ್ತಿದ್ದರೂ ಇವೆರಡನ್ನು ಸೇರಿಸಿ 'ಅಲ್ಲಮಪ್ರಭು ದರ್ಶನ ಮೀಮಾಂಸೆ' ಎಂಬ ನಾಮಾಂಕಿತ ಸಮಂಜಸವೇ ಅನ್ನುವ ವಿಚಾರ ಬಾರದಿರದು. ಸಾಮಾನ್ಯವಾಗಿ ಷಡ್ ದರ್ಶನವೆಂದು ಹೇಳುತ್ತೇವೆ. ಸಾಂಖ್ಯ, ನ್ಯಾಯ, ಯೋಗ, ವೈಷೇಶಿಕ, ಪೂರ್ವಮೀಮಾಂಸೆ, ಉತ್ತರ ಮೀಮಾಂಸೆ, ಸಾಂಖ್ಯದರ್ಶನ, ಪೂರ್ವ ಮೀಮಾಂಸ ದರ್ಶನ, ಉತ್ತರ ಮೀಮಾಂಸ ದರ್ಶನ ಅನ್ನುವ ಹಾಗೆ 'ಅಲ್ಲಮ ಪ್ರಭುದರ್ಶನ ಮೀಮಾಂಸೆ' ಅಂದರೆ ಮೀಮಾಂಸೆ ಅನ್ನುವದನ್ನು ಸಿದ್ಧಾಂತದಂತೆ ತೆಗೆದುಕೊಂಡಿದೆ. ಪಾಶ್ಚಾತ್ಯರಲ್ಲಿ ಸಾಕ್ರೆಟಿಸ್ ಬಹು ದೇವತಾವಾದವನ್ನು ತಿರಸ್ಕರಿಸಿದುದರಿಂದ ತನ್ನ ಪ್ರಾಣವನ್ನು ಕಳೆದುಕೊಳ್ಳಬೇಕಾಯಿತು. ಸರ್ವದೇಶ ವಾದದಲ್ಲಿ ಗಿಯರ್ಡಾನು ಬ್ರುನೋ - ಇವನು ಕ್ರೈಸ್ತನಾಗಿದ್ದರೂ ಸಹಿತ ಸಾಂಪ್ರದಾಯಿಕ ರೀತಿಯಲ್ಲಿ ಈಶ್ವರನ ಕಲ್ಪನೆಯನ್ನು ಖಂಡಿಸಿದನು. ಸಾಂಪ್ರದಾಯಿಕ ಕ್ರೈಸ್ತರ ಪ್ರಕಾರ ಈಶ್ವರನು ಪ್ರಪಂಚದಿಂದ ಭಿನ್ನ ಹಾಗೂ ಅತೀತ. ಬ್ರೂನೋರ ಪ್ರಕಾರ ಈಶ್ವರನೇ ಸರ್ವ ವಸ್ತುಗಳ ಅಂತರ್ಯಾಮಿ. ಎಲ್ಲ ವಸ್ತುಗಳು ಅವನಲ್ಲೇ ಅಂತರ್ಗತವಾಗಿವೆ ಎಂದು ಸಾರಿ ಅಧಿಕಾರಿಗಳ ವೈರವನ್ನು ಕಟ್ಟಿಕೊಂಡನು. ಅದರಂತೆ ಬೈಬಲ್ಲಿನ ಭೂಕೇಂದ್ರ ವಾದವನ್ನು ತಿರಸ್ಕರಿಸಿ ಓಫರ್ನಿಕಸ್‌ನ ಸೂರ್ಯಕೇಂದ್ರ ವಾದವನ್ನು ಅನುಮೋದಿಸುವುದರಿಂದ ಅವನನ್ನು ಜೀವಂತವಾಗಿ ಸುಡಲಾಯಿತು. ಹೀಗೆ ಏಕದೇವೋಪಾಸನೆಗೆ ಬಹು ದರ್ಶನಗಳು ಒಲವನ್ನು ತೋರಿದವು. ಪ್ರಭು ಸಾಂಪ್ರದಾಯಿಕ ಅಥವಾ ಆ ದರ್ಶನ ಪ್ರವಾಚಕರ ಏಕದೇವೋಪಾಸನೆಯನ್ನೇ ಹೇಳುವರು. ಈ ಅಧ್ಯಯನದ ಪ್ರವಾಚಕರು ಏಕದೇವೋಪಾಸನೆಯನ್ನೇ ಹೇಳುವರು.

ಈ ಅಧ್ಯಯನದ ಪೀಠಿಕೆಯಾಗಿ ಕೆಲವು ವಚನಗಳ ಸಮೇತ ಈ ಐದನೇ ಅಧ್ಯಾಯದ ಮಾರ್ಗದರ್ಶಿ ರೂಪ ಯಾವ ರೀತಿ ಚರ್ಚಿತವಾಗಿದೆಯೆಂಬುದನ್ನು ಹೇಳಿ, ಪ್ರಭುವಿನ ಜೀವನದ ಚರಿತ್ರಾತ್ಮಕ ವಿಷಯವನ್ನು ಅಲ್ಲಮಪ್ರಭು ನಾಮದ ಅಲ್ಲಮ ಶಬ್ದದ ಬಗ್ಗೆ ಹಾಗೂ ಪ್ರಭುವಿಗೆ ಸಂಬಂಧಪಟ್ಟ ಸ್ಥಳಗಳ ಬಗ್ಗೆ ಒಂದಿಷ್ಟು ವಿವರಣೆಯನ್ನು ಮಾಡಲಾಗಿದೆ. ಪ್ರಭು ಜೀವನದಲ್ಲಿ ಅಸ್ಪಷ್ಟವಾದ ಜೀವನದ ಎರಡು ಘಟನೆಗಳಾದ ೧. ಪ್ರಭುವಿನ ಹುಟ್ಟು ೨. ಆತ್ಮಲಿಂಗದೀಕ್ಷೆ. ಇವುಗಳ ಬಗ್ಗೆ ನಿರ್ಧರಿತವಾಗಿ ಹೇಳಲಾಗಿದೆ. ಹಾಗೆಯೇ ದರ್ಶನ ಅನ್ನುವ ಪದಕ್ಕೆ ಸಂವಾದಿಯಾಗಿ ಬಸವಾದಿ ಪ್ರಮಥರು ಬಳಸಿದ ಕೆಲವು ವಚನಗಳನ್ನು ಕೂಡಾ ಇಲ್ಲಿ ನೋಡಿದ್ದೇವೆ. ಮೂರನೆಯ ಚಾರಿತ್ರಿಕ ಮುಖ್ಯ ವಿಷಯ - ಮಾಯಾ ತಿರಸ್ಕಾರ ಧೋರಣೆ ಈ ಮೂರು ವಿಷಯಗಳನ್ನು ಪ್ರಾಸ್ತಾವಿಕವಾಗಿ ಹೇಳಲಾಗುತ್ತದೆ. ಶಿವಾರ್ಚಕರ ಉದರದಲ್ಲಿ ಅನಿಮಿಷನು ಪಟ್ಟದ ಕಲ್ಲಿನಲ್ಲಿ ಹುಟ್ಟಿದ. ಪಟ್ಟದಕಲ್ಲಿನಲ್ಲಿ ಚಾಲುಕ್ಯರು ರಾಜ್ಯವಾಳುತ್ತಿರುವಾಗ 'ತ್ರೈಲೋಕ್ಯ ಚೂಡೇಶಾ' ಎಂಬುವವನಿದ್ದ,[೧] ಅವನ ಹೆಂಡತಿ ಮಹಲೇಖೆ, ಅವರ ಹೊಟ್ಟೆಯಲ್ಲಿ ಅನಿಮಿಷನು 'ವಸುದಿಪ್ಯ' ಎಂಬ ಹೆಸರಿನಿಂದ ಹುಟ್ಟಿದ ಶಿವಜ್ಞಾನ ದೀಕ್ಷೆಯಾದ ಮೇಲೆ ವಸುದಿಪ್ಯ ಒಂದು ದಿನ ಓಲಗಕ್ಕೆ ಹೊರಟಾಗ ಒಳ್ಳೆಯ ಅಶ್ವಗಳು ಮಾರಾಟಕ್ಕೆ ಬಂದಿವೆ ಅವುಗಳಲ್ಲಿ 'ಕೃತುಜವಾ' ಎಂಬುದು ಶ್ರೇಷ್ಠ ಕುದುರೆ ಎಂದು ತಿಳಿದಾಗ ಅದನ್ನು ಖರೀದಿಸಿ ದೇಶ ಕೋಶಗಳನ್ನು ನೋಡಿಬರಲೆಂದು ವಸುದಿಪ್ಯನು ಹೊರಟನು. ಮಾರ್ಗ ಮಧ್ಯೆ ಅಡವಿಯಲ್ಲಿ ಸಾಗಿದಾಗ, ಬೇಡರು ಬೇಟೆಯಾಡುತ್ತ ಬರಲು ಕುದುರೆಯು ವಸುದಿಪ್ಯನನ್ನು ಕೆಳಕ್ಕೆ ಕೆಡವಿ ಓಡಿಹೋಯಿತು. ಅವನಿಗೆ ಬಾಯಾರಿಕೆ, ಆದರೆ ಲಿಂಗದರ್ಶನವಿಲ್ಲದೇ ನೀರು ಕುಡಿಯದ ವ್ರತ, ಅಲ್ಲಿ ಎಲ್ಲಿಯೂ ಲಿಂಗದರ್ಶನವಾಗಲಿಲ್ಲ. ಹಲಬುತ್ತಾ ಬರುತ್ತಿರುವಾಗ ಬಲಿಗ್ರಾಮ (ಬಳ್ಳಿಗಾವಿ) ಸಮೀಪ ವೃಷಭನು ಕಾಣಿಸಿದ. ಆದರೆ ಅದರ ಮೇಲೆ ಲಿಂಗಮುದ್ರೆ ಇರಲಿಲ್ಲ ನಿರಾಶೆಯಾಯಿತು. ಆಗ ಆತನು ಈ ದೇಹದ ಮೇಲಣ ಆಸೆಯನ್ನು ತೆಗೆದು ಹತಾಶನಾದದನ್ನು ಆ ವೃಷಭನು ಕಂಡು ಅವನ ಲಿಂಗದರ್ಶನ ನೇಮವನ್ನು ಕೇಳಿ ಕರುಣಿಸಿ 'ಸಂಜೀವನ ಅಮೃತಾಂಗದ ಆತ್ಮಜ್ಯೋತಿ ನಿಷ್ಠೆಯ ನಿಧಾನ ಜಿಹ್ವಾಗ್ರಹದಲ್ಲಿ ಲಿಂಗವನ್ನು ಇರಿಸಿ'[೨] ಮಸುದಿಪ್ಯನಿಗೆ ಲಿಂಗವನ್ನು ತೋರಿಸಿದನು. ಆ ಕೃಪಾ ಮೂರ್ತಿಯಾದ ವೃಷಭನು ಅವನ ಕೈಯಲ್ಲಿ ಅಮೃತಲಿಂಗವನ್ನು ನಿಕ್ಷೇಪಿಸಿದನು. ಲಿಂಗದರ್ಶನ ಲೋಲುತ್ತನಾದ ವಸುದಿಪ್ಯನಿಗೆ ಲಿಂಗಪ್ರಾಣಿಯಾಗಿ ಅದನ್ನು ನಿಮಿಷಾರ್ಧವೂ ಬಿಡದೇ ನೋಡುತ್ತಿರುವದರಿಂದ ಅವನೇ 'ಅನುಮಿಷ' ಎಂದು ಪ್ರಖ್ಯಾತನಾದ. ಸಮಾಧಿ ಸ್ಥಿತಿಯಲ್ಲಿದ್ದ ಅವನನ್ನು ಅವನ ಆತುರ ಕಂಡು 'ಶಿಲಾತನಂಗೊಳಿಸಿ ಸೂಕ್ಷ್ಮಾಲಯಂ ಕಟ್ಟಿ ಮಣ್ಣಾಮುಚ್ಚಿದರು'[೩] ಅನಿಮಿಷ ಅಲ್ಲಿಯೇ ಧ್ಯಾನ ಸಮಾಧಿಯಾದ. ಸೋಮಶೇಖರನ ಕರುಣದ ಕಳಾಪ ಕೃತಿ ಆ ನೇಮವನ್ನು ಕೈಗೊಂಡ ಒಂದೊಂದು ಬುದ್ಧಿಯ ಅವಸಾನದಿಂದ ಎನ್ನುವ ಲಿಂಗವನ್ನು ಒಯ್ದನು ಎಂದುಕೊಳ್ಳುತ್ತಾ ವೃಷಭನು ಕೈಲಾಸಕ್ಕೆ ಬಂದನು. ಕೈಲಾಸದ ಬಾಗಿಲಲ್ಲಿ ಲಿಂಗವಿಲ್ಲದೆ ಬಂದು ನಿಂತಿದ್ದ, ವೃಷಭನನ್ನು ಮಹಾಕಾಳರುದ್ರ ಎಂಬ ದ್ವಾರಪಾಲಕ ವಿಚಾರಿಸಿದಾಗ 'ನಾನು ಮರ್ತ್ಯಕ್ಕೆ ಕಾರಣಾಂತರ ಹೋಗಿ ಬಾರದುದನ್ನು ಕಂಡು ಶಿವನೇ ಬೇರೆ ರೂಪವಾಗಿ ಅಲ್ಲಿಗೆ ಬಂದು, ನನ್ನ ಲಿಂಗವನ್ನು ಕೊಂಡೊಯ್ಯಲು ಒಡನೆಯೇ ನಾನೀಗ ಬಂದೆ' ಎಂದನು. ಲಿಂಗ ವಿರಹಿತವಾದ ಅವನನ್ನು ದ್ವಾರಪಾಲಕರು ನೋಡಲೊಲ್ಲದೆ ತಮ್ಮ ಅಂಗರಕ್ಷಕರಾದ ಸಿಂಗಕೋಶ - ದ್ರಾವಿಡರೆಂಬವರಿಗೆ ನೇಮಿಸಿ ಮುಖ ತಿರುವಿದರು. ಅಂಗರಕ್ಷಕರು ಅವನನ್ನು ತಡೆದು ಭಂಗಿಸಿದರು. ನೀನು ಪ್ರಾಣಲಿಂಗವನ್ನು ನೀಗಿದ ಮಹಾಪಾತಕಿ ಪರಶಿವನ ಮನೆಯ ಬಾಗಿಲಿಗೆ ಬರದಿರು ಎಂದು. ಇದನ್ನು ಶಿವನು

ಕೇವಲ ಜ್ಞಾನದಿಂದ ಅರಿತು ಓಡಿಬಂದು 'ಏವುದ್ಯೆ ನಿಮಗೆ ಸಂವಾದ? ಋಷಭಗೇಕೆಲಿಂಗ? ತಾ ಲಿಂಗ' ಎಂದು ಮದ್ಯೆ ಪ್ರವೇಶಿಸಿದ. ಆದರೆ ದ್ವಾರಪಾಲಕರಾಗಲೀ ಅಂಗರಕ್ಷಕರಾಗಲೀ ಶಿವನ ಮಾತನ್ನು ಮನ್ನಿಸದೇ, ಲಿಂಗಬಾಹಿರವನ್ನು ಈ ತೆರದೊಳಗೆ ಹೋದಲೀಯವು ಎಂದು ಹಟ ಹಿಡಿಯುವರು. ಶಿವನು 'ಈ ಇಳೆಯೊಳು ಅವತರಿಸಿ ನಿಂದೆಯ ನೀಗಿ ಬಾ ಹೋಗು' ಎಂದು ಭೂಮಿಗೆ ವೃಷಭನನ್ನು ಕಳಿಸಿಕೊಡುವನು.

ಮರ್ತ್ಯದೊಳು ನೀನಿದ್ದ ನೆಲೆ ಕೈಲಾಸವು ಹೌದು ಎಂದು ಅವನಿಗೆ ಪಂಚ ಪರುಶವನ್ನು ಪ್ರದಾನ ಮಾಡಿದನು. ಆಗ ವೃಷಭನು ಶಿವನನ್ನು ಕುರಿತು 'ಆ ಮಹಾಘನಲಿಂಗ ಬಂದೆನ್ನ ಕೈ ಸಾರುವ ಉಪಾಯವೇನು? ಭವದ ಬಂದ ನಿವೃತ್ತಿ ಎಂಥಹದು ನಿರೂಪಿಸು ಎನಲು, 'ನಿರ್ದೇಹನೋರ್ವ ಬಂದು ನಿಂದುದೆ ಕುರುಹಾತನೇ ನಾನು, ನಿನ್ನಿಂದ ಹಿಂದೋದ ತಾರಕ ಬ್ರಹ್ಮರೂಪದ ಲಿಂಗ ಬಂದಪ್ಪುದು ಬಳಿಕವಿಲೋಕವೆಂದು' ಈ ರೀತಿಯಾಗಿ ಅನಿಮಿಷನ ಜನ್ಮ ವೃತ್ತಾಂತವನ್ನು ಶಿವಗಣ ಪ್ರಸಾದಿಯ ಸಂಪಾದನೆಯಲ್ಲಿ ಹೇಳಲಾಗಿದ್ದನ್ನು ಪೂರ್ವ ಪೀಠಿಕೆಯಲ್ಲಿ ಪ್ರಸ್ತಾಪಿಸಲಾಗುತ್ತಿದೆ. ಇದು ಇಲ್ಲಿ ಅಷ್ಟೇನು ಅವಶ್ಯಕವಲ್ಲದಿದ್ದರೂ ಸ್ವಲ್ಪಮಟ್ಟಿಗೆ ಪ್ರಭುವಿನ ಚರಿತ್ರೆಗೆ ಹಿನ್ನೆಲೆಯಾಗಿದೆ. ಇದಕ್ಕೆ ಹೊಂದಿಕೆಯಾಗಿ ಬಸವಣ್ಣನ ವಚನ ಹೀಗೆ ಇದೆ.

ಅಯ್ಯಾ, ಕೊಟ್ಟ ಲಿಂಗವ ಮರಳಿಕೊಂಡು ಬಾ ಎಂದು ಎನ್ನನಲ್ಲದನಯ್ಯಾ ಶಶಿಧರನು ಮರ್ತ್ಯಕ್ಕೆ, ನಿಮ್ಮ ಮುಖದಲ್ಲಿ ಎನ್ನ ಭವ ಹರಿವುದೆಂದು ಹರಹಿಕೊಂಡಿದ್ದೆನಯ್ಯಾ ದಾಸೋಹವನು, ನಿಮ್ಮ ಬರವ ಹಾರಿ (ಸವೆದವು) ಅನಂತ ದಿನಂಗಳು ಇಂದೆನ್ನ ಪುಣ್ಯದ ಫಲದಿಂದ ಎನಗೆ ಗೋಚರವಾದಿರಿ, ಹಿಂದಣ ಸಂದೇಹ, ಸೂತಕ ಹಿಂಗಿತ್ತು, ಎನ್ನ ಪ್ರಾಣಲಿಂಗನೀವೆಯಾಗಿ ಎನ್ನ ಸರ್ವಾಂಗದಲ್ಲಿ ಸನ್ನಿಹಿತನಾಗಿ ಎನ್ನ ಚಿಂತೆಯ ನಿಶ್ಚಿಂತೆಯ ಮಾಡಾ ಕೂಡಲ ಸಂಗಮದೇವಾ' ಎಂದು ವೃಷಭನ ಅವತಾರವೇ ಬಸವ ಅವತಾರವೆಂದು ಅರ್ಥೈಸಲು ಇದು ಆಧಾರವಾದಂತಿದೆ. ಇಲ್ಲಿ ಅವತಾರಗಳ ಬಗ್ಗೆ ಅಷ್ಟೇನು ಅವಶ್ಯವಿಲ್ಲ, ಪ್ರಭು ಅವತರಿಸಲಿಕ್ಕೆ ಹಿನ್ನೆಲೆ ಏನು ಅನ್ನುವುದರ ಪ್ರಶ್ನೆಯಿದು. ಮಾಯೆಯ ವಿಷಯಬಂದಾಗ ಮದುವೆಯನ್ನು ತಿರಸ್ಕರಿಸುವದೊಂದು ವೈರಾಗ್ಯವೇ? ನಿಜವಾದ ವೈರಾಗ್ಯ ಗುಪ್ತಗಾಮಿಯಾದುದು. ಪ್ರಪಂಚದಲ್ಲಿ ಇದ್ದು ಇಲ್ಲದೆ ಆಗಿರುವ ಶಕ್ತಿ ಅದು, ಜನಕ ಮಹಾರಾಜ ಪರಮ ವಿರಾಗಿ ಆಗಿರಲಿಲ್ಲವೇನು ರಾಜನಾಗಿದ್ದುಕೊಂಡೇ ವಿರಾಗಿ ಪದವಿ ಪಡೆದ, ಆದರೆ ಬುದ್ಧ ರಾಜ್ಯಕೋಶಗಳನ್ನು, ಕೈಹಿಡಿದ ಹೆಂಡತಿಯನ್ನು ತೊರೆದುಹೋದುದು ಆಡಂಬರ ಪ್ರದರ್ಶಿಸಲಿಕ್ಕಾಗಿ ಏನು? ಅಲ್ಲವೇ ಅಲ್ಲ ನೈಜ ಸ್ಥಿತಿಯಲ್ಲಿಯೇ ಬಿಟ್ಟುಹೋದ. ಅದೇ ರೀತಿ ವೈರಾಗಿ ಪ್ರಭುವನ್ನು ನಿನ್ನ ಮಗ ಎಂಬ ಭಾವನೆಯಿಂದ ಮಾತ್ರ ನೀನು ನೋಡುತ್ತಿದ್ದಿಯಾ, ಆ ಭ್ರಾಂತಿಯನ್ನು ಬಿಟ್ಟುಬಿಡು, ಸೂರ್ಯ ಪೂರ್ವದಿಕ್ಕಿನಲ್ಲಿ ಹುಟ್ಟಿದ ಮಾತ್ರಕ್ಕೆ ಆ ದಿಕ್ಕಿನ ಮಗನಾಗಬಲ್ಲನೆ? ಲೋಕವನ್ನು ಬೆಳಗುವುದಕ್ಕೆ ನೆಪಮಾತ್ರ. ತಂದೆ - ತಾಯಿಗಳ ಮಗ' ಆದರೆ ಆತನ ಕೆಲಸ ವಿಸ್ತಾರ, ಮನೆಯನ್ನು ಬಿಟ್ಟು ಹೊರಹೋದ ಮೇಲೆ ತಂದೆ - ತಾಯಿಗಳನ್ನು ಸಂತೈಸುವ ತಿಪ್ಪೇರುದ್ರ ಸ್ವಾಮಿಯವರ ಕ್ರಮ ಇದಾಗಿದೆ. ಮುಂದೆ ಬನವಾಸಿಯಲ್ಲಿ ಮಾಯೆಯು ಅಲ್ಲಮಪ್ರಭುವಿನ ತಮ್ಮ ಅಂತಃಪುರದಲ್ಲಿ ಬರಮಾಡಿಕೊಂಡಿದ್ದು ಮತ್ತು ಕೌಶಿಕ ಅಕ್ಕಮಹಾದೇವಿಯನ್ನು ಇರಿಸಿಕೊಂಡದ್ದು ಇವೆರಡನ್ನು ಹೋಲಿಸಿ ನೋಡಿದಾಗ, ಮಾಯೆಯ ರೀತಿ ಜಗತ್ತಿನ ಪ್ರವೃತ್ತಿ ಮಾರ್ಗವನ್ನು ಸೂಚಿಸಿದರೆ, ಎರಡನೆಯದಾದ ಅಕ್ಕಮಹಾದೇವಿಯ ರೀತಿ ನಿವೃತ್ತಿ ಮಾರ್ಗವೆಂದು ಸೂಚಿಸುವಂತಿದೆ. ಮಾಯೆ ಶಿವನನ್ನು ಪತಿಯನ್ನಾಗಿ ಪಡೆಯಲು ತಪಸ್ಸು ಮಾಡಿದಂತೆ,

ಅಕ್ಕಮಹಾದೇವಿ ಹರನೆ ಗಂಡನಾಗಬೇಕೆಂದು ಬಯಸಿದ್ದಳು, ಬಯಸುವಿಕೆಯಲ್ಲಿ ಒಂದು ತಾಮಸದಿಂದ ಕೂಡಿದುದು, ಇನ್ನೊಂದು ಸಾತ್ವಿಕದಿಂದ ಕೂಡಿದುದು. ಪ್ರಭುವಿನ ಬಗ್ಗೆ ಹರಿಹರನು ಹೇಳಿದ ಚಿತ್ರಣ ಸಾಂಕೇತಿಕವಾಗಿದೆ. ಧ್ವನಿಪೂರ್ಣವಾಗಿದೆಯೆಂದು ವೃಷಬೇಂದ್ರಸ್ವಾಮಿಯವರು ಹೇಳಿದ್ದು ಅರ್ಥಪೂರ್ಣ. ರಗಳೆಯ ಬಗೆಗೆ ಸಮಕಾಲೀನ ವಿಮರ್ಶಕರ ಅಭಿಪ್ರಾಯಗಳನ್ನೆಲ್ಲಾ ತೂಗಿ ತಮ್ಮ ವಿಚಾರಗಳನ್ನು ಮಂಡಿಸಿರುವುದು ಇಲ್ಲಿಯ ವಿಶೇಷ. ಹರಿಹರ, ರಾಘವಾಂಕರು ಪ್ರಸಿದ್ಧವಾಗಿರುವ ಪ್ರಭು ವಚನಗಳನ್ನು ಸಮಗ್ರವಾಗಿ ಕಂಡಿರಲಕ್ಕಿಲ್ಲವೆಂಬುದು ಗಣನೀಯ. ಇದರ ಬಗ್ಗೆ ಇನ್ನೂ ಸಂಶೋಧನೆಯ ಅಗತ್ಯವಿದೆ, ಶಿವಾದ್ವೈತ ತತ್ವರೂಪ ಪ್ರಭುದೇವ, ಬಸವಣ್ಣ, ಚನ್ನಬಸವಣ್ಣ ಮುಂತಾದ ಶರಣರೆಲ್ಲಾ ಈ ತತ್ವದ ಪ್ರತಿಪಾದಕರು. ಈ ಶಿವಾದ್ವೈತದ ಪರಂಪರೆಗೆ ಅಲ್ಲಮನೆ ಮೂಲ. ಆತನೆ ಈ ಧರ್ಮ ಪ್ರತಿಪಾದಕ, ಆಚಾರತ್ರಯರು ದ್ವೈತ - ಅದ್ವೈತ - ದ್ವೈತವನ್ನು ಪ್ರತಿಪಾದಿಸಿದಂತೆ ಪ್ರಭು ಶಿವಾದ್ವೈತವನ್ನು ಹೇಳಿದ್ದಾನೆ. ಪ್ರಭು ಕಾಲಕ್ಕಿಂತಲೂ ಮೊದಲು ಈ ದರ್ಶನ ಪ್ರಚಲಿತವಿದೆಯೆಂದು ಹೇಳಲಿಕ್ಕೆ ಆಧಾರವಿಲ್ಲ. ಚತುರಾಚಾರ್ಯರ ಪುರಾಣದಲ್ಲಿ ದ್ವಂದ್ವಾರ್ಥವಿದೆ. ಆ ನಾಲ್ಕು ಜನ ಆಚಾರ್ಯರು ಮೂಲತ: ಶೈವರಾದರೂ ಕೊನೆಯದಾಗಿ ಕಾಶೀ ಇದನ್ನು ಇತ್ತೀಚೆಗೆ ಸೇರಿಸಿರಬಹುದೇ ಎಂದು ಸಂದೇಹ ಬರಬಹುದು. ಆದರೂ ಕೂಡಾ ಈ ಐದು ಜನ ಆಚಾರ್ಯರು ಶೈವರೇ ಅನ್ನಲಿಕ್ಕೆ ಆಧಾರಗಳು ಇದ್ದಷ್ಟು ವೀರಶೈವ ಅನ್ನಲಿಕ್ಕೆ ಆಧಾರಗಳಿಲ್ಲ. ಕೆಲವು ಆಧಾರಗಳಿದ್ದರೂ ಸಹಿತ ಉದ್ದೇಶ ಪೂರ್ವಕವಾಗಿ ವೀರಶೈವ ಎಂದು ಹೇಳುವ ಹಾಗೆ ಕಂಡುಬರುತ್ತದೆ. (ತಿದ್ದುಪಡಿಯಾದ ರೀತಿಯಲ್ಲಿ) ೧೨ನೇ ಶತಮಾನದ ಕನ್ನಡ ನಾಡಿನಲ್ಲಿ ಮೂಡಿದ ಈ ದಿವ್ಯಜ್ಯೋತಿ ಶತಶತ ಮಾನಗಳ ಭಾರತೀಯ, ತತ್ವ, ದರ್ಶನ, ಯೋಗ ಸಾಧನೆಯ ಪ್ರಗತಿಪರ (ಏಣಿಯ) ಬಹು ಎತ್ತರದ ಮೆಟ್ಟಲಿನಮೇಲೆ ಬೆಳಗುತ್ತಿದೆ. ಸಿಂಧೂ ಸಂಸ್ಕೃತಿ ಕಂಡ ಶಿವೋಪಾಸನೆ, ವೇದ ಋಷಿಗಳು ಕಂಡ ಪ್ರಕೃತಿ ಶಕ್ತಿಗಳ ಉಪಾಸನೆ ಉಪನಿಷತ್ತಿನ ದೃಷ್ಟಾರರು ಸಂದರ್ಶಿಸಿದ ಪರಬ್ರಹ್ಮತತ್ವ ಹಾಗೂ ಸಾಕ್ಷಾತ್ಕಾರಗಳನ್ನು ಪ್ರಭು ಅಂತರಂಗದಲ್ಲಿ ಮೈಗೂಡಿಸಿಕೊಂಡಿದ್ದಾನೆ. ಅಲ್ಲಮ ಪ್ರಭುದೇವ ವೈದಿಕ ಸಿದ್ಧಾಂತದ ಚಾತುರ್ವರ್ಣ ವ್ಯವಸ್ಥೆ ಚತುರ್ವಿಧ ಪುರುಶಾರ್ಥ ಸಾಧನೆ, ಯಜ್ಞಯಾಗಗಳ ನಿರ್ವಹಣೆ, 'ಏಕಂ ಸತ್ ವಿಪ್ರಾಹ ಬಹುಧಾವದಂತಿ' ಎಂಬ ಸತ್ಯವನ್ನು ಭಿತ್ತರಿಸುವ ವೈದಿಕ ಮಾರ್ಗವನ್ನು ದಾಟಿ, ಉಪನಿಷತ್ತಿನ ದೃಷ್ಟಾರರು ದೀರ ವೈಚಾರಿಕರಾಗಿ, ಧ್ಯಾನಶೀಲರಾಗಿ, ವಿಶ್ವದ ಚರಾಚರಗಳಲ್ಲಿ ತುಂಬಿ ತಾನೇ ತಾನಾಗಿರುವ ಪರಬ್ರಹ್ಮಶಕ್ತಿಯನ್ನು ದರ್ಶಿಸಿದರು. ಈ ಸತ್ಯವನ್ನು ತನ್ನ ಅಂತರಂಗದಲ್ಲೆ ಕಂಡುಕೊಂಡು, ವಿಶ್ವರೊಡನೆ ಒಂದಾಗಿ ಬಾಳುವ ಜೀವನ ದರ್ಶನವನ್ನು ಅಳವಡಿಸಿಕೊಂಡಾತ ಈ ಪ್ರಭು. ಉಪನಿಷತ್ತುಗಳು ತೋರಿಸಿದ ಹಲವಾರು ವೈಚಾರಿಕ ದೃಷ್ಟಿಕೋನ ಹಾಗೂ ಭಕ್ತಿ, ವೈರಾಗ್ಯ, ಸಮನ್ವಯಭಾವ ಪ್ರಭುದೇವನ ಅನುಭಾವ ದರ್ಶನದ ಹಿನ್ನಲೆಯಾಗಿದೆ. ಭಾರತೀಯ ತತ್ವಜ್ಞಾನದ ವೈಶಿಷ್ಟ್ಯ ಹಾಗೂ ಸರ್ವಸಾಮಾನ್ಯ ತತ್ವವಾದ 'ಮಾಯೆ'ಯ ಇರುವಿಕೆ ಹಾಗೂ ತೋರುವಿಕೆ ವಿದ್ಯೆ - ಅವಿದ್ಯೆಗಳ ತಲಸ್ಪರ್ಶಿಯ ವಿಚಾರ, ಪ್ರಭುವಿನ ಸೂಕ್ಷ್ಮದರ್ಶನಕ್ಕೆ ಮಾನ್ಯತೆಯನ್ನು ತಂದುಕೊಟ್ಟಿದೆ. ಪರಮ ವೈಚಾರಿಕ ಹಾಗೂ ಶ್ರೇಷ್ಠ ತತ್ವಜ್ಞಾನದ ಶಂಕರಾಚಾರ್ಯರ 'ಬ್ರಹ್ಮಸತ್ಯಂ ಜಗನ್ ಮಿಥ್ಯೆ ಜೀವೋ ಬ್ರಹ್ಮಾವ ನಾ ಪರಾ:' ಎಂಬ ತತ್ವವಾದವನ್ನು, ತರ್ಕವನ್ನು ವಿಶ್ಲೇಷಣಾತ್ಮಕ ಹಾಗು ವಿಮರ್ಶಾತ್ಮಕ ಬುದ್ಧಿ ಮತ್ತೆಯನ್ನು, ಪ್ರಭುದೇವ ತನ್ನ ಅರಿವು ಅನುಭಾವಗಳ ಅಭಿವ್ಯಕ್ತಿಯಲ್ಲಿ ಪಡಿಮೂಡಿಸಿದ್ದಾನೆ. 'ಅದ್ವೈತದರ್ಶನ' ಪ್ರಭುದೇವನ 'ಶಿವಾದ್ವೈತ ದರ್ಶನದ'

ತಾಯಿಬೇರು. ಪರಿಶುದ್ಧ ಜೀವನ ದರ್ಶನ, ಅಹಿಂಸೆ ಹಾಗೂ ಪರಹಿತ ಸಾಧನೆಯ ಮಾರ್ಗ, ತೃಪ್ತಿ ಪಡಿಸಲಾಗದ ಇಂದ್ರಿಯಬಂಧನದಿಂದ ಮುಕ್ತಿ ಪಡೆಯಲು ಅನುಸರಿಸಬೇಕಾದ ಸರ್ವಸಂಗ ಪರಿತ್ಯಾಗ, ಜೀವ - ಜಗತ್ತು - ಬ್ರಹ್ಮಗಳಿಗಿರುವ ಸಂಬಂಧ - ಇವು ಸುಲಭವಾಗಿ ಅರಿವಿಗೆ ಅಳವಡಿಸಿದ್ದರಿಂದ, ಅವೆಲ್ಲಾ ಮಾಯೆ ಅಥವಾ ಇಲ್ಲವೆಂಬ ಮಾಯಾ ವಾದವನ್ನು, ಬ್ರಹ್ಮವೂ ಸತ್ಯ ಜಗತ್ತು ಸತ್ಯ. ಶೂನ್ಯಸಂಪಾದನೆಯೇ ಜೀವ ಹಾಗೂ ಜಗತ್ತಿನ ಗುರಿ - ಎಂಬ ಅನುಭಾವ ಸತ್ಯವನ್ನು ಕಂಡು ಬಾಳಿದ ಶರಣ ಅಲ್ಲಮ ಪ್ರಭುದೇವ. ಅದ್ವೈತ, ದ್ವೈತ, ವಿಶಿಷ್ಟಾದ್ವೈತ ತತ್ವಗಳ ವೈಚಾರಿಕತೆಯನ್ನು ತನ್ನ ಶಿವಾದ್ವೈತದಲ್ಲಿ ಅಳವಡಿಸಿಕೊಂಡ ದಾರ್ಶನಿಕ ಪ್ರಭುದೇವ, ಬೌದ್ಧ ಮತ್ತು ಜೈನಧರ್ಮಗಳ ಕ್ರಾಂತಿ ವಿಚಾರಗಳು ಪರಿಶುದ್ಧ ಜೀವನ ತ್ಯಾಗ, ಸನ್ಯಾಸ, ಕಷ್ಟ ಸಹಿಷ್ಣತೆಗಳಿಂದಲೇ ನಿರ್ವಾಣ ಸಾಧ್ಯವೆಂಬ ಸಿದ್ಧಾಂತಗಳು ಪ್ರಭುವಿನ ದರ್ಶನವನ್ನು ಕುದಿರಿಸಿವೆ. ಜೈಮುನಿ - ಶಬರ ಮುನಿಗಳ 'ಮೀಮಾಂಸಾ ದರ್ಶನ', ಕಣಾದ ಮುನಿಯ ಅಣು - ಪರಿಮಾಣು - ಜೀವ - ಜಡ ವಿವರಣೆಯ 'ವೈಶೇಷಿಕ ದರ್ಶನ' ಗೌತಮ ವಾತ್ಸಾಯನರ ಪದಾರ್ಥಗಳ ತತ್ವಜ್ಞಾನವೇ ಮುಕ್ತಿ ಸಾಧನ', ದುಃಖ ವಿಮುಕ್ತಿಯೇ ಮೋಕ್ಷ ಎಂಬ 'ನ್ಯಾಯ ದರ್ಶನದ' ತರ್ಕ - ವೈಚಾರಿಕತೆ 'ಪ್ರಕೃತಿ - ಪುರುಷ ಸಂಬಂಧ, ಗಣತ್ರಯಬಾಧಿತ ಜೀವ - ಗುಣತ್ರಯಾತೀತ ಪುರುಷ ದರ್ಶನ'ವನ್ನು ಸ್ಥಾಪಿಸುವ ಕಪಿಲ ಮಹರ್ಷಿಯ 'ಸಾಂಖ್ಯದರ್ಶನ' ಚಿತ್ತಾ ವೃತ್ತಿ ನಿರೋಧವಾದ ಯೋಗ ಸಾಧನೆ, ಕೊನೆಯಲ್ಲಿ ಅಂತ:ಸಾಕ್ಷರವಾದ ಜ್ಯೋತಿದರ್ಶನ''ದ ಸಿದ್ಧಾಂತವನ್ನು ವಿವರಿಸುವ ಪತಂಜಲಿಪ್ರಣಿತ 'ಯೋಗದರ್ಶನ' ''ಬ್ರಹ್ಮತತ್ವ ಸ್ವರೂಪ ಜಡ - ಚೇತನಗಳ ಉತ್ಪತ್ತಿಯ ಆಸ್ತಿಕ್ಯವಾದ''ವನ್ನು ಬಿಂಬಿಸುವ ವೇದವ್ಯಾಸರ 'ವೇದಾಂತದರ್ಶನಗಳು, ಪ್ರಭುದೇವನ ಆಧ್ಯಾತ್ಮಿಕ ನಿಲುಮೆ ಹಾಗೂ ಅನುಭಾವದ ಔನ್ನತ್ಯಗಳಲ್ಲಿ ಅಂತರ್ಗತವಾಗಿವೆ. ಆಗಮಗಳ ಶುದ್ಧ ಭಕ್ತಿ, ಭಾವ, ನಿರ್ಭರವಾದ ಉಪಾಸನೆ, ಕರ್ಮಮಾರ್ಗದ ಖಂಡನೆ ಧ್ಯಾನ, ಭಜನೆ, ಸ್ತ್ರೋತ್ರಗಳ, ವಿನೀತಮಾರ್ಗ, ಸೃಷ್ಟಿ - ಸ್ಥಿತಿ, ಸಂಹಾರ, ತಿರೋಧಾನ ಅನುಗ್ರಹವೆಂಬ ಪಂಚಕೃತಿಗಳಿಗೆ ಕರ್ತನಾದ ಈಶ್ವರನ ಸಾಕ್ಷಾತ್ಕಾರವೇ ಮೋಕ್ಷವೆಂಬ ಆಗಮಸಿದ್ಧಾಂತ' ಮತ್ತು 'ಶುದ್ಧಭಕ್ತಿಯೇ ಶಿವಸಾಯುಜ್ಯದ ದಿವ್ಯಮಾರ್ಗವೆಂಬ ತಮಿಳು ದೇಶದ ಪುರಾತನರ ನಡೆ - ನುಡಿಗಳು, ಅಲ್ಲಮ ಪ್ರಭುದೇವನ ಜೀವನ ದರ್ಶನಕ್ಕೆ ಹಿನ್ನೆಲೆಯಾಗಿದೆ. ಈ ಎಲ್ಲ ಆಧ್ಯಾತ್ಮಿಕ ಸಂಪತ್ತು, ತತ್ವಸಿದ್ಧಾಂತದ ಸಂಪದ, ಭಕ್ತಿ - ಉಪಾಸನೆಯ ಸಂಪತ್ತನ್ನು ಅರಗಿಸಿಕೊಂಡು ಮೇಲೇರಿ, ತನ್ನದೇ ಆದ 'ಶೂನ್ಯ'ದ ನಿಲುವನ್ನು ಅನುಭಾವದಿಂದ ಸಂಪಾದಿಸುವ ವಿಶ್ವದರ್ಶನ ಪ್ರಭು ದೇವನದಾಗಿದೆ. ಈ ವಿಶ್ವವೇದಾಂತಿಯ 'ದೇವಮಾನವ ಅನುಭಾವ' ಹಾಗೂ 'ಆಧ್ಯಾತ್ಮ ಸಿದ್ಧಾಂತ' ಕನ್ನಡದ ವಚನರೂಪದಲ್ಲಿ ಹೊರಹೊಮ್ಮಿದೆ. ತದನಂತರದಲ್ಲಿ ಅಲ್ಲಮ ಶಬ್ದ ವಿಷಯವನ್ನು ಇದರ ಶಬ್ದ ಹರಿಹರ ದೇವನ ಪ್ರಭು ರಗಳೆಯಲ್ಲಿ 'ಅಲ್ಲಮ ಅಲ್ಲಮಯ್ಯ' 'ಅಲ್ಲಮದೇವ' ಎಂದು ಪ್ರಯೋಗಗಳು ಬಂದಿವೆ.




ಅಲ್ಲಮ ಶಬ್ದ ಮೂಲಧಾತು 'ಅಲ್' ಅದರಿಂದ 'ಅಲ್ಲ' ನಿಷ್ಪನ್ನವಾದಂತಿದೆ. ಅಥರ್ವಣ ವೇದದಲ್ಲಿಯೇ ಈ 'ಅಲ್ಲ' ಎಂಬ ಪದವಿದೆ. ಅಲ್ಲಿ ಇಲ್ಲ' ಇಲ್ಲ, ಇಲ್ಲಲ್ಲಾ, ಇಲ್ಲಾಲಾ, ಮುಂತಾಗಿ

ಕಾಣುತ್ತದೆ.[೯] ಇದು ಅನಾರ್ಯರ ಪರಮೇಶ್ವರನ ಹೆಸರು ಎಂದು ತಿಳಿಸಲಾಗಿದೆ. ಅಲ್ಲಮಾ: ಎಂಬ ಹಠಯೋಗ ಪ್ರದೀಪಿಕೆಯ ಪ್ರಯೋಗ ವಿಚಿತ್ರವಾಗಿದೆ. 'ಸಿದ್ಧಾಂತ ಕೌಮುದಿಕಾರನು 'ಅಲ' ಭೂಷಣಪರ್ಯಾದ್ರೀ ವಾರಣೇಸ ಅಲತಿ, ಅಲ - ಅಲ್ (ಉಭಯಪದ) = ಅಲಂಕರಣೆ, 'ಅಲಂಕರಿಸು' ಎಂಬ ಅರ್ಥ ಸೂಚಿಸಿದ್ದಾನೆ. ಚನ್ನವೀರಕವಿ ಕಾಕಕೃತ್ಸ್ನ ಧಾತು ಪಾಠದಲ್ಲಿ

೧. ಅಲಃ (ಉಭಯಪದ) ಭೂಷಣ ಪರ್ಯಾಪ್ತಿ ವಾರಣೇಷು ತುಡಿಗೆಯಾಳುಂ ಇಂಬಿನೊಳಂ

೨. ಅಲ್ಲಾ - ಬಂಧನೆ, ಪಾಲನೇಚ; ಅಲ್ಲತೀತಿ ಅಲ್ಲಾಪನೆಂಬುದು; ಅಲ್ಲ = ಆಳದಂ; ಅಲ್ಲಾ = ಪಡತಿ

೩. ಅಲ್ಲಾತೀತ ಅಲ್ಲದೆಪನೆಂಬುದು, ಅಲ್ಲಾ = ಶಿವಂ, ಅಲ್ಲಾ = ಶಿವೆ

ಅಲ್ಲಂ ಶುಂಠಿ, ಹೀಗೆ ಅಲ್ - ಅಲ - ಅಲ್ಲ ಎಂಬ ಶಬ್ದದ ಮೂಲ ದ್ರಾವಿಡವಾಗಿದ್ದು ಸಂಸ್ಕೃತಭಾಷೆಗೆ ಪ್ರವೇಶಿಸಿ ರೂಪಾಂತರಹೊಂದಿದಂತೆ ಕಂಡುಬರುತ್ತದೆ. 'ಅಲ್ 'ದಿಂದ ಮೂಡಿದ ಶಬ್ದಗಳು ಶಿವಾ, ದೇವತೆ, ಮಾತೃ ಮುಂತಾದ ಅರ್ಥ ನೀಡುತ್ತದೆ. ಆದರೂ ಅಲ್ಲ್ ಎಂಬ ಪದ ನಿಷ್ಪತ್ತಿ ಇಂದಿಗೂ ದೊಡ್ಡ, ಸಾಮಾನ್ಯ ಎಂದಿದ್ದಾರೆ. ಡಾ. ಎಂ. ಚಿದಾನಂದಮೂರ್ತಿ. ಅಲ್ಲಮನೆಂಬುದು ಕನ್ನಡವಲ್ಲ, ಅರಬ್ಬಿಯಲ್ಲ, ಸಂಸ್ಕೃತವಿರಲಿ, ಇರದಿರಲಿ, ಯೋಗ ಮತಾಚಾರಿಗಳಾದ ಶೈವ ಪರಂಪರೆಯೊಳಗಿನದು ಇಷ್ಟು ಮಾತ್ರ ನಿಜ. ಕೇಶಿರಾಜನ ಶಬ್ದಮಣಿ ದರ್ಪಣದ 'ಪೆರತಂದೊನಂಡ ಬಗೆಯಲ್ ಬನದಲ್ಲಿ ಪೂಗಲ್ ಪೂಗಲ್ ಎಂಬ ಗಂಡು ಕೋಗಿಲೆ' ಎಂಬಲ್ಲಿ ಅಲ್ಲ ಎಂಬುದು ನಿಷೇಧಾರ್ತಕ ಪ್ರತ್ಯಯವನ್ನು ಸೂಚಿಸಿದ್ದಾನೆ.[೧೦] ಅದರಲ್ಲಿ ಭಾಷೆಯ ಪವಿತ್ರ ಕುರಾನ್ ಗ್ರಂಥದಲ್ಲಿ 'ಅಲ್ಲಾ' ಎಂಬ ಶಬ್ದ 'ಪರಿಪೂರ್ಣತೆಯ ಸರ್ವ ಗುಣಗಳನ್ನು ಗರ್ಭೀಕರಿಸಿಕೊಂಡು ತನ್ನಿಂದ ತಾನೆ ಅಗತ್ಯವಾಗಿ ಅಸ್ತಿತ್ವ ಹೊಂದಿರುವ ವಸ್ತುವಿಗೆ ಹೇಳಲ್ಪಡುವದು.

ನಾಮ ಕರಣಂ ಜಗಕಲ್ಲಯ್ಯನೆಂದಾಗೆ|
ಭೂಮಿಯೊಳು ನಿರ್ಮಾಯಯೆಂಬ ಪೆಸರಾತಂಗೆ|| [೧೧]

ಇದು ಹರಿಹರನ ಯುಕ್ತಿ

ಬಲ್ಲಡಿ ಶಿಶುವೇತರೊಳಗಿಹ
ನಲ್ಲ ಹೊರಗಿಹನಲ್ಲ ಭಾವಿಸ
ಅಲ್ಲದಿರು ಲೇಹನಲ್ಲವೆನುತ ತಂದೆ ತಾಯಿಗಳ
ಎಲ್ಲ ಜಾಡ್ಯದ ಜಂಜಂಡಂಗಳ
ನಲ್ಲ ನೆನಿಸುವ ಬಾಲಕನಿಗೆ ಬಳಿ
ಕಲ್ಲಮ ಪ್ರಭುದೇವರ ಹೆಸರಲ್ ಕೊಟ್ಟರರ್ತಿಯಲಿ[೧೨]

ಹೀಗೆ ನಾನಾ ರೀತಿಯಿಂದ ಅಲ್ಲಮ - ಅಲ್ ಶಬ್ದಗಳ ಅರ್ಥವನ್ನು ಬಹಳ ರೀತಿಯಲ್ಲಿ ಪ್ರಯತ್ನಿಸಿದ್ದಾರೆ. ಅಲ್ಲಮಶಬ್ದದ ಅರ್ಥವನ್ನು ಇಲ್ಲಿಯವರೆಗೆ ನೋಡಲಾಯಿತು.

ಶರಣರ ದೃಷ್ಟಿಯಲ್ಲಿ ಪ್ರಭುವಿನ ಸ್ಥಾನಮಾನದ ಬಗ್ಗೆ ಒಂದಿಷ್ಟು ವಿವರಣೆಯನ್ನು ಕೊಡಲಾಗಿದೆ.

**ಬಸವಣ್ಣನ ದೃಷ್ಟಿಯಲ್ಲಿ ಅಲ್ಲಮಪ್ರಭು**

ಅಲ ಪವಾಡವ ಮರೆದು ಹಗರಣದ ಚೋಹದಂತಾಯಿತೆನ್ನ ಭಕ್ತಿ! ತನುವಿನೊಳಗೆ ಮನ:ಸಿಲುಕದೇ ತನು ಅಲ್ಲಮನಲ್ಲಿ ಸಿಲುಕ್ಕಿತ್ತು, ಮನ ಚನ್ನಬಸವಣ್ಣನಲ್ಲಿ ಸಿಲುಕಿತ್ತು. ನಾನೇತರದಲ್ಲಿ ನೆನೆವೆ ಕೂಡಲಸಂಗಮದೇವಾ

ಕೂಡಲ ಸಂಗಮದೇವರ ಸಾಕ್ಷಿಯಾಗಿ ಪ್ರಭುವೆನ್ನ ಮನೆಗೆ ಬಂದರೆ ಎನ್ನ ಬಯಕೆ ಕೈಸಾರಿ ಚನ್ನಬಸವಣ್ಣನ ಕರುಣದ ಕಂದನಾಗಿ ಉಳಿದೆನು .....

ಮನದೊಡೆಯ ಮನೆಗೆ ಬಂದರೆ ..... ಕೂಡಲ ಸಂಗಮದೇವಾ ನಿಮ್ಮ ಶರಣ ಪ್ರಭುದೇವರು ಬಂದರು ಉಬ್ಬಿ, ಕೊಬ್ಬಿ ನಲಿದಾಡುವರು. ಈ ಅಲ್ಲಮಪ್ರಭು ಇತರ ದೃಷ್ಟಿಯಲ್ಲಿ ಭಕ್ತಿಯ ರತ್ನಕ ಪರೀಕ್ಷಕ, ಅರಿವು ಕರಿಗೊಂಡ ನಿಜಸನ್ಯಾಸಿ ಶೂನ್ಯ ಸಂಪಾದನೆಯ ನಿಲುವನ್ನು ಪ್ರಥಮವಾಗಿ ಪ್ರಚುರಪಡಿಸಿದವನು ಈತನೇ. ಆತ ಅನುಭಾವಿ ಮಹಾನುಭಾವಿ.

**ಇನ್ನು ಚೆನ್ನಬಸವಣ್ಣನವರ ದೃಷ್ಟಿಯಲ್ಲಿ**

ಆದಿಗಣನಾಥನು ಅಲ್ಲಮಪ್ರಭುವೆಂಬ ನಾಮಧರಿಸಿ ನಿನ್ನನರಿಸಿಕೊಂಡು ಬರುತ್ತಾ ಇದ್ದಾನೆ. ಹೊನ್ನಿಂಗೆ ಬಂದಾತನಲ್ಲ, ಹೆಣ್ಣಿಂಗೆ ಬಂದಾತನಲ್ಲ, ಮಣ್ಣಿಂಗೆ ಬಂದಾತನಲ್ಲ, ಅಸನಕ್ಕೆ ಬಂದಾತನಲ್ಲ, ವ್ಯಸನಕ್ಕೆ ಬಂದಾತನಲ್ಲ, ಕೂಡಲಚನ್ನ ಸಂಗಯ್ಯ ಭಕ್ತಿ ತೋರಬಂದನಯ್ಯ ಪ್ರಭುದೇವರು. ಹಾಗೆ ಇವನ ದೃಷ್ಟಿಯಲ್ಲಿ ಪ್ರಭು ಭಕ್ತಿ ಮಾರ್ಗದ ನಿರ್ದೇಶಕನಾಗಿ ಕಾಣಿಸಿಕೊಂಡಿದ್ದಾನೆ.

**ಅಕ್ಕಮಹಾದೇವಿಯ ದೃಷ್ಟಿಯಲ್ಲಿ**

ತನುವನೆಲ್ಲವ ಜರೆದು, ಮನ ನಿಮ್ಮೊಳಗಿರಿಸಿ ಧನಸುಖವ ಲೋಲಾಡುವ ಪರಿಯ ತೋರಯ್ಯ ಎನಗೆ, ಭಾವವಿಲ್ಲದ ಬಯಲ ಸುಖವು ಭಾವಿಸಿದಡೆ ಯಂತಹದು ಬಹು ಮುಖರುಗಳಿಗೆ? ಕೇಳಯ್ಯ ಶ್ರೀಶೈಲ ಚನ್ನಮಲ್ಲಿಕಾರ್ಜುನ ನಾನಳಿದು ಪರಿಯತೋರಯ್ಯ ಪ್ರಭುವೆ.

ಲಿಂಗಾಂಗ ಸಂಗ ಸಮರಸ ಸುಖದಲ್ಲಿ ಮನಃವೆದ್ಯಾವಾಯಿತು ನಿಮ್ಮ ಶರಣರ ಅನುಭಾವ ಸಂಗದಿಂದ ..... ಶುದ್ಧ - ಸಿದ್ಧ - ಪ್ರಸಿದ್ಧ ಪ್ರಸಾದಿಯಾದೆನು. ಸರ್ವಾಚಾರ ಸಂಪತ್ತು ಎನ್ನ ತನು - ಮನ - ವೇದ್ಯವಾಯಿತು. ನಾನು ನಿಜವನ್ನೈದುವ ಠಾವ ಹೇಳಾ ಚನ್ನಮಲ್ಲಿಕಾರ್ಜುನ ಪ್ರಭುವೆ?

ಆಧ್ಯಾತ್ಮಿಕ ಬದುಕಿಗೆ ಮಾರ್ಗದರ್ಶಕನಾಗಿದ್ದಾನೆ.

**ಸಿದ್ಧರಾಮರ ದೃಷ್ಟಿಯಲ್ಲಿ**

ಚನ್ನ ಬಸವಣ್ಣನ ಪದವ ಕಂಡು ಹರುಸಿತನಾದೆ ಮಾಡಿಮಾಡಿ ಸಾ ಉಪದೇಶವ ನೋಡಿ ನೋಡಿ ಸಾ ಮಹಿಮೆಯ ಇದರ ಅದ್ಭುತವೇಕೆಂದಡೆ, ಕೊಡಿ ಸಾ ಎನ್ನ ಕೈಯಲ್ಲಿ ಇಷ್ಟಲಿಂಗವ ಪರಮಪ್ರಭುವೇ ಕಪಿಲ ಸಿದ್ಧ ಮಲ್ಲಿಕಾರ್ಜುನಾ

ಪ್ರಭುವಿನ ದಯದಿಂದ ಬಂದೆನಿಲ್ಲಿಗೆ ಇಷ್ಟಲಿಂಗ ಮರ್ಮವನರಿದೆ, ಗುರು ಬಸವನ ದಯೆ ಚನ್ನಬಸವನ ಕೃಪೆ ಇದಕ್ಕೆ ಮಿಗಿಲಾಗಿ ಕಂಡು ಧನ್ಯನಾದೆ ಕಪಿಲ ಸಿದ್ಧಮಲ್ಲಿಕಾರ್ಜುನ.

ಸಿದ್ಧಯೋಗದ ಪದದಿ ಸಿದ್ಧರು ತಾವೆಂಬರು ಸಿದ್ಧಗೋರಕಸಿದ್ದ ಪ್ರಭುವಿನಿಂದ ಸಿದ್ಧವಟನು ನಿಜದ ಸಿದ್ಧವೆನಿಸಿದ್ದರಿಂದಲೇ ಸಿದ್ಧ ನಿಜನಾನಾದೇ ಯೋಗಿನಾಥಾ. ಪ್ರಭುಕರುಣಿಸಿದ, ಖಂಡಿರಿಸಿದ, ಶರಣರಲ್ಲಿ ಶಿವಯೋಗಿ ಸಿದ್ಧರಾಮನು ಅಗ್ರಗಣ್ಯನಾದನು ಆತನ ದೃಷ್ಟಿಯಲ್ಲಿ ಸಿದ್ಧರಾಮನಿಗೆ ದೀಕ್ಷೆಯನ್ನು ಕೊಡಿಸಿದಾತ ಪ್ರಭು ಗುರುವಿನ ಗುರು ಪರಮ ಗುರುವಾಗಿದ್ದಾನೆ.

**ಮುಕ್ತಾಯಿ ದೃಷ್ಟಿಯಲ್ಲಿ**

ಮಹಾವನೊಡಗೂಡಿದ ಎನ್ನ ಅಜಗಣ್ಣನಗಲಿದ ದುಃಖ ನಿಮ್ಮ ಸಂಗದಲ್ಲಿ ನಿಯವಾಗಿತ್ತು ಕಾಣಾ ಪ್ರಭುವೆ, ಭಾರತೀಯ ಆಧ್ಯಾತ್ಮ ಸಾಹಿತ್ಯದಲ್ಲಿಯೇ ಒಂದು ಚಿರಸ್ಮರಣೀಯ ಸನ್ನಿವೇಶವಿದು. ಉಪನಿಷತ್ತಿನ ಪ್ರಸಂಗಗಳಾದ ಗಾರ್ಗಿ, ಮೈತ್ರೇಯರ ಸ್ಥಾನ ೧೨ನೇ ಶತಮಾನದಲ್ಲಿ ಮುಕ್ತಾಯಿಗೆ ಸಲ್ಲುತ್ತದೆ. ಶರಣರ ವಚನಗಳು ಕನ್ನಡ ಉಪನಿಷತ್ತುಗಳಾಗಿವೆ. ಅಜಗಣ್ಣನ ಅದ್ವೈತ ವಿಲಾಸದ ಪರಶಿವನ ಮುಗ್ಧ ಸೌಂದರ್ಯವನ್ನು ಕಂಡ ಮುಕ್ತಾಯಕ್ಕನಿಗೆ ಅಲ್ಲಮ ಪ್ರಭುವಿನ ಅದ್ವೈತ ವಾಗಾದ್ವೈತವಾಗಿ ತೋರುತ್ತದೆ. ಇದರಂತೆ ಇನ್ನೂ ಹಲವಾರು ಶರಣರಲ್ಲಿ ಹಾಗೂ ಕರಣೆಯರಲ್ಲಿ ಪ್ರಭುವಿನ ಬಗ್ಗೆ ಅನೇಕಾನೇಕ ವಚನಗಳು ಸಿಗುತ್ತವೆ. ಅವೆಲ್ಲವನ್ನು ತೆಗೆದುಕೊಳ್ಳುವದು ಪ್ರಸ್ತುತವಲ್ಲದ್ದರಿಂದ ಈ ಕೆಲವರ ದೃಷ್ಟಿಯಲ್ಲಿ ಪ್ರಭುವಿನ ಬಗ್ಗೆ ಓರೆ ನೋಟವನ್ನು ನೋಡಲಾಗಿದೆ.

## ಅ. ಕಾವ್ಯ ಕೃತಿಗಳಲ್ಲಿ ನಿರೂಪಿತವಾದ ದಾರ್ಶನಿಕ ಮೀಮಾಂಸೆ

ಆತ್ಮ ಜ್ಞಾನಿ ಅಲ್ಲಮ ಪ್ರಭುವಿನ ದಿವ್ಯಜೀವನದ ವಿವರ ಹಾಗೂ ಜೀವನದ ಔನ್ನತ್ಯಗಳ ಬಗ್ಗೆ ಹರಿಹರನಿಗೆ ವಿಶೇಷಾನುಭೂತಿ ಇದ್ದಂತೆ ಭಾಸವಾಗುವುದಿಲ್ಲ. ಪ್ರಭುದೇವರ ರಗಳೆಯಲ್ಲಿ ಅದಕ್ಕೆ ಕವಿಯ ವೈಯಕ್ತಿಕ ಅಭಿನಿವೇಶವು ಕಾರಣವೆಂಬಂತೆ, ಮಾಹಿತಿಯ ಅಲಭ್ಯತೆ, ಅಪ್ರಾಪ್ತತೆ, ಅಸಮರ್ಪಕತೆ, ಆಧ್ಯಾತ್ಮಿಕ ಉನ್ನತಿಯ ಅರಿವಿನ ಕೊರತೆ ಕಾರಣ. ಹರಿಹರ ರಾಘವಾಂಕರು ೧೨ನೇ ಶತಮಾನದ ಶರಣರಿಗೆ ಕಾಲದ ದೃಷ್ಟಿಯಿಂದ ಉಳಿದೆಲ್ಲಾ ಕವಿಗಳಿಗಿಂತ ಹೆಚ್ಚು ಹತ್ತಿರದಲ್ಲಿದ್ದವರು. ಕಲ್ಯಾಣದ ಕ್ರಾಂತಿಯಾದ ತಿರುಹದಲ್ಲಿಯೆ ಇವರು ಇದ್ದವರು ನಿಜ, ಆದರೆ ಇವರಿಗೆ ಕಲ್ಯಾಣದ ಸಂಬಂಧ ಏನೇನೂ ಇಲ್ಲದಿರುವದನ್ನು ಗಮನಿಸಬಹುದಾಗಿದೆ. ಆದುದರಿಂದ ತನಗೆ ದೊರೆತ ಅಲ್ಪ ಸ್ವಲ್ಪವನ್ನೇ ಆಧರಿಸಿ ಹಾಗೂ ಪ್ರಚಲಿತವಾದ ಕತೆಗಳನ್ನ ಅವಲಂಬಿಸಿ ಬರೆದಂತೆ ಕಾಣುತ್ತದೆ[೮] ಎಂಬ ತಿಪ್ಪೇರುದ್ರ ಸ್ವಾಮಿಯವರ ಅಭಿಪ್ರಾಯ ಸತ್ಯವೇ ಆಗಿದೆ.

ಕೈಲಾಸದೊಳು ಭೊಗನಿಧಿ ಹಂಪೆಯ ವಿರೂಪಾಕ್ಷ .....
ಶ್ರೀ ಗಣನಿಕಾಯದಿಂದ ಒಪ್ಪಿರ್ದು ..... ಹರುಷದಿಂದೊಲಗಂ ಗೊಟ್ಟುಕುಳ್ಳಿರೆ
"ಶರಣರೊಳಗೊಬ್ಬ ನಿರ್ಮಾಯನೆಂಬಂ ಸಂದು
ಸುರಸತಿಯೊಳಗೊಬ್ಬಳಂ ನೋಡಲಳ್ಳುಂದೆ

ಹರನವರ ನಿಕ್ಕಿಸುತಂ ದಯಾಪರದಿಂದೆ

ನೀ ವಿರ್ವರುಂ ಪೊಗಿ ವಸುಮತಿಯೊಳಗೆ ಪುಟ್ಟಿ

ಕಾವಂಗೆ ವಶವಾಗಿ ಸಕಲ ಸುಖಂ ಮುಟ್ಟಿ

ಹರುಷದಿಂದರ್ಬರುಂ ಬರ್ಪದೆಂದವಸೆದಿರ್ತ

ಹರನ ಬ್ಯಾಸನ ....."

ದೊರೆಯಿತು.[೧೪]

ಮಲ್ಲಿಕಾರ್ಜುನ ಪಂಡಿತಾರಾಧ್ಯ ಹಾಗೂ ಪಾಲ್ಕುರುಕೆ ಸೋಮನಾಥರು ತಮ್ಮ ಕೃತಿಗಳಲ್ಲಿ ಅಲ್ಲಮನ ವೃತ್ತಾಂತವನ್ನು ಸೂಚಿಸುವುದೇ ಇಲ್ಲ. ಇದು ಪೂರ್ವಜೀವನದ ನಾಟಕ ಸಂಧಿ, ಹಲವು ಟೀಕೆ, ಸಂಶಯಗಳಿಗೆ ಎಡೆಮಾಡಿದೆ. ಜಗತ್ತಿನ ಹಿತಕ್ಕಾಗಿ ಹುಟ್ಟಿದ ಕಾರಣಿಕ ಪುರುಷ ಪ್ರಭುದೇವರು ಶಾಪದಿಂದ ಹುಟ್ಟಿದ ಕಥೆಯನ್ನು ಪ್ರತಿಭಟಿಸಿದರು. ಹರಿಹರನ ಕಥೆ ಕೇವಲ ಕಲ್ಪನೆಯದ್ದು ಸಿದ್ಧರಾಮ ಅಂತಹ ವ್ಯಕ್ತಿ ಶಾಪಹತರನ್ನುದ್ಧರಿಸಲು ಬಂದವನಾದರೆ ಅಲ್ಲಮ ಪ್ರಭುದೇವನಂತಹ ವ್ಯಕ್ತಿ ಶಾಪಹತನಾಗಿ ಸುರಸುಖವನ್ನು ಅನುಭವಿಸುವದಕ್ಕಾಗಿಯೇ ಭೂಮಿಗೆ ಬಂದನೆ?

"ಅಕ್ಕಮಹಾದೇವಿ ಮತ್ತು ಕೌಶಿಕರ ಮದುವೆಯ ವಿಷಯವನ್ನು ಅನುಚಿತ ಆಧಾರ ಉತ್ಸಾಹಗಳಿಂದ ವರ್ಣಿಸಿರುವಂತೆಯೇ, ಕಾಮಲತೆಯ ಪ್ರಭುದೇವರ ಸಂಬಂಧವನ್ನು ಹರಿಹರ ಜ್ಯಾತ್ಯಾತೀತವನ್ನು ಮೀರಿ ಬೆಳೆಸಿರುವಂತೆ ತೋರುತ್ತದೆ.[೧೫]

ನೆಲನಂ ಬರಿಯೆ ಬರದೆ ಹೆಜ್ಜೆಯೊಳಗೊಂದು

ಹೊನ್ನ ಕಲಶಂ ದೊರಲತಿ ಕೌತುಕಂ ಬಟ್ಟು

ಹರಿಹರ ಶಿವಜ್ಞಾನದ ಅಂಕುರಂ ತೋರ್ಪತೆ

ಪರಮ ಮುಕ್ತಾಂಗನೆಯ ಕಳಕರುಚ ತೋರ್ಪತೆ.[೧೬]

ಅಂದರೆ ಅಲ್ಲಮಪ್ರಭು ಗುಗ್ಗಯ್ಯನ ಪ್ರಸಂಗ ಮುಕ್ತಾಯ ಹಂತದಲ್ಲಿ ನೆಲವನ್ನು ಕೆದರುತ್ತಿರುವಾಗ ಆ ಅನಿಮಿಷನ ಗದ್ದುಗೆ ಕಂಡಿದೆ. ಆಗ ಊರಿನವರೆಲ್ಲರೂ ಕೂಡಿ ಆ ದೇವಾಲಯ ಮಣ್ಣನ್ನು ಹೊರ ತೆಗೆಯಲಾಗಿರಬಹುದು. ಮುಚ್ಚಿದ ಬಾಗಿಲನ್ನು ತೆಗೆದು ಪ್ರಭು ಒಬ್ಬನೇ ಒಳಗೆ ಹೋದ. ಒಳಗಿನ ರೀತಿಯ ವಿವರಣೆಯನ್ನು ಹರಿಹರ ತನ್ನ ಪದ್ಯದಲ್ಲಿ ವಿವರಿಸಿದ್ದಾನೆ.

ಚಲಿಸದಲುಗದ ಲಿಂಗ ನಿಜಸಿದ್ಧನೊಪ್ಪಿರಲು

ಭತ್ತಿಯಿಲ್ಲಣ್ಣೆಯಿಲ್ಲದ ದೀಪ್ತಿ ಬೆಳಬೆಳಗೆ

ಕೀಲಿಸಿದ ಪದ್ಮಾಸನಂ ..... ಹೊಳೆವ ಮುಖಮಂಡಲಂ

...... ಕೇಯ್ಕ ಶಿವಲಿಂಗದೊಳ್ ನಟ್ಟನೋಟಂ .....

ಕಲ್ಪತರುವಿನ ತೆಕ್ಕೆದೊಳದಿನ ಅನುಮಿಷಯೋಗಿ

ಕಣ್ಣೊಲ್ಲೆ ಜೀವವಂ ಪಿಡಿದಿರ್ದ ನೊಳ್ಕೆಯಿಂ[೧೭]

"ಕೂಟದೊಳು ಕಣ್ಗೆ ತನುವಾದ ಬೆಡಗಿನ ಯೋಗಿ
ಮದನನಂ ವಾರ್ದಿಸಿಯೆ ಸಂದಿರ್ದ ಭವಯೋಗಿ
ಹೃದಯದೊಳು ಭಕ್ತಿಯಿಂ ತಳದಿರ್ದ ಸ್ಥಿರಯೋಗಿ" [೧೮]

ನೋಟದಿಂದೆಂಗ್ಯೆಯಲಿಕ್ಕಿದಂ ಶಿವಲಿಂಗಮಂ
ಕೂಟದಚ್ಚಳಿಯದ ಸೂವೆರನೆಶಿವಲಿಂಗಮಂ
ಲಿಂಗದೊಡೆಯನ ಕೂಡಿ ಪೊದುದಾತನ ಜೀವ
ಅಂಗ ಮಲಗಿರ್ದುದಾ ಭಕ್ತಿಯಿಂ ಬರಿ ಭಾವ [೧೯]

ಹೀಗೆ ಹರಿಹರ ಸಮಾಧಿ ಸ್ಥಿತಿಯಲ್ಲಿರುವ ಅನಿಮಿಷನ ವೃತ್ತಾಂತವನ್ನು ತನ್ನದೇ ಆದ ರೀತಿಯಲ್ಲಿ ಹೇಳಿದ್ದಾನೆ. ಆದರೆ ಇಲ್ಲಿ ಭಾವುಕತೆಯಲ್ಲಿ ತನ್ಮಯನಾದ ಹರಿಹರ ಲಿಂಗವನ್ನು ಪಡೆದುಕೊಳ್ಳುವ ಸಂದರ್ಭದಲ್ಲಿ ಗೊಂದಲಕ್ಕಿಡುಮಾಡಿದ್ದಾನೆ. ಇಷ್ಟಲಿಂಗಧರ್ಮದ ಪ್ರಕಾರ ಲಿಂಗವನ್ನು ಗುರು - ಶಿಷ್ಯನಿಗೆ ಕೊಡಬೇಕೆ ಹೊರತು ತಾನೇ ಕಿತ್ತುಕೊಳ್ಳುವದಲ್ಲ. ಗದ್ದುಗೆಯಲ್ಲಿದ್ದ ಅನಿಮಿಷನ ವೃತ್ತಾಂತ ಎಷ್ಟು ಸಹಜವಾಗಿ ಹೇಳಿದ್ದಾನೆಯೋ ಅಷ್ಟೇ ಸಹಜವಾಗಿ ದೀಕ್ಷಾ ಪ್ರಸಂಗವನ್ನು ಹೇಳ ಹೋಗಿದ್ದಾನೆ. ಆದರೆ ಹರಿಹರ ಚಾರಿತ್ರೆತೆಗೆ ಮಹತ್ವತೆಯನ್ನು ಕಡಿಮೆಮಾಡಿ ಕೇವಲ ಭಕ್ತಿಯ ಆತುರದಲ್ಲಿ ಚಾರಿತ್ರಿಕವನ್ನು ಗೌಣವಾಗಿಸಿದ್ದಾನೆ. ಅನಿಮಿಷ ಗುರು ಕಾರುಣ್ಯ ಪಡೆದ ಅಲ್ಲಮನ ಬಗ್ಗೆ 'ಪೂರಮಟ್ಟನಲ್ಲಿಮಂ ಗುಗ್ಗೆಶ್ವರಂ ಮೆಚ್ಚಿ' ಗುಗ್ಗೆಶ್ವರಾಲಯದ ಗುಹೆಯಲ್ಲಿದ್ದ ತನ್ನ ಗುರುವನ್ನು ಕಂಡು ಅನುಗ್ರಹ ಪಡೆದ ದೀವ್ಯೋನ್ಮಾದದ ನುಡಿಗಳಲ್ಲೆ ಅನೀರಿಕ್ಷಿತವಾಗಿ, ಗೋಹೇಶ್ವರ, ಗುಹೇಶ್ವರನೆಂಬ ಅಂಕಿತ ಮೂಡಿಬಂದಿದೆ.

ಶಿವನನೊಳ್ಪಂತೆಲ್ಲವಂ ನೊಳ್ಪನಲ್ಲಮಂ
ಭವನೊಳಗೆ ಇರುತೆಲ್ಲರೊಳಗಿರ್ಪನಲ್ಲಮಂ
ಎಲ್ಲಿರ್ದನಲ್ಲಿಯೇ ಸಂತೋಷಮಯ ನೋಡ
ಎಲ್ಲಿರ್ದನಲ್ಲಿ ದಿವ್ಯಕ್ಷೇತ್ರಮಯನೋಡ.[೨೦]

ಶಿವಯೋಗ ಸಿದ್ಧಿಯನ್ನು ಸಾಧಿಸಿದ ಅಲ್ಲಮಪ್ರಭುದೇವನ ಚರಿತ್ರೆಯನ್ನು ಹರಿಹರ ಕೆಲವೇ ನುಡಿಗಳಲ್ಲಿ ಬಿಂಬಿಸಿದ್ದಾನೆ. ಶಿವನೊಡನೆ ಐಕ್ಯಮಾಡಿ ನಿರ್ಮಾಯೆ ಗಣೇಶ್ವರನೆಂಬ ಹೆಸರು ಸಲ್ಲಿಸಿ ಗಣಪದವಿಯನ್ನು ಕರುಣಿಸಿದ ರೂಪಾಂತರ ಕೆಳಗಿನಂತಿದೆ.

ಶಿವನ ಸಾರುಷ್ಯದಿಂದೂರ್ಪಿರ್ದನಲ್ಲಮಂ
ಭವನ ಸುಪ್ರಭೆಯೊಳಗೆ ನಿಂದಿರ್ದನಲ್ಲಮಂ
ನಿರೂಪಾಧಿಕ ಜ್ಯೋಗಿ ಒಳಗಿರ್ದನಲ್ಲಮಂ
ಪರಮ ತತ್ವಕಾರ ನಾಗಿರ್ದ ನಲ್ಲಮಂ [೨೧]

ಇಲ್ಲಿ ಒಂದು ಮಾತಂತು ಸತ್ಯಕ್ಕೆ ಸಮೀಪವಾದುದು. ಪ್ರಭು ಅನಿಮಿಷನೊಂದಿಗೆ ಏಕವಾದುದು ಇದು ಶಿವನ ಅದ್ವೈತವನ್ನು ಸಾರುತ್ತದೆ.

ಪ್ಲೇಟೋವಿನ ಶಿಷ್ಯ ಅರಿಸ್ಟಾಟಲ್ ನಂತೆ ಹರಿಹರನ ಶಿಷ್ಯ ರಾಘವಾಂಕ. ಸಿದ್ಧರಾಮನ ಬಗ್ಗೆ ಹೇಳಿದ ಮಾತು

ಎಲ್ಲಿಯಾದರೂ ಹಾವು ತಿಂದವರಬೆಗೆಯೊಳು
ಹುಲ್ಲಾಗಿ ಮುರುಟಿ ಸತ್ತವರ ವ್ಯಾದಿಯೊಳಳಿದ
ವೆಲ್ಲರನ್ನು ಹೊತ್ತು ಹೊತ್ತೈತಂದು ಮಹಾಮುನಿಯ ಬಾಗಿಲೊಳು ಬಿಸುಟರೆನಲು
ಹುಲ್ಲು ಕಟ್ಟುವರ್ಗೆ ಕರುಣಂ ದೊರಿ ಬಾ ಎಳೆದು
ಲೊಲ್ಲೆ ಗರೆಯವರೆಗೆ ಗುರುಕರಣಿತಸುತ ..... ಇದ್ದ [೨೨]

ಈ ಸಿದ್ಧರಾಮನ ಬಗೆಗೆ ಅಲ್ಲಮ ಪ್ರಭುವಿನ ಉತ್ತರ. ಪ್ರಭು ಸಿದ್ಧರಾಮನಿಗೆ ತಿಳಿಹೇಳಿದ ಪ್ರಸಂಗ

ಲೋಹ ಸಂಗದಿ ಕಿಚ್ಚು ಬಡಿ ಹಡೆದುದೆಂಬಂತೆ
ದೇಹ ಸಂಗದೊಳಾತ್ಮ ನಾಯ ಸಂಬುವುವಂತೆ
ಬೇಹು ದೊಂದಳವಟ್ಟ ಬಳಿಕ ಬಿಡಲಾಗದೆನೆ, ನೆರೆಯವರಿಗಿತ್ತು
ಕಣ್ಣು ಹೋದಂದು ನಿನ್ನ ಲೋಕ ಸಂಗ್ರಹಕಾರ್ಯ.[೨೩]

ಸಿದ್ಧರಾಮ ಮಾಡುತ್ತಿರುವ ಜನ ಹಿತೋಪಯೋಗಿ, ಸಮಾಜಕ್ಕೆ ಅನುಕೂಲವಾದ ಕೆರೆ, ಗುಹೆ, ದೇವಾಲಯಗಳ ನಿರ್ಮಿಸುವ ಕಾರ್ಯ, ಆ ಕಾರ್ಯಕ್ಕೆ ಕೊನೆಯೆಂಬುದು ಇಲ್ಲದೆ ಜೀವನ ಪರ್ಯಂತರ ಅದನ್ನೇ ಮಾಡುತ್ತಾ ಹೋದರೆ, ಸಾಯುವವರೆಗೆ ಸಾಧನೆ ಮಾಡಿದರೆ ಕಾಯುವುದಿನ್ನಾವಾಗ ಎನ್ನುವ ಮಾತು ನೆನಪಿಗೆ ಬರುತ್ತದೆ. ಇವುಗಳ ನಿರ್ಮಾಣ ಸಾಧನೆಯೇ ಹೊರತು ಸಿದ್ಧಿ ಅಲ್ಲ. ಜೀವನದ ಪರಮೋದ್ದೇಶ ಲೋಕೋಪಕಾರ ಮಾತ್ರವಲ್ಲ. 'ನೀನಿರ್ದ್ದು ಮಿಲ್ಲೆಂಬ ಬಯಲಿನ ಭ್ರಮೆ ಬೆದರ ಬಿಸುಡು' ಎಂದರೆ ಶೂನ್ಯವನ್ನು ಸಂಪಾದಿಸುವದೆಂದು ಪ್ರಭು ಸಿದ್ಧರಾಮನಿಗೆ ಉಪದೇಶಿಸಿದನು.

ಹರಿಹರನ ಪ್ರಭುರಗಳೆಯ ಬಗ್ಗೆ ಇನ್ನು ವಿಶೇಷವಾಗಿ ದಾರ್ಶನಿಕತೆಯನ್ನು ಕಂಡಂತೆ ಮುಂದಿನ ಹರಿಹರನ ರಗಳೆಯ ಶೀರ್ಷಿಕೆಯಲ್ಲಿ ವಿವರಿಸಲಾಗಿದೆ.

ಪ್ರಭುವಿನ ಸಮಗ್ರ ಚಿತ್ರವನ್ನು ನೀಡಬಲ್ಲ ಕೃತಿಗಳು ಎರಡು.

೧. ಪ್ರಭುಲಿಂಗಲೀಲೆ ೨. ಶೂನ್ಯ ಸಂಪಾದನೆ

ಗುರುರಾಜ ಚಾರಿತ್ರ್ಯ - ಸಿದ್ಧನಂಜೇಶ ಕವಿ, ಚಾಮರಸ - ನಾಗಣಪುರ, ಬನವಾಸಿ, ವಿಜಯನಗರ, ವಿರಕ್ತ ಇವು ಪ್ರಭುವಿನ ಸುತ್ತಮುತ್ತಲಿನ ವಿಶೇಷಣಗಳು. ಪ್ರಭುಲಿಂಗಲೀಲೆ ಇದು ಶಿವಾದ್ವೈತ ಕಾವ್ಯ. ಪ್ರಭು ನಸುನಗುತ ಮಾಯೆಯ ಸಖಿಯರು ಯಾವ ದೇಶವನೆಂದು ಕೇಳಿದಾಗ, ನಸುನಗುತ ದೇಶವೆಂಬುದು ಪರದೇಶ ..... ಬಿರುದಿನ ಬಿಂಕಕಾರರನಲ್ಲೆನಿಸುವ ಅಲ್ಲಮನೆಂಬ ಪೆಸರೆನೆಗೆ ..... ಲೇಸುಮಾಡುವ ಠಾವುಗಳ ಅಭಿಲಾಶೆ ಇಲ್ಲದೆ ಪೊದ್ದುವೆವು ಸುಖವಾಸಿಗಳು ಎಂದು ಉತ್ತರವನ್ನು ಕೊಡುತ್ತಾನೆ. ಆತ ಸಕಲರಿಗೆ ಸಾಕಾರಾವಾಗಿರುವನು ನಿರ್ಮಳ ಮತಿಗೆ ನಿರ್ಗುಣರೂಪವಾಗಿಹನು ಎಂದು ವಿಮಳೆ ಮಾಯೆಗೆ ತಿಳಿಹೇಳಿದ್ದು ಇವುಗಳೆಲ್ಲಾ ರಸಮಯ ಕಾವ್ಯಗಳಿಗೆ ಸಾಕ್ಷಿಯಾಗಿವೆ. ಅಲ್ಲಮನು ನಿರ್ಮಾಯೆನೆಂಬುದನ್ನು ಸ್ಥಾಪಿಸಲು ಪ್ರಯತ್ನ ಪಟ್ಟವರಲ್ಲಿ ಈ

ಚಾಮರಸನು ಮೊದಲಿಗನು. ಅದರಂತೆ ಆನೆ ಕೆಸರೊಳಗೆ ಅದ್ದಿ ಬಿದ್ದೊಡೆ ತಾನೆ ತನ್ನೆಯ ..... ಇಲ್ಲಿ ತನ್ನ ಸಾಹಸ ಮತ್ತು ಪ್ರಯತ್ನ ನಿಷ್ಠೆಗಳಿಂದ ತಾನೆ ಮೇಲೇಳುವಂತೆ 'ಉದ್ಧರೇತ ಆತ್ಮನ್ ಆತ್ಮನಾಂ' ತನ್ನ ಚಿತ್ತಾಪಯವನ್ನು ಕೇರುಳ್ಳ ಕರ್ಮದ ಕೋಟಿ ಕೂಟಲೆಗೆ ಬೀಯ ಮಾಡದೇ ಆತ್ಮಲಿಂಗಕ್ಕೆ ಎಳೆಸಬೇಕು, ಕರ್ಣಗಳೆದ್ದು ಶರಣನಾಗಿ ಪರಮಾನಂದದಿಂದ ನಿರ್ಲೇಪನಾಗಿದ್ದರೆ 'ಪರಮನಪ್ಪುದು' ತಪ್ಪದು ಮಾನವ ಕಣ್ಣಾಲಗಳು ಮನದ ಹಕ್ಕಿಯ ಕಾಲ್ಗುಳು ಇಡಾ - ಪಿಂಗಳಾ, ನಾಡಿಗಳು ಅದರ ರೆಕ್ಕೆಗಳು. ಆಲಿನಿಂದೊಡೆ ಸುಳಿದು ಸೂಸುವ ಗಾಳಿ ನಿಲುವುದು ..... ಎಂದು ಹೇಳುವಲ್ಲಿ ಶಿವಯೋಗದ ಮರ್ಮ ದಾರ್ಶನಿಕವಾಗಿ ಹೊರಹೊಮ್ಮಿ, ಪ್ರಭುಲಿಂಗ ಲೀಲೆ ಒಂದು ದರ್ಶನ ಕಾವ್ಯವೆಂಬುದನ್ನು ಕಾಣಬಹುದು. ಪ್ರಭುದೇವನ ಸ್ವಯ ವಚನಗಳಲ್ಲಿ ಮೂಡಿನಿಂತಿರುವ ದೇಶ ಕಾಲಾತೀತವಾದ 'ಮಹಾಮಾನವ ದರ್ಶನ'ವನ್ನು ಬಿಂಬಿಸುವ 'ವಿಶ್ವಮಹಾಕಾವ್ಯ' ಒಂದನ್ನೂ ಸೃಜಿಸಲಸಾಧ್ಯವಾದ ಆ ಪರಿಪೂರ್ಣ ಯುಗಧರ್ಮ, ಅಪರಿಪೂರ್ಣ ಮತಧರ್ಮ ಕಾವ್ಯಧರ್ಮಗಳ ಪರಿಸರ ಮಧ್ಯೆ ಮೂಡಿಬಂದ ಚಾಮರಸ ವಿಶ್ವ ಮಹಾಕವಿ ಸಾಲಿನಲ್ಲಿ ನಿಲ್ಲುತ್ತಾರೆ. ಚಾಮರಸನ ಈ ಪ್ರಭುಲಿಂಗ ಲೀಲೆಯಲ್ಲಿ ಮತದೃಷ್ಟಿವೊಂದಿಲ್ಲದಿದ್ದರೆ ಪ್ರಭುವಿನ ಜೀವನದಲ್ಲಿ ಒಂದು ವಿಶ್ವ ವ್ಯಾಪಿಯಾದ ದರ್ಶನವನ್ನು ಕಾಣಬಹುದಾಗಿತ್ತು. ಒಂದು ಜೀವ ಭವದಲ್ಲಿ ಹುಟ್ಟಿ ಭವದ ಎಲ್ಲ ಬಂಧನಗಳಿಗೆ ಒಳಗಾಗಿ, ರಾಗದ್ವೇಷಗಳನ್ನು ಪಡೆದು, ಮನೆಯಿಂದ ಪಾರಾಗಿ, ಜೀವನ್ಮುಕ್ತನಾದ ನಂತರವು ಲೋಕಕಲ್ಯಾಣರ್ಥವಾಗಿ ಸಂಚರಿಸಿದ ದಿವ್ಯಾತ್ಮನ ದರ್ಶನ ಆತನ ಬದುಕಿನಲ್ಲಿದೆ. ಪ್ರಭುದೇವರ ಪುರಾಣ - ಯಳಂದೂರ ಹರಿಶ್ವರ (೧೬೦೬) ಇದು ಸಾಮಾನ್ಯ ರೀತಿಯದಾಗಿದ್ದು ಪ್ರಭುಚರಿತ್ರೆಯನ್ನು ತಕ್ಕಮಟ್ಟಿಗೆ ಹೇಳುತ್ತದೆ. ಅದರಂತೆ ಪ್ರಭುದೇವರ ಸಾಂಗತ್ಯ - ೧೬೦೮ ಪರ್ವತೇಶನದು.

ಯಾವ ಮಹನೀಯರ ನುಡಿಗಡಣ ಶಿವಾದ್ವೈತ ತತ್ವವನ್ನೆಲ್ಲಾ ಸಮರ್ಥವಾಗಿ ಬಿಂಬಿಸಬಲ್ಲುದೋ, ಯಾರ ಅನುಭವ ಶರಣರೆಲ್ಲರ ಸಮಗ್ರ ಅನುಭವಗಳನ್ನು ಅಳವಡಿಸಿಕೊಂಡು ಪರೀಕ್ಷಿಸಿ, ನಿರಾಳಿಸಿ, ತಾನು ಮಾತ್ರ 'ಅತ್ಯತಿಷ್ಠದಶಾಂಗಲು'ವಾಗಿ ನಿಲ್ಲಬಲ್ಲದೋ, ಯಾರಮಾತು ನಿಲುವು ವೇದ ಪುರಾಣ ಆಗಮಗಳ ದಿವ್ಯಾನುಭವಗಳನ್ನು ದಿನದನುಭವಗಳನ್ನಾಗಿ ಮಾಡಿಕೊಂಡು ನುಡಿದ ನುಡಿಯೆಲ್ಲಾ ಪರತತ್ವ ಅಷ್ಟೇ ಅಲ್ಲ ಪರಾತ್ಪರ ತತ್ವವಾಗಿಸಬಲ್ಲ ದೃಷ್ಟಾರ ದೀಮಂತಿಕೆಯಾಗಬಲ್ಲದು ಅಂತಹ 'ಚೈತನ್ಯ - ಪ್ರಕಾಶ - ಮಂತ್ರ' ಆದ ಪ್ರಭುದೇವನನ್ನು ಶೂನ್ಯ ಸಂಪಾದನೆ ಮಹಾ ಪ್ರಸಂಗದ ಏಕೈಕ ನಾಯಕನನ್ನಾಗಿ ಯೋಚಿಸಿದ್ದಂತು ಶಿವಗಣ ಪ್ರಸಾದಿಗಳ ಪ್ರತಿಭೆಯನ್ನು ತೋರಿಸುತ್ತದೆ. ಇದಕ್ಕೆ 'ಶೂನ್ಯ ಸಂಪಾದನೆಯ ೧೨ನೇ ಶತಮಾನದ ವಚನ ಪುಷ್ಪಗಳ ಸೌರಭವನ್ನು, ೧೫ನೇ ಶತಮಾನದ ಮಾಲೆಗಾರರ ಕಾವ್ಯ ಕುಶಲತೆಯನ್ನು ಒಳಗೊಂಡು ಅಪೂರ್ವ ಸೌರಭಗಳ ಪುಣ್ಯ ಪುಷ್ಪ ಹಾರವಾಗಿ ಪರಿಣಮಿಸಿದೆ' ಎಂದು[೫] ಶೂನ್ಯ ತತ್ವ ವಿಕಾಸದಲ್ಲಿ ತಿಪ್ಪೇರುದ್ರಸ್ವಾಮಿಯವರು ಹೇಳಿದ ಮಾತು ಅರ್ಥವತ್ತಾದುದು. ಪ್ರಭುದೇವ ಶಿವಾದ್ವೈತ ತತ್ವದ ಮಹಾಲಿಂಗ, ಆ ಲೀಲೆಯ ಮೂಲ ಷಟ್ ಸ್ಥಲ, ಕಾರಣ ಶೂನ್ಯ ಸಂಪಾದನೆಯ ಪ್ರಥಮೋಪದೇಶದಲ್ಲಿ ಈ ಆರು ಸ್ಥಲಗಳ ವಿವರಣೆ ಬಂದಿದೆ. 'ಸ್ಥಲ'ವೆಂದರೇನು ಏಕಮೇವಾ ದ್ವಿತೀಯವಾದ ಸಚ್ಚಿದಾನಂದ ಲಕ್ಷಣವುಳ್ಳ ಸಕಲ ಚರಾಚರ ಪ್ರಪಂಚಕ್ಕೆ ಪರಮಶ್ರೇಯವಾದ, ಸರ್ವಶಕ್ತಿ, ಸರ್ವಜ್ಯೋತಿ ಸರ್ವಾತ್ಮರಿಗೆ ಪರಮಾಧಾರವಾದ, ಸರ್ವಭೂತ, ಸರ್ವಲೋಕ ಸರ್ವ ವೈಭವಕ್ಕೆ ತವರುಮನೆಯಾದ ಪರಮಬ್ರಹ್ಮವೇ ಸ್ಥಲ. ಅಕ್ಷರ ಅಕ್ಷಯವಾದ ಸ್ಥಲ

ಇದು ಶೂನ್ಯ, ಬಯಲು, ಬೆಳಗು, ನಿರಾಳ, ನಾಮ ಇಲ್ಲದ ಸೀಮೆಯಿಲ್ಲದ ಈ ಬಯಲು ಇಲ್ಲದ ಬಯಲಲ್ಲಿ ಇದ್ದ ಬಯಲು ಸರ್ವ ಶೂನ್ಯವನ್ನು ಒಳಗೊಂಡು ತಾನೇ ತಾನಾಗಿದ್ದ ಬಯಲು ಅಥವಾ ನಿರವಯಲು ಇದನ್ನು ಸಾಧಿಸುವ ಅಥವಾ ಇದೇ ಆಗುವ ಹಂತವನ್ನು ಸ್ವಾನುಭಾವದಿಂದ ಷಟಸ್ಥಲಗಳೆಂದು ಕರೆದಿದ್ದಾರೆ. ಅದೇ ಶರಣರ ವಿಶೇಷ ಕಾಣಿಕೆ. ಶೂನ್ಯ ಸಂಪಾದನೆಗಳಲ್ಲಿ ಅವರವರ ಅನುಭವ, ಅನುಸಂಧಾನ, ತರ್ಕಕ್ಕೆ ತಕ್ಕಂತೆ ಅವಾಂತರ ಸ್ಥಲ, ಒಳ ಸ್ಥಲಗಳನ್ನ ವಿವೇಚಿಸಿದ್ದಾರೆ. ಇವು ಅನುಭವದಿಂದ ಕಂಡ ಸ್ವಚಿಂತನಾ ಅಂತರಂಗದ ಹೆಜ್ಜೆಗಳು ಅದಕ್ಕೂ ಪೂರ್ವದ ಸೃಷ್ಟಿಯೇ ಜೀವನ, ಪಿಂಡಸ್ಥಲ - ಪಿಂಡಜ್ಞಾನ ಸ್ಥಲ - ಸಂಸಾರ ಹೇಯಸ್ಥಲ - ಜೀವಾಭ್ರಾಂತ ನಿರಶನ ಸ್ಥಲ - ಮಾಯಾ ವಿಡಂಬನ ಸ್ಥಲ - ಗುರುಕರುಣಾಸ್ಥಲ ಹೀಗೆ ಸಂಪಾದನೆಗಳಲ್ಲಿ ಏಕಪ್ರಕಾರವಾಗಿ ಬಂದಿದೆ. ಪ್ರಭುದೇವರ ವಚನಗಳನ್ನು ಆಧರಿಸಿ ಸೃಷ್ಟಿ ಪೂರ್ವದ ಸ್ಥಿತಿಯನ್ನೇ ಸ್ಥಾಪಿಸಿದ್ದಾನೆ. ಶಿವಗಣ ಪ್ರಸಾದಿ, ಈ ಸೃಷ್ಟಿ ಅಥವಾ ಪಿಂಡ, ಕಲ್ಲಿನೊಳಗಣ ಕಂಡು ಕಾಣದಂತಿರ ಬೆಂಕಿಯಂತೆ, ಬೀಜದೊಳಗಿರ ವೃಕ್ಷದ ಅಂಕುರದಂತೆ, ಶಬ್ದದೊಳಗಣ ನಿಶಬ್ದದಂತೆ ತನ್ನಲ್ಲಿ ತಾನೇ ಅಂತರ್ಗತವಾಗಿದೆ. ಆ ಶಿವತತ್ವ ಆದಿ ಆಧಾರವಿಲ್ಲವೆಂದೇ ಉದಯವಾಗಿರುತ್ತದೆ ಅಲ್ಲದೆ ತಾನೆ ತಾನಾಗಿರುತ್ತದೆ. ಯುಗ ಯುಗದಲ್ಲಿ ಸ್ಥೂಲ - ಶೂನ್ಯ - ಅನಿಮಿಷ ಗಣೇಶ್ವರನಾಗಿ ಕಲಿಯುಗದಲ್ಲಿ ಅಲ್ಲಮ ಪ್ರಭುವಾಗಿ ಮೂಡಿದೆ. ಅದಕ್ಕೆ ಸಂಸಾರ ಬಂಧನ ಜೀವಭಾವ, ಭ್ರಾಂತಿ, ಮಾಯಾ ಸಂಬಂಧವಾದರೂ ಅದನ್ನೆಲ್ಲಾ ನಿರಶನಗೊಳಿಸಿ ಗುರು ಕಾರುಣ್ಯಕ್ಕೆ ಹೃದಯವನ್ನು ಹದಗೊಳಿಸಿಕೊಂಡಿದೆ.

ಆ ಗುರು ಕಾರುಣ್ಯವು ಅಂತರಂಗದ ಸ್ಮರಣೆಯೇ, ಪಿಂಡದಲ್ಲಿದ್ದ ಶಿವತತ್ವದ ವಿಕಾಸವೇ ಮಣ್ಣಮರೆಯ ದೇಗುಲಗಳೊಂದು ಮಾಣಿಕ್ಯಸ್ವರೂಪ ಅನಿಮಿಷ ಎಂಬುದನ್ನು ಅರಿತ ಪ್ರಭುದೇವ ಇಲ್ಲಿ ತಾನೇ ಗುರು ತಾನೇ ಶಿಷ್ಯವೆಂಬ ಶಿವಾದ್ವೈತ ತತ್ವವನ್ನು ಬೀರಿದನು. ಆ ನಿಯಮದ ಬೆಡಗಿನಿಂದ ಗುರುವಿನ ಕರಸ್ಥಲದ ಲಿಂಗ ಶಿಷ್ಯನ ಕರಸ್ಥಲ ಸೇರಿತು. ಅಂದರೆ ಪ್ರಭು ಅನಿಮಿಷನ ಲಿಂಗವನ್ನು ಕಿತ್ತುಕೊಂಡ ಎಂಬುದೆನಲ್ಲ. ಆದರೆ ಅದು ಅದ್ವಯ ಸೂಚಕ ಪದವಷ್ಟೇ ಅತ್ಯತ್ತಿಷ್ಠದ್ದಶಾಂಗುಲಮ್ ಆಗಿ ನಿಂದರೆ ಆತನ ದೇಹ ಅಂಗ ಲಿಂಗಾನುಭಾವುಳ್ಳ ಮಾನವನೇ ಶರಣ. ಲಿಂಗ ತತ್ವಂಗಳಾಗಿ ಆತ್ಮನ ಜೀವ ಭಾವಗಳೇ ಪರಮಾತ್ಮನೆನಿಸಲು ಷಡಂಗಯೋಗ ಅಥವಾ ಷಟಸ್ಥಲ ಸಾಧನೆ ಅವಶ್ಯವಿದೆ. ಅದ್ದರಿಂದ ಆತ್ಮ ಪರಮಾತ್ಮವಾಗುತ್ತದೆ. ಈ ಸ್ಥಳ - ಕುಳಗಳ, ರೀತಿ - ನೀತಿ ಸಂಬಂಧ ಅರಿವು ಸ್ಪಷ್ಟವಾಗಲು ಶಿವಗುಣ ಪ್ರಸಾದಿ ಪ್ರಭುದೇವರ ವಚನಗಳೊಂದಿಗೆ ಒಂದು ವಿಶಿಷ್ಟಾತ್ಮಕ ಮಾಲೆಯನ್ನು ಹೆಣೆದಿದ್ದಾನೆ. ಉಳಿದೆಲ್ಲಾ ಸಂಪಾದನೆಕಾರರೆಲ್ಲಾ ಇವನನ್ನೇ ಅನುಸರಿಸಿದ್ದಾರೆ. ಭಕ್ತಸ್ಥಲದ ಮುಖ್ಯ ಅಂಶ ಜ್ಞಾನೋದಯ ನಾನು ಯಾರು? ಗುರುಯಾರು? ಕರುಣೆಯೆಂದು? ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡು ಭಕ್ತಸ್ಥಲದಲ್ಲಿ ದಾಸೋಹಂ ಭಾವವಾಗಿ ಬಾಳಬೇಕು. ಶೂಲಹಿಡಿದು ಬೆಟ್ಟದ ಮೇಲೆರಿದ ಕಠಿಣ ಸಾಹಸ, ಏರಿದರೇ ಒಂದಿನಿತು ಮಾತ್ರ ಜಾರಿದರೆ ಪಾತಾಳ ಸಮತೆ ಸಮಚಿತ್ತದ ಸಾಧನೆಯ ನಿಷ್ಠೆ, ಇದು ಮಹೇಶ್ವರ ಸ್ಥಲದ ವಿವರ. ಹೀಗೆ ಷಟಸ್ಥಲ ಮಾರ್ಗ ಸಾಧನೆ ಐಕ್ಯಸ್ಥಲದವರಗೆ ಸಾಗುತ್ತದೆ. ಮನನಿಂದಲ್ಲಿ ಆನಂದ ನಿರ್ವಾತ ಸ್ಥಿತಿ ಸಮರಸ ಜ್ಞಾನವನ್ನೆದು ನಿರ್ಭಾವನಾಗಿನಿಂದುದೇ ಐಕ್ಯಸ್ಥಲ 'ಭಾವಕ್ಕೆ ಇಂಬಿಲ್ಲ, ಶಬ್ದಮೀಸಲು ನೋಡಾ ನಾಡುಗೆಡೆಯಿಲ್ಲ, ಎಡೆಗೆಕಡೆಯಿಲ್ಲ ಗೂಗೇಶ್ವರನೆಂಬ ಶಬ್ದ ವೇಧಿಸಲೊಡನೆ' ಪ್ರಭು ಐಕ್ಯಸ್ಥಲದ ವಿವರಣೆಯನ್ನು ಈ ರೀತಿಯಾಗಿ ನೀಡಿದ್ದಾನೆ. ಘನ ನಿರಂಜನದ ಬೆಳಕಿನ

ಸ್ಥಿತಿ, ನಿಜವನಂದ ನಿಶ್ಚಿಂತ ಮರಣವನಿರಿಸಿದ ಮಹಾಂತ, ಘನವನೊಳಗೊಂಡ ಮಹಿಮ, ಪರಮನೊಳಗೊಂಡ, ಪರಿಣಾಮಿ ಬಯಲೊಳಗಿದ ಬರಿತ, ಗುಹೇಶ್ವರ ಲಿಂಗ ನಿರಾಳವನೊಳಗೊಂಡ ಸಹಜ ಅದು ಐಕ್ಯಸ್ಥಲ, ವಿಶ್ವದೇಹದಾರಿಯಾದ ಶಿವೊಹಂಶರಣ ತನ್ನ ತಾನರ್ಚಿಸಿ ಪೂಜಿಸಿ ಲಿಂಗ ಲೀಲಾವಿಲಾಸದ ಮೂಲ ನೆನಹಿನ ಸ್ಪಂದ ಸೋಲಿಲಾನಂದ ಸ್ಥಿತಿಯೇ ಈ ಐಕ್ಯಸ್ಥಲ. ಸರ್ವ ಸಾಧನೆಯ ಪರಮ ಚರಮಸ್ಥಿತಿ ಅದೇ ನಿರಾಳ ಷಟಸ್ಥಲ ಸಾಧನೆ ಇದು ಕ್ರಮ ಸಮುಚ್ಚಯಾತ್ಮಕವಲ್ಲ ಒಂದಾದ ಮೆಲೊಂದು ಪಾವಟಿಗೆಗಳನ್ನು ಏರುವಂತದ್ದಲ್ಲ ಅದು ಸಮ ಸಮುಚ್ಚಯ ಒಂದರೊಳಗೊಂದು, ಒಂದರಿಂದೊಂದು ವಿಕಾಸವಾಗಿ ಪೂರ್ಣತೆಯನ್ನು ಸಾಧಿಸುವ ವಿಧಾನವೆಂದು ಅನುಭಾವದಿಂದ ಅರಿತು ಆಚರಿಸಿ ತೋರಿಸಿದ್ದಾರೆ ಶರಣರು. ಶಿವಾದ್ವೈತ ತತ್ವ, ಪ್ರಭುಲಿಂಗದ ಶೂನ್ಯಲಿಂಗದ ಸ್ಥಿತಿ ಸಾಧನೆಯು ಷಟಸ್ಥಲ ತತ್ವಗಳನ್ನು ನಿದರ್ಶನ ಪೂರ್ವಕವಾಗಿ ಪ್ರಭುದೇವನ ವಚನಗಳಿಂದಲೇ ಸಂಪಾದಿಸಿರುವದು ಶಿವಗಣ ಪ್ರಸಾದಿಯ ಸ್ವಂತಿಕೆ. ಹೀಗೆ ಸಂಪಾದನೆಯ ಪ್ರಾರಂಭಿಕ ಮಾತುಗಳನ್ನು ಹೇಳಲಾಗಿದೆ.

ಒಟ್ಟಾರೆ ಶೂನ್ಯ ಸಂಪಾದನೆಯ ಬಗ್ಗೆ, ಶೂನ್ಯ ಇದರ ಅರ್ಥ ಏನು ಇಲ್ಲದ್ದಕ್ಕೆ ಸಾಮಾನ್ಯ ರೀತಿಯಲ್ಲಿ ಅನ್ನುತ್ತಾರೆ. ಆದರೆ ಇಲ್ಲಿ ಶೂನ್ಯ ಇದರ ಅರ್ಥ ಎಲ್ಲ ನಿರಂಜನ ತತ್ವ ಜೀವನದ ಪರಮಗುರಿ ಮುಕ್ತಿ ಅಥವಾ ಬಿಡುಗಡೆ ಇದಕ್ಕೆ ಏನು ಇಲ್ಲದ್ದೊಂದು ಅಲ್ಲಿ ಇತ್ತು ಅದನ್ನೇ ಸಂಪಾದಿಸುವುದು ಎಂದಿದ್ದಾರೆ ಶರಣರು. ಅಲ್ಲಿಗೆ ಹುಟ್ಟುವ ಸಾಯುವ ಚಕ್ರಗಳಿಂದ ಮುಕ್ತಿಯಾದಂತಾಯಿತು. ಪ್ರಭು ಇದನ್ನು ಮಾತಿನಲ್ಲಿ

ಸ್ಪಟಿಕದ ಘಟದಂತೆ ಒಳಹೊರಗಿಲ್ಲ ನೋಡಾ
ವಿಘಟ ಚಾರಿತ್ರ್ಯಕ್ಕೆ ಬೆರಗಾದೆನ
ನೋಡುವರೆ ಕಾಣಬರುತ್ತಿದೆ - ಮುಟ್ಟುವರೆ ಕೈಗೆ ಸಿಲುಕದು
ಹೊದ್ದುವರೆ ಸಮೀಪ ಹತ್ತೆ ಸಾರುವತ್ತತ್ತಾ ತೋರುತ್ತದೆ
ಆಕಾರವು ನಿರಾಕಾರವ ನುಂಗಿ
ಬಯಲು ಸಮಾಧಿಯಲ್ಲಿ ಸಿಲುಕಿತ್ತು ನೋಡಾ!
ದರ್ಶನದಿಂದ ಮೃತ ಹಾರವಾಯಿತ್ತು ಬೆರಸಿದಡೆಂನ್ನೊಂತೊ ಗುಹೇಶ್ವರ ''

ಈ ಆಹಾರದಿಂದ ಪ್ರಭು ತೃಪ್ತವಾಗಿದ್ದನಾ. ಈ ಶಕ್ತಿ ಕೇವಲ ಮಾತಿನ ಮಾಲೆಗೂ ಕೂಡಾ ಸಿಗುವದಲ್ಲ.

ಕಾಯಗೊಂಡ ಮಾನವರಂತೆ ಕೈಗೆ ನಿಲುಕ
ಪ್ರಾಣವಿಡಿದ ಜೀವಗಳಂತೆ ಎಡೆಯಾಡದಿಪ್ಪ
ಕಾಂಬಡೆ ಕಂಗಳತೆಯಲ್ಲ, ಕೇಳುವಡೆ ಕಿವಿಗಳತೆಯಲ್ಲ
ಗುಹೇಶ್ವರನ ನಿಲುವು ಬರಿ ಸ್ತೋತ್ರಕ್ಕೆ ಸಿಕ್ಕದು ಕಾಣಾ ಸಿದ್ಧರಾಮಯ್ಯ

ಕಂಗೆ ಕಾಂಬಡೆ ರೂಪಲ್ಲ, ಕೈಗೆ ನಿಲುಕಡೆ ದೇಹಿಯಿಲ್ಲ
ನಡೆ ದಡೆ ಗಮನಿಯಲ್ಲ ನುಡಿದಡೆ ವಾಚಾಳನಲ್ಲ
ಸಂಧಿಸಿದವರಿಗೆ ಹಗೆಯಲ್ಲ, ಹೊಗಳಿದವರಿಗೆ ಕಳೆಯಲ್ಲ

ಗುಹೇಶ್ವರ ನಿಲುವು ಮಾತಿನ ಮಾಲೆಗೆ ಸಿಲುಕುವುದೇ?

ಸಿದ್ಧರಾಮಯ್ಯ ನೀವು ಮರುಳಾದರೆಲ್ಲಾ [೨೬]

ಆತನಿಗೆ ರೂಪವಿಲ್ಲ ದೇಹವಿಲ್ಲ, ನಿರ್ದೇಹಿ ನಡೆದಾಡಲಿಕ್ಕೆ ಕಾಲುಗಳಿಲ್ಲ ಅದು ಭೌತಿಕವೂ ಅಲ್ಲ ಹೊಗಳಿಸಿಕೊಳ್ಳುವುದಕ್ಕೆ ಕಿವಿಯಿಂದ ಕೇಳುವ ಪರಿಯಲ್ಲ. ಮಾತಿನ ಸರವನ್ನು ಹಾಕಲಿಕ್ಕೆ ಸಿಗುವ ವಸ್ತುವಲ್ಲ. ಬಹಿರ್ಮುಖ ವ್ಯಾಪಾರಕ್ಕೆ ನಿಲುಕದ ನಿಲುವಾತನದು. ನಿರಾಳ ಪ್ರಭುವಿನ ಶರೀರವನ್ನು ಈ ಶಕ್ತಿಯ ಹೋಲಿಕೆಯಂತೆ ಕಾಣಬಹುದು. ಆ ಶಕ್ತಿ ಶಿವನ ಅಸ್ತಿತ್ವ ಅದರ ಪರಿಚಯವೇ ಶಿವನ ಪರಿಚಯ, ಪ್ರಭು ತಾನು ಅಸ್ತಿತ್ವದ ಬಗ್ಗೆ ಮಾತನಾಡಿದ ಅನುಭಗಳನ್ನು ಉಳಿದ ಶರಣರು

ರೂಪುವಿಲ್ಲದರೂಪು, ನಿರ್ಣಯವಿಲ್ಲದ ನಿಷ್ಪತ್ತಿ
ಸೀಮೆಯ ಮೀರಿದ ನಿಸ್ಸೀಮ, ಗಮನವಿಲ್ಲದ ಗಮ್ಯ
ನುಡಿಯಲಡಗಿದ ನಿಶಬ್ದ ಪರವನರಿಯದ ಪರಿಣಾಮಿ
ಕೂಡಲ ಸಂಗನ ಶರಣ ಪ್ರಭುದೇವನಿಗೆ ನಮೋ ನಮೋ ಎನುತಿರ್ದೆನು.[೨೭]

ಲಿಂಗ ಬೆಳಗಿನ ಪರಮ ಸುಖಿಯನೆನೆಂಬೆನಯ್ಯ
ಕಂಗಳ ಕಳೆಯ ಸಂಗನ ನಗಲಿರೆ
ಅಂಗ ವಿರಹಿತನೆನೆಂದು ಉಪನಿಶುವೆ
ನೋಟದಲ್ಲಿ ಅನಿಮಿಷ, ಕೂಟದಲ್ಲಿ ನಿಸ್ಸಂಗಿ
ಎದೆಯಾಟದಲ್ಲಿ ನಿರ್ಗಮನ, ನಿಂದಲ್ಲಿ ನಿರಾಳ
ಸೂರಾಳದಲ್ಲಿ ಪರಿಮಾಣ, ಘನಕ್ಕೆ ಘನಮಹಿಮ
ಕಲಿದೇವ ನಿಮ್ಮ ಶರಣ ಪ್ರಭುದೇವ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.[೨೮]

ಎಂದು ಆ ಶೂನ್ಯತ್ವದ ಬಗ್ಗೆ ನುಡಿದಿದ್ದಾರೆ. ಈ ಶಕ್ತಿಯ ಸಂಪಾದನೆಯನ್ನು ಸಿಂಹಾಸನವೂ ಕೂಡಾ ಗಳಿಸುವ ಸಂಪಾದನೆಯಾಗಿದೆ. ಈ ದರ್ಶನ ಪರಿಕಲ್ಪನೆಯನ್ನು ಸಂಗ್ರಹಿಸುವದಾದರೆ ಅವರ ಬಗ್ಗೆ ಇರುವ ಅನುಭವ ಅಂತರಾಳವನ್ನು ಗುರುತಿಸುವುದೇ ಆಗಿದೆ. ಅನುಭಾವದಲ್ಲಿ ಅಧ್ಯಯನ ಮಾಡುವ ನಾವು ಕೂಡಾ ಏಕೀಕೃತವಾಗಿ ಸಾಮರಸ್ಯ ಅನುಭವವನ್ನು ಹೊಂದಿದಂತೆ ಭಾಸವಾಗುತ್ತದೆ. ಶರಣರ ನುಡಿ ಗುಡಣವನ್ನು ಅನುಭವ ಅಧಾರದಿಂದ ಆಕರಗಳನ್ನು ಸಂಪಾದಿಸಿ ಶೂನ್ಯ ಸಂಪಾದನೆಯನ್ನಾಗಿಸಿದ್ದಾನೆ ಶಿವಗಣ ಪ್ರಸಾದಿ. ಮಾತುಗಳ ಕೊಂಡೆಯನ್ನು ಒಂದಕ್ಕೊಂದು ಬೆಸುಗೆ ಮಾಡಿ ಸಂಪಾದಿಸಲಾಗಿದೆ. ಶೂನ್ಯ ಶಬ್ದ ಹೇಗೆ ಉತ್ಪತ್ತಿಯಾಯಿತು, ಇವರಿಗಿಂತ ಮೊದಲಿನ ಕಾಲದಲ್ಲಿ ಇದರ ಬಳಕೆ ಇದ್ದಿಲ್ಲವೆ? ಇದು ಚರ್ಚಿಸತಕ್ಕ ವಿಷಯ. ಬೌದ್ಧರಲ್ಲಿಯು ಇದರ ಬಳಕೆ ಆಗಿದೆ ಬೌದ್ಧರ ಮಾಧ್ಯಮಿಕದಲ್ಲಿ ಆತ್ಮ ಅನ್ನುವುದು ಇಲ್ಲವೆಂದು ಹೇಳುವ ಇವರು ಅನಾತ್ಮವಾದಿಗಳಾಗಿದ್ದಾರೆ. ಹಿಂದೂ ಧರ್ಮ ಶಾಖೆಗಳೆಲ್ಲಾ ಆತ್ಮವಾದವನ್ನು ಒಪ್ಪಿಕೊಂಡರೆ ಇವರು ಮಾತ್ರ ತಿರಸ್ಕರಿಸುತ್ತಾರೆ. ಉಳಿದ ಧರ್ಮಗಳಲ್ಲಿ ದರ್ಶನವನ್ನು ದರ್ಶನಕಾರರ ಒಂದು ಚೌಕಟ್ಟನ್ನು ಕ್ರೂಢೀಕರಿಸಿದಂತೆ ಬೌದ್ಧರಲ್ಲಿ ನಿಷ್ಕರಣೆಯಾಗಿಲ್ಲ, ಅಲ್ಲಿ ಕೇವಲ ಮಾನವತಾವಾದ, ಬದುಕಲಿಕ್ಕೆ ಯೋಗ್ಯವೆನಿಸುವ ರೀತಿ - ನೀತಿ ಆಚರಣೆ ಮಾರ್ಗಗಳಿವೆ. ಆದರೆ ಆತ್ಮವನ್ನು ಸ್ವೀಕರಿಸಿದಂತೆಯೂ ಇಲ್ಲ

ತಿರಸ್ಕರಿಸಿದಂತೆಯೂ ಇಲ್ಲ ಅನ್ನುವಂತಿದೆ. ಮಾಧ್ಯಮಿಕರು ಮಾತ್ರ ತಿರಸ್ಕರಿಸಿದ್ದಾರೆ. ಈ ಆತ್ಮ ವಿಚಾರದಲ್ಲಿ ಮಾತ್ರ ಬುದ್ಧ ತಟಸ್ಥ. ಬುದ್ಧನ ಕಾಲಾನಂತರದಲ್ಲಿ ಅದರ ಪ್ರವಾಚಕರು ಕೆಲವು ಕಲ್ಪನೆಗಳನ್ನು ಕ್ರೂಡೀಕರಿಸಿದರು. ಹಿಂದೂ ಧರ್ಮಗಳಲ್ಲಿ ಒಂದಕ್ಕೊಂದು ಬಹು ವ್ಯತ್ಯಾಸವಿದ್ದರೂ ಅವು ಕೇವಲ ಆತ್ಮ ಪರಮಾತ್ಮರ ಸಂಬಂಧ, ಆತ್ಮಸ್ವರೂಪದಲ್ಲಿ ಮಾತ್ರ ಇದೆ. ಬುದ್ಧ ಪುನರ್ ಜನ್ಮವನ್ನು ಒಪ್ಪಿಕೊಳ್ಳುವಾಗ ಅನಾತ್ಮವಾದ ಸಮಂಜಸವೆನಿಸುವದಿಲ್ಲ. ಆದರೆ ಬುದ್ಧ ಆತ್ಮ ಅದು ಕೇವಲ ಶಕ್ತಿಯೆನ್ನುವ ಅರ್ಥದಲ್ಲಿ ಒಪ್ಪುತ್ತದೆ. ಆತ್ಮ ಮತ್ತೊಂದು ಶರೀರದಿಂದ ಉದ್ಭವಿಸುತ್ತದೆ ಎಂದು ಅರ್ಥವಲ್ಲ, ಮೊದಲಿನ ಕರ್ಮ ಫಲಕ್ಕನುಸಾರವಾಗಿ ಮೊದಲಿನ ಗುಣಗಳು ಕೆಲವು ಸುಪ್ತ ಸ್ಥಿತಿಯಲ್ಲಿರುತ್ತವೆ. ಕಾರಣ ಮತ್ತು ಕರಣಂಗಳ ನಿರಂತರತೆಯಲ್ಲಿ ಕರ್ಮ ಫಲಗಳಿಗೆ ಅನುಸಾರವಾಗಿ ಪಡೆದುದೇ ಪುನರ್ ಜನ್ಮ. ಇದಕ್ಕೆ ನಿರ್ವಾಣವೆಂತಲೂ ಕರೆಯುವರು. ಅಂದರೆ ಆಸೆ, ದ್ವೇಷ, ಮೋಹ ಇವುಗಳಿಂದ ಮುಕ್ತವಾಗುವುದೇ ನಿರ್ವಾಣ.[೨೯]

ನಿರ್ವಾಣ < ಉಪಾದಿಶೇಷ ನಿರ್ವಾಣ - ಸದೇಹಮುಕ್ತಿ
ನಿರುಪಾದಿ ಶೇಷ ನಿರ್ವಾಣ (ಪರಿನಿರ್ವಾಣ) - ವಿದೇಹ ಮುಕ್ತಿ [೩೦]

ಉಪಾದಿ ಶೇಷಣವೆಂದರೆ - ಉಪನಿಷತ್ತಿನ ಜೀವನ್ಮುಕ್ತಿ - ನಿರ್ಲಿಪ್ತ ಸ್ಥಿತಿಗೆ ಹೋಲಿಸಬಹುದು. ಎರಡನೆಯದರಲ್ಲಿ ದೇಹ ಬಿದ್ದು ಹೋಗುತ್ತದೆ. ಶೂನ್ಯವಾದಿಗಳ ರೀತಿಯಲ್ಲಿ ಪ್ರತಿಯೊಂದು ವಸ್ತುವು ಅಸ್ತಿತ್ವದಲ್ಲಿದೆ ಎಂದು ಹೇಳಲಿಕ್ಕೆ ಬರುವುದಿಲ್ಲ ಪ್ರತಿಯೊಂದು ವಸ್ತುವು ತನ್ನ ಅಸ್ತಿತ್ವಕ್ಕೆ ಅದರ ಹಿಂದಿನ ಅವ್ಯಕ್ತ ಕಾರಣವನ್ನು ಅವಲಂಬಿಸಿರುತ್ತದೆ. ಇಲ್ಲಿ ಶೂನ್ಯತೆ ಎಲ್ಲ ತತ್ವಗಳನ್ನು ನಿಷೇಧಿಸಿ ಅದನ್ನು ಮೀರಿದ ಸತ್ಯವಾಗಿದೆ. ಶೂನ್ಯವೆಂದರೆ ಏನು ಇಲ್ಲ ಅಸ್ತಿತ್ವ ರಹಿತ ಅಂತ್ಯ, ಕಲ್ಪಿತಗುಣಗಳನ್ನು ಅದರ ಮೇಲೆ ಆರೋಪಿಸುವದಕ್ಕೂ ನಿಷೇಧವಿದೆ. ಅದರಂತೆ ಎರಡೆಂಬ ದ್ವೈತವನ್ನು ನಿಷೇಧಿಸಲಾಗಿದೆ. ನಾಶ, ಹುಟ್ಟು, ಅಲ್ಲದ ಕ್ಷಣಿಕವೂ ಅಲ್ಲದ ಶಾಶ್ವತವೂ ಅಲ್ಲದ ತಟಸ್ಥ ಸ್ಥಿತಿ. ಈ ಮಾರ್ಗ ಈ ಕೋಪ ನಿಷತ್ತಿನ ಭಾಗದೊಡನೆ ಈ ಮಾತು ಹೋಲುತ್ತದೆ. ಎಲ್ಲ ಗುಣಗಳನ್ನು ಹೊಂದಿದ್ದರೂ ಅದನ್ನು ಮೀರಿದನೆಂಬ ಭಾವನೆ, ಕೊನೆಯಲ್ಲಿ ಏನೂ ಇಲ್ಲವೆಂಬ ಶೂನ್ಯತೆ, ಅದೇ ನಿರ್ವಾಣ. ಇದಕ್ಕೆ ಬೆಂಕಿಯ ಉದಾಹರಣೆಯನ್ನು ಬುದ್ಧ ಕೊಡುತ್ತಾನೆ. ಸಹಜವಾದ ಸತ್ಯದ ಜ್ಞಾನವನ್ನು ಗ್ರಹಿಸುವುದೇ ನಿರ್ವಾಣ ಇಲ್ಲಿ ಮನಸ್ಸಿನ ಪರಿವರ್ತನೆಯಿದೆ. ದೇಹದಲ್ಲಿರುವ ಆತ್ಮವೂ ಶೂನ್ಯ ಈ ಶೂನ್ಯತೆಯನ್ನು ಅರಿಯುವುದೇ ನಿರ್ವಾಣ, ಈ ಮಾಧ್ಯಮಿಕರ ಶೂನ್ಯವಾದ ಶಂಕರಾಚಾರ್ಯರ ಅದ್ವೈತಸಿದ್ಧಾಂತದ ಮೇಲೆ ಪ್ರಭಾವ ಬೀರಿರಬಹುದು.

ಕೇನೋಪನಿಷತ್ತಿನ ಮಾತಿನಂತೆ ಜಗತ್ತೆಲ್ಲವೂ ಆಕಾರಣ ವಸ್ತುವಿನಿಂದಲೇ ನಡೆಯುತ್ತದೆ. ಆದರೆ ಬೌದ್ಧರು ಅನಾತ್ಮವಾದ ಮಾನಸಿಕ ವ್ಯವಸ್ಥೆಯೇ ಜೀವನದ ನಿರಂತತೆಗೆ ಕಾರಣವೆನ್ನುತ್ತದೆ. ಕಠೋಪನಿಷತ್ತು ಒಳಗೂ ಹೊರಗೂ ವ್ಯಾಪಿಸಿದ ಅಗ್ನಿಯ ಬಗ್ಗೆ ಒಂದು ಭಾವವನ್ನು ಪ್ರವೇಶಿಸಿದ ಅಗ್ನಿ ಆಯಾ ವಸ್ತುಗಳನ್ನು ವ್ಯಾಪಿಸಿರುವಾಗ ಅವುಗಳಿಗೆ ಅನುಸಾರವಾಗಿ ಅನೇಕ ರೂಪಗಳನ್ನು ಧರಿಸುವಂತೆ ಸರ್ವಭೂತಗಳ ಅಂಶದಲ್ಲಿರುವ ಒಬ್ಬನೇ ಆತ್ಮನು ನಾನಾ ರೂಪಗಳನ್ನು ಧರಿಸಿ ವಸ್ತುಗಳ ಹೊರಗೂ ವ್ಯಾಪಿಸಿದ್ದಾನೆ. ವ್ಯಾಪಕತೆಯಲ್ಲಿ ಪ್ರಭುದರ್ಶನ ಬೆಂಕಿಯು ಸುಪ್ತವಾಗಿ ಕಟ್ಟಿಗೆಯಲ್ಲಿರುವಾಗ ಯಾವ ಸ್ಥಳವನ್ನು ಆಕ್ರಮಿಸುವಂತೆ ನಿರ್ವಾಣ ಎಲ್ಲಿಯು ತೋರದೇ ಅಲ್ಲಿಯೇ ತೋರಿ ಅಡಗುತ್ತದೆ. ಆದರೆ ಉಪನಿಷತ್ತುಗಳು ಸೃಷ್ಟಿಯ ಹಿಂದಿರುವ

ಏಕತ್ವವಾದವನ್ನು ಸೂಚಿಸಲು ದೃಶ್ಯವನ್ನು ಬಳಸಿಕೊಂಡಿವೆ. ಬೌದ್ಧರಲ್ಲಿ ಶೂನ್ಯ ಅನ್ನುವದು ಜಗತ್ತನ್ನು ನೋಡುವ ನಮ್ಮ ಮನಃಸ್ಥಿತಿಯಲ್ಲಿ ಆಗುವ ಬದಲಾವಣೆಯಾಗಿದೆ. ದೇಹದಲ್ಲಿರುವ ಆತ್ಮವೂ ಶೂನ್ಯ, ಈ ಶೂನ್ಯವನ್ನರಿಯುವುದೇ ನಿರ್ವಾಣ. ಎಲ್ಲವೂ ಆರೋಪಿತವಾಗಿ ಕೂಡಿದೆ ಅನ್ನುವುದೇ ಈ ಶೂನ್ಯ. ಶರಣರು ಬಳಸಿದ ಶೂನ್ಯ ಈ ಶಾವಾಸ್ಯೊಪನಿಷತ್ತಿನ ಪೂರ್ಣ ಕಲ್ಪನೆಯನ್ನು ಹೊಂದಿಕೊಳ್ಳುತ್ತದೆ. ಬೌದ್ಧರು ಎಲ್ಲದರ ನಿರಶನಕ್ಕೆ ಶೂನ್ಯವೆನ್ನುವರು. ಎಲ್ಲವೂ ಕೂಡಾ ಆರೋಪಿತವಾದದ್ದು ಅರೋಪವನ್ನು ಬಿಟ್ಟರೆ ಅಲ್ಲಿ ಏನೂ ಇಲ್ಲ. ಅದಕ್ಕೆ ಶೂನ್ಯವೆಂದು ಅವರು ಕರೆದರೆ ಎಲ್ಲ ತತ್ವವನ್ನು ಒಳಗೊಂಡ ಪರಿಪೂರ್ಣತೆಯನ್ನು ಶೂನ್ಯವೆಂದು ಶರಣರು, ಉಪನಿಷತ್ತುಗಳು ಕರೆಯುತ್ತವೆ. ಶರಣರಲ್ಲಿ ಆತ್ಮವಾದವಿದೆ. ವಿಶ್ವಾತ್ಮನ ಅಂಶಗಳು ಈ ಆತ್ಮನು, ಆ ವಿಶ್ವಾತ್ಮನೆ ಬಹುರೂಪದಿಂದ ಸೃಷ್ಟಿಯಾಗಿ, ಸೃಷ್ಟಿಯಲ್ಲಿರುವ ಜೀವರುಗಳಾಗಿ ಪರಿಣಮಿಸಿವೆ. ಮೊದಲನೆ ಹಂತವನ್ನು

| | |
|---|---|
| ಶರಣರು | - ಶೂನ್ಯಲಿಂಗವೆಂದು |
| ಬೌದ್ಧರು | - ತೋರಿಕೆಯ ಗಂಧರ್ವಗಿರಿ |
| ಶಂಕರಾಚಾರ್ಯ | - ಮಾಯಾ ಸ್ವರೂಪ, ಮಿಥ್ಯೆ, ಸುಳ್ಳು ಇತ್ಯಾದಿ |

ಮೊಟ್ಟ ಮೊದಲನೆಯ ಶೂನ್ಯ ಲಿಂಗ ಸ್ವರೂಪವನ್ನು -

ಅಯ್ಯಾ! ನಿರವಯ ಶೂನ್ಯಲಿಂದ ಮೂರ್ತಿಯ ನಿಲುಕಡೆ ಎಂತೆಂದೊಡೆ
ಸಾಕಾರ ನಿರಾಕಾರನಲ್ಲನೋಡಾ, ನಿರವಯ ಶೂನ್ಯ ಲಿಂಗಮೂರ್ತಿ
ಆದಿಯಲ್ಲ ಅನಾದಿಯಲ್ಲ; ಇಹದವನಲ್ಲ ಪರದವನಲ್ಲ
ಸುಖದವನಲ್ಲ ದುಃಖದವನಲ್ಲ; ನಿರಯದ ಶೂನ್ಯ ಲಿಂಗಮೂರ್ತಿ
ಪುಣ್ಯ ಪಾದವನಲ್ಲ; ಕರ್ತೃ ಬೃತ್ಯನಲ್ಲ, ಕಾರಣ ಕಾರ್ಯನಲ್ಲ
ಧರ್ಮಿ ಕರ್ಮಿಯಲ್ಲ, ಪೂಜ್ಯ ಪೂಜಕನಲ್ಲ ಇಂತು
ಉಭಯ ಒಳಿದು ಬೆಳಗುವ ನೋಡಾ ನಮ್ಮ ಗುಹೇಶ್ವರ ಲಿಂಗವ. [೬೧]

ಇಲ್ಲಿ ಇಲ್ಲವೆಂಬ ನಿಷೇಧವಿದ್ದರೂ ಬೌದ್ಧರಂತೆ ಅಭಾವದಲ್ಲಿ ನಿಲ್ಲದೆ ಎಲ್ಲ ಇರುವಿಕೆಯ ಸಂಕಲ್ಪಶಕ್ತಿರೂಪದಲ್ಲಿ ಒಡಗೊಂಡ ಶೂನ್ಯ ಲಿಂಗ. ಹೀಗೆ ಪ್ರಭುವಿನ ಸೃಷ್ಟಿಯ ವಚನಗಳೆಲ್ಲವೂ ದರ್ಶನವನ್ನು ತಿಳಿಸುವಂತವುಗಳಾಗಿವೆ. ಸಂಪಾದನೆಯಲ್ಲಿ ಬರುವ ಇಂತಹ ವಚನಗಳನ್ನು ಮಾತ್ರ ಇಲ್ಲಿ ತಿಳಿದುಕೊಳ್ಳಲಾಗಿದೆ.

ಆದಿ ಅನಾದಿ ಇಲ್ಲದಂದು; ಹಮ್ಮುಬಿಮ್ಮುಗಳಿಲ್ಲದಂದು
ಸುರಾಳ ನಿರಾಳಿಲ್ಲದಂದು ಶೂನ್ಯ ನಿಶೂನ್ಯವಿಲ್ಲದಂದು
ಸಚರಾ ಚರವೆಲ್ಲಾ ರಚನೆಗೆ ಬಾರದೆಂದು
ಗುಹೇಶ್ವರೊಬ್ಬನೆ ಇದ್ದೆಯಲ್ಲ ಇಲ್ಲದಂತೆ [೬೨]

ಇಲ್ಲಿ ಇದೆ. ಇಲ್ಲದಂತೆ ಇದೆ ಶೂನ್ಯಲಿಂಗ, ನಿಷ್ಕಲಲಿಂಗ ಸರ್ವಶೂನ್ಯ ನಿರಾಲಂಬಸ್ಥಲ




ಇದುವೆ ಆ ವಚನವಿದೆ. ಲೀಲೆಯಾದೊಡೆ ಉಮಾಪತಿ ಲೀಲೆತಪ್ಪಿದಡೆ ಸ್ವಯಂಭು ತ್ರಿಮೂರ್ತಿಗಳ ಉತ್ಪತ್ತಿಗೆ ಕಾರಣವಾದ ಒಂದು ಶಕ್ತಿ; ಅದನ್ನು ಶರಣ ಎಂದು ಚನ್ನಬಸವಣ್ಣ ಕರೆಯುತ್ತಾನೆ. ಪ್ರಭು ಜಗತ್ತಿನ ಆವಿರ್ಭಾವದ ಪರಿಯನ್ನು ಈ ರೀತಿಯಾಗಿ ವಿವರಿಸಿದ್ದಾನೆ.

ಮೂಲದಲ್ಲಿ ಮಾತ್ರ ಶಿವ ಅದು ಸ್ವಲ್ಪದರಲ್ಲಿ ಶೂನ್ಯವೆಂದೆನಿಸಿಕೊಂಡಿದೆ. ಕಣ್ಣಿಗೆ ಕಾಣದ್ದನ್ನು ಕೂಡಾ ಶೂನ್ಯವೆನ್ನಬಹುದಾಗಿದೆ. ನೋಡದೆ ಹೋದರೂ ಕೂಡಾ ಇದ್ದದ್ದು ಇದ್ದೆ ಇದೆ. ಅಂದರೆ Ralism ಗೋಚರವಾಗುವುದು. ಅದೋಮುಖವಾಗಿ ಸಾಗಿದರೆ ಅದು ಪ್ರವೃತ್ತಿ ಮಾರ್ಗ ಅದೇ ಸೃಷ್ಟಿ (ಸಮಷ್ಠಿ) ಊರ್ಧ್ವಮುಖವಾಗಿ ಸಾಗಿದಾಗ ಅದೇ ನಿವೃತ್ತಿ ಅಥವಾ ವ್ಯಷ್ಠಿ ಅನ್ನಬಹುದು.

ವಾರಿ ಒಂದು ಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು
ಆ ಸ್ವಯಂಭು ಲಿಂಗದಿಂದಾಯಿತ್ತು ಮೂರ್ತಿವಿತ್ತು
ಆ ಮೂರ್ತಿಯಿಂದಾಯಿತ್ತು ವಿಶ್ವೋತ್ಪತ್ತಿ
ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ

ಆ ಸಂಸಾರ ದಿಂದಾಯಿತ್ತು ಮರವೆ

ಆ ಮರವೆಂಬ ಮಹಾಮನೆಯು ವಿಶ್ವವ ಮುಸುಕಿದಲ್ಲಿ

ನಾಬಲ್ಲೆ ಬಲ್ಲದರೆಂಬ ಅದು ಹಿರಿಯರೆಲ್ಲಿ

ತಾಮಸಕ್ಕೊಳಗಾಗಿ ಮೀನ ಕೇತನನ ಬಲೆಗೆ ಸಿಲುಕಿ

ಮಾಯೆಯ ಬಾಯ ತುತ್ತುದರೆಲ್ಲಾ ಗುಹೇಶ್ವರ [೨೩]

ನೀರು ಘನೀಕರಿಸಿ ಮಂಜುಗಡ್ಡೆಯಾದಂತೆ ಶೂನ್ಯವು ಘನೀಕರಿಸಿ - ಸ್ವಯಂಭುವಾದಂತೆ - ಅದುವೇ ಲಿಂಗ - ಮೂರ್ತಿ - ವಿಶ್ವೋತ್ಪತ್ತಿ - ಸಂಸಾರ - ಮರವೆ ತಾಮಸಕ್ಕೊಳಗಾಗಿ ಮಾಯೆ ಬಾಯಿಗೆ ತುತ್ತಿದರು ಎಂದು ಪ್ರಭು ಅಭಿಪ್ರಾಯ.

ಏನು ಏನುಯಿಲ್ಲದ ಬಯಲಲೊಳಗೊಂಡು

ಬಗೆಗೊಳಗಾದ ಬಣ್ಣ ತಲೆದೋರಿತ್ತು

ಆ ಬಯಲ ಬಣ್ಣ ಶೃಂಗರಿಸಲು

ಬಯಲು ಸ್ವರೂಪಗೊಂಡಿತ್ತು

ಅಂತಪ್ಪ ಸ್ವರೂಪಿನ ಬೆಡಗು ತಾನೆ

ನಮ್ಮ ಗೊಗೇಶ್ವರ ಲಿಂಗವ ಪ್ರಥಮ ಭಿತ್ತಿ [೨೪]

ಶರಣರು ಪರಿಪೂರ್ಣತೆ = ಶೂನ್ಯ = ಬಯಲು

ಶೂನ್ಯ = ನಿರ್ವಾಣ

ಭಗವದ್ಗೀತೆಯಲ್ಲಿ ಒಂದುಕಡೆ 'ಲಭಂತೇ ಬ್ರಹ್ಮನಿರ್ವಾಣಂ ಅಭಿತೋ ಬ್ರಹ್ಮ ನಿರ್ವಾಣಂ ವರ್ತತೆ ವಿಧಿತಾತ್ಮನಾ' ಇಲ್ಲಿ ನಿರ್ವಾಣವೆಂದರೆ ಆನಂದಾತ್ಮಕ ಸ್ಥಿತಿ ಇಲ್ಲಿ ಅಭಾವದ ಆತಂಕ ಬರುವುದಿಲ್ಲ, ಬರಬರುತ್ತ ಬೌದ್ಧರು ಕೂಡಾ ಇದೇ ರೀತಿಯಾಗಿ ಇಟ್ಟುಕೊಳ್ಳುತ್ತಾ ಸಾಗಿದ್ದಾರೆ.

ಬೌದ್ಧರು ಪರಮ ಸತ್ಯವನ್ನು - ಶೂನ್ಯ - ಅದನ್ನು ಪಡೆದ ವ್ಯಕ್ತಿಯ ಕೊನೆಯಸ್ಥಿತಿ ಅದೇ ನಿರ್ವಾಣ

ಶರಣರು ಶೂನ್ಯ - ಜೀವಾತ್ಮನ ನಿಲುವನ್ನು ಬಯಲು ಅಂತ ಕರೆದರು. ಬಯಲು ಬಯಲಾಗುವುದನ್ನೇ 'ನಿರ್ವಯಲು' ಎಂದೂ ಆಗಾಗ ಅವರು ತಿಳಿಸುತ್ತಾರೆ.

ಬಯಲು ಬಯಲನೆ ಭಿತ್ತಿ ಬಯಲು ಬಯಲನೆ ಬೆಳೆದು

ಬಯಲು ಬಯಲಾಗಿ ಬಯಲಾಯಿತ್ತಯ್ಯ

ಬಯಲ ಜೀವನ, ಬಯಲ ಭಾವನೆ;

ಬಯಲು ಬಯಲಾಗಿ ಬಯಲಾಯಿತ್ತಯ್ಯಾ

ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು

ನಾ ನಿಮ್ಮ ನಂಬಿ ಬಯಲಾದರೆ ಗುಹೇಶ್ವರಾ [೨೫]

ಇಲ್ಲಿ ಬಯಲು ಮತ್ತು ರೂಪಗಳೆಂದರೆ ದೇವ ಮತ್ತು ಜೀವ ಸಂಬಂಧವನ್ನು ತಿಳಿಸುವುದು.

ಬಯಲೆ ರೂಪಗೊಂಡ ಪರಶಿವನನ್ನು ಬಯಲರೂಪದಿಂದಲೇ ಪೂಜಿಸುವುದು ಯೋಗ್ಯ ಅದನ್ನು ಬಯಲಿನ ರೂಪದಲ್ಲಿಯೇ, ಅಥವಾ ಭೂಮಿಯ ರೂಪದಲ್ಲಿ ಅನುಸಂಧಾನ ಮಾಡುವುದು ಅವರಿಗೆ ಪ್ರಿಯವಾಗಿ ಕಾಣಿಸಿರಬೇಕು. ಆದ್ದರಿಂದ ಲಿಂಗವು ಕೂಡಾ ಭೂಮಿ ಆಕಾರ ಹೊಂದಿರುವದು ಒಂದರ್ಥವಾದರೆ, ಇನ್ನೊಂದು ಸೊನ್ನೆಯ ಆಕಾರದ ಲಿಂಗಾಕಾರ ಶೂನ್ಯ ಸಂಪಾದಿಸುವುದನ್ನು ತೋರಿಸುವ ಕುರುಹುವಾಗಿದೆ. ಈ ಎರಡು ಆಕಾರದ ಪ್ರತಿರೂಪವೇ ಇಷ್ಟಲಿಂಗಕಂಥೆ ಹೊಂದಿರಬಹುದಾಗಿದೆ.

ಕಾಣಬಾರದ ಲಿಂಗವ ಕರಸ್ಥಲಕೆ ಬಂದರೆ
ಎನಿಗಿದು ಸೋಜಿಗ ಎನಗಿದು ಸೋಜಿಗ
ಅಹುದೆನಲೆಂಬೆನು ಅಲ್ಲೆನೆಲೆಂಬೆನು
ಗುಹೇಶ್ವರ ಲಿಂಗ ಸಾಕಾರ ಬಯಲು ಆಕಾರವಾದೊಡೆ [೩೬]

ಯಾವುದೇ ಆಕಾರವಿಲ್ಲದ ನಿರಾಕಾರವಾಗಿರುವ ಅದು ಕರಸ್ಥಲಕ್ಕೆ ಬಂದು ಸ್ವಿಕಾರ್ಹವಾಗಿದೆ. ಮೊದಲು ಶೂನ್ಯದಿಂದ ಪ್ರಾರಂಭಿಸಿದ್ದೆ ದರ್ಶನಕ್ಕೆ ಒಳ್ಳೆಯ ನಾಂದಿಯನ್ನು ಹಾಡಿದಂತಾಗಿದೆ. ಕರಸ್ಥಲದಲ್ಲಿ ಆ ವಸ್ತು ಪೂಜೆಗೊಳ್ಳಲಿಕ್ಕೆ ಆಕಾರವಾಗಿ ಬಂದರೆ ಅದು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದ ಇಷ್ಟಲಿಂಗ ಧಾರಣೆಯ ಕಲ್ಪನೆಯಾಗಿದೆ. ಅಂದರೆ ಪ್ರಭು ಲಿಂಗದರ್ಶನ ಅಥವಾ ವೀರಶೈವ ದರ್ಶನಕಾರವೆನ್ನುವಲ್ಲಿ ಎರಡು ಮಾತಿಲ್ಲ. ಕರಸ್ಥಲದಲ್ಲಿ ಪೂಜಿಸುವ ಕ್ರಮದ ಮಾರ್ಗದ ಪ್ರತಿಪಾದಕ ಅಥವಾ ಸ್ಥಾಪಕ ಎನ್ನಬಹುದು. ಶಂಕರಾಚಾರ್ಯರು ಹ್ಯಾಗೆ ಅದ್ವೈತದ ಪ್ರತಿಪಾದಕರೋ ಹಾಗೆ ಪ್ರಭುಶಕ್ತಿ ವಿಶಿಷ್ಟಾದ್ವೈತದ ಪ್ರತಿಪಾದಕ. ಬಯಲಿನ ಕುರುಹಾದ ಇಷ್ಟಲಿಂಗ ಅನುಸಂಧಾನದ ಕೊನೆಯಲ್ಲಿ ಬಯಲಿನ ನಿಲುವಿಗೆ ತರುತ್ತದೆ.

ಘನವ ಕಂಡು ಮನವು ಗ್ರಹಿಸಿತ್ತು
ಕಂಡು ಕಂಡು ಮನ ಮಹಾಘನವಾಯಿತ್ತು
ತತ್ತಲೀಯವಾಯಿತ್ತು, ತದುಗತವಾಯಿತು
ಶಬ್ದ ಮುಗ್ಧವಾದುದೇನೆಂಬೆ ಗುಹೇಶ್ವರಾ,[೩೭]

ಅಂದರೆ ಕೊನೆಯಲ್ಲಿ ಶಬ್ದಕ್ಕೂ ನಿಲುಕದ ಬಯಲಿನಸ್ಥಿತಿಯ ಕಲ್ಪನೆ ಅಷ್ಟೇ ಏಕೆ ಮನಕ್ಕೂ ಮೀರಿದ ಮಹಾಸ್ಥಿತಿ ಇದನ್ನೇ ವಚನದಲ್ಲಿ

ಮನದ ಕೊನೆಯ ಮೇಲೆ ನೆನೆದ ನೆನಹು
ಜನನ - ಮರಣ ನಿಲ್ಲಿಸಿ, ಜ್ಞಾನಜ್ಯೋತಿಯ ಉದಯ
ಭಾನು ಕೋಟಿಯ ಮೀರಿ
ಸ್ವಾನುಭವದ ಉದಯ ಜ್ಞಾನಶೂನ್ಯದಲಡಗಿದ
ಘನವೇನೆಂಬೆನು ಗುಹೇಶ್ವರಾ [೩೮]

ಸ್ವ - ಅನುಭವದ ಉದಯ ಜ್ಞಾನ ಶೂನ್ಯದಲ್ಲಿ ಅಡಗಿತ್ತು. ಅಂದರೆ ಆದಿಯಲ್ಲಿ ಶಿವ ಜಗತ್ತಾಗಿಯು,

ಆತ್ಮವಾಗಿಯು, ಸೃಷ್ಟಿಯ ಕ್ರಮದಲ್ಲಿ ಗೋಚರವಾಗಿರುವನು. ಈಶ್ವರ - ಜೀವ - ಜಗತ್ತುಗಳ ಪರಸ್ಪರ ಸಂಬಂಧವೇ ದರ್ಶನ. ಶೂನ್ಯ ಸಂಪಾದನೆಗಳು ಒಟ್ಟು ೫ ಎಂದು ಡಾ.ಆರ್.ಸಿ.ಹಿರೇಮಠರ ಅಭಿಪ್ರಾಯ. ಈ ಶೂನ್ಯ ಸಂಪಾದನೆಯ ಬಗ್ಗೆ ಮುಂದೆ ವಿವರಣಾತ್ಮಕವಾಗಿ ನೋಡಲಾಗಿದೆ. ಆದರೆ ಇಲ್ಲಿ ಸಾಂಕೇತಿಕವಾಗಿ ಮಾತ್ರ ಪ್ರಭು ದರ್ಶನ ಅನ್ನುವ ಅರ್ಥದಲ್ಲಿ ಮಾತ್ರ ನೋಡುತ್ತಾ ಸಾಗಿವೆ. ಮುಂದೆ ಶೂನ್ಯ ಸಂಪಾದನೆಯ ವಿಮರ್ಶೆ ಮಾಡುವಾಗ ವಿಶೇಷಾತ್ಮಕವಾಗಿ ಚಿಂತನೆಗಯ್ಯಲಾಗಿದೆ.

**ಶೂನ್ಯ ಸಂಪಾದನೆಯ ದಾರ್ಶನಿಕ ನೆಲೆ**

ಶೂನ್ಯ ಸಂಪಾದನೆ ಇದು ಮಹಾತಾತ್ವಿಕ ಕಾವ್ಯ ಇದರ ಪರಿಸ್ಕರಣೆಗಳು ನಾಲ್ಕೈದು, ಕೃಷ್ಣನ ಭಗವದ್ಗೀತೆಯಂತೆ ಅಲ್ಲಿ ಕೃಷ್ಣ ಅರ್ಜುನನೊಬ್ಬನಿಗೆ ಮಾತ್ರ ಬೋಧಿಸುವುದಾದರೆ, ಆಗಮಗಳಲ್ಲಿ ಶಿವ ಪಾರ್ವತಿಗೆ ಬೋಧಿಸುವ ಕ್ರಮದಂತೆ ಇಲ್ಲಿ ಪ್ರಭು ತಾತ್ವಿಕವನ್ನು ತನ್ನ ಅನುಯಾಯಿಗಳೊಂದಿಗೆ ಚಿಂತಿಸಿ ಬೋಧಿಸಿದ ಹೃದ್ಗ್ರಂಥ ಇದರ ಹೆಸರೆ ಧರ್ಮದರ್ಶ, ಅದನ್ನು ಗಳಿಸುವುದೇ ಚರಮಗುರಿ. ಗೀತೆಯಲ್ಲಿ ಕೃಷ್ಣನನ್ನು ಅಲೌಕೀನನ್ನಾಗಿ ಚಿತ್ರಿಸಿದಂತೆ ಇಲ್ಲಿಯೂ ಕೂಡಾ ಪ್ರಭುವನ್ನು ಅಲೌಕೀಕ ವ್ಯಕ್ತಿಯನ್ನಾಗಿ ಕವಿಗಳು ಕಂಡಿದ್ದಾರೆ. ನಾವು ದರ್ಶನ ಅಭ್ಯಾಸಕಾರರಾಗಿದ್ದರಿಂದ ಐತಿಹ್ಯ ಸತ್ಯಗಳಿಗೆ ಮಹತ್ವಕೊಟ್ಟು ಭಾವುಕ ಚರಿತ್ರೆಯನ್ನು ಗೌಣವಾಗಿಸಲಾಗಿದೆ. ಎಲ್ಲ ಸಂಪಾದನೆಗಳು ವಿಜಯನಗರ ಅರಸರ ಕಾಲಕ್ಕೆ ರಚಿತವಾದವುಗಳು. ಮಹಾಲಿಂಗದೇವನ ಏಕೋತ್ತರ ಶತಸ್ಥಲ, ಜಕ್ಕಣರಾಯನ ಏಕೋತ್ತರ ಶತಸ್ಥಲ, ಗುಬ್ಬಿ ಮಲ್ಲಣಾರ್ಯರ ಗಣಭಾಷಿತ ರತ್ನಮಾಲೆ, ಶಿವಗಣ ಪ್ರಸಾದಿ ಮಹಾದೇವಯ್ಯ, ಹಲಿಗೆದೇವ, ಗುಮ್ಮಳಾಪುರದ ಸಿದ್ಧಲಿಂಗ ಯತಿ, ಗುಳೂರ ಸಿದ್ಧವಿರಣ್ಣ ಒಡೆಯ, ಇವರೆಲ್ಲರಿಗೆ ಉದಾರ ಆಶ್ರಯ ಹೊಂದಿದ್ದ ಕಾಲವದು, ಕವಿಗಳಿಗೆ ಆಶ್ರಯ ಸಿಕ್ಕಾಗಲೇ ಕಾವ್ಯಗಳು ರಚಿತಗೊಳ್ಳುವವು. ವೈಷ್ಣವರಿಗೆ ಕೃಷ್ಣನ ಆದರ್ಶ ತತ್ವಗಳೇ ಮಾರ್ಗದರ್ಶಿಯಾಗುವಂತೆ, ವೀರಶೈವಕ್ಕೆ ಪ್ರಭುವೇ ಕಾರಣಕರ್ತ ಧರ್ಮದರ್ಶಿ. ಮಾನವ ಶ್ರೇಯಗಳಾದ ಧರ್ಮ, ಅರ್ಥ, ಕಾಮ, ಮೋಕ್ಷ, ಧರ್ಮದಿಂದ ಅರ್ಥ, ಕಾಮಗಳನ್ನು ಸಂಪಾದಿಸುವಿಕೆಯಲ್ಲಿ ಮೋಕ್ಷ ದೊರೆಯುವದು. ಈ ಮೌಲ್ಯಗಳ ಸಂಪಾದನೆಯೇ, ಸಾಧಕ ತನ್ನ ಕೊನೆಯ ಹಂತದಲ್ಲಿ ಸಾಧಿಸಿಕೊಳ್ಳುವ ಪರಾತ್ಪರ ವಸ್ತು ಸಾಕ್ಷಾತ್ಕಾರಕ್ಕೆ ಶೂನ್ಯವೆಂದೂ ಅದನ್ನು ಕಂಡುಕೊಳ್ಳುವಿಕೆಗೆ ಶೂನ್ಯ ಸಂಪಾದನೆಯೆಂದು ಕರೆಯುವ ವಾಡಿಕೆಯಿದೆ. ಇದು ಬೌದ್ಧರ ಕಲ್ಪನೆಗಿಂತ ಸ್ವಲ್ಪ ಭಿನ್ನ ಇದರ ಬಗ್ಗೆ ಹಿಂದೆ ಹೇಳಲಾಗಿದೆ. ಅಲ್ಲಿ ಏನು ಇಲ್ಲದ ಶೂನ್ಯ ಇಲ್ಲಿ ಎಲ್ಲದಕ್ಕೂ ಅದೇ ಕಾರಣ, ಆದುದರಿಂದಲೇ ಜಗತ್ತು ಉತ್ಪತ್ತಿ, ಜಗತ್ತನ್ನು ಉತ್ಪತ್ತಿ ಮಾಡಿ ಒಳಹೊರಗೆ ಎರಡು ಕಡೆ ಇರಬಲ್ಲದು ಅದೇ ಅಂದರೆ ಇಲ್ಲ, ಇಲ್ಲ ಅಂದರೆ ಅದೇ, ಅನ್ನುವ ಹಾಗೆ ಇದೆ ಈ ಸ್ಥಿತಿ. ಶಂಕರ ಕಲ್ಪನೆಯಲ್ಲಿ ಜಗತ್ತು ಮಿಥ್ಯ ಆದರೆ ಜಗತ್ತು ಇಲ್ಲಿ ಸತ್ಯವಾಗಿದೆ. ಬದುಕಿನ ಸಾರ್ಥಕ್ಯವನ್ನು ಗಳಿಸುವ ಅರ್ಥಪೂರ್ಣ ಹೆಸರು 'ಶೂನ್ಯಸಂಪದ'. ಅದನ್ನು ಬಳಸುವ ಮಾರ್ಗ ಸಾಧಕಗಳು ಐದು ಇವುಗಳಲ್ಲಿ ಕೆಂಚವಿರಣ್ಣ ಒಡೆಯರ ಸಂಪಾದನೆ ದೊರಕಿಲ್ಲ, ನಾಲ್ಕನ್ನು ತುಲನಾತ್ಮಕವಾಗಿ ತೆಗೆದುಕೊಂಡು ಅಧ್ಯಯನಿಸಲಾಗಿದೆ. ಕಾಯಗುಣವ ಕಳೆದು ಶೂನ್ಯವನ್ನು ಸಾಧಿಸಲು ಹೊರಟ ಜೀವನದರ್ಶನ ಧಾರ್ಮಿಕ ಗ್ರಂಥ ಇಲ್ಲಿ ಗೊಡ್ಡು, ಮೌಢ್ಯಗಳಿಲ್ಲ. ಸಂಪ್ರದಾಯದ ಸೋಲಿಲ್ಲ ಭಕ್ತಿ, ಜ್ಞಾನ, ವೈರಾಗ್ಯಗಳಿಗೆ ಮಾತ್ರ ಮಣಿಹ ಹಾಕಿಲ್ಲ ಜೀವನ ಮೌಲ್ಯಗಳಾದ ಸಮಾನ, ಮಾನವೀಯತೆ, ಭೂತನಕಂಪ

ಕಾಯಕಥನವನ್ನೊಳಗೊಂಡ ಸಾಮಾಜಿಕ ಮೌಲ್ಯತೆಯೊಂದಿಗೆ ವಿಶ್ವ ಮಾವನ ತತ್ವಗಳನ್ನು ಒಳಗೊಂಡು ಸಕಲ ಮಾನವ ಕೋಟಿಗೆ ಶಿವ ಪಥದ ಅರಿವು ಮೂಡಿಸುವ ಮೀಮಾಂಸಾ ಗ್ರಂಥ. ಯಾವುದೇ ಐತಿಹ್ಯವನ್ನು ಹೇಳಬೇಕಾದರೆ ಭಕ್ತಿಯ ಆತುರತೆಯಲ್ಲಿ ಏನೇನೊ ಹೇಳಲು ಹೋಗಿ ಮತ್ತೊಂದು ಹೇಳಿದಂತಾಗಿದೆ. ಹರಿಹರನಲ್ಲಿ ಅದರಂತೆ ಅದೇ ರೀತಿ ಹರಿಹರನನ್ನು ಶಿವಗಣಪ್ರಸಾದಿ ಸ್ವಲ್ಪ ಪ್ರಮಾಣದಲ್ಲಿ ಅನುಸರಿಸಿದಂತೆ ಕಾಣುತ್ತದೆ. ವಚನಗಳ ಸರಿಯಾದ ಪರಿಷ್ಕರಣೆ ಅಥವಾ ಅವುಗಳ ಅಧ್ಯಯನ ಈ ಇಬ್ಬರಿಗೆ ಸರಿಯಾಗಿ ಆಗದಿರುವುದೇ ಪ್ರಭು ಚರಿತ್ರೆ ನಿರ್ಮಾಣದಲ್ಲಿ ಸೋಲನ್ನು ಅನುಭವಿಸಿದ್ದಾನೆ. ಕೊನೆಯ ಎರಡು ಸಂಪಾದನೆಯಲ್ಲಿ ಮಾತ್ರ ಸಿದ್ಧಲಿಂಗ ಮತ್ತು ಸಿದ್ಧ ವೀರಣ್ಣ ಒಡೆಯ ವಚನಾಧ್ಯಯನವನ್ನು ಕೈಗೊಂಡು ಸತ್ಯಸಂಶೋಧನೆಯನ್ನು ಮಾಡಿದರೆನ್ನಬಹುದು. ಅದಕ್ಕಂತೆ ಅವರು ವಚನದಲ್ಲಿದ್ದ ಮಾಯಾ ಕೋಲಾಹಲ ಪದವನ್ನು ಸಂಪಾದನೆಯಲ್ಲಿ ಹೇಳಿದರೆನ್ನಬಹುದು. ಇನ್ನೊಂದು ಗಮನೀಯ ವಿಷಯವೆಂದರೆ ಅನಿಮಿಷನ ಪ್ರಸಂಗ. ಅಲ್ಲಿ ಕಂಡ ಅಂತರಂಗ ಅದ್ಭುತ ಪ್ರವೇಶಿಸಲಿಕ್ಕೆ ಹೋಗಿ ಅಲೌಕೀಕನಾಗುವಂತೆ ಮಾಡಿ ಅನಿಮಿಷನ ಅಸ್ತಿತ್ವವೇ, ಐಕ್ಯದ ನೆಪದಲ್ಲಿ ಹಾಳುಮಾಡಿದ ಭಾವುಕ ಚಿಂತನಕಾರರು ಮೊದಲಿನವರು. ಆತ ಅನಿಮಿಷ ಅನುಷ್ಠಾನ ಗೈಯುತ್ತಿರಬೇಕು. ನಿರ್ವಯಲಸಮಾಧಿ ಅಂದ ಹಾಗೆ ಆತ ಇನ್ನೂ ಬದುಕಿದ್ದಾಗಲೇ ಪ್ರಭು ದಿಕ್ಷಾ ಪ್ರಸಂಗ ಜರುಗಿರಬಹದು. ಸಿದ್ಧ ಸಮಾಧಿಯೋಗ ಅನ್ನುವ ಅರ್ಥದಲ್ಲಿ ಎಡೆಯೂರ ಸಿದ್ಧಲಿಂಗರಂತೆ ವಾಯುವಿನ ಸಹಾಯದಿಂದ ಲಿಂಗ ಸಂಯೋಗ ಪೂಜೆಯಲ್ಲಿ ನಿರತನಾದಾಗ ಶಿಷ್ಯ ಅನುಗ್ರಹವಾಗಿರಬೇಕು. ಸಮಾಧಿ, ಸಜೀವ, ಇವೆಲ್ಲವುಗಳ ಕಲ್ಪನೆ ಮಾಡುವುದರ ಮೊದಲು ದೀಕ್ಷೆಯ ಬಗ್ಗೆ ಮೊದಲೆ ಪ್ರಭು ತಿಳಿದಿರಬೇಕು. ಪ್ರಭು ವಿವೇಚನಾವಾದಿ ಸೂಕ್ಷ್ಮಸಂವೇದಿ ಮಾಯೆಯನ್ನು ತಿರಸ್ಕರಿಸಿದ ಆತ, ಒಂದು ವೇಳೆ ಮಾಯೆಯನ್ನು ಮದುವೆಯಾಗಿ ಬನವಾಸಿಯ ಅರಸನೇ ಆಗಬಹುದಿತ್ತು. ಏಕೆಂದರೆ ಆ ಅರಸನಿಗೆ ಮಾಯೆ ಒಬ್ಬಳೇ ಮಗಳು, ಆದರೆ ಅದಕ್ಕೆ ಪ್ರಭು ಆಸ್ಪದ ಕೊಡಲಿಲ್ಲ ಅಂದ ಮೇಲೆ, ಸತ್ತ ದೇಹದಿಂದ ಲಿಂಗ ಪಡೆದು ಅದನ್ನೆ ಸತ್ ಪಥವಾಗಿಸಿ ಹೇಗೆ ಸಮಾಧಾನಪಡಿಸಿಕೊಂಡ? ಜೀವನ ಪರ್ಯಂತರ ಸಮಾಧಾನ ತರುವ ಸಂಗತಿ ಹೇಗೆ ಆಗಿತ್ತು ಹೇಳಿ? ಹಾಗಾಗದೇ ಅನಿಮಿಷನಿಂದಲೇ ಮಂತ್ರೋಪದೇಶವಾಯಿತು ಎಂದು ತಿಳಿಯಬಹುದು, ಅಲೌಕೀಕ ಶಕ್ತಿಗೆ ವೈಜ್ಞಾನಿಕತೆ ಮಹತ್ವ ಕೊಡದೇ ಹೋದರೂ ಅತಿಯಾದ ಕಲ್ಪನೆ ಸರಿಯಾದುದಲ್ಲ. ಸಾಧನೆ ತಿಳಿಯ ತೊಡಕಿನ ಪ್ರಸಂಗವನ್ನು ಸುಂದರಗೊಳಿಸಲು ಹೋದ ಕಾವ್ಯಕೃತಿಗಳು ದಕ್ಷಿಣ ಭಾರತದ ಕನ್ನಡ ಸಾಹಿತ್ಯ ದೃಷ್ಟಿಯಲ್ಲಿ ಮುನ್ನಾಲ್ಕು ಭಾಗಗಳನ್ನಾಗಿ ಮಾಡಬಹುದು. ೧. ಕ್ರಿ.ಶ.ಕದ ಸಂಗಮ ಸಾಹಿತ್ಯ ೨. ಏಳು - ಎಂಟನೆ ಶತಮಾನದ ನಾಯ್ನಾರ್ ಹಾಗೂ ಆಳ್ವಾರುಗಳಿದ್ದು ೩. ೧೦ನೇ ಶತಮಾನದ ಜೈನ ಚಂಪೂ ಸಾಹಿತ್ಯ ೪. ೧೨ನೇ ಶತಮಾನದ ಶರಣರ ವಚನಸಾಹಿತ್ಯ. ಈ ವಚನ ಸಾಹಿತ್ಯ ಉಪನಿಷತ್ತು, ಗೀತೆ, ಬ್ರಹ್ಮಸೂತ್ರ ಈ ಪ್ರಸ್ತಾವನತ್ರಯಗಳ ಸಾರವೆನ್ನಬಹುದು. ವಚನ ಸಂವಾದ ಸಂಘಟಿತ ಆಧ್ಯಾತ್ಮಿಕ ಕಾವ್ಯ ಈ ಶೂನ್ಯ ಸಂಪಾದನೆ. ಇಲ್ಲಿ ಅತೀ ಘುಹನತಕ ಸಾಹಿತ್ಯವನ್ನು ಪ್ರಭು ಹೇಳಿದರೆ, ಆತ್ಮಾನ್ವೇಷಣೆಗಾಗಿ ಮುಕ್ತಾಯಕ್ಕ, ಗೂಢ ಅಥವಾ ಗುಪ್ತ ಭಕ್ತಿಗೆ ಮರುಳ ಶಂಕರ, ಅತೀತ ಗ್ರಹನ ಷಟಸ್ಥಲ ಸಾಮರಸ್ಯ ಜ್ಞಾನಕ್ಕೆ ಚನ್ನಬಸವಣ್ಣ ವಿನಯದಿಂದ ಹೃದಯಗೆಲ್ಲುವ ಭಕ್ತಿ ಬಸವ, ಯೋಗ ಮಾರ್ಗಕ್ಕೆ ಸಿದ್ಧರಾಮ, ದೀರ ಸಂಕಲ್ಪ ಕರ್ತ ಮಡಿವಾಳ ಮಾಚಯ್ಯ, ಮುಗ್ಧ ಮಧುರ ಭಕ್ತಿಗೆ ಅಕ್ಕಮಹಾದೇವಿ, ಕಪಟ ಹಾಗೂ ಆಡಂಬರ ದೂರಮಾಡುವ ಘಟ್ಟವಾಳ ಮುದ್ದಣ್ಣ, ದುಡಿಮೆಗೆ ಮೀರಿದ ವರಮಾನ ದೇವರು

ಕೊಟ್ಟಿರುವ ತಿರಸ್ಕರಿಸುವ ಭಾವ ನುಲಿಯ ಚಂದಯ್ಯ, ಕಾಡ ಕಟ್ಟಿಗೆಯನ್ನು ತಂದು ಮಾರಿ ಪ್ರಸಾದಿಸುವ ಮತ್ತೊಬ್ಬರ ಸೊಮ್ಮನ್ನು ಬೇಡವೆನ್ನುವ ಆತ್ಮ ಶ್ರೀಮಂತಿಕೆ ಮೋಳಿಗೆಮಾರಯ್ಯ ಹೀಗೆ ಹಲವಾರು ಶರಣರ ಸಂವಾದವನ್ನೊಳಗೊಂಡ ಸಂಪಾದನೆ ಒಂದಕ್ಕಿಂತ ಒಂದು ಪರಿಷ್ಕರಣೆಗೊಳ್ಳುತ್ತಾ ಸಾಗಿದೆ. ಶಿವಗಣ ಪ್ರಸಾದಿಯ ಸಂಪಾದನೆ ಹಲಿಗೆದೇವನ ಸಂಪಾದನೆ - ಗುಮ್ಮಳಾಪುರದ ಸಂಪಾದನೆ - ಗುಳೂರ ಸಿದ್ಧವೀರಣ್ಣ ಸಂಪಾದನೆ - ಹೀಗೆ ಈ ಕ್ರಮಶಹಾ ಪರಿಸ್ಕರಣೆಗೊಂಡ ಸಂಪಾದನೆಗಳು ವಿಚಾರ ಏನರಿಯೇ ಆ ಶೂನ್ಯ ತಿಳಿಯುವದಿಲ್ಲ, ಆಚಾರ ಶೂನ್ಯರಿಗೆ ಆ ಶೂನ್ಯ ಸಂಪಾದನೆ ಕಷ್ಟಸಾಧ್ಯ. ಆ ಶೂನ್ಯ ಮೊಟ್ಟಮೊದಲಿನಲ್ಲಿ ಏನು ಇಲ್ಲದ ಬಯಲು, ಅದರಿಂದ ಉತ್ಪತ್ತಿ ಪಡೆದ ಜಗತ್ತು ಉತ್ಪಾಕಾರ್ಥ ರೂಪ. ಶೂನ್ಯದಿಂದ ಸೃಷ್ಟಿ ಕರ್ಪೂರ ಬೆಂಕಿಯಲ್ಲಿ ಉರಿದಂಗೆ ಶೂನ್ಯದಲ್ಲಿ ಶೂನ್ಯನಾಗುವುದೇ ಮುಕ್ತಿ ಅದರ ಸಂಪಾದನೆಯಲ್ಲಿ ತೊಡಗುವ ಪರಿಯೇ ಭಕ್ತಿ. ತೊಡುಗವ ಭಕ್ತಿಗೆ ಮತ್ತು ಅಡಗುವ ಮುಕ್ತಿಗೆ ನಡುವೆ ಸಹಕಾರಿಯಾಗುವ ಶಕ್ತಿಯೇ ಜೀವ - ಶಿವರ ಸಂಯೋಗದ ಶಿವಯೋಗ. ಆ ವ್ಯಕ್ತಿಶೂನ್ಯದಲ್ಲಿ, ಕ್ರಿಯೆಯಲ್ಲಿ, ಇರುವ ವ್ಯಕ್ತ ಭಕ್ತನ ಸಂಪಾದನೆ ಮತ್ತು ಅವ್ಯಕ್ತ ಶೂನ್ಯದಲ್ಲಿಡಗಿರುವ ಆ ಶಕ್ತಿ ಸ್ವಯಂ ವಾದದು. ಈ ಶಕ್ತಿಯ ದರ್ಶನಕ್ಕೆ ಶಕ್ತಿ ವಿಶಿಷ್ಟಾದ್ವೈತ ಅಥವಾ ಪ್ರಭುದರ್ಶನ ಅನ್ನಬಹುದು. ಶಿವಶಕ್ತಿ ವಿಶಿಷ್ಟ, ಆತ ಜೀವ - ಜಗತ್ತುಗಳಾಗಿರುವ ಶಿವನನ್ನು ಜೀವಶಕ್ತಿಗೆ ಇಳಿಸಿ ಜೀವಸ್ಥಿತಿಯಿಂದ ಶಿವಸ್ಥಿತಿಗೆ ಮುಟ್ಟಿಸುವುದೇ ಶಕ್ತಿ. ಅಧೋನ್ಮುಖಿಯಾಗಿ ಇಳಿಸುವ ಊರ್ಧ್ವ ಮುಖವಾಗಿ ಏರಿಸುವ ಶಕ್ತಿಯ ಸಾಮರಸ್ಯವೇ ಎರಡು ಒಂದಾಗುವಿಕೆಯೇ ಯೋಗವಾಗಿದೆ, ಅದನ್ನು ಶಿವನೊಂದಿಗೆ ಬೆರೆಯುವದರಿಂದ ಶಿವಯೋಗ. ಶೂನ್ಯವೆಂದರೆ ಅವ್ಯಕ್ತರೂಪ ಸಂಪಾದನೆ ಎಂದರೆ ವ್ಯಕ್ತರೂಪ, ಶಿವ ಎರಡು ಹೌದು ಅದ್ವೈತಿಗಳ ನಿರ್ಗುಣ ನಿರಾಕಾರ ರೂಪಗಳನ್ನು ಒಪ್ಪಿದಂತೆ ದ್ವೈತಿಗಳ ಸಗುಣ ಸಾಕಾರವನ್ನು ಕೂಡಾ ಪ್ರಭು ಒಪ್ಪುವನು. ಆದ್ದರಿಂದ ಆತ ದ್ವೈತಾದ್ವೈತಿ, ದ್ವೈತವನ್ನು ಅಲ್ಲಗಳೆದ ಅದ್ವೈತಿಯಲ್ಲ, ಅದ್ವೈತವನ್ನು ಅಲ್ಲಗಳೆದ ದ್ವೈತಿ ಅಲ್ಲ. ಅದ್ವೈತಿಗಳ ಜ್ಞಾನವನ್ನು ದ್ವೈತಿಗಳ ಕ್ರಿಯೆಯನ್ನು ಅಳವಡಿಸಿಕೊಂಡು ಸಮ ಸಮುಚ್ಚಯಾತ್ಮಕ ಮಾರ್ಗವಿದು. ಮೊದಲನೆ ಸಂಪಾದನೆಕಾರ ಆತ ಅನುಭವ ಮಹಾನುಭಾವಿ ಪ್ರಸಾದಿ, ಅಲ್ಲಲ್ಲಿ ಚದುರಿದ ವಚನಗಳನ್ನು ಸಂವಾದ ರೂಪದಲ್ಲಿ ಹೊಂದಿಸಿ, ವಿಶಿಷ್ಟ ಸನ್ನಿವೇಶಗಳನ್ನು ವಚನಗಳಿಂದಲೇ ಪೂರೈಸಿ, ಪ್ಲೊಟೋ ಸಂವಾದಗಳಂತೆ ಮುಡಿತೋರಣ ಕಟ್ಟಿದ್ದು ಒಂದು ಪವಾಡವೇ ಸರಿ. ಶೂನ್ಯ ಸಂಪಾದನೆಗಳು ಒಟ್ಟು ಐದು

೧. ಶಿವಗಣ ಪ್ರಸಾದಿ ಮಹಾದೇವಯ್ಯಗಳ ಸಂಪಾದನೆ - ಕ್ರಿ.ಶ. ೧೪೨೦
೨. ಹಲಗೆ ದೇವರ ಶೂನ್ಯ ಸಂಪಾದನೆ - ಕ್ರಿ.ಶ. ೧೫೨೦
೩. ಹಲಿಗೆ ದೇವರ ಶಿಷ್ಯ ಕೆಂಚ ವೀರಣ್ಣ ಒಡೆಯ ಸಂಪಾದನೆ - ಕ್ರಿ.ಶ. ೧೪೯೫
೪. ಗುಮ್ಮಳಾಪುರದ ಸಿದ್ಧಲಿಂಗರ ಸಂಪಾದನೆ - ಕ್ರಿ.ಶ. ೧೫೦೦
೫. ಗೂಳೂರು ಸಿದ್ಧವೀರಣ್ಣ ಒಡೆಯರ ಸಂಪಾದನೆ - ಕ್ರಿ.ಶ. ೧೫೧೦ - [೨೯]

ಈ ಶೂನ್ಯ ಸಂಪಾದನೆಗಳಲ್ಲಿ ಮುಖ್ಯವಾಗಿ ಎರಡು ಪ್ರಸಂಗಗಳನ್ನು ನೋಡಬಹುದು. ಪ್ರಭು ಕಲ್ಯಾಣಕ್ಕೆ ಬಂದದ್ದು ಎರಡನೆಯದು ಪ್ರಭುವಿನ ಆರೋಹಣ. ಮುಕ್ತಾಯಕ್ಕ ಎಲ್ಲರಂತೆ ದುಃಖಿಸುವ ಪರಿಯನ್ನು ಸತ್ತವರಿಗಾಗಿ ಅಳುವದೇನು ಸೂಕ್ತವೇನು? ಅಜಗಣ್ಣ ಯಾವಾಗಲೂ ಕೂಡಾ ಅಮರ ಆತನು

ಸತ್ತಿರುವನೆಂದು ತಪ್ಪಾಗಿ ತಿಳಿದ ಕಲ್ಪನೆಯೇ ದು:ಖಕ್ಕೆ ಕಾರಣ ಎಂದು ತಿಳಿಹೇಳಿದ ಪ್ರಭು. ಸಿದ್ಧರಾಮಯ್ಯ ಉರಿಗಣ್ಣನ್ನು ಪಡೆದು ದೇವಾಲಯಗಳನ್ನು, ಕೆರೆಗಳನ್ನು ಕಟ್ಟಿಸುವುದೇ ಜೀವನದ ಧ್ಯೇಯವೆಂದು ತಪ್ಪಾಗಿ ತಿಳಿಸಿದ್ದ ಆತನನ್ನು ತಿದ್ದಿ ಸರಿಯಾದ ಮಾರ್ಗಕ್ಕೆ ಹಚ್ಚಿದ. ಮರುಳ ಶಂಕರ ಯಾವುದೇ ಆಡಂಭರವಿಲ್ಲದೇ ಮಡಿಯೂ ಮಾಡದಂತಿರುವ ಪರಿ ನಿಜವ್ಯಕ್ತಿತ್ವ ವಿಕಸನವಾಗಿದೆ. ಪ್ರಥಮೋಪದೇಶದಲ್ಲಿ ಶೂನ್ಯ ತತ್ವ, ಜಗತ್ತಿನ ಉತ್ಪತ್ತಿಯ ಬಗೆಗೆ ಹೇಳಲಾಗಿದೆ. ಗುಗ್ಗಯ್ಯನ ಪ್ರಸಂಗ, ಅನಿಮಿಷಯ್ಯನ ಪ್ರಸಂಗಗಳು ಬರುತ್ತವೆ. ಹಾಗೆಯೇ ಮಾಯಾ ವಿಡಂಬನ ಸ್ಥಲ, ಸಂಸಾರ ಹೇಯಸ್ಥಲ, ಪಿಂಡಸ್ಥಲ, ವಿವರಣೆ ಹೀಗೆ ಬರುವದು. ಸಂಪಾದನೆಯ ಪರಾಮರ್ಶೆಯಲ್ಲಂತು ಒಂದರಿಂದ - ಒಂಬತ್ತನೆಯ ಅಧ್ಯಾಯದವರೆಗೆ ಪ್ರಥಮೋಪದೇಶದ ಸಾರವನ್ನೇ ಹೇಳಲಾಗಿದೆ. ಶೂನ್ಯವೆಂದರೇನು? ಅದು ಏನು ಇಲ್ಲದ್ದೇ? ಇದಕ್ಕೆ ಇನ್ನೊಂದು ಅರ್ಥ ಬಯಲು ಎಂದು. ಇಲ್ಲಿ ಭೂಸೂನೂರಮಠರು ಇದಕ್ಕೆ ಹೊಂದಿಕೆಯಾಗಿ ಅರವಿಂದರ ಉಪನಿಷತ್ತುಗಳ ಶೃತಿಗಳನ್ನು ಪ್ರಭುವಿನ ಶರಣ ಸಾಹಿತ್ಯದೊಂದಿಗೆ ಹೇಳುತ್ತಾ ಹೋಗಿದ್ದಾರೆ. ಸಿದ್ಧರಾಮಯ್ಯಗಳ ಸಂಪಾದನೆಯಲ್ಲಿ ಪ್ರಭುಸಂಚಾರ ಮಾಡುತ್ತಾ ಸೊನ್ನಲಿಗೆಗೆ ಬಂದ ಆತನ ಕೆಲಸ, ಸಿದ್ಧರಾಮನನ್ನು ಸರಿಯಾದ ಮಾರ್ಗಕ್ಕೆ ಹಚ್ಚುವದು. ಸಿದ್ಧರಾಮನ ಆಡಂಬರವನ್ನು ಅತಿಯಾದ ದೊಡ್ಡಸ್ತಿಕೆಯನ್ನು ಕೇಳಿ. ನಿಜತತ್ವದ ಅರಿಯನ್ನು ತಿಳಿಹೇಳಲು ಪ್ರಭು ಸಿದ್ಧರಾಮನನ್ನು ಸಂಧಿಸಿದ. ಸೊನ್ನಲಿಗೆ ಆಗ ಒಂದು ಹಳ್ಳಿ ಈಗ ಪಟ್ಟಣ ಸಿದ್ದರಾಮ ಜೀವನದ ಪರಮಧ್ಯೆಯವೆಂದರೆ ಲೋಕಕಲ್ಯಾಣಕ್ಕೆ ದುಡಿಯುವದೆಂದೆ ತಿಳಿದಿದ್ದ ಅದನ್ನು ಪ್ರಭು ಗುಡಿ ಗೋಪುರ ಕೆರೆಗಳನ್ನು ಕಟ್ಟಿಸುವ ಆತನಿಗ ದೊಡ್ಡ ಒಡ್ಡಸಿದ್ಧರಾಮನೆಂದು ಜರಿದ, ಆತನಲ್ಲಿ ಹುದುಗಿದ ರಾಜಸ ಅಹಂಕಾರವನ್ನು ಹಿಂತೆಗೆಯಲು ಬೇಕಿದ್ದ ಗುರು, ಆಗ ಮುಕ್ಕಣ್ಣನಿಂದ ಹಣೆಗಣ್ಣನ್ನು ಪಡೆದಿದ್ದ ಆತ ಸಿಟ್ಟುಬಂದಾಗ ಎದುರು ಬಂದವರನ್ನು ಧಹಿಸುವುದೇ ಆಗಿತ್ತು, ಸಿಟ್ಟು ವ್ಯಕ್ತಿತ್ವರೂಪ ಆತನ ಕಾರ್ಯಗಳಲ್ಲಿ ಮಗ್ನರಾದವರು ಎಲ್ಲರೂ ವಡ್ಡರು, ಗುಡ್ಡರು, ಕಲ್ಲು ಕುಟಿಕರು, ಕುಶಲ ಕರ್ಮಿಗಳು, ಕಾರ್ಮಿಕರು ಹೀಗೆ ಒಂದು ದೊಡ್ಡ ಸಮೂಹವೇ ಇತ್ತು. ನಿಜದ ದಾರಿ ಗೊತ್ತಿರದ ಸಿದ್ಧರಾಮಂಗೆ ಒಬ್ಬ ಮಾರ್ಗದರ್ಶಕನ ಅವಶ್ಯಕವಿತ್ತು. ಶಿವಯೋಗಿ ತನ್ನ ಶರೀರವೃತ ಹಾಳು ಮಾಡಬಾರದು, ಇದರ ಸದುಪಯೋಗವಾಗಬೇಕೆಂದು ತಿಳಿದು ಸಿದ್ಧರಾಮ, ಕೆರೆ, ಅರವಟ್ಟಿಗೆ, ಗುಡಿ - ಗೋಪುರಗಳನ್ನು ಕಟ್ಟಿಸುತ್ತಾ ಲಿಂಗ ಪ್ರತಿಷ್ಠಾಪನೆ ಮಾಡುತ್ತಾ ಸಾಗಿರುವದು ಒಂದು ಹಂತದವರೆಗೆ ಮಾತ್ರ ಒಳ್ಳೆಯದು. ಅದೇ ಜೀವನದ ಕೊನೆಯೆಲ್ಲಾ, ಆದರೆ ಈ ಕೆಲಸ ಅರಸರಂತೆ ದರ್ಪದಿಂದ ಸಾಗಿದೆ. ಹೊನ್ನು - ಹೆಣ್ಣು - ಮಣ್ಣು ಪಂಚೇಂದ್ರಿಯ ವಿಷಯ, ಭೋಗ ಭಾಗ್ಯ, ವಿಲಾಸ, ಕೀರ್ತಿ, ವಾರ್ತೆ, ಪುಣ್ಯ ಪಾಪ ಸ್ವರ್ಗ ನರಕ ಇವೆಲ್ಲಾ ಭವ ಮರಣ ಚಕ್ರ ವ್ಯವಹಾರವಾಗಿದೆ. ಇದೊಂದು ಸಂತೆ (ಬಜಾರ್ ) ಪ್ರಭು ಇದನ್ನು ನೋಡಿ ಇದು ಏತಕ್ಕಾಗಿ ಯಾರಿಗಾಗಿ ಇದರ ಅನುಸಂಧಾನವೇನು ಇದರಿಂದ ಜೀವನ ವ್ಯರ್ಥ ಹಾಳಾದಂತೆ, 'ದೇಹವೇ ದೇಗುಲವಾಗಿರಲು ಬೇರೊಂದು ದೇವಾಲಯ ಬೇಕಿಲ್ಲ' ಎಲ್ಲಿಯ ಕೆರೆ, ಮತ್ತೇಲ್ಲಿಯ ಗುಡಿ? ಎಂದು ವಡ್ಡರು, ಗುಡ್ಡರಿಗೆ ಈ ಕೆರೆಗಳನ್ನು ಕಟ್ಟಿಸುವಾತ ಅವನೇ ನಿಮ್ಮ ಸಿದ್ಧರಾಮನೇನು? ಎಂತಹ ಹುಚ್ಚಪ್ಪ ಅವನು? ಒಳಗೆ ತೊಳೆಯಬೇಕು, ಅವನು ತಿಳಿಯದೇ ಹೊರಗೆ ತೊಳೆಯುವ ಅರೆ ಹುಚ್ಚ ..... ಕೆರೆಯ ..... ಕಟ್ಟಿಸುವ ವಡ್ಡರಾಮಯ್ಯನ ಇರವೆಂತು ಹೇಳುವದು, ಇತ ಸರಿಯಾದ ದೇವರನ್ನು ಅರಿಯದ ಮರುಳಸಿದ್ಧ. ಸರಿಯಾಗಿ ತಿಳಿಯದ ನಿಜದ ನಿಲುವ ಕಾಣದ, ಕೆರೆ ದೇಗುಲಗಳಲ್ಲಿ ಮುಳುಗಿದ ನಿಮ್ಮ ವಡ್ಡರಾಮಯ್ಯ ಎಲ್ಲಿ? ಆತನ ಶಿಷ್ಯರಿಗೆ ಪ್ರಭುವಿನ ಪ್ರಶ್ನೆ, ವಡ್ಡರಿಗೆ

ತಾಳಲಾರದ ಸಿಟ್ಟು ನಮ್ಮ ಗುರುವನ್ನು ಬೈಯ್ಯುವ ಇತನಾರೆಂತು ಕಲ್ಲಿನಿಂದ ಹೊಡೆದೇ ಹೊಡೆದರು, ಆದರೆ ಹೊತದೇ ಧಣಿದರು ವಿನಹ ಹೊಡಿಸಿಕೊಂಡವರಿಗೆ ಹೊಡಿಯಲೇಯಿಲ್ಲ, ಪೆಟ್ಟು ಹತ್ತಿಲ್ಲ, ದುಃಖ, ಕೋಪ ತಾಪಗಳ ಕಲ್ಲಿನ ರಾಶಿಯೇ ಬಿದ್ದಿತು, ಬಯಲು ದೇಹಿ ಈ ರಾಶಿಯ ಮೇಲೆಯೇ ನಿಂತಿದ್ದ. ಆಗ ಶಿಷ್ಯರು ಸಿದ್ಧರಾಮನಡೆಗೆ ಹೋಗಿ ಸುದ್ದಿಯನ್ನು ಮುಟ್ಟಿಸಿದರು. ವಡ್ಡಸಿದ್ಧಯ್ಯ ಎನ್ನುತ್ತಿದ್ದಾನೆ ನಿಮಗೆ ನಿಂದಿಸುವ ವ್ಯಕ್ತಿ ಯಾರೋ ಎಂದು ಹೇಳಿದರು. ಆತನಿಗೆ ಇವರಿಗಿಂತಲೂ ಕೋಪ, ಗುಡ್ಡರು ಏನು ಮಾಡಿಯಾರು? ಸಹಜ ನಾಡಿದರೇ ಸಿಟ್ಟಿಗೆದ್ದರು ಹೊಡೆದರೂ, ಬಡಿದರೂ ಅವರಿಗೆ ಗುರು ಹಿರಿಯರ ಗುರುತು ಇಲ್ಲ, ದೇವ ಭಕ್ತರ ಭಾವವಿಲ್ಲ, ಲಿಂಗ - ಜಂಗಮ ಅಂದರೇನು ತಿಳಿದಿಲ್ಲ, ಮುಂದೆ ನಿಂದವರ ನಿಲುವೇನು? ಗೊತ್ತಿಲ್ಲ, ಭೃತ್ಯಾಪರಾದಕ್ಕಾಗಿ ಸ್ವಾಮಿಗೆ ದಂಡ ತಪ್ಪದು ಶಿಷ್ಯನ ಪಾಪ ಗುರುವಿಗೆ ಆದಾಂತಾಯಿತು. ಗುರುವಿಗೆ ಶಿಷ್ಯರಿಗೆ ಅಧಿಕ ಕೋಪ ಶಿಷ್ಯರೊಂದಿಗೆ ಬಂದು ಪ್ರಭುವಿಗೆ ನೀನಾರು ಇಂದ್ರಜಾಕನೋ? ಅದರ ಆಟ ನಮ್ಮ ಮುಂದೆ ನಡೆಯದು. ಹಾಗೆಲ್ಲಾ ಗದರಿಸಿದಾಗ ಪ್ರಭು ನಸುನಗುತಲೇ ಇದ್ದ. ಹೀಗೆಯೇ ಎಷ್ಟು ಜನರನ್ನು ಸುಟ್ಟಿಯೋ ನಿನ್ನ ಉರಿಗಣ್ಣಿನಿಂದ ಸುಡದವರನ್ನು ಸುಡಬಹುದು. ಆದರೆ ಒಮ್ಮೆ ಸುಟ್ಟು ಬೂದಿಯಾಗಿ ಬಯಲಾದವರ ನಿನೇನು ಸುಡಬಲ್ಲೆ ಗೊಡ್ಡು ಸಿದ್ಧರಾಮ ಎಂದಾಗ ಸಿದ್ಧರಾಮ ಉರಿಗಣ್ಣನ್ನು ತೆಗೆದ ಆ ಉರಿ ಎಲ್ಲರನ್ನು ಸುಡ ಹತ್ತಲು ಪ್ರಭು ತನ್ನ ಅಂಗಾಲಿನಲ್ಲಿ ಉರಿಯನ್ನು ಅಡಗಿಸಿಕೊಂಡ. ಅಂಧಕಾರದ ಸಿಟ್ಟಿನ ಸಿಂಹಾಸನದಲ್ಲಿದ್ದ ಸಿದ್ಧರಾಮ ಉರಿಯಜ್ವಾಲೆ ನಂದಿದಾಗ ತಣ್ಣಗಾದ ಸಿದ್ಧರಾಮ ಪ್ರಭುವಿಗೆ ಶರಣುಹೋದ, ಅಂತರಾತ್ಮದಲ್ಲಿ ಹುದುಗಿರುವ ರಾಮನನ್ನು ತಿಳಿಯದೇ ಹೋದ ಸಿದ್ಧ ಪ್ರಭುವಿನಿಂದ ಕಾಣಲು ದಾರಿ ಮಾಡಿಕೊಟ್ಟಂತಾಯಿತು. ಪ್ರಭುವಿನ ಪಾದದ ಮೇಲೆ ಸಿದ್ಧರಾಮ ಕ್ಷಮತೆಯ ಮಾತುಗಳನ್ನು ಬೇಡಿಕೊಂಡ ಸಿದ್ಧರಾಮನ ಮಾತು ಎನ್ನಕೋಪವೆಂಬುದು ನಿಮ್ಮ ಕಣ್ಣುನೋಡಾ, ನಾನೆ ಎನ್ನ ಪರಿವೆತರದು ಹೇಳಾ? ಎನ್ನ ದಿಟದ ಭಕ್ತಿ ನಿಮ್ಮ ರೂಪು ಕಂಡಯ್ಯ, ಎನ್ನ ಸಟೆಯ ಭಕ್ತಿಯು ನಿಮ್ಮ ರೂಪು ಕಂಡಯ್ಯ. ಎನಗೆ ಬೇರೆ ಸ್ವತಂತ್ರ ಉಂಟೇ ಕಪಿಲಸಿದ್ಧ ಮಲ್ಲಿನಾಥ. ಇದಕ್ಕೆ ಪ್ರಭುವಿನ ಉತ್ತರ

ಕೋಪ ತಾಪವೆಂಬುದು ಅರಿವಿನೊಳಗೆ ಭಕ್ತಿಯುಕ್ತವೆಂಬುದು ನಿತ್ಯದೊಳಗೆ, ಭಾವದ ಬಗೆಗೆ ಬಣ್ಣವಿಟ್ಟುಕೊಂಡರೆ ನಿರ್ಭಾವಿಕಂಗೆ ಅದು ಸಹಜವಾದುದೇ? ಬಂದ ಶರಣರ ನಿಲುವನರಿದು ನಿಂದು ಸಂಶಯವಳಿದು ನಂಬದಿದ್ದರೆ ಹಿಂದು ಮುಂದಾಗಿ ಹೋಹನುಕಾಣಾ ಗುಹೇಶ್ವರಾ [೪೦]

ಅಂದರೆ ಬಂದ ಕೆಲಸವನ್ನು ಮಾಡಿಯೇ ಹೋಗುವೆನೆಂಬ ಚಲ ಪ್ರಭುವಿನದು. ಬಂದವರನ್ನು ಯಾರು ಎಂದು ತಿಳಿದು ಮಾತಾಡಬೇಕು ಯಾತಕ್ಕಾಗಿ ಬಂದರೆಂಬುದನ್ನು ಅರಿಯಬೇಕಲ್ಲವೆ ಸಿದ್ಧನ ಆಕ್ರೋಶ

ಬ್ರಹ್ಮನಾದಾಡಾಗಲೀ, ವಿಷ್ಣುನಾದಡಾಗಲೀ, ಇಂದ್ರನಾದಡಾಗಲೀ, ಚಂದ್ರನಾದಡಾಗಲೀ ಎಂಬ ಶಿವಶರಣರ ನೋವು ಎನ್ನ ನೋವು ನೋಡಾ! ಅವರ ನೊರಸುವೆ ನುರುಹುವನೆಂದು ಕಪಿಲ ಸಿದ್ಧಮಲ್ಲಿಕಾರ್ಜುನ ತನ್ನ ನೊಸಲಗಣ್ಣಿಗೆ ಬೆಸನಿತ್ತರೆ ನಿಲಬಲ್ಲ ಗುರುವನಾರನು ಕಾಣೆ.[೪೧]

ಸಿದ್ಧರಾಮನು ತನ್ನ ಹಿಂಬಾಲಕರ ನೋವು ತನ್ನ ನೊವೆಂದು ತಿಳಿದು ಉರಿಗಣ್ಣನ್ನು ತೆಗೆದ, ಆದರೆ ತನ್ನ ಹಿಂಬಾಲಕರ ಮೇಲಿಟ್ಟ ಪ್ರೀತಿ ಮೆಚ್ಚುವಂತದ್ದು ಆಗಿದೆ. ಆದರೆ ಅರಿಯದ ಗುರುಶಿಷ್ಯರಿಗೆ

ಉದ್ಧಾರವಾಗಬೇಕಿದೆ. ಅದಕ್ಕೆ ಪ್ರಭು ಏ ಹುಚ್ಚಾ ಸಿಟ್ಟನ್ನು ಬಿಡು, ಅದು ನಿನ್ನನ್ನೇ ಸುಡುವದು, ನೀನು ನಿನ್ನ ಜೀವನವನ್ನು ಬದಲಾಯಿಸಿಕೋ ಉರಿಗಣ್ಣು ತೆರೆದರೆ ಜೀವರಾಶಿ ಸಾಯುತ್ತದೆ, ಅದರಿಂದೇನು ಪ್ರಯೋಜನ? ಕಾಡಿನಲ್ಲಿ ಉರಿಹತ್ತಿದರೆ ಅಡವಿಯೇ ನಾಶ, ನೀರು ಗಿಚ್ಚು ಹತ್ತಿದರೆ ಸಮುದ್ರವೇ ನಾಶ, ಸಿಟ್ಟು ಬಂದಿತೆಂದರೆ ಒಡಲು ನಾಶವಾಗುತ್ತದೆ ತಿಳಿಯಿತೆ. ನನಗಂತು ನಿನ್ನ ಅಹಂಕಾರದ ಉರಿ ತಾಕುವದಿಲ್ಲ.

ನಿಮ್ಮ ಶಕ್ತಿ ಜಗದೊಳಗಿಪ್ಪುದು ಜಗದಶಕ್ತಿ ನಿಮ್ಮೊಳಗಿಪ್ಪುದು, ಜಗಕ್ಕೆ ನಿನಗೆ ಬೇಧವಾದುದಕ್ಕೆ ಬೆರಗಾದೆನು! ಅಂದೊಮ್ಮೆ ತ್ರಿಪುರವ ಸುಟ್ಟಲ್ಲಿ ನಾಚಿತೆನ್ನ ಮನವು ಕಾಮನ ನುರಿಹಿ ಕಾಮಹರನೆನಿಸಿಕೊಂಡರೆ ನಿನ್ನ ಅಹಂಕಾರವ ನೋಡಿ ಹಸಿತೆನ್ನ ಮನವು ಕಾಲನ ಸುಟ್ಟು ಬೆಟ್ಟ ನಿಟ್ಟರೆ ಎನಗೆ ನಗೆಗೆಡೆಯಾಯಿತ್ತು. ನಿಮ್ಮ ಘನವನೆಗೆ ಗುಹೇಶ್ವರಾ."[೨]

ನೀನು ಮುನಿದು ನೊಸಲಗಣ್ಣ ತೆರೆದರೆ, ಎನ್ನಂಗಾಲೊಳಡಗಿತ್ತಯ್ಯ ನಿಮ್ಮ ಕೋಪ ಅಹಂಕಾರ ಮರ್ದನವಾದಾಗ ಸಿದ್ಧರಾಮ ಪ್ರಭುವಿನಲ್ಲಿ ಬೇಡಿಕೊಂಡು ನಿಜದ ಅರಿವನ್ನು ಕೇಳಿಕೊಂಡ. ಅದಕ್ಕೆ ನಿಜದರಿವು ನಿನಗಾಗಬೇಕಾದರೆ ಕಲ್ಯಾಣಕ್ಕೆ ಬಸವಾದಿ ಪ್ರಮಥರಲ್ಲಿಗೆ ನಡೆ ಎಂದು ಕರೆದುಕೊಂಡು ಹೊರಟ ಇಲ್ಲಿ ವ್ಯಕ್ತಿತ್ವ ವಿಕಸನವಾಗಲು ಅಹಂಕಾರ ಮಮಕಾರ ದರ್ಪಗಳು ನಾಶವಾಗಬೇಕು. ಹಣೆಗಣ್ಣಿನ ಉರಿಯನ್ನು ಅಂಗಾಲಲ್ಲಿ ಅಡಗಿಸಿ ಅದೇ ಪಾದಕ್ಕೆ ಶರಣು ಬರುವಂತೆ ಮಾಡಿದ ಪ್ರಭು ಸನ್ಮಾರ್ಗಕ್ಕೆ ಹಚ್ಚುವುದರ ಸಲುವಾಗಿ ಪ್ರಭು ಸಿದ್ಧರಾಮನಡೆಗೆ ಬಂದ ತತ್ತೋಪದೇಶ ಮಾಡಿದ ಇಲ್ಲಿ ಸಿದ್ಧರಾಮನ ವ್ಯಕ್ತಿತ್ವ ವಿಕಸನವನ್ನು ಕಾಣುತ್ತೇವೆ.

ಪ್ರಭು ಕಲ್ಯಾಣಕ್ಕೆ ಬಂದ ಪರಿ ಇಲ್ಲಿ ಪ್ರಭು ಸಿದ್ಧರಾಮರು ಕೂಡಿಕೊಂಡು ಬಸವನ ಅರಮನೆಯ ಮುಂದೆ ಬಂದು ನಿಂತಿದ್ದಾರೆ. ಆಗ ಬಸವ ಲಿಂಗಪೂಜೆಯಲ್ಲಿ ತಲ್ಲಿನವಾದಾಗ ಬಾಗಿಲಲ್ಲಿ ನಿಂತವರ ಪರಿಯನ್ನು ಹಡಪದ ಅಪ್ಪಣ್ಣ ಬಸವಗೆ ಹೋಗಿ ಹೇಳಿದ. ಆಗ ಬಸವ "[೩] '..... ಕೂಡಲ ಸಂಗನ ಶರಣರು ಬಂದರೆ ಉಪಚಾರಕ್ಕೆ ಇಂಬಿಲ್ಲ ಕರುಣದಿಂದ ಬರಹೇಳಾ ಅಪ್ಪಣ್ಣ' ಲಿಂಗಾರ್ಚನೆಯನ್ನು ಬಿಟ್ಟು ಎದ್ದು ಬಂದು ಕರೆಯಬೇಕೆಂಬ ಅರಿವಿಲ್ಲದೆ ಅಲ್ಲಿಯೇ ಕುಳಿತು, ಅಟ್ಟಾಟಿಕೆ - ದೊಡ್ಡಸ್ಥಾನದಲ್ಲಿ, ಅಹಂಕಾರದ ಗದ್ದುಗೆಯಲ್ಲಿ ಬರಲು ಹೇಳಿದರೇನು ಆತ ಭಿಕ್ಷುಕನೆ, ಆತ ಹೇಗೆ ತಾನೆ ಬಂದಾನು? ಅವನಲ್ಲಿರುವ ಆತನನ್ನೆ ಹೋಗಲಾಡಿಸಲು ಬಂದಾತ.೨ 'ಬಂದವರಾರೆಂದರಿಯದೆ, ನಿಂದ ನಿಲುವನರಿಯದೆ ಕೆಮ್ಮನೆಯ ಅಹಂಕಾರ ಹೊತ್ತುಕೊಂಡು ಇಪ್ಪಾತಂಗೆ ನಮ್ಮ ಗುಹೇಶ್ವರಲಿಂಗ ನೊಲ್ಲನೊಡಾ' ಅಹಂನ್ನು ಹೋಗಲಾಡಿಸಿ ಸಿದ್ಧ ವ್ಯಕ್ತಿತ್ವವನ್ನಾಗಿ ರೂಪಿಸುವ ಕಾಯತನದಲ್ಲಿ ಮಾಡಿ ಮಾಡದೇ ಇದ್ದೆನೆಂಬ ಪರಿ ಕಲಿಯಬೇಕಾದದ್ದು ಇದೆ. ಕುಳಿತಲ್ಲಿ ಕರೆಯುವ ಪದ್ಧತಿಯನ್ನು ತಿರಸ್ಕರಿಸುವ ಪ್ರಭು ತಾತ್ವಿಕವಾಗಿ ಉತ್ತರಿಸುತ್ತಾನೆ.

ಮನ ಮನ ಒಂದಾಗಿ ತನುತನು ಒಂದಾಗಿ ಬೆರಸಿದ ಬಳಿಕ ಕರೆಯಲಿಲ್ಲ ಕಾಲು ಹಿಡಿಯಲಿಲ್ಲ ಎಂದವರು ಉಪಚರಿಸಿ ಬರ ಹೇಳಿದರೆ ಅದೇ ಕೊರತೆ ನೋಡಾ! ಅಂಗದ ಕೈಯಲ್ಲಿ ಕ್ರೀ ಇರಲು ಮಾತಿನ ಅದ್ವೈತವೆಂತ್ಪದೋ? ಆತನಾಗದ ಮುನ್ನವೆ, ತಾನಾಗದೆಂಬುವರಿಲ್ಲಿಗೆ ನಮ್ಮ ಗುಹೇಶ್ವರ ಲಿಂಗವು ಅಡಿಯಿಡುವನಲ್ಲ.

ಕರದಲ್ಲಿರುವ ಲಿಂಗವು ಕ್ರಿಯೆಯನ್ನು ಹೇಳುತ್ತಿರುವಾಗ ಕೇವಲ ಮಾತಿನ ಅದ್ವೈತಬೇಕೆ? ಇಂತಹ ಬೃತ್ಯಾಚಾರಿ ಅಲ್ಲದ ಬಸವ ತಾನು ಅದೇ ಆಗುವ ಮುನ್ನ ಆದೇನೆಂದು ತಿಳಿದರೆ ಸರಿಯಲ್ಲ ಅದು ಆಗದವರಲ್ಲಿ ನಮ್ಮ ಕೆಲಸವಿಲ್ಲ, ಕೇವಲ ಆಗಿದ್ದೆನೆಂದು ಬಸವ ತಿಳಿದದ್ದು ಅಹಂಕಾರ, ಅಲ್ಲಿ ನಮ್ಮ ಕೆಲಸವೆನಿದೆ, ಬರುವುದಿಲ್ಲವೆಂದ ಪ್ರಭು. ನಮ್ಮದು ಮಾತಿನ ಅದ್ವೈತ ತತ್ವವಲ್ಲ ಕ್ರಿಯಾಸಹವಾದ ಧರ್ಮ ಇದನ್ನು ಆತನಿಗೆ ತಿಳಿಸಬೇಕೆಂದುಕೊಂಡೆ ಅಲ್ಲಿಗೆ ಬಂದಿದ್ದ. ಆದರೆ ಅದು ಕಾರ್ಯಗತವಾಗಬೇಕಿದೆ ಅಪ್ಪಣ್ಣ ಎಷ್ಟು ಬಾರಿ ಹೇಳಿದರೂ ಪ್ರಭು ಬರಲಿಲ್ಲ. ಆಗ ಚನ್ನಬಸವನ ನುಡಿ

'..... ಸಂಗಮನಾಥ ಮನೆಗೆ ಅಂಗವಿಡಿದು ಬಂದರೆ, ದಿಮ್ಮನೆ ಇದಿರೆದ್ದು ವಂದಿಸಬೇಕು ನೋಡಯ್ಯಾ! ನಾಥವೆನ್ನುತಿದ್ದೆ, ಆ ಸಂಗಮನಾಥ ಮನೆಗೆ ಬಂದರೆ ಕುಳಿತಲ್ಲೆ ಅದ್ವೈತ ಹೇಳುತ್ತಿರುವೆ, ಇದೇನು ಮಾತಿನ ಮಾಲೆ, ಕಣ್ಣು ಕಾಣಿಸದಿದ್ದರೇನಾಯಿತು? ಕರುಳರಿಯಬಾರದೇ? ಇದೆಂಹತ ಪರಿ ಅಂದಾಗ ಬಸವ. ನಡುಗಿದ ಆಗ [೪೪]

'..... ಅಹಂಕಾರದಲ್ಲಿ ಕೆಟ್ಟೆನಲ್ಲಾ ಗುರುವೆ .....' ಎಂದು ತನ್ನನ್ನು ತಿದ್ದಿಕೊಂಡು ಪ್ರಭುವನ್ನು ಕರೆಯಲಕ್ಕೆ ಬಂದ.[೪೫]

'..... ಅಹಂಕಾರದಲ್ಲಿ ನಾನೆಂತು ಬದುಕುವೆನು .....' ಹೀಗೆ ತನ್ನನ್ನು ಸಿದ್ಧಾತ್ಮನಾಗಿ ವ್ಯಕ್ತಿಕರಿಸಿಕೊಂಡ ಪ್ರಭುವಿನ ದಯದಿಂದ ಇದಕ್ಕೆ ಪ್ರಭುವಿನ ಉತ್ತರ [೪೬]

ಸಜ್ಜನ ಸನ್ನಿಹಿತವಾದ ಭಕ್ತಿ ಹೊತ್ತಿಂಗೊಂಡು ಪರಿ ಉಂಟೆ ಹೇಳಾ? ಒಮ್ಮೆ ಅಹಂಕಾರ, ಒಮ್ಮೆ ಕಿಂಕಲವೇ? ಮನಕ್ಕೆ ಮನಃಸಾಕ್ಷಿಯಾಗಿ ಮಾಡುವ ಭಕ್ತಿಯಲ್ಲಿ ಗುಹೇಶ್ವರ ನಿಪ್ಪನಲ್ಲದೆ, ಪ್ರಪಂಚನೊಳಗಿಲ್ಲ ಕಾಣಾ ಸಂಗನ ಬಸವಣ್ಣ.[೪೭]

ಒಂದೊಂದು ಹೊತ್ತಿನಲ್ಲಿ ಒಂದೊಂದು ರೀತಿಯ ನಡತೆ ಸರಿಯಾದದ್ದಲ್ಲ ಯಾವಾಗಲು ಒಂದೇ ರೀತಿಯಿರಬೇಕು. ಇಂತಹ ಡಂಬಕರು ಆ ದೇವಂಗೆ ಏನವಶ್ಯವಿದೆ? ಇಲ್ಲ. ಹಾಂಗೆಯೇ ಜಂಗಮ ನಂಬಿದೆಯೆಂದು ಮಾತಿನಲ್ಲಿ ಹೇಳದೆ ಕೃತಿಯಲ್ಲಿರಬೇಕು.

ಜಂಗಮವೇ ಲಿಂಗವೆಂದ ಬಳಿಕ ಸಂದೇಹವಿಲ್ಲದೆ ಇರಬೇಕು ನೋಡಾ, ನಿಂದು ಸಂಶಯವಳಿದು ರಯವಾದ ಭಕ್ತಿ ಹಿಮ್ಮೆಟ್ಟಿದೆಡೆ ಹೊಯಿತ್ತಲ್ಲ! ಒಪ್ಪಿಟ್ಟ ಬಳಿಕ ಕಿಂಕಿಲನಾಗಿ, ಒಪ್ಪಿಟ್ಟ ಬಳಿಕ ಅಹಂಕಾರಿಯಾದರೆ ಹೋಗನೂಕೂವ ಕಾಣಾ ನಮ್ಮ ಗುಹೇಶ್ವರಲಿಂಗ. [೪೮]

ನಂಬಿಕೆ ಇದರ ಅರ್ಥ ಸಂದೇಹ ತೊರೆದದ್ದು ಒಮ್ಮೆ ಕಿಂಕರನಂತೆ ನಡೆದುಕೊಂಡು ಮೊಗದೊಮ್ಮೆ ಶಂಕರನಂತೆ ನಡೆದರೆ ಅದೇತರ ನಡೆ? ಅಹಂಕಾರ ಸುಳಿಯಬಾರದು

'ಸೂಳೆ ಹಲವರ ನುಳಿದಳೆಂದು ನಿಂದುಸುವರಿಲ್ಲ ಕೇಳಾ .....' ನೀನು ಸದ್ಭಕ್ತನಾಗಿ ಎಡವಿದರೆ ನನ್ನ ಮನಸ್ಸಿಗೆ ನೋವಾಯಿತು ಆದಿಯಿಂದತ್ತಿತ್ತ ನೀನೆ ಭಕ್ತನಾದ ಕಾರಣ ಒಂದುವೇಳೆ ಭಕ್ತನಾಗಿರದಿದ್ದರೇ ಎನ್ನ ಮನಸ್ಸೆ ನೋವಾಗುತ್ತಿದ್ದಲ್ಲ ಎಂದು ಪ್ರಭು ಬಸವನಲ್ಲಿಯ ಅಹಂಕಾರವನ್ನು ತೆಗೆದು ಹಾಕಿದ.[೪೯]

ವ್ಯಕ್ತಿತ್ವ ವಿಕಸನಕ್ಕೆ ಇನ್ನೊಂದು ಘಟನೆ ಪ್ರಭುವಿನ ಆರೋಹಣೆ ಅದು ಅಧ್ಯಾಯ - ೧೫ ಇಲ್ಲಿ ತಾನು ಮಹಾದಾನಿ ಎಂದು ಅವನಿಗೆ ತಿಳಿಯದ ರೀತಿಯಲ್ಲಿ ಅಹಂಕಾರ ಬಂದುದನ್ನ ಪ್ರಭು ಕಂಡುಕೊಂಡು, ಅದನ್ನು ತೆಗೆಯಲು ಪ್ರಯತ್ನಿಸಿದ, ತಾನು ಕೊಡುವೆನೆಂಬ ಹಮ್ಮಿನ ಕೊಬ್ಬಿನಲ್ಲಿ ಬೇಡಿದ್ದನ್ನು ಕೊಡುವೆ ಎನ್ನುವ ಬಸವನ, ಪ್ರಭು ಸರ್ವಭಕ್ಷಕನಾಗಿ ಆಕಾಶವೇ ಬಾಯಿ ತೆರೆದಂತೆ, ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಂಗಳಿಗೆ ಮಾಡಿದ ಅಡಿಗೆಯನ್ನು ನುಂಗುತ್ತಿರಲು, ಬಸವ ಸೊಡ್ಡಳ ಬಾಚರಸರೊಂದಿಗೆ ವಿಚಾರಿಸಿ ಮತ್ತಷ್ಟು ದವಸ ಧಾನ್ಯಗಳ ವ್ಯವಸ್ಥೆ ಮಾಡಿದರೂ ಈ ಆರೋಹಣೆ, ಸರಬರಾಜಿಗೆ ಮೀರಿ ಮುಂದೆ ನಡೆಯಿತು. ಇಂತಹ ಕುರುಹಿನ (ಭೌತಿಕ) ಪದಾರ್ಥಗಳಿಂದ ಪ್ರಭುವನ್ನು ತೃಪ್ತಿಪಡಿಸಲಾಗದೆಂದು ಮಡಿವಾಳ ಮಾಚಿದೇವ ಅರಿಕೆ ಮಾಡಿಕೊಟ್ಟ. ಪ್ರಭುವಿಗೆ ಏನೋ ಒಂದು ಬೇಕಾಗಿದೆ, ಅದಕ್ಕಾಗಿ ಈ ಆರೋಹಣೆ, ನೀಡುವೆನೆಂಬ ಅಹುಕಾರದ ಮಬ್ಬು ಇಳಿಯಿತು ಬಸವಂಗೆ, ಕೇಳಿ ಕೇಳಲೆ ಎಂದೆ ಬೇಡು ಬೇಡಲೆ ಎಂದೆ ಎನ್ನುವ ತಾಜಾತನ ಇಲ್ಲಿ ಸಾಕಾಗಲಿಲ್ಲ. ಚನ್ನಬಸವನೊಡನೆ ವಿಚಾರಿಸಿದ ಪ್ರಭುವನ್ನು ಹೇಗೆ ತೃಪ್ತಿಪಡಿಸಬೇಕೆಂದು.

'..... ನಿಮಗೆ ಬುದ್ಧಿ ಹೇಳುವರೆ ನಮಗೆ ಬುದ್ಧಿಯಿಲ್ಲ ಕೂಡಲ ಚನ್ನ ಸಂಗಮದೇವಾ'[೫೦] ನಿಮಗೆ ಏನು ಹೇಳುವುದನ್ನುತ್ತಾನೆ ಚನ್ನಬಸವ ಆತನಲ್ಲಿ ತಿಳಿದಂತಿದೆ, ಬಸವ ಸೂಕ್ಷ್ಮ.ಅಹಂಕಾರ ಅದು ಹೋಗಬೇಕೆನ್ನುತ್ತಿದೆ ಚನ್ನರ ನುಡಿ. ಪಂಚ ಶತಕೋಟಿ ಭೂಮಂಡಲವೆಲ್ಲಾ ಒಂದು ಭವದಲ್ಲಡೆಗೆ, ೧೪ ಲೋಕವನ್ನೊಳಗೊಂಡ ಮಹಾನ್ ಸ್ವಾಮಿಯನ್ನು ತೃಪ್ತಿಪಡಿಸಿದನೆಂಬ ಹುಂಬತನ ತರವಲ್ಲ. ಆ ತೃಪ್ತಿಗೆ ನೀವು ಭೋನ, ನಾನು ಪದಾರ್ಥವಾಗಬೇಕು ಇದರಿಂದ ಬಿಟ್ಟು ಮತ್ತೇನೂ ಮಾಡಿದರೂ ತೃಪ್ತಿಯಾಗದು ಎಂದಾಗ ತನ್ನ ಅಹಂಕಾರವನ್ನು ಬಸವ ಪ್ರಭುವಿಗೆ ಅರ್ಪಿಸಿ ಶುದ್ಧವ್ಯಕ್ತಿತ್ವ ವಿಕಸನಕ್ಕೆ ನಾಂದಿ ಹಾಡಿದ

**ಸಮಾಜ ಸಂಪದ (ಸಾಮಾಜಿಕ ವಿಕಸನ)**

ಕಾಯಕ ಮತ್ತು ಜಾತಿ ಈ ಸಂಬಂಧದ ವಿಕಸನಗಳು. ವ್ಯಕ್ತಿತ್ವ ವಿಕಸನ ರೀತಿ ನೀತಿಗಳಿಗೆ ಸಂಬಂಧಪಟ್ಟರೆ ಇಲ್ಲಿ ವ್ಯಷ್ಟಿ ಸಮಷ್ಟಿ ಪರಸ್ಪರ ಪೂರಕಗಳು ವರ್ಣ ಬೇಧ, ಅಸ್ಪೃಶ್ಯ ನಿವಾರಣೆ ಮುಂತಾದ ಪ್ರಸಂಗಗಳು ಇಲ್ಲಿಯ ವಿವರಣೆಗಳಾಗಿವೆ. ಜೀವನವೆಂದರೆ ವ್ಯಷ್ಟಿ ಸಮಾಜವೆಂದರೆ ಸಮಷ್ಟಿ, ಗಂಡು ಹೆಣ್ಣಿನ ಭೇದ ಕೂಡಾ ಇಲ್ಲದ ಪರಿ ಉದ್ಯೋಗಗಳು ಇವೆಲ್ಲಾ ಸಮಾಜ ಸಂಪದಕ್ಕೆ ಸಂಬಂಧಪಟ್ಟವು. ಇಲ್ಲಿ ಮಡಿವಾಳಯ್ಯಗಳ ಸಂಪಾದನೆ, ಆಯ್ದಕ್ಕಿ ಮಾರಯ್ಯಗಳ ಸಂಪಾದನೆ, ಮೋಳಿಗೆ ಮಾರಯ್ಯಗಳ ಸಂಪಾದನೆ, ನುಲಿಯ ಚಂದಯ್ಯಗಳ ಸಂಪಾದನೆಗಳು ಕೂಡಿವೆ. ಯಾವ ದೃಷ್ಟಿಯಿಂದ ಎಲ್ಲರು ಸಮಾನರೋ ಆ ದೃಷ್ಟಿಯ ಮೇಲೆ ಸಮಾಜ ಕಲ್ಪಕ್ಕೆ ಸಂಬಂಧ, ಇಲ್ಲಿ ಕಾಯಕ ಅನ್ನುವದರಡಿ ಸಮಾಜರಹಿತವಾಗಿದೆ. ಕಾಯಕವೇ ಕೈಲಾಸವೆಂಬ ೧೨ನೇ ಶತಮಾನದ ಸಾಮಾಜಿಕ ಕ್ರಾಂತಿ, ಹರಳಯ್ಯ ಮದುವಯ್ಯಗಳ ಜಾತಿ ಬೇಧ ನಿವಾರಣೆಯ ಘಟನೆ ಅಪ್ಪಡೋಹರ ಕಕ್ಕಯ್ಯ, ಬಪ್ಪ ಮಾದಾರ ಚನ್ನಯ್ಯ ಅನ್ನುವ ರೀತಿಗಳು ಇದೇ ಕ್ರಾಂತಿಗೆ ಸಾಕ್ಷಿಗಳು. ಮಡಿವಾಳನ ಕಾಯಕ ಶಿವಶರಣರ ಅರಬೆಗಳನ್ನು ಮಡಿಮಾಡಿಕೊಡುವದಾಗಿದೆ. ನಿಷ್ಠುರವಾದಿಯಾದ ಆತ ಕೇವಲ ಬಟ್ಟೆಗಳನ್ನು ತೊಳೆಯುವ ಮಡಿವಾಳನಾಗದೇ ಶರೀರದ ಒಳ ಹೊರಗೆ ತೊಳೆಯಬಲ್ಲ ಅಥವಾ ಮನದ ಮೈಲಿಗೆ ತೊಳೆಯಬಲ್ಲವನಾಗಿದ್ದ.

ಎನ್ನ ಕಾಯವ ಶುದ್ಧ ಮಾಡಿದಾತ ಮಡಿವಾಳ

ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ

ಎನ್ನ ಅಂತರಂಗ ಬೆಳಗಿದಾತ ಮಡಿವಾಳ

ಎನ್ನ ಬಹಿರಂಗ ಬಿಡಿಸಿದಾತ ಮಡಿವಾಳ

ಕೂಡಲ ಚನ್ನಸಂಗಮದೇವಾ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ.[೫೧]

ಇಲ್ಲಿ ಕಾಯಕಕ್ಕೆ ಬೆಲೆಯುಂಟು ಉದ್ಯೋಗದ ಮೇಲಿಂದ ರೂಪಿತ ಜಾತಿಯನ್ನು ತಿರಸ್ಕರಿಸಿದರು ಶರಣರು. ಕಾಯಕದಿಂದ ಮಡಿವಾಳನಾದರೂ ಗೋಷ್ಠಿಯಲ್ಲಿ ಆತನು ಗುರು. ಬಸವಣ್ಣನವರೆ ಪ್ರಭುವಿನ ಮುಂದೆ ಹೇಳಿಕೊಳ್ಳುತ್ತಾರೆ.

'..... ಮರಸೂರಾದಿಗಳೆಲ್ಲರೂ ..... ನಿಮ್ಮಿಂದನಾಥನವೆ ಮಡಿವಾಳ ಮಾಚಯ್ಯ'.[೫೨] ಮಡಿವಾಳನ ಬಗ್ಗೆ ಚನ್ನಬಸವ ಕೇಳುವನು, ಎಂತಹ ಸುದ್ದಿ ಮಡಿವಾಳ ನೀವು ಹೇಳುವ ಪರಿ? ಬಟ್ಟೆ ತೊಳೆಯುವ ತೊರೆಯಲ್ಲಿ, ನೀವು ನಿಲ್ಲುವ ತೋಪಿನಲ್ಲಿ, ನೀವು ಮಾಡಿದ ಮಡಿಯಲ್ಲಿ, ನೀವು ಮಡಿಚಿದ ಗಳಿಗೆಯಲ್ಲಿ ಜಗತ್ತೇ ಅಡಗಿದೆ ಎಂಬ ಮಾತು ಕಾಯಕ ಯಾವುದೇ ಇರಲಿ, ಆದರೆ ಯಾವುದೆಂಬುದಕ್ಕಿಂತ ಕಾಯಕ ಮಾಡುತ್ತಿರುವದು ಮುಖ್ಯವಾಗಿದೆ. ಮಡಿವಾಳಯ್ಯನ ಹಲವು ನ್ಯಾಯ ನಿಷ್ಠುರತಗಳನ್ನು ಎಲ್ಲ ಶರಣರು ಕೊಂಡಾಡಿದ್ದಾರೆ. ಇತನು ಮಡಿವಾಳನಾದರೂ ಮಡಿವಾಳತೆ ಶರಣ ಸಮಾನತೆಯಲ್ಲಿ ಅಡ್ಡಬರಲಿಲ್ಲ. ಕಾಯಕಗಳ ಮೇಲಿಂದ ಗೌರವ ಆಧರಿಸಿರಲಿಲ್ಲ, ಆದರೂ ಸರಿಯಾದ ಕಾಯಕ ಮಾಡುವವರಿಗೆ ಬಹಳ ಬೆಲೆಯಿತ್ತು.

ಆಯ್ದಕ್ಕಿ ಮಾರಯ್ಯನ ಸಂಪಾದನೆಯಂತೂ ಈಗಿನ ಕೆಲಸಗಾರರಿಗೆ ಅನನ್ಯ ಮಾರ್ಗದರ್ಶನ ನೀಡುವಂತಿದೆ, ಈ ಸಂಪಾದನೆಯ ೩೫ನೇ ವಚನ ಕೂಡಾ ಮಡಿವಾಳನ ಕಾಯಕ ಏನೆಂಬುದರ ಬಗ್ಗೆ, ೩೮, ೩೯. ೪೦ ವಚನಗಳು ಮಡಿವಾಳನ ಕಾಯಕವೆಂದರೆ ಮನದ ಮೈಲಿಗೆಯನ್ನು ತೊಳೆದಂತೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆಯ್ದಕ್ಕಿ ಮಾರಯ್ಯ ಮುಂಜಾವದಲೆದ್ದು ಶರಣರ ಅಂಗಳಕ್ಕೆ ಹೋಗಿ ಅಲ್ಲಿ ಅಕ್ಕಿಯನ್ನು ತೊಳೆಯುವ ತಿಪ್ಪಿನಲ್ಲಿ ಬಿದ್ದ ಅಕ್ಕಿಯನ್ನು ಆರಿಸಿಕೊಂಡು ಬರುವ ಕಾಯಕ ಅದರಿಂದಲೇ ಪ್ರಸಾದವನ್ನು ಮಾಡಿ ಜಂಗಮ ತೃಪ್ತಿ ಮಾಡುವ ಈ ಪರಿ ಮತ್ತ್ಯಾವ ಧರ್ಮದಲ್ಲಿಯೂ ಕಾಣಬರುವುದಿಲ್ಲ ಪ್ರಸಾದವನ್ನು ಕೆಡಿಸಲಾರದ ಸ್ಥಿತಿ ಇಂತಹ ಸೂಕ್ಷ್ಮತೆಯ ಕಾಯಕ ಉಂಟೆ? ಜಗತ್ತಿನ ಯಾವ ಮೂಲೆಯಲ್ಲಿಯೂ, ಯಾವ ಜಾತಿಧರ್ಮದಲ್ಲಿಯೂ ಇಲ್ಲದ ಇಂತಹ ರೀತಿಯನ್ನು ಅಳವಡಿಸಿಕೊಂಡದ್ದು ಪ್ರಸಾದದ ಮಿತವ್ಯಯತನವನ್ನು ಜಗತ್ತಿಗೆ ಹೇಳುವಂತಿದೆ. ಕಾಯಕ ಪದ ಹುಟ್ಟಿದ್ದೇ ಶಿವಶರಣರ ಒಡಲಿನಲ್ಲಿ ಅದು ೧೨ನೇ ಶತಕದಲ್ಲಿ ಇತರ ದೇಶಿ ಮೀಮಾಂಸೆಗಳಿಗಿಂತ ಈ ಪದ ವಿಶಿಷ್ಟ, ಈ ಮಾರಯ್ಯನ ಕಾಯಕ ಜಗತ್ತಿನ ಬದುಕಿನ ಮೌಲ್ಯಗಳು, ಈ ಮೌಲ್ಯಗಳು ಕೂಡಾ ಪ್ರಭು ಮಾರ್ಗದರ್ಶನದಲ್ಲಿ ಪುಟವಿಕ್ಕಿ ಹೊರಗೆ ಬಂದ 'ಕಾಯಕವೇ ಕೈಲಾಸ' ಅನ್ನುವ ಪದವನ್ನು ಜಗತ್ತಿಗೆ ಕೊಟ್ಟ ವಿಶಿಷ್ಟ ಕಾಣಿಕೆ. ೧೨ನೇ ಶತಮಾನ ಶರಣರ ಅನುಭಾವ ಮಂಟಪ, ಜಗತ್ತಿನ ಮೊದಲನೆ ಪಾರ್ಲಿಮೆಂಟ್ ಅನ್ನುವರು. ದೇಶದ ಸಮಸ್ಯೆಯನ್ನು ಎಲ್ಲರೂ ಒಂದೆಡೆ ಕೂಡಿ ಚರ್ಚಿಸುವ ಮೊದಲನೆಯ ಸಂಸತ್ತನ್ನು ಹುಟ್ಟುಹಾಕಿ ಬೆಳಸಿದವರು ಇವರು. ರಾಜಕೀಯವಾಗಿ ಇರುವ ಈ ಪರಿಯನ್ನು ಧಾರ್ಮಿಕಕ್ಕೂ ಅಳವಡಿಸಿ ಧಾರ್ಮಿಕ ಸಂವಿಧಾನವನ್ನು ರೂಪಿಸಿದ ಮೊದಲಿಗರು. ಅನುಭಾವ

ಗೋಷ್ಠಿ ನಡೆದಿದೆ ಆ ಗೋಷ್ಠಿಯಲ್ಲಿ ಬಸವ, ಚನ್ನಬಸವ, ಪ್ರಭು ಮಡಿವಾಳ ಮಾಚಿದೇವ, ಸಿದ್ಧರಾಮ, ಸೊಡ್ಡಳ ಬಾಚರಸ, ಹಡಪದ ಅಪ್ಪಣ್ಣ ಮುಂತಾದ ಅಸಂಖ್ಯಾತ ಶರಣ ಗಣಂಗಳು ಕೂಡಿಕೊಂಡು ಕಾಯಕದ ಚರ್ಚೆಯನ್ನು ಮಾಡುತ್ತಿರುವಾಗ ಆಯ್ದಕ್ಕಿ ಮಾರಯ್ಯನ ವಿಷಯ ಪ್ರಾರಂಭ

ಕಾಯಕದಲ್ಲಿ ನಿರತರಾಗಿರುವಾಗ ಗುರುವಿನ ದರ್ಶನಕ್ಕೆ ಹೋಗಬಾರದು, ಲಿಂಗಪೂಜೆಯ ಸಮಯವು ಮರೆಯಬಹುದು ಜಂಗಮ ತ್ರಿವಿಧ ನೇಮಗಳು ಕೂಡಾ ಹಿಂದು ಮುಂದಾಗಬಹುದು ಹಾಂಗಾದರೆ ತಪ್ಪೇನಿಲ್ಲ ಎನ್ನುವ ಆಶೆಯಿದೆ. ಏಕೆಂದರೆ ಕಾಯಕವು ಕೈಲಾಸವಾಗಿದೆ. ಈ ವ್ಯಾಖ್ಯೆಯನ್ನು ಕೊಟ್ಟವರು ಆಯ್ದಕ್ಕಿ ಮಾರಯ್ಯ, ಬಸವ ಇದಕ್ಕೆ ಸಂವಾದಿಯಾಗಿ ಹೇಳಿದನಷ್ಟೇ. ಈ ವಿಶಿಷ್ಟ ಪದದ ಕೊಡುಗೆ ಈತನದೆ, ಚಿತ್ತಾ ಶುದ್ಧ ಕಾಯಕವೆಂದರೆ ರೊಕ್ಕಕ್ಕಾಗಿ ದುಡಿದು ದುಡ್ಡನ್ನು ತಾ ಎಂದು ಬೇಡುವದಲ್ಲ ಅಥವಾ ಕೆಲಸಕ್ಕಿಂತ ಹೆಚ್ಚಿಗೆ ಕೂಲಿಯನ್ನು ಕೇಳಿದರೆ ಅದು ಕಾಯಕವಲ್ಲ. ಭಕ್ತರಲ್ಲಿ ಕಾಯಕಕ್ಕೆ ಕಡಿಮೆಯಾಗಿ ಹಾಗವನ್ನು ಕೇಳಿದರೆ ಅದು ಕಾಯಕ ಎಂದಿದ್ದಾರೆ. ಕೂಲಿಯನ್ನು ಮಾಡುವದು ಕೆಲಸವಾದರೆ ಅದು ಸ್ವಾರ್ಥತನದ್ದು. ದುಡಿದು ದುಡ್ಡು ತಾ ಎನ್ನದೆ ಕಾಯಕಕ್ಕೆ ಪ್ರತಿಫಲ ಸಿಕ್ಕರೆ ಅದು ತೃಪ್ತಿ. ಅಲ್ಲಿ ಜಂಗಮ ತೃಪ್ತಿಯಿದೆ. ಮಾರಯ್ಯನ ಈ ಮಾತಿಗೆ ಪ್ರಭುವಿನ ಉತ್ತರ ಮಾಡಿದೆನೆಂಬ ಮಾತು ಸಹಿತ ನಿಂದಲ್ಲಿ ಒಂದು ಬಿಟ್ಟು ಮತ್ತೊಂದನ್ನು ಹಿಡಿಯುವ ಪರಿ ಸರಿಯಾದದು ಅಲ್ಲ, ಯಾವುದನ್ನು ಮಾಡುತ್ತಿಯೋ ಅದರಲ್ಲಿಯೇ ಕೊನೆಯವರೆಗೆ ನಿಂದದೇ ಅದೇ ದೇವ ಭಾವ, ಮಹಾದೇವನಲ್ಲಿ ಬೆರಸಿ ಎರಡು ಹೋಗಿ ಒಂದಾಗಬೇಕು ಎಂದು ಪ್ರಭು ತಿಳಿಸಿದಾಗ ಮಾರಯ್ಯ ಹೌದು ಗೆದ್ದಲುಗಳು ಮನೆಯನ್ನು ಮಾಡುತ್ತವೆ ಆದರೆ ಆ ಹುತ್ತಿನಲ್ಲಿ ಹಾವು ತನ್ನ ಮನೆಯನ್ನಾಗಿಸುತ್ತದೆ. ಆಚೆಯ ದ್ರವ್ಯತಂದು ಈ ಕಡೆ ಸುರಿಯುವದು ಆ ನೀರ ತಂದು ಈ ಬಾವಿಯಲ್ಲಿ ಹಾಕಿದರೆ ಅದಕ್ಕೆ ಪ್ರತಿಫಲವಿಲ್ಲ. ಕಾಯಕ ಕೊನೆಯವರೆಗೆ ಸಾಧನೆಯಲ್ಲಿರಬೇಕು, ಆದರೆ ಅದೇ ಮುಕ್ತಿಯಲ್ಲ ಮುಕ್ತಿಗೆ ಸಾಧನೆ ಮಾತ್ರವಿದು ಎನ್ನವನು ಪ್ರಭು. ಈ ರೀತಿ ಗೋಷ್ಠಿ ನಡೆದಾಗ ಮಾರಯ್ಯನ ಹೆಂಡತಿ ಆಯ್ದಕ್ಕಿ ಲಕ್ಕಮ್ಮ ಆಕೆ ಗಂಡನಿಗಿಂತ ಒಂದು ಹೆಜ್ಜೆ ಮುಂದು, ಪ್ರಭುದೇವನಿಗೆ ನಮಸ್ಕರಿಸಿ, ತನ್ನ ಗಂಡಂಗೆ ಹೇಳುತ್ತಾಳೆ. ಕಾಯಕಕ್ಕೆ ಹೊತ್ತಾಗಿದೆ ಕಾಯಕದ ಹೊತ್ತಾದಾಗ ಗೋಷ್ಠಿಯ ಪ್ರಯೋಜನವೇನು? ಅಂದರೆ ಯುದ್ಧ ನಡೆಯುತ್ತಿರುವಾಗ ಕವಾಯಿತದ ಪ್ರಯೋಜನವೇನು? ಕವಾಯತ ಯುದ್ಧದ ಸನ್ನದ್ಧತೆ ಮಾತ್ರ, ಯುದ್ಧ ಪ್ರಸಂಗದಲ್ಲಿ ಅಲ್ಲ, ಹಾಗೆ ಈ ಗೋಷ್ಠಿ ಸಮಯವಿದ್ದಾಗ ಕಾಯಕಗೆ ಹೊತ್ತಾದಾಗ ಅವಶ್ಯವಿಲ್ಲ.

ಲಕ್ಕಮ್ಮ - 'ಕಾಯಕ ನಿಂದಿದೆ ಶುದ್ಧ ಭಾವದಿಂದ ಶಿವಶರಣರ ತಿಪ್ಪಿಯ ತಪ್ಪಲ ಅಕ್ಕಿಯತಂದು ಅದನ್ನು ಪ್ರಸಾದವಾಗಿ ಮಾಡಬೇಕಿದೆ. ಏಳು, ಗೋಷ್ಠಿಯ ಬಿಡು ಕಾಯಕಕ್ಕೆ ನಡೆ' ಇದು ಹೆಂಡತಿಯ ಸಲಹೆ ಗಂಡನಿಗೆ.

ಮಾರಯ್ಯ ಎದ್ದವನೆ ಸೀದಾ ಬಸವನ ಅಂದಳಕ್ಕೆ ಹೋದ ಅತ್ತ ಬಸವ ಬೇಕೆಂದೇ ಬಹಳಷ್ಟು ಅಕ್ಕಿಯನ್ನು ಅಂದಳದಲ್ಲಿ ಚೆಲ್ಲಿಸಿದ್ದ ಇವರಿಗೆ ತೊಂದರೆಯಿರಬಹುದೆಂದು ಆಗ ಮಾರಯ್ಯ ಅಂಗಳಕ್ಕೆ ಹೋಗಿ ಅಲ್ಲಿ ಬಹಳಷ್ಟು ಚೆಲ್ಲಿದ ಅಕ್ಕಿಯನ್ನು ಸಂತೋಷದಿಂದ ಅಂದರೆ ಪ್ರತಿದಿನಕ್ಕಿಂತಲೂ ಹೆಚ್ಚಿಗೆ ತೆಗೆದುಕೊಂಡು ಮನೆಗೆಬಂದು ಹೆಂಡತಿ ಲಕ್ಕಮ್ಮ ಕಾಯಕ ನಿಷ್ಠೆವುಳ್ಳವಳು, ಆಕೆಗೆ ಎಷ್ಟು ಅವಶ್ಯವಿದೆಯೋ ಅಷ್ಟೇ ಸಾಕು ಅವಶ್ಯವಿದ್ದಷ್ಟು ಅಕ್ಕಿ ಮಾತ್ರ ಬೇಕು. ಈ ಭಾವ ಯಾರಲ್ಲಿರುತ್ತದೆಯೋ ಅವರು

ಸುಖಿಯಾಗಿರುತ್ತಾರೆ. ಅಂತಹವರು ಸುಖಸಂಸಾರ ನಡೆಸಲು ಸಾಧ್ಯ, ಹಾಗಾದಾಗ ದೇಶವೂ ಸುಖಮಯವಾಗುವುದು. ಮಿತ ವ್ಯಯದಲ್ಲಿ ಶರಣರು ತೃಪ್ತಿಯನ್ನು ಕಂಡುಕೊಂಡ ವಿಶಿಷ್ಟಾತ್ಮಕ ಕೊಡುಗೆ"
'..... ಎಂದಿನಂದವೇ ಸಾಕು ಮತ್ತೆ ಕೊಂಡು ಹೋಗಿ ಅಲ್ಲಿಯೇ ಸುರಿದು ಬನ್ನಿ ಮಾರಯ್ಯ ಆಸೆ ನಿಮಗೇಕೆ ಬೇಕು ಆಸೆಯೆಂಬುದು ಅರಸರಿಗುಂಟೆ ವಿನಹ ಶಿವಭಕ್ತರಿಗಿಲ್ಲ. ಕೋಪ ತಾಪಗಳು ಯಮಧೂತರಿಗೆ ಇರಲಿ, ಶಿವಭಕ್ತರಿಗೆ ಸಲ್ಲತಕ್ಕದ್ದಲ್ಲ, ಇಸಕ್ಕಿ ಯಾಕೆ ಬೇಡ, ಕಾಯಕವೆಂದರೇ ದುಂದುಗಾರಿಕೆಯಲ್ಲ, ಸ್ವಾರ್ಥ ಪರವೂ ಅಲ್ಲ, ಒಮ್ಮನ ಮೀರಿ ಇಮ್ಮನ ತರುವದು ತರವಲ್ಲ, ಪ್ರತಿನಿತ್ಯ ಒಮ್ಮನವ ತಂದು ತೃಪ್ತಿ ಪಡಬೇಕಲ್ಲದೇ, ಹೆಚ್ಚಿಗೆ ತಂದು ಮಾಡುವುದು ತೃಪ್ತಿಕರವಲ್ಲ, ಇನ್ನೊಂದು ಅರ್ಥದಲ್ಲಿ ಏಕಮನಸ್ಸಿನಿಂದ ಕಾಯಕವನ್ನು ಮಾಡಬೇಕು. ಇಬ್ಬಗೆಯಿಂದ ಮಾಡಬಾರದು. ಒಮ್ಮನ, ಇಮ್ಮನ ಪದ ಈ ರೀತಿಯು ಬಳಕೆಯಾಗಬಹುದಾಗಿದೆ. ಮಾನ ಇದು ಕಾಳನ್ನು ಅಳೆಯುವ ಸಾಧನ ಕೂಡಾ ನಮಗೆ ಬಡತನವಿದೆಯೆಂದು ಬಸವ ಬೇಕೆಂದೇ ಸುರುವಿರಬಹುದು, ಬಸವ ತನ್ನ ಶ್ರೇಷ್ಠತೆಯಲ್ಲಿ ಈ ಕೆಲಸ ಮಾಡಿದ ಅನುಮಾನವಿದೆ. ಇದು ನಮಗೆ ಬೇಕಿಲ್ಲ, ಅಲ್ಲಿಗೆ ಸುರುವಿ ಬರಲು ಕಳುಹಿಸಿದಳು ಲಕ್ಕಮ್ಮ, ನಂತರ ಆಕೆ ಎಲ್ಲ ಗಣಂಗಳಿಗೆ ಪ್ರತಿನಿತ್ಯ ತರುವ ಅಕ್ಕಿಯಲ್ಲಿಯೇ ತೃಪ್ತಿಪಡಿಸಿದಳು. ಅಸಂಖ್ಯಾತ ಗಣಂಗಳನ್ನು ತೃಪ್ತಿ ಮಾಡುತ್ತಾಳೆ ಇದನ್ನು ನೋಡಿ ಬಸವ ತನ್ನ ತಪ್ಪನ್ನು ತಿದ್ದಿಕೊಂಡು ಕ್ಷಮೆ ಕೇಳುವನು. ಮನ:ಶುದ್ಧಿ ಇಲ್ಲದವರಿಗೆ ದ್ರವ್ಯದ ಬಡತನವಲ್ಲದೇ ಚಿತ್ತ ಶುದ್ಧ ಕಾಯಕವಮಾಡಿದಲ್ಲಿ ಎಲ್ಲಿ ನೋಡಿದ ಲಕ್ಷ್ಮೀ ತಾನೆ ಇರುವಂತೆ, ಎಂದು ಬಸವನಿಗೆ ತಿಳಿಸಿದಾಗ ಇವರ ಕಾರ್ಯನಿಷ್ಠೆಗೆ ಅವಶ್ಯಗಿಂತ ಹೆಚ್ಚಿನ ಸಂಗ್ರಹಣೆ ಮಾಡಬಾರದು ಎಂಬ ನೀತಿಗೆ ಕಾಯಕದ ಅಡಿ, ಜಾತಿ ಬೇಧಗಳನ್ನು ತೊಡೆದುಹಾಕಿ ಯಾವುದೇ ಕಾಯಕ ಹೆಚ್ಚಲ್ಲ. ಯಾವುದೇ ಕಾಯಕ ಕಡಿಮೆಯಲ್ಲ ಎಂಬ ಸಮಾನತೆಯನ್ನು ಸಾರಿರುವುದೇ ಸಾಮಾಜಿಕ ವಿಕಸನಕ್ಕೆ ನಾಂದಿ. ಯಾವುದೇ ಭಕ್ತಿಯನ್ನು ಮಾಡಿದರೂ ಕೂಡಾ ಅದು ಗುಪ್ತವಾಗಿರಬೇಕು. ಅವರು ತಮ್ಮ ಮನ:ಸಾಕ್ಷಿಯಾಗಿ ನಡೆದುಕೊಂಬುವರೇ ವಿನಹ ಮತ್ತೊಬ್ಬರ ಒಲುಮೆಗಾಗಿ ಅಲ್ಲ ಮನ:ಸಾಕ್ಷಿ ನಡೆದುಕೊಂಬುದೇ ಒಳ್ಳೆಯದು.

ಮೋಳಿಗೆ ಮಾರಯ್ಯ ಸಂಪಾದನೆ - ಪ್ರತಿ ವಚನಗಳನ್ನು ನೋಡುತ್ತಾ ಸಾಗಿದರೆ ಅದೊಂದು ಭವ್ಯ ಮಾನವ ಕಾವ್ಯವಾಗುತ್ತದೆ. ಅವಶ್ಯವಿದ್ದಷ್ಟನ್ನು ಮಾತ್ರ ಹೇಳಲಾಗಿದೆ. ಶರಣರಲ್ಲಿ ಬಸವ ಮಂತ್ರಿಯಾದರೆ ಅರಸು ಬಿಜ್ಜಳ, ಆ ಬಿಜ್ಜಳನ ಶ್ರೀಮಂತಿಕೆಯನ್ನು ಮೀರಿಸುವಂತಹ ಕಾಶ್ಮಿರದ ಅರಸೊತ್ತಿಗೆ ಮಹಾದೇವ ಭೂಪಾಲ ಕಾಶ್ಮಿರದ ಅರಸನಾಗಿದ್ದರೂ ಆತ ಜಂಗಮರನ್ನು ಕರೆತಂದು ಬಸವನ ಮಹಿಮೆ ನಡೆ ನುಡಿಗಳನ್ನು ಕಲ್ಯಾಣದ ಅನುಭಾವ ಗೋಷ್ಠಿಯನ್ನು ಅಲ್ಲಿ ಗೋಷ್ಠಿಯಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಂಗಳು ಇರುವದನ್ನು ಕೇಳಿ, ಜೀವನದಲ್ಲಿ ಏನಿದ್ದರೇನು ಒಂದುದಿನ ಬಿಟ್ಟುಹೋಗುವದು ಎಂಬಂತಹ ವೈರಾಗ್ಯತಾಳಿ ಕಾಶ್ಮೀರದ ಅರಸೊತ್ತಿಗೆಯನ್ನು ಬಿಟ್ಟು ಕಲ್ಯಾಣಕ್ಕೆ ಆಗಮಿಸಿದನು. ಇತನ ವೈರಾಗ್ಯ ಮಹತ್ವಪೂರ್ಣವಾದದು ಕೆಲವರು ವೈರಾಗ್ಯವನ್ನು ಬದುಕುವದಕ್ಕಾಗಿ ತಾಳುತ್ತಾರೆ ಹಾಗಾದರೆ ರಾಜತ್ವವನ್ನು ಬುದ್ಧನಂತೆಯೇ ತ್ಯಜಿಸಿ ಅವನಿಗಿಂತ ಒಂದು ಹೆಜ್ಜೆ ಮುಂದು ಹೋದವನು. ಗೌತಮ ಬುದ್ಧನ ವೈರಾಗ್ಯ ಸಂಸಾರ ಮತ್ತು ಅರಸೊತ್ತಿಗೆ ಎರಡನ್ನು ತ್ಯಜಿಸುವದಾದರೇ ಈ ಭೂಪಾಲ ಅರಸೊತ್ತಿಗೆಯನ್ನು ಮಾತ್ರ ತ್ಯಜಿಸಿ ಸಂಸಾರದೊಂದಿಗೆ ಮುಕ್ತಿ ಸಾಧ್ಯ ಎಂದು ತೋರಿಸಿಕೊಟ್ಟನು. ಅರಸೊತ್ತಿಗೆ ತನ್ನ ಸಾಧನೆಗೆ ಅಡ್ಡಬರುವದೆಂದು ಬಗೆದು ಅದನ್ನು ತ್ಯಜಿಸಿ

ಆತ್ಮ ಸಾಧನೆಗಾಗಿ ದಂಪತಿ ಸಮೇತವಾಗಿ ಕಲ್ಯಾಣಕ್ಕೆ ಬಂದು ಮೋಳಿಗೆಯ ಕಾರ್ಯವನ್ನು ಮಾಡಿಕೊಂಡಿದ್ದನು. ಆದ್ದರಿಂದ ಇತನ ಹೆಸರು ಮೋಳಿಗೆಮಾರಯ್ಯನೆಂದು ಪತ್ನಿ ಮಹಾದೇವಿ ಎಂದು ಹೆಸರಾಯಿತು. ಬರ ಕಾಯಕದ ಕಟ್ಟಿಗೆಯನ್ನು ಭಕ್ತರ ಮನೆಗೆ ತಿರುಗಿ ಮಾರುವದು ಅದರಿಂದ ಬಂದ ಫಲವನ್ನು ತ್ರಿವಿಧಕ್ಕೆ ಅರ್ಪಿಸಿ ಸ್ವೀಕರಿಸುವದು, ಬಸವನ ಅರಮನೆಯಲ್ಲಿ ಜಂಗಮಾರ್ಚನೆಯಿದ್ದಾಗ ಪಂಚರಸಾನ್ನಗಳಿಂದ ಮಾಡಿದ ಅಡುಗೆಯನ್ನು ಉಂಡ ಜಂಗಮ, ಮೋಳಿಗೆಮಾರಯ್ಯನ ಅಡಿಗೆಯನ್ನು ನೆನಸಿದ. ಆಗ ಬಸವನಿಗೂ ಸಹಿತ ಮಾರಯ್ಯನ ಅಡುಗೆಯನ್ನು ಉಣ್ಣುವ ಆಶೆ.[೨೪] '..... ನಿಷ್ಠೆಯಿಂದ ಲಿಂಗವ ಪೂಜಿಸಿ ಮತ್ತೊಂದು ಪಥವನರಿಯದ' ಮಾರಯ್ಯನ ಮನೆಗೆ ಬಂದು ಮಹಾದೇವಿಯಮ್ಮನ ಕಡೆಯಿಂದ ಉಣಬಡಿಸಿಕೊಂಡು ಇವರಿಗೆ ಬಡತನವಿದೆಯೆಂದು ಬಗೆದು ಮಜ್ಜನ ಪಾತ್ರೆಯ ಮಗ್ಗುಲಲ್ಲಿ ಬಂಗಾರದ ನಾಣ್ಯಗಳ ಎರಡು ಚೀಲಗಳನ್ನು ಇಟ್ಟು ಬಂದ. ಮಾರಯ್ಯ ಮರಳಿ ಮನೆಗೆ ಬಂದು ಲಿಂಗಪೂಜೆಯ ಮಾಡಿಕೊಳ್ಳುವ ಪ್ರಸಂಗದಲ್ಲಿ ಈ ಬಂಗಾರದ ಜಾಳಿಗೆಗಳನ್ನು ನೋಡುವನು, ಆಗ ಹೆಂಡತಿಗೆ ಮನೆಗೆ ಯಾರು ಬಂದಿದ್ದರು ಎಂದು ವಿಚಾರಿಸಲಾಗಿ ಒಬ್ಬ ಜಂಗಮ ಬಂದು ಲಿಂಗಾರ್ಚನೆ ಮಾಡಿಕೊಂಡು ಹೋದರೆಂದು ಹೇಳಿದಳು. ಆಗ ಮಾರಯ್ಯ ತರ್ಕಮಾಡಿದ ಬಸವಣ್ಣನೇ ಬಂದು ಹೋಗಿದ್ದಾನೆ, ನಾವು ಬಡವರೆಂದು ಗರ್ವದಿಂದ ಜಾಳಿಗೆಯನ್ನು ಚೆಲ್ಲಿ ಹೋಗಿದ್ದಾನೆ ತಾನು ಧನಿಕನೆಂಬ ಭಾವನೆಯಿಂದ ಈ ತರಹ ಮಾಡಿರಬಹುದೆಂದು, ಇರಲಿ ಎಂದು ಹೇಳಿ ಇಬ್ಬರು ಜಂಗಮರನ್ನು ಕರೆದು ಆ ಜಾಳಿಗೆಗಳನ್ನು ಕೊಟ್ಟು ಕಳುಹಿಸಿದ ಹಾಗೆಯೇ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ಭಿನ್ನಹ ಮಾಡಿಬಂದ. ಅವರಿಗೆ ಬೇಡಿದ ಇಷ್ಟಾರ್ಥ ಪದಾರ್ಥವನ್ನು ಊಟಮಾಡಿಸಿ ತೃಪ್ತಿಪಡಿಸಿದ ಅಷ್ಟೇ ಅಲ್ಲ ತಾನು ತನ್ನ ಕಟ್ಟಿಗೆಯ ಹೊರೆಯ ಮೇಲೆ ಪಾದೋಧಕ ಸಿಂಪಡಿಸಿ ಅವುಗಳನ್ನು ಬಂಗಾರವನ್ನಾಗಿ ಮಾಡಿ, ಜಂಗಮರ ಕೈಯಲ್ಲಿ ಒಂದೊಂದನ್ನು ಕೊಟ್ಟು ಕಳುಹಿಸಿದ. ಜಂಗಮರು ಬಂದು ಬಸವಣ್ಣನಿಗೆ ಈ ವೃತ್ತಾಂತವನ್ನೆಲ್ಲಾ ಹೇಳಿದರು. ಬಸವಣ್ಣ ನಡುಗಿ, 'ಮಾರಯ್ಯ ಕಾಯಕದಿಂದ ಬಂದಿದ್ದಷ್ಟೇ ಸಾಕು ಮತ್ತೊಬ್ಬರ ಅರ್ಥ ನಮಗೇಕೆ' ಎಂಬ ವಿಚಾರಕ್ಕೆ ಬಸವಣ್ಣ ಶರಣುಹೋದ. 'ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಬಯ .....' ಎರಡೂ ಶುದ್ಧ, ಪ್ರಾಣದಲ್ಲಿ ಮತ್ತು ಧನಾಪೇಕ್ಷೆಯಲ್ಲಿ ಶುಚಿತ್ವವನ್ನು ಪಡೆದ ಮಾರಯ್ಯನ ಸ್ಥಿತಿ ವಿಚಾರಪೂರಿತವಾದುದು. ನಿಧಾನ ತಪ್ಪಿ ಬಂದರೆ ಒಲ್ಲೆಯೆಂಬುವುದಿಲ್ಲ, ಆದರೆ ಮಾರಯ್ಯ ಇದಕ್ಕೆ ಹೊರತಾದ, ಕಾಯಕದಲ್ಲಿ ಬಡತನ ಶ್ರೀಮಂತಿಕೆ ಎರಡೂ ಅಷ್ಟೇ. ಆದರೆ ನಾನು ಶ್ರೀಮಂತನಂತೆ ವರ್ತಿಸಿದೆನೇ ನನ್ನಿಂದ ತಪ್ಪಾಯಿತು. ನನ್ನ ವರ್ತನೆ ರತ್ನದ ಸಂಕೋಲೆಯಂತಾಯಿತು ಎಂದು ತಿಳಿದು ಶರಣರೊಡಗೂಡಿ ಮಾರಯ್ಯನ ಮನೆಗೆ ಬಂದು ಕ್ಷಮೆ ಕೇಳಿದ ಬಸವಣ್ಣ. ಈ ರೀತಿ ವಾಮ ಮಾರ್ಗದಿಂದ ಬಂದುದ್ದಕ್ಕೆ ಮಾರಯ್ಯ[೨೫] "ಹದಿನೆಂಟು ಹಾದರಗಿತ್ತಿಯನ್ನು ಲಿಂಗವಂತರ ಮನೆಯಲ್ಲಿ ಹೋಗಿಸಬೇಕೆ ಬಸವಣ್ಣ? ಎಂದು ಚನ್ನಬಸವಣ್ಣನೊಡನೆ ಬಸವನಿಗೆ ಗದುರಿಸಿದ. ಒಬ್ಬರಿಂದ ಒಬ್ಬರಿಗೆ ಸಂವಾದ ನಡೆಯಿತು. ಆ ಗೋಷ್ಠಿಯಲ್ಲಿ ಸತ್ಯಶುದ್ಧವಾದ ದುಡಿಮೆಯಿಂದ ಬಂದದ್ದೇ ಬಳಕೆಗೆ ಯೋಗ್ಯ ಎಂಬ ಕಾಯಕ ಸಿದ್ಧಾಂತ ರೂಪಿತವಾಯಿತು. ಇದು ಸಮಾಜ ನಿರ್ಮಾಣಕ್ಕೆ ಒಳ್ಳೆಯ ಮಾದರಿ.

ನುಲಿಯ ಚಂದಯ್ಯಗಳ ಪ್ರಸಂಗ - ಇದಕ್ಕೆ ಮೂಲಕರ್ತೃ ಹಲಿಗೆದೇವರು. ಈತ ಹಗ್ಗವನ್ನು ಹೊಸೆಯುವ ಕಾಯಕವನ್ನು ಮಾಡುವಾತ, ಹಗ್ಗ ಹೊಸೆದು ಅದನ್ನು ಮಾರಿತಂದು ಜಂಗಮರಾಧನೆಯೊಂದಿಗೆ

ತೃಪ್ತಿಪಡುತ್ತಿದ್ದ. ಒಂದು ಬಾರಿ ನೀರಿನ ದಡದಲ್ಲಿ ಹುಲ್ಲನ್ನು ಸಂಗ್ರಹಿಸುವಾಗ ತನ್ನ ಕೊರಳೊಳಗಿನ ಲಿಂಗ ಕೆಳಕ್ಕೆ ಬಿದ್ದಿತು, ಅದು ತಾನೇ ಬಿದ್ದಿತ್ತೆಂದ ಮೇಲೆ ಅದನ್ಯಾಕೆ ಎತ್ತಿಕೊಳ್ಳಲೆಂದು ಹುಲ್ಲನ್ನು ಹೊತ್ತುಕೊಂಡು ಮುಂದಕ್ಕೆ ಸಾಗಿದಾಗ ಲಿಂಗ ಪುರುಷನ ವೇಷದಿಂದ ಚಂದಯ್ಯನ ಬೆನ್ನುಹತ್ತಿ ನಾನು ಬರುತ್ತೇನೆ ಎಂದಾಗ, ಕಾಯಕ ನಿಷ್ಠೆಯಿಂದ ಸಾಗಿರುವಾಗ ದೇವನ ಅಗತ್ಯ ಬೇಕಿಲ್ಲ, ನೀನು ಎಲ್ಲಿಯಾದರೂ ಹೋಗು ನನಗೆ ಬೇಕಿಲ್ಲ ಎಂದು ಲಿಂಗಕ್ಕೆ ಚಂದಯ್ಯ ಬೆದರಿಸಿದ. ಇತನ ಕಾಯಕ ನಿಷ್ಠೆಗೆ ಲಿಂಗದೇವನು ಸಹಿತ ಬೆರಗಾಗಿ ತಾನು ಬರುತ್ತೇನೆಂದು ಬೆನ್ನು ಹತ್ತಿದಾಗ ಚಂದಯ್ಯ ತಿರಸ್ಕರಿಸಿದ.[೫೬] ಆಗ ನೀನು ನನ್ನಲ್ಲಿ ಬರುವನಾದರೆ ನುಲಿಯ ಕಾಯಕವನ್ನು ಮಾಡಿಕೊಂಡಿರಬೇಕು. ಅದಕ್ಕೆ ಸಾಕ್ಷಿಯಾಗಿ ಸಮೀಪದಲ್ಲಿ ಮಾಚಯ್ಯಗಳು ಹೊಂಡದಲ್ಲಿ ಇರುವರು, ಅವರಿಂದ ಹೇಳಿಸು ಎಂದು ಚಂದಯ್ಯ ನುಡಿದ. ಆಗ ಮಾಚಿದೇವನಲ್ಲಿಗೆ ಚಂದಯ್ಯ ಲಿಂಗಯ್ಯ ಇಬ್ಬರು ಹೋದಾಗ, ಮಾಚಿದೇವ[೫೭] "ಬಂದೇನೆಂದರೆ ..... ಸುಖಕ್ಕೆ ಸುಖ ಒದಗಿದರೆ ಒಲ್ಲೆನನಬಹುದೇ ....." ಸುಖ ಬರುತ್ತದೆಂದು ಹೇಳಿದರೆ ಬೇಡವೆಂದು ಹೇಳುವದೇ. ಎಷ್ಟು ಹೇಳಿದರೂ ಚಂದಯ್ಯ ಒಪ್ಪಲಿಲ್ಲ. ಕೊನೆಗೆ ನನ್ನ ಜೊತೆ ಕಣ್ಣಿಯ ಮಾಡಿ ಕೊಂಡಿರುವದಾದರೆ ಬಾ ಎಂದು ಲಿಂಗ ಪುರುಷನನ್ನು ಹಗ್ಗದ ಕಣ್ಣಿಯನ್ನು ಮಾರಲು ಊರೊಳಗೆ ಕಳುಹಿಸಿದ. ಪ್ರತಿನಿತ್ಯದಲ್ಲಿ ಹಗ್ಗ, ಕಣ್ಣಿಯನ್ನು ಮಾರಿಕೊಂಡು ಬರುತ್ತಿರುವ ಲಿಂಗಪುರುಷ ಒಂದು ದಿನ ಬಸವನ ಅರಮನೆಗೆ ಹೋದ, ಹೆಚ್ಚಿಗೆ ದುಡ್ಡನ್ನು ಕೊಟ್ಟು ಆ ಹಗ್ಗವನ್ನು ಬಸವಣ್ಣ ಖರೀದಿಸಿದ. ಮರಳಿ ಚಂದಯ್ಯನಲ್ಲಿಗೆ ಬಂದಾಗ ಕಾಯಕದ ಬೆಲೆಗಿಂತ ಹೆಚ್ಚಿನ ದುಡ್ಡು ಬೇಕಿಲ್ಲ, ನೀನು ಹೆಚ್ಚಿನ ದುಡ್ಡನ್ನು ತಂದಿದ್ದರಿಂದ ನಮ್ಮಲ್ಲಿ ಕೆಲಸವಿಲ್ಲವೆಂದು ಆತನನ್ನು ಚಂದಯ್ಯ ದಬ್ಬಿದ. ಮತ್ತೆ ಮಡಿವಾಳ ಮಾಚಿದೇವನಲ್ಲಿಗೆ ಈ ನ್ಯಾಯ ಒಯ್ದಾಗ ಮಾಚಿದೇವ, ಚಂದಯ್ಯ, ಲಿಂಗಪುರುಷ ಕೂಡಿಕೊಂಡು ಅನುಭವಮಂಟಪಕ್ಕೆ ಬಂದರು ಏನು ಹೇಳದಿದ್ದರೂ ಒಪ್ಪದ ಚಂದಯ್ಯನಿಗೆ ಮಡಿವಾಳ[೫೮] 'ಗುರುವಾದರೂ ಲಿಂಗವ ಪೂಜಿಸಬೇಕು ..... ಅಂಗದಲ್ಲಿ ಲಿಂಗವಿರಬೇಕು ಕಲಿದೇವನರಿಯುವದಕ್ಕೆ'. ಗುರುವಿಗೂ ಲಿಂಗಬೇಕು ಜಂಗಮವಾದರೂ ಲಿಂಗವನ್ನೇ ಪೂಜಿಸಬೇಕು, ಪ್ರತಿ ಅಂಗಕ್ಕೂ ಬೇಕು ಲಿಂಗ, ಅರಿಬೇಕಾದಲ್ಲಿ ಲಿಂಗದ ಅವಶ್ಯಕತೆಯಿದೆ. ಸ್ವ ಅನುಸಂಧಾನಕ್ಕೆ ತನ್ನನ್ನು ತಾನು ತಿಳಿಯಲು ಲಿಂಗದ ಅವಶ್ಯಕತೆಯಿದೆ ಎಂದು ಪ್ರಭು ಹೇಳಿದಾಗ ಚಂದಯ್ಯ ಲಿಂಗವನ್ನು ಧರಿಸಿಕೊಂಡ. ಇವೆಲ್ಲ ಸಂಪಾದನೆಗಳನ್ನು ನೋಡಿದಾಗ ಕಾಯಕದ ನಿಷ್ಠೆ ಎಂತಹ ಮಹತ್ವದ್ದು ಎನ್ನಿಸದಿರಲಾರದು. ಇಂತಹ ಆರ್ಥಿಕ ನೀತಿಗಳನ್ನು ಇಂದು ಸಂವಿಧಾನದಲ್ಲಿ ಅಳವಡಿಸಿಕೊಳ್ಳಬಹುದಾಗಿದೆ. ಹೀಗೆ ಸಾಮಾಜಿಕ ವಿಕಸನಕ್ಕೆ ಅತ್ಯುತ್ತಮ ಉದಾಹರಣೆಯಾಗಿ ನಿಲ್ಲಬಲ್ಲದು ಕಾಯಕ ಸಿದ್ಧಾಂತ.

ಆಧ್ಯಾತ್ಮಿಕ ವಿಕಸನ - ಇಲ್ಲಿ ಮುಕ್ತಾಯಕ್ಕ, ಸಿದ್ಧರಾಮಯ್ಯನ ಗುರುಕರುಣೆ, ಅನುಮಿಷ, ಗುಗ್ಗಯ್ಯನ ಪ್ರಸಂಗ, ಮರಳಶಂಕರರ ರೀತಿ, ಬಸವೇಶನಿಂದ ಚನ್ನಬಸವನಿಗೆ ಅನುಗ್ರಹ, ಘಟ್ಟಿವಾಳ ಸಂಪಾದನೆ, ಮಹಾದೇವಿ ಅಕ್ಕಗಳ ಸಂಪಾದನೆ, ಗೋರಕ್ಷ ಪ್ರಸಂಗ ಇವೆಲ್ಲಾ ಆಧ್ಯಾತ್ಮಿಕ ಸಂಪದಗಳಾಗಿವೆ. ಪ್ರಭು ಸಾಧಕ ಜೀವನದಲ್ಲಿ ನಡೆದುಹೋಗುವ ಪ್ರಸಂಗದಲ್ಲಿ ಬಳೆಗಾಂವಿಯ ಸಮೀಪದ ಹೊಲದಲ್ಲಿ ಕೃಷಿ ಕೆಲಸಮಾಡುವ ಗೊಗ್ಗಯ್ಯಗಳೆ ಹೊಡೆಯುತ್ತಿದ್ದಾಗ ಆತನನ್ನು ಆಧ್ಯಾತ್ಮಿಕ ಕೃಷಿಕನನ್ನಾಗಿ ಮಾಡಬೇಕೆಂದು ಬಗೆದು ಅಲ್ಲಿಗೆ ಬಂದ, ತನ್ನ ಕೃಷಿಯನ್ನು[೫೯] "ತನುವು ತೋಂಟವ ಮಾಡಿ, ಮನವ ಗುದ್ದಲಿಮಾಡಿ ಅಗೆದು ಕಳೆದನಯ್ಯ

ಭ್ರಾಂತಿಯ ಬೇರ, ಬಿಗಿದು ಭಿತ್ತಿದನಯ್ಯ ಬ್ರಹ್ಮ ಬೀಜವ .....'' ಅಂದರೆ ಶರೀರ ಶೋಧನೆಯಲ್ಲಿ ಅಂತರಂಗದಲ್ಲಿ ಹುದುಗಿದ ಪರಮಾತ್ಮ ಸ್ವರೂಪಿ ಆತ್ಮನನ್ನು ಬ್ರಹ್ಮ ಬೀಜವೆಂದು ಹೇಳಿದ್ದಾನೆ. ಆ ಬ್ರಹ್ಮ ಬೀಜದ ಬೆಳೆ ಬರಬೇಕಾದರೆ ಭೌತಿಕದ ಕೃಷಿಯಂತೆ ಈ ಶರೀರದ ಕ್ರಿಯೆಗಳನ್ನು ಕೃಷಿಕಾಯಕಕ್ಕೆ ಹೋಲಿಸಿ ಯಾವಾಗಲೂ ಕೂಡಾ ಆ ಬ್ರಹ್ಮನ ನೆನಹಿನಲ್ಲಿ ಇರಬೇಕೆಂಬುದೇ ಆಶಯವಾಗಿದೆ. ಅದರಂತೆ ಗೊಗ್ಗಯ್ಯನನ್ನು ಆಧ್ಯಾತ್ಮಿಕ ಕೃಷಿಕನನ್ನಾಗಿ ಸಿದ್ಧಗೊಳಿಸಿದ. ಅಲ್ಲಿಯೇ ಸಮೀಪದ ಹೊಲದಲ್ಲಿ ಸಮಾಧಿಸ್ಥ ಅನುಮಿಷ ದೇವಾಲಯವನ್ನು ಗುರ್ತಿಸಿ ಒಳಗೆ ಹೋದ, ಆತನ ಜೊತೆಯಲ್ಲಿ ಗೊಗ್ಗಯ್ಯನು ಇದ್ದ, ಅನುಮಿಷ ಸಮಾಧಿಸ್ಥನಾಗಿದ್ದನೆಂದು ಹೇಳಿದೆ. ಆದರೆ ಲಿಂಗೈಕ್ಯನಾಗಿದ್ದನೆಂದು ಸಂಪಾದನಕಾರರು ಹೇಳಿಲ್ಲ, ಗುರುವಿಲ್ಲದೇ ಲಿಂಗ ಉಪದೇಶವಾಗದು ಎಂಬ ನಿಯಮವನ್ನು ಪ್ರಭು ಮೊದಲೇ ಅರಿತಿದ್ದ, ಯಾಕೆಂದರೆ ತನ್ನ ವಚನದೊಳಗೆ ಹೇಳಿದ್ದಾನೆ. ಧ್ಯಾನ ರೂಪದಲ್ಲಿರುವ ಅನುಮಿಷನಿಂದ ಪ್ರಭುವಿಗೆ ಲಿಂಗದೀಕ್ಷೆಯಾಯಿತೆಂದು ಇಟ್ಟುಕೊಳ್ಳೋಣ. ಯಾಕೆಂದರೆ ಅಲ್ಲಿ ದೀಪ ಉರಿಯುತ್ತಿದೆ ಎಂದಾಗ ಆ ದೀಪವನ್ನು ಹಚ್ಚುವವರು ಇರಲೇಬೇಕಾಗುತ್ತದೆ. ಯಾರಿಗೂ ಗೊತ್ತಿರದ ಆ ಗುಹೆಯಲ್ಲಿ ದೀಪ ಉರಿಯುತ್ತಿದೆ. ಅದರ ಅರ್ಥ ಲಿಂಗ ಪೂಜೆಯಲ್ಲಿ ನಿರತ, ಸಮಾಧಿ ರೂಪದ ಲಿಂಗ ನಿರೀಕ್ಷೆಯಲ್ಲಿ ಅನುಮಿಷಯಿದ್ದ ಎಂದು ಊಹಿಸಬಹುದಾಗಿದೆ. ಈ ದೀಕ್ಷೆಗೆ ಸಾಕ್ಷಿಯಾಗಿ ಗೊಗ್ಗಯ್ಯ. ಇದು ಪ್ರಭು ಜೀವನದ ವಿಶಿಷ್ಟ ಘಟನೆ ಗೀತೆಯಲ್ಲಿ ಅರ್ಜುನ ಕೃಷ್ಣನ ವಿರಾಟ ದರ್ಶನವನ್ನು ಪಡೆದುಕೊಂಡಂತೆ ಸಾಧಕನ ಅತೀಂದ್ರಿಯ ಸಂಸ್ಕಾರದ ರೀತಿಯನ್ನು ಹಲವಾರು ದಾರ್ಶನಿಕರಲ್ಲಿ ಕಾಣುತ್ತೇವೆ. ಪ್ರಭುವಿಗೆ ದೀಕ್ಷೆಯನ್ನು ಮಾಡಿದ ನಂತರ ಅನುಮಿಷ ತನ್ನ ಜೀವವನ್ನು ಬಿಟ್ಟಿರಬೇಕು. ಇದನ್ನೆಲ್ಲಾ ಗೊಗ್ಗಯ್ಯ ನೋಡಿ ತನ್ನ ಜೀವನವನ್ನು ಆಧ್ಯಾತ್ಮಿಕದತ್ತ ಚಾಚಿದ. ಮತ್ತು ಪ್ರಭು ಮುಂದೆ ಸಾಗಿದಾಗ ಅಲ್ಲಿ ಮುಕ್ತಾಯಕ್ಕನ ಪ್ರಸಂಗ ಬರುವದು, ಮುಕ್ತಾಯಕ್ಕನ ಅಣ್ಣ ಅಜಗಣ್ಣ ತೀರಿಕೊಂಡಿದ್ದ. ಆತನ ತಲೆಯನ್ನು ಕೈಯಲ್ಲಿ ಹಿಡಿದು ಮುಕ್ತಾಯಕ್ಕ ದು:ಖಿಸುತ್ತಿದ್ದಾಗ ಪ್ರಭು ಅಲ್ಲಿಗೆ ಬಂದ ಪ್ರಸ್ತಾವದ ವಚನ.

"ಅಂಗೈಯಲ್ಲಿ ಅರಳಿದ ತಲೆ ಹಿಡಿದುಕೊಂಡು ಕಂಗಳ ಮುತ್ತಾಪೋಣಿವಾಕೆ ನೀನಾರು ಹೇಳಾ? ಸಂದ ಸಂಪಿಗೆಯರಳ ತುಂಬಿಕೊಂಡುಂಬ ....."[೭೦] ಎಂಬುದು ಮುಕ್ತಾಯಕ್ಕನನ್ನು ಪ್ರಭು ಆ ಜ್ಞಾನಿಯ ಶಿರವನ್ನು ಕೈಯಲ್ಲಿ ಹಿಡಿದು ಏಕೆ ದುಃಖಿಸುತ್ತಿರುವೆ, ಅದು ಅರಳಿದ ಹೂವು ಅದರ ವಾಸನೆಯನ್ನು ಸವಿದರೆಯಾಯಿತು, ಕೊನೆಯವರೆಗೆ ಹೂವೆ ಬೇಕೆಂದೇನಲ್ಲ, ಆ ರೀತಿ ಬಯಸಲೇಬಾರದು ಅದು ಪಂಚೀಕೃತ ಭೂತಾತ್ಮ. ತುಂಬಿ ಸಂಪಿಗೆಯ ಮಕರಂದವನ್ನು ಹೀರಿ ಹ್ಯಾಗೆ ಪಾರಾಗುತ್ತಿದೆಯೋ ಹಾಗೆ ಶರೀರ ಒಳ್ಳೆಯ ಕೆಲಸಗಳನ್ನು ಮಾಡಿ ಅದರ ಸತ್ವ ಪ್ರಾಣವೆಂಬ ದುಂಬಿ ಹಾರಿಹೋಗುತ್ತದೆ. ಅದರ ಬಗ್ಗೆ ಅನುತಾಪ ಸರಿಯಲ್ಲ, ಮೊದಲು ಒಂದೇ ಆಗಿದ್ದ ತತ್ವ ಎರಡಾಯಿತು, ಎರಡಾಗಿದ್ದದ್ದು ಕೊನೆಗೆ ಒಂದಾಗುವದು ವ್ಯರ್ಥ ಪ್ರಲಾಪಬೇಡವೆಂದು ಪ್ರಭು ಮುಕ್ತಾಯಕ್ಕನನ್ನು ಸಂತೈಸಿದ. ಸಂತೈಸುವ ಮಾರ್ಗವು ಕೂಡಾ ದರ್ಶನವನ್ನು ಸಾಂಕೇತಿಕವಾಗಿ ಹೇಳುವಂತಿದೆ. ಆ ತತ್ವವನ್ನು ಅರಿತಾಗ ಮಾತಿನ ಅವಶ್ಯವಿರುವದಿಲ್ಲ, ಅಲ್ಲಿ ಮಾತುಮೌನ. ತನ್ನನ್ನು ತಾನು ಯಾವನು ತಿಳಿಯುತ್ತಾನೆಯೋ ಆತನ ನುಡಿಯಲ್ಲಾ ತತ್ವ, ನಿನ್ನ ಸಲುವಾಗಿ ಶಬ್ದವನ್ನು ಹೇಳಬೇಕಿದೆ. ಆದ್ದರಿಂದ ಈ ಮಾತುಗಳು ಅಂಗಲಿಂಗ ಉಭಯ ಸಂಗವಳಿದ ಬಳಿಕ ಅಲ್ಲಿಗೆ ಮುಕ್ತಿಫಲ ಅದನ್ನು ನೀನು ಪಡೆದಿದ್ದರಿಂದಲೇ ನೀನು ಮುಕ್ತಾಯಿ.

ಬಸವ ಚನ್ನಬಸವನಿಗೆ ಅನುಗ್ರಹ ಮಾಡಿದ ಪರಿ, ಚನ್ನಬಸವ ಅಸಮಾನ್ಯ ಜ್ಞಾನಿ, ಆತನ ವಿಚಾರಕ್ಕೆ ಬಸವ ಸಂಪೂರ್ಣ ಗೌರವವನ್ನು ಕೊಟ್ಟಿದ್ದ ಆದರೆ ಚನ್ನಬಸವನಿಗೆ ದೀಕ್ಷೆ ಇಲ್ಲದ್ದರಿಂದ ಬಸವನಿಗೆ ದೀಕ್ಷೆ ಕೊಡಲು ಕೇಳಿದ, ಆಗ ಬಸವಣ್ಣ "ನಾನೊಬ್ಬರಿಗೂ ಉಪದೇಶ ಮಾಡಲೊಲ್ಲೆನು ..... ತತ್ವವ ಹಿಡಿದವರಿಗೆ ತುತ್ತಾಗಿ ನಡೆಯುವೆನು ....."[೬೧] ಹೀಗೆ ಹೇಳಿದಾಗ ಚನ್ನಬಸವ ಬಸವರಿಂದಲೇ ದೀಕ್ಷೆಯನ್ನು ಪಡೆದುಕೊಳ್ಳಬೇಕೆಂಬ ಹಂಬಲ ತನ್ನ ಮಾತಿನಲ್ಲಿ[೬೨] "ಹಸ್ತಮಸ್ತಕದ ಸಂಯೋಗದ ಮುನ್ನ ಯೌವನ ಮಥನವಾಗಿತ್ತು ....." ಅಂದರೆ ದೀಕ್ಷೆಯ ಮುನ್ನ ಯೌವನ ಯಾವುದೇ ರೀತಿಯ ಸೆಳೆತಕ್ಕೆ ಅಥವಾ ಮಥನಕ್ಕೆ ಹೊಂದಿತ್ತು. ತದನಂತರದಲ್ಲಿ ಚಿತ್ ವಿಫಲತೆ ಮಾಯವಾಗಿ ಸಫಲತೆ ಕಂಡುಕೊಂಡಿತು. ಹಸ್ತಮಸ್ತಕದ ಸಂಯೋಗದ ಕ್ರಿಯೆ ಅದು ಬಹಿರಂಗವಾದುದು. ಅದಕ್ಕನುಸರಿಸಿ ಅಂತರಂಗದ ಅನುಸಂಧಾನವಿದೆ. ಅಂದರೆ ಮನವನ್ನು ಸಬಲೀಕರಣ ಮಾಡುವದು ಅಂತರಂಗ ಶ್ರೀ, ಅಂತರಂಗ, ಬಹಿರಂಗ ಒಂದುಗೂಡುವದಾದರೇ ಅದು ಆತ್ಮ ಸಂಗವೆನ್ನಬಹುದು. ಈ ಆತ್ಮ ಸಂಗಾತಕ್ಕಾಗಿಯೇ ಚನ್ನಬಸವನ ಹಂಬಲ, ಅದು ಬಸವಣ್ಣನಿಂದ ಆಯಿತು, ಚನ್ನಬಸವಣ್ಣ ತನ್ನ ವಚನದಲ್ಲಿಯೇ ಹೇಳಿರುವಂತೆ ಆತನ ದೀಕ್ಷಾಗುರು ಬಸವ, ಈ ದೀಕ್ಷಾವಿಧಿ ಈ ಧರ್ಮದ ಒಂದು ಭಾಗ ಅಲ್ಲಿಯಿಂದಲೇ ಧರ್ಮ ಪ್ರಾರಂಭ, ಇದು ಒಂದು ಆಧ್ಯಾತ್ಮಿಕ ಮಥನ.

ಮರುಳ ಶಂಕರನ ಜೀವನದಿಂದ ಕಲಿಯಬೇಕಾದದ್ದು ಇದೆ. ಪ್ರಭು ಸಿದ್ಧರಾಮನೊಡನೆ ಬಸವನ ಅರಮನೆಗೆ ಬಂದಾಗ ಅಲ್ಲಿ ದಾಸೋಹದ ಪ್ರಸಾದವ ಕುಂಡ, ಅಂದರೆ ಪತ್ರಾವಳಿಯನ್ನು ಒಗೆಯುವ ಜಾಗ, ತಿಪ್ಪೆಯ ತಪ್ಪಲದ ರಾಶಿಯ ಮಧ್ಯದಲ್ಲಿಯೇ ಈ ಮರುಳ, ಈತನನ್ನು ಹಲವರು ಹಲವು ಬಾರಿ ನೋಡಿದರೂ ಕೂಡಾ ಮರುಳನಂತೆಯೇ ಕಂಡದ್ದು. ಶರಣರ ಒಕ್ಕು ಮಿಕ್ಕ ಪ್ರಸಾದವನ್ನು ಸೇವಿಸಿ ಪ್ರಸಾದ ಕುಂಡದಲ್ಲಿ ಹಲವು ವರ್ಷಗಳವರೆಗೆ ಇದ್ದನೆಂಬುದು ತಿಳಿದುಬರುತ್ತದೆ. ಆತ ನಿಜದ ಅನುಭಾವಿ, ಆತನಿಂದ ಕಲಿಯಬೇಕೆಂಬುದು ನಿರಾಡಂಬರ ಗುಪ್ತ ಭಕ್ತಿಯನ್ನು, ಆತ ಎಲ್ಲರ ಮುಂದೆಯೇ ಇದ್ದ, ಆದರೆ ಯಾರ ಕಣ್ಣಿಗೂ ಬಿದ್ದಿಲ್ಲ, ನೋಡಿಯೂ ಗೊತ್ತಿಲ್ಲ. ಆತ ಪ್ರಭು ಅರಮನೆಗೆ ಬಂದಾಗ ಎದ್ದುಬಂದು ನಮಸ್ಕರಿಸಿದ. ಪ್ರಭುವಿನ ಮಾತಿನಲ್ಲಿ ಹೇಳುವದಾದರೆ ಹೂಳಿರ್ದ ನಿಧಿ ಯಾರಿಗಾದರೂ ಕಾಣುತ್ತದೆಯೋ, ಪಾಪಿಪರುಷದ ಮೇಲೆ ಕುಳಿತಿದ್ದರೂ ಅದು ಕಲ್ಲಿನಂತೆ ತೋರುತ್ತದೆ. ಹಾಗೆಯೇ ಉಳಿದ ಶರಣರ ಕಣ್ಣಿಗೆ ಈ ಶಂಕರನ ನಿಲುವು ಮರಳುನಂತೆಯೇ ಕಂಡಿದೆ, ಆದರೆ ಆತ ಮರುಳನಲ್ಲ, ಪ್ರಸಾದ ಶಂಕರ. ಆತನ ನಿಲುವು ಮುಗಿಲಮೊರೆಯ ಮಿಂಚ, ನೆಲದ ಮರೆಯ ನಿಧಿ, ಒಡಲಮರೆಯ ಆತ್ನ, ಬಸವಾದಿ ಶರಣ ಸಹಿತರಿಗೆ ಅಲ್ಲಿಯವರೆಗೂ ಗೊತ್ತೇ ಇಲ್ಲ ಪ್ರಭುವೇ ಎಲ್ಲರಿಗೂ ಈ ಶಂಕರನ ಪರಿಚಯ ಮಾಡಿಸಿದ. ತನ್ನಲ್ಲಿದ್ದ ಶಂಕರನನ್ನು ಅರಿಯಬೇಕಾದರೆ ಅದನ್ನು ಪ್ರಭು ತೋರಿಸಬೇಕಾಯಿತು. ಆಧ್ಯಾತ್ಮಿಕದಲ್ಲಿ ನಿರಾಡಂಭರ ಜೀವನ ಅವಶ್ಯವೆಂಬುದನ್ನು ಇದು ಹೇಳುವಂತಿದೆ.

ಸಿದ್ಧರಾಮರ ಗುರು ಕರುಣದಲ್ಲಿಯ ತಾತ್ವಿಕ ಚಿಂತನೆಯಲ್ಲಿ ಸಿದ್ಧರಾಮನ ಪ್ರಶ್ನೆ, ಉಪಾಸನೆಯ ವಸ್ತುವನ್ನು ಅಂಗದ ಮೇಲೆಯೇ ಯಾಕೆ ಧರಿಸಬೇಕು, ಇದಕ್ಕೆ ಉತ್ತರ, ಅನುಭವ ಮಂಟಪದಲ್ಲಿ ಗೋಷ್ಠಿ ನಡೆಯಿತು. ಅಲ್ಲಿ ಲಿಂಗದ ಬಗ್ಗೆ ಪ್ರಸ್ತಾಪಮಾಡಲು ಸಿದ್ಧರಾಮ ಕರಸ್ಥಲದ ಲಿಂಗದ ಬಗ್ಗೆ ಬಸವರಿಂದ ತಿಳಿಸಿಕೊಡಬೇಕೆಂದು ಕೇಳಿಕೊಂಡಾಗ, ಸಿದ್ಧರಾಮನಿಗೆ ಲಿಂಗಧಾರಣೆ ಇಲ್ಲದ್ದರಿಂದ ಅದನ್ನು ತಿಳಿಸಲು ಬಸವಣ್ಣ

ನಿರಾಕರಿಸಿದ. ಆದರೆ ಸಿದ್ಧರಾಮ ಚನ್ನಬಸವಣ್ಣನ ದರ್ಶನ ಮಾಡಿದ ಮಾತ್ರದಿಂದ ಪ್ರಾಣಲಿಂಗ ಸಾಕ್ಷಾತ್ಕಾರ ವಾಗಿದೆ ಎಂದ ಸಿದ್ಧರಾಮ, ಅದಕ್ಕೆ [೬೩]''..... ಪ್ರಾಣಲಿಂಗ ಸಂಬಂಧ ನಿನಗೆಲ್ಲಿಯದು ಹೇಳಾ ಸಿದ್ಧರಾಮ, ಅಂಗದ ಮೇಲೆ ಲಿಂಗವಿಲ್ಲದೆ ಪ್ರಾಣಲಿಂಗ ಸಂಬಂಧ ಸಾಧ್ಯವಿಲ್ಲ ಎನ್ನುವನು ಚನ್ನಬಸವಣ್ಣ, ಆಗ ಪ್ರಭು [೬೪]''ಆಕಾಶವ ನಡರುವಂಗೆ ಅಟ್ಟಗೋಲ ಹಂಗೇಕೆ? ..... ಸೀಮೆಯ ಮೀರಿದ ನಿಸ್ಸೀಮ ಸಿದ್ಧರಾಮಂಗೆ ಲಿಂಗವೆನೆಂದು ಹೇಳಾ ಚನ್ನಬಸವಣ್ಣ, ಆಕಾಶಕ್ಕೆ ನೆಗೆಯುವ ಮನುಷ್ಯನಿಗೆ ನಿಚ್ಚಣಿಕೆಯ ಹಂಗು ಬೇಕಿಲ್ಲ, ಸಮುದ್ರ ದಾಟುವ ಶಕ್ತಿಯುಳ್ಳವಂಗೆ ನಾವಿನ ಹಂಗೇಕೆ? ಎಂದು ಪ್ರಭುವಿನ ಪ್ರಶ್ನೆ. ಸಿದ್ಧರಾಮ ಸೀಮೆಯ ಮೀರಿದ ನಿಸ್ಸೀಮ, ಆತನಿಗೆ ಲಿಂಗವೆಂದರೇನು ಗೊತ್ತಿಲ್ಲ ಅದನ್ನು ಹೇಳು ಎಂದು ಚನ್ನಬಸವಣ್ಣನಿಗೆ ಹೇಳುತ್ತಾನೆ. ಲಿಂಗದ ಅವಶ್ಯಕತೆ ಏನು, ಲಿಂಗವಿರದಿದ್ದರೂ ನಡೆಯಬಹುದಲ್ಲ, ಅದಕ್ಕೆ ಚನ್ನಬಸವ ಆಕಾಶದಲ್ಲಾಡುವ ಪಟಕ್ಕೆ ಸೂತ್ರವಿರಲಾರದೇ ಹಾರಾಡಲಾರದು, ಉದ್ಯೋಗವಿಲ್ಲದೇ ಬದುಕು ಸಾಗಲಾರದು, ಭೂಮಿ ಇಲ್ಲದೇ ಬಂಡಿ ನಡೆಯಲಾರದು, ಆದ್ದರಿಂದ ಅಂಗಕ್ಕೆ ಲಿಂಗಬೇಕೆಬೇಕು, ಸಂಗವಿಲ್ಲದೇ ನಿಸ್ಸಂಗವೆನಲಾಗದು, ಅದರ ಅವಶ್ಯಕತೆಯಿದೆ ಎಂದಾಗ ತೆಲುಗು ಜೊಮ್ಮಣ್ಣಗಳ ವಚನ [೬೫]''ಗುರುಕಾರುಣ್ಯ ಪಡೆದುದಕ್ಕೆ ಚಿನ್ನವಾಗುವದೆಂದರೆ ..... ಲಿಂಗಧಾರಣವುಳ್ಳುದೇ ಸದಾಚಾರ ಇಲ್ಲದೊಡೆ ಅನಾಚಾರವೆಂದೆನಯ್ಯ ತೆಲುಗೇಶ್ವರ'' ಗುರು ಕಾರುಣ್ಯದ ಗುರ್ತು ಅಂಗದ ಮೇಲೆ ಲಿಂಗ ಸ್ವಾಯತ, ಅದಿಲ್ಲದೆ ಗುರುಕರುಣವಾಯಿತ್ತೆಂದಡೆ ಸುಳ್ಳು. ಲಿಂಗ ಬಿಟ್ಟು ಗುರು ಕಾರುಣ್ಯವಿಲ್ಲವೆಂದು ಹೇಳಿ, ಲಿಂಗಧಾರಣೆ ಕಡ್ಡಾಯವೆಂದು ಹೇಳಿದ. ಆಗ ಪ್ರಭು ಒಪ್ಪಿ ಲಿಂಗದ ಅವಶ್ಯಕತೆಯಿದೆ ಎಂದು ಸಿದ್ಧರಾಮನಿಗೆ ಹೇಳಿ ಚನ್ನಬಸವನಿಂದ ದೀಕ್ಷೆಯನ್ನು ಮಾಡಿಸಿದ. ಲಿಂಗವನ್ನು ತಿಳಿಯದೇ ಏನು ತಿಳಿದರೂ ಪ್ರಯೋಜನವಿಲ್ಲ, ಅದನ್ನು ತಿಳಿದ ಮೇಲೆ ಮತ್ತೇನೂ ತಿಳಿದರೂ ವ್ಯರ್ಥ, ಎಲ್ಲದ್ದಕ್ಕೂ ಲಿಂಗವೇ ಮುಖ್ಯ, ಲಿಂಗಸಂಗ ಮಾಡಬೇಕಾದುದು ಅವಶ್ಯ, ಈಶ್ವರ ಕಲ್ಪನೆಯ ಬಗೆಗೆ ಇಷ್ಟಲಿಂಗಧಾರಣೆ ಬಗೆಗೆ ತಿಳಿದುಕೊಂಡರು. ಯೋಗದ ದರ್ಶನ ಸ್ವರೂಪ ಗೋರಕ್ಷ ಸಂಪಾದನೆಯಲ್ಲಿಯೂ ಕೂಡಾ ಇಷ್ಟಲಿಂಗ ಯೋಗ ಬರುವದರಿಂದ ಅದನ್ನು ನೇರವಾಗಿ ಇಲ್ಲಿ ವಿವರಿಸಲಾಗಿದೆ. ಸಿದ್ಧರಾಮ ಲಿಂಗವಿಲ್ಲದೇ ಮೊದಲು ಭವಿಯಾಗಿದ್ದ ಕಲ್ಯಾಣದ ಶರಣರ ಒಡನಾಟದಿಂದ ಆತ ವೀರಶೈವನಾದ ಅನುಭಾವಿ ಮಂಟಪದಲ್ಲಿ ಗೋಷ್ಠಿಯಲ್ಲಿ ಬಾಗಿಯಾದ ಎಲ್ಲ ಶರಣರು ಲಿಂಗ ಪ್ರತಿಪಾದಕರೇ ಆಗಿರುವದರಲ್ಲಿ ಸಂದೇಹವಿಲ್ಲ. ಅದಕ್ಕೆ ಸಂಬಂಧಪಟ್ಟಂತೆಯೇ ಆ ಲಿಂಗಧಾರಣೆಯೇ ಸಾಕ್ಷಿ.

''ಅವಧಿ ಅಳಿಯಿತ್ತು ವ್ಯವಧಾನ ಉಳಿಯಿತ್ತು ..... ಗುಹೇಶ್ವರನ ಲಿಂಗಧಾರಣತೆ ನಿಮಗೆಲ್ಲರಿಗೆ''.[೬೬] ಶರಣರ ಅವಸಾನದ ಬಗ್ಗೆ ಇಲ್ಲಿ ಪ್ರಭುವಿನ ನಿರ್ದೇಶನವಿದೆ. ಶರಣರು ಕಲ್ಯಾಣಕ್ಕೆ ಬಂದ ಕೆಲಸ ತೀರಿದ ಮೇಲೆ ಎಲ್ಲರೂ ಕೂಡಾ ತಮ್ಮ ತಮ್ಮ ತನುವ ಮಹತ್ತ್ನನ್ನು ಬರಿಸುವ ಕಾಲ ಸನ್ನಿಹಿತವಾಗಿದೆ, ಇನ್ನೂ ಕಾಲ ಬದಲಾಯಿತು ನಿಜ ಶರಣರು ಕಲಿಯುಗದಲ್ಲಿ ಇರಲಿಕ್ಕಾಗದು, ಅವರವರ ಕೊನೆಯಗಳಿಗೆಯ ಸ್ಥಾನಗಳನ್ನು ಹೇಳಿ ತಾನು ಕದಳಿಗೆ ದಯಮಾಡಿಸಿದ. ಮಾರ್ಗ ಮಧ್ಯೆಯಲ್ಲಿ ಗೋರಕ್ಷನೆಂಬ ಸಿದ್ಧನಕೂಡಾ ವಾದ ನಡೆಯಿತು. ವಾದದ ಅಂತ್ಯ ಆತನಿಗೆ ಶಿವಯೋಗವನ್ನೇ ತಿಳಿಸಿಕೊಡುವದಾಗಿದೆ. ಆತನ ಯೋಗದ ದೃಷ್ಟಿ ಹಠಯೋಗದಿಂದ ಕೂಡಿದುದು. ಮಹಾಸಿದ್ಧಿ ಪುರುಷ ಯೋಗದಿಂದ ತನ್ನ ದೇಹವನ್ನು ವಜ್ರ

ದೇಹಿಯಾಗಿಸಿಕೊಂಡಿದ್ದ. ಅದೇ ಆತನಿಗೆ ಚರಮಸ್ಥಿತಿಯಾಗಿತ್ತು, ದೇಹವನ್ನು ವಜ್ರ ಕಾಯವನ್ನಾಗಿಸಿದರೇ ಅದೇನು ಮಹತ್ವದ ಸಿದ್ಧಿ ಏನಲ್ಲ, ಒಂದುದಿನ ದೇಹ ಬಿದ್ದು ಹೋಗುವದು, ದೇಹ ಗಟ್ಟಿಮಾಡಿಕೊಳ್ಳುವದು ಯೋಗದ ಹಲಬು ಅಲ್ಲ. ದೇಹವನ್ನು ಬಯಲಾಗಿಸುವ ಯೋಗದ ಚರಮ ಗುರಿ. ಗೋರಕ್ಷ ತನ್ನ ಶರೀರವನ್ನು ಪರೀಕ್ಷಿಸಲು ಪ್ರಭುವಿನ ಕೈಗೆ ಖಡ್ಗವನ್ನು ಕೊಟ್ಟು ಹೊಡೆಯಲು ಹೇಳಿದ. ಪ್ರಭು ಹೊಡೆದಾಗ ಶಬ್ದ ಬರತೊಡಗಿತು, ಆಗ ಆ ಖಡ್ಗವನ್ನು ಪ್ರಭು ಗೋರಕ್ಷನಿಗೆ ಕೊಟ್ಟು ತನಗೆ ಹೊಡೆಯಲು ಹೇಳಿದ, ಆ ಖಡ್ಗದಿಂದ ಪ್ರಭುವಿಗೆ ಹೊಡೆಯಲು ಖಡ್ಗಕ್ಕೆ ದೇಹ ಸಿಗದಾಯಿತು. ಖಡ್ಗ ಗಾಳಿಯಲ್ಲಿ ಹೊಯ್ದಾಡಿದಂತಾಯಿತು. ಗೋರಕ್ಷನಿಗೆ ಈ ಯೋಗವನ್ನು ಕಲಿಯಬೇಕೆಂಬ ಹಂಬಲ ಅದು ಬಯಲು ಬಯಲಾಗುವ ಯೋಗ. ಮೊದಲೆರಡು ಶೂನ್ಯ ಸಂಪಾದನೆಗಳಲ್ಲಿ ಖಡ್ಗದಿಂದ ಪರೀಕ್ಷಿಸಿದ ಪ್ರಭು, ಆತನಿಗೆ ಉಪದೇಶಮಾಡಿದ ಎಂದು ಬಂದರೆ, ಗುಮ್ಮಳಾಪುರ ಮತ್ತು ಗೂಳೂರ ಸಂಪಾದನೆಯಲ್ಲಿ ಇಬ್ಬರ ನಡುವೆ ನಡೆಯುವ ಸಂಭಾಷಣೆಯಲ್ಲಿ ಒಬ್ಬರಿಗಿಂತ ಒಬ್ಬರು ಹೆಚ್ಚಾಗಿಯೇ ಹೇಳಿದ್ದಾರೆ. ಅದಕ್ಕೆ ಪ್ರೇರಣೆ ಪ್ರಭುಲಿಂಗಲೀಲೆ. ಗೋರಕ್ಷ ಸಿದ್ಧಿಯನ್ನು ನೋಡಿ ಪ್ರಭುವಿಗೆ ಯಾವ ಪರಿಣಾಮವಾಗದೇ ಜಿಗುಪ್ಸೆ ಉಂಟಾಯಿತು. ಅತೀತವಾದದ್ದನ್ನು ಬಿಟ್ಟು ಅಲ್ಪವನ್ನು ಸಂಪಾದಿಸಿ ಹೆಚ್ಚಿಗೆ ಬೀಗುವ ಜೀವಿಯನ್ನು ಕಂಡು ಪ್ರಭುವಿಗೆ ಕನಿಕರಬಂದಿತು. ಗೋರಕ್ಷನ ಕಪಟ ಸಿದ್ಧಿಯನ್ನು ಖಂಡಿಸಿದ. ದೇಹವನ್ನೇ ಆತ್ಮವೆಂದು ತಿಳಿದು ಯೋಗದ ಹೆಸರಿನಲ್ಲಿ ಶರೀರ ಬಲಿಷ್ಠ ಮಾಡಿಕೊಂಡರೆ ಅದು ವ್ಯರ್ಥ, ಅಮೃತ ಕುಡಿದರೂ ಸಹಿತ ನೀರಡಿಕೆ ಹೋಗಲಿಲ್ಲ. ಪುರುಷ ಶಿಲೆಯನ್ನು ಪಡೆದರೂ ದಾರಿದ್ರ್ಯ ಬಿಡಲಿಲ್ಲ, ಈ ವ್ಯರ್ಥ ಸಾಧನೆಯನ್ನು ಕೈಬಿಟ್ಟು, ರಂಗುರಂಗಿನ ಅದ್ಭುತ ಆಚರಣೆಗನ್ನು ಮಾಡಿ ನಿಜವನ್ನು ಗುರ್ತಿಸಲಾರದೇ ಹೋದ ಗೋರಕ್ಷ ನಾರು - ಬೇರುಗಳ ಕುಟಿಲಕುಹಕದ ಮಾಯಾ ಮೂಲದ ಕಪಟಯೋಗ ಯೋಗವಲ್ಲ, ಕಾಯ ಸಮಾಧಿಯೂ ಅಲ್ಲ, ಶರಣ ಸಮಾಧಿಯೂ ಅಲ್ಲ, ಜೀವ ಸಮಾಧಿಯೂ ಅಲ್ಲ, ಸಹಜ ಸಮಾಧಿಯನ್ನು ಸಂಪಾದಿಸಬೇಕು ಎಂದಾಗ ಗೋರಕ್ಷನಿಗೆ ವಿವೇಕ ಉದಯವಾಗಿ ತನಗೆ ಉಪದೇಶಿಸಬೇಕೆಂದು ಪ್ರಭುವಿಗೆ ಭಿನ್ನವಿಸಿದ. ನಾನಾ ವಿಧದ ಕಲ್ಪಯೋಗಗಳನ್ನು ಕಲಿತರೆ ಅದು ದೇಹದ ಸಿದ್ಧಿಯಾಗಬಹುದೇ ಆತ್ಮ ಸಿದ್ಧಿಯಲ್ಲ." ನೀನಾನೆಂದಲ್ಲಿ ಅಹಂಕಾರ ನಾ, ನೀ ಎಂದಲ್ಲಿ ನಿರಂಹಕಾರನಾದುದಿಲ್ಲ, ನೀನು ಲಿಂಗವಾದೆ, ಆದರೆ ನಾನು ಲಿಂಗವಾಗಲಿಲ್ಲ ಎಂದ ಗೋರಕ್ಷ. ನಾಹಂ ಎಂದರೆ ನಾನೆ ಇಲ್ಲವೆಂದಾಗುವದು, ಕೋಹಂ ಎಂದರೆ ತನ್ನನ್ನು ತಾನೆ ತಿಳಿಯುವದೆಂದಾಗುತ್ತದೆ. ಪರಬ್ರಹ್ಮ ಸೋಹಂ ಎಂದರೆ ಹೀಗೆಂದು ಹೇಳುವವರೆಗೆ ತಾನು ಏನಾಗಿದ್ದೆನೆಂದು ತಿಳಿಯದಾಗಿದ್ದ ಎಂದರ್ಥ. ಚಿದಹಂ ಅಂದರೆ ಅದೊಂದು ವಿಧದ ಅಹಮಿಕೆ. 'ನಿಶ್ಶಬ್ದಂ ಬ್ರಹ್ಮ ಉಚ್ಚತೇ' ಯಾತಕ್ಕೆ ಈ ಜನ ವ್ಯರ್ಥ ಮಾತಾಡಿ ಕಷ್ಟಕ್ಕೆ ಎಡೆಯಾಗಬೇಕು ಎನ್ನುವನು ಪ್ರಭು. ಗೋರಕ್ಷ ಲಿಂಗಾಂಗ ಸಂಬಂಧ ಕಂಡರಿಯಲು ಉತ್ಸುಕವಾದಾಗ, ನಾನು ದೇಹದಾರಿ ನೀನು ನಿರ್ದೇಹಿಯಾಗಿರುವೆ, ಏನೇ ಆಗಲಿ ನಿಮ್ಮ ಲಿಂಗವನ್ನು ನನ್ನ ಅಂಗದಲ್ಲಿ ಪ್ರತಿಷ್ಠೆ ಮಾಡುವದಾಗಬೇಕೆಂದು ಪ್ರಭುವಿನಲ್ಲಿ ಕೇಳಿಕೊಂಡ. ಗೋರಕ್ಷ ಒಂದರ್ಥದಲ್ಲಿ ಕೇಳುವನು, "ಆ ಗುಹೇಶ್ವರನೆಂದರೆ ಯಾರು? ಆತನನ್ನು ಹೇಗೆ ಸೇವಿಸುವದು, ಆಗ ಪ್ರಭು ನಾನೇ ಗುಹೇಶ್ವರ ಗುಹೆ ಎಂದರೆ ಆತ್ಮ, ಅದಕ್ಕೆ ಈಶ್ವರನು ನಾನು, ಆದ್ದರಿಂದ ಅಂಕಿತ ಗುಹೇಶ್ವರನೆಂದಾಗಿದೆ. ಗೋರಕ್ಷ ಕೇಳುವ 'ನೀನೆ ಗುಹೇಶ್ವರನಾದಡೆ ನಿನ್ನ ಕೈಯಲ್ಲಿ ಲಿಂಗವೇಕೆ? ನೀನೆ ನೀನಾದಲ್ಲಿ ಭಕ್ತಿ - ಜ್ಞಾನ - ಕ್ರಿಯೆಗಳ ಅವಶ್ಯಕತೆ ಏನು. ಆಗ ಪ್ರಭು ನಾನು ಈ ರೀತಿಯಲ್ಲಿ ಲಿಂಗನಿಷ್ಠೆ ಪ್ರದರ್ಶಿಸಿ ಮುಕ್ತಾಂಗನೆಯರೊಡನೆ

ಮದುವೆಯಾಗದ ವಿನಹ, ಅಂಗಲಿಂಗ ಎರಡು ಒಂದಾಗದು, ಅಂಗಕ್ಕೆ ಲಿಂಗದ ಅವಶ್ಯಕತೆ ತೋರಿಸಲು ಮಾತ್ರ, ಹೀಗೆ ಲಿಂಗಧಾರಣೆ ನಂತರ ಕೊನೆಯಲ್ಲಿ ಅಲ್ಲ, ಹೀಗೆ ನಾಥ ಸಂಪ್ರಾದಾಯದ ಗೋರಕ್ಷನಿಗೂ ಕೂಡಾ ಪ್ರಭು ತನ್ನ ದಿಗ್ದರ್ಶದ ಇಷ್ಟಲಿಂಗಧಾರಣೆಯನ್ನು ಮಾಡಿ ತನ್ನ ಮಾರ್ಗಕ್ಕೆ ಸೆಳೆದುಕೊಂಡು ನಾಥ ಸಂಪ್ರದಾಯಕ್ಕೆ ಸ್ವಲ್ಪ ಹೊಂದಿಕೆಯಾದ ಜೀವನವನ್ನು ಅನುಮಿಷನ ಪ್ರಸಂಗಕ್ಕಿಂತ ಮೊದಲು ಕಳೆದಿರಬೇಕು, ಅದರ ನಂತರದ ಜೀವನವು ಲಿಂಗವಂತ ಜೀವನವೇ ಆಗಿದೆ ಎನ್ನುವದಕ್ಕೆ ಹಲವಾರು ಸಂಪಾದನೆಗಳು ಸಾಕ್ಷಿಯನ್ನು ಹೇಳುತ್ತವೆ.

ಅಕ್ಕಮಹಾದೇವಿಯ ಸಂಪಾದನೆ - ಪ್ರಭು - ೬೮ ಅರಿವರೆತು ಬೆರಗು ಹತ್ತಿತ್ತೆಂಬ ಜ್ಞಾನವಿದೇನೋ? ನಾಹಂ ಎಂಬಲ್ಲಿ ತಾನಾರೋ? ಕೋಹಂ ಎಂಬಲ್ಲಿ ಮುನ್ನಾರೊ ಪರಬ್ರಹ್ಮ ಸೋಹಂ ಎಂಬಲ್ಲಿ ಮುನ್ನ ತಾನಾಗಿದ್ದೆ? ಚಿದಹಂ ಎಂಬ ಹಮ್ಮಿನ ಭವಮಾಲೆ ಇದೆನೋ? ೬೯ "ನಿಶಬ್ದಂ ಬ್ರಹ್ಮ ಉಚ್ಚತೆ, ಎಂಬ ಶಬ್ದದಿಂದ ಬಳಲುವ ಕಾರಣವಿದೇನೋ ಗುಹೇಶ್ವರ. ಅರಿವಿಲ್ಲದ ಬೆರಗು ಹೇಗೆ ತಾನು ದೊರೆಕೊಳ್ಳುವದು, ನಾಹಂ - ಎಂದರೆ ತಾನು ಯಾರು? ಕೊಹಂ - ಮೊದಲು ಯಾರು? ಪರಬ್ರಹ್ಮ ಸೋಹಂ - ಮುನ್ನೇನಾಗಿರ್ದೆ, ಚಿದಹಂ - ಅಹಂಕಾರದ ಮಬ್ಬು ಆದ್ದರಿಂದ ಅದು ಪರಾತ್ಪರ ವಸ್ತು, ಎಲ್ಲಿದೆ ಹೇಗಿದೆ ಎಂದಾಗ ನಿಶ್ಯಬ್ದ ಮೌನವಾಗಿದೆ ಎನ್ನುವನು. ಪ್ರಭುವಿನ ಯೋಗ ಈ ತೆರನಾಗಿ ಸಾಗುತ್ತದೆ.

ಪ್ರಭುವಿನಿಂದ ಉದ್ಧಾರವಾದ ಅಕ್ಕಮಹಾದೇವಿ, ಅನುಭವ ಮಂಟಪದ ಗೋಷ್ಠಿ ನಡೆದಿರುವಾಗ ಮಹಾದೇವಿ ಕಲ್ಯಾಣದ ಕಡೆ ಹೊರಟಿರುವ ಸುದ್ದಿ ಶರಣರಿಗೆ ಮುಟ್ಟಿತು. ಆಗ ಆಕೆಯನ್ನು ಪರೀಕ್ಷಿಸಲು ಕಿನ್ನರಿಯ ಬ್ರಹ್ಮಯ್ಯನನ್ನು ಕಳುಹಿಸಿದರು, ಆತ ಆಕೆಯನ್ನು ನೋಡಿ ಶರೀರದಲ್ಲಿ ಕಳವಳವಿದೆ, ಪ್ರಾಣದಲ್ಲಿ ಭಯವಿದೆ ಇದು ನಿರ್ವಾಣಪ್ರಾಪ್ತಿಗೆ ನಿಲ್ಲುವ ಜೀವನವಲ್ಲ ಸಂಸಾರಕ್ಕೆ ಯೋಗ್ಯವಾದುದು. ಈ ಸುಂದರ ಶರೀರವನ್ನು ಏಕೆ ಹಾಳು ಮಾಡುತ್ತಿ? ನಿನ್ನೊಂದಿಗೆ ಸಂಸಾರ ಮಾಡಲು ಅನುಮತಿ ಇದೆಯೇ? ಅಂದಾಗ, ನಾನು ಎಲ್ಲವನ್ನು ಗೆದ್ದು ಕಾಮವನ್ನು ಜಯಿಸಿದ ಮೇಲೆ ಮತ್ತೆಲ್ಲಿದೆ ಸಂಸಾರ ವ್ಯಾಪ್ತಿ, ನಿನ್ನಂತಹ ಅಣ್ಣನನ್ನು ಪಡೆದ ನಾನೇ ಭಾಗ್ಯವಂತಳು, ಇಲ್ಲಿಗೆ ಬರಬೇಕಾದರೆ ಎಲ್ಲವನ್ನು ಬಿಸುಟಿ ಬಂದಿದ್ದೇನೆ ಎಂದು ಹೇಳಿ ಅನುಭವ ಮಂಟಪದ ಕಡೆ ಸಾಗಿದಳು. ಗೋಷ್ಠಿಯಲ್ಲಿದ್ದ ಬಸವರಾಜನನ್ನು ಕಂಡು ೭೦"..... ಅದು ತನ್ನ ಕಾಲಕ್ಕಲ್ಲದೇ ಸಾಧ್ಯವಾಗದು ಶಿವನೊಲಿಯದೇ ಕೈಗೂಡದು" ತನ್ನ ವೇಳೆ ಬಂದಾಗ ತಾನೇ ಕೈಗೂಡುವದು ಎನ್ನುತ್ತಾಳೆ. ಪ್ರಭುವಿನ ಪ್ರಶ್ನೆ ೭೧"ಉದಮದದ ಹರೆಯದ ಹೆಣ್ಣು ಏಕೆ ಬಂದೆ? ಕೇವಲ ಹೆಣ್ಣೆಂದರೆ ಮುನಿವರು ಶರಣರು ಆದ್ದರಿಂದ ನಿನ್ನ ಗಂಡನ ಹೆಸರೇನು? ನಿನ್ನ ಮದುವೆಯಾಗಿದೆಯೇ? ನಿನ್ನ ಗಂಡನ ಹೆಸರು ಹೇಳಿದರೆ ಇಲ್ಲಿ ಬಾ ಇಲ್ಲದಿದ್ದರೆ ಆ ಕಡೆ ನಡೆ, ಹೀಗೆ ಕೇಳಿದಾಗ ಗೃಹಸ್ಥದಲ್ಲಿದ್ದುಕೊಂಡೆ ಆಧ್ಯಾತ್ಮಕ ಸಾಧಿಸಬಹುದೆಂಬುದಕ್ಕೆ ಈ ಮಾತು ಪುಷ್ಠಿಯನ್ನು ಕೊಡುವುದು. ಮಹಾದೇವಿಗೆ ಮದುವೆಯಾಗದಿದ್ದರೂ ಆಕೆಯ ಪರೀಕ್ಷೆಯ ಮಾತುಗಳಾಗಿವೆ. ಇದಕ್ಕೆ ಮಹಾದೇವಿ ಹರನೆ ಗಂಡನಾಗಬೇಕೆಂಬ ಹಠವನ್ನು ಹೊಂದಿದವಳು, ಇದಕ್ಕೆ ಮಧುರಭಕ್ತಿ ಎನ್ನಬಹುದು. ಭಕ್ತ ಹೆಂಡತಿ, ಭಗವಂತ ಗಂಡನೆಂಬ ಈ ತೆರದ ಪದ್ಧತಿಯನ್ನು ೧೨ನೇ ಶತಮಾನದ ಮಹಾದೇವಿಯಲ್ಲಿಯೇ ಕಾಣಬಹುದಾಗಿದೆ. ಈಕೆಯ ನಂತರ ಮಧುರಭಕ್ತಿ ದಾಸ ಸಾಹಿತ್ಯದಲ್ಲಿ ಕಾಣಬರುವದು. ಗಂಡನೊಡನೆ ಹೆಂಡತಿ ಬೆರೆಯುವದರ ಸಾಂಕೇತಿಕವನ್ನು ಭಕ್ತ ಭಗವಂತನ

ಸಾಮರಸ್ಯಕ್ಕೆ ಹೋಲಿಸಲಾಗಿದೆ. ಅದು ಸಂಸಾರಿಕ ಸಾಮರಸ್ಯ, ಇದು ಅಲೌಕಿಕ ಸಮರಸ. ಹರನೆ ಗಂಡನಾಗುವ ವಚನ ಅದ್ವೈತವನ್ನು ವಿಶಿಷ್ಟಾದ್ವೈತ ಒಳಗೊಂಡು ತನ್ನದೇ ಆದ ದಾರ್ಶನಿಕ ಕಲ್ಪನೆಗೆ ನಿದರ್ಶನವೆನಿಸಿದ್ದಾಳೆ. ಪ್ರಭುವಿನ ಮನೆ, ಗಂಡದೇವರು, ಶರಣರೆಲ್ಲಾ ರಕ್ತ ಸಂಬಂಧಿಕರು. ಹೀಗೆಲ್ಲಾ ಹೇಳುತ್ತಿರುವಾಗ ಇಹಲೋಕದ ಗಂಡರ ಸಹವಾಸ ಆಕೆಗೆ ಬೇಕಿಲ್ಲ, ಪ್ರಭು ಹೇಗೆ ನಿರ್ಮಾಯೆಯೋ ಈಕೆಯು ಕೂಡಾ ಕಾಮದ ಬಲೆಗೆ ಸಿಲುಕದ ನಿಃಕಾಮಿ. ದೇವರೆ ಗಂಡನಾಗಬೇಕೆಂದು ಹೇಳಿರುವುದಕ್ಕೆ ಏನು ಆಧಾರ ಪ್ರಭುವಿನ ಪ್ರಶ್ನೆ. ಒಂದು ವೇಳೆ ನಿನ್ನ ಭಾವ ಶುದ್ಧವಾದಲ್ಲಿ ಸೀರೆಯನ್ನು ಬಿಟ್ಟು ಕೂದಲನ್ನು ಮರೆಮಾಡಿದೆ ಏಕೆ? ಅದಕ್ಕೆ ಮಹಾದೇವಿ ಈ ಕರ್ಮೇಂದ್ರಿಯಗಳಿಂದ ನನಗೇನು ತೊಂದರೆ ಇಲ್ಲ ಅದನ್ನು ಕಂಡು ನಿಮಗೆ ನೋವಾದಿತೆಂದು ಆ ಭಾವದಿಂದ ಮುಚ್ಚಿದೆ, ಅದು ನನ್ನ ಮೇಲಿನ ಕಾಳಜಿಯಿಂದಲ್ಲ ನಿಮ್ಮ ಮೇಲಿನ ಕಾಳಜಿಯಿಂದ. ಈ ಮಾತಿಗೆ ಪ್ರಭು ಬೆದರಿದ. ಕೌಶಿಕನ ಸುದ್ದಿಯನ್ನು ತಿಳಿದ ಪ್ರಭು ಕೌಶಿಕಂಗೆ ನಿನಗೆ ಏನಾದರೂ ಸಂಬಂಧ ಇದೆ ಏನೆಂದು ಪ್ರಶ್ನಿಸಿದ, ಏನೂ ಇಲ್ಲದ್ದಕ್ಕೆ ವೈರಾಗ್ಯ ತಾಳುವವರು ಬಹಳ ಆದರೆ ಮಹಾರಾಣಿ ತನವನ್ನು ತಿರಸ್ಕರಿಸಿ ನಿಸಂಸಾರಿಯಾಗಿ ಸಾವು ಗಂಡರ ಸಹವಾಸ ಬೇಕಿಲ್ಲವೆಂದು ಸಾಯದೇ, ನೋಯದೇ, ಸ್ವತಂತ್ರ ನಿರ್ಭಯ ಚಲುವಂಗೆ ಒಲಿದವಳು ನಾನು ಎನ್ನುತ್ತಾಳೆ. ಶರಣಸತಿ ಲಿಂಗಪತಿ, ಲಿಂಗಪತಿ[೨೨] ಭಾವವನ್ನು ಪ್ರದರ್ಶಿಸುವಳು. ಸತ್ತ ಹೆಣ ಕೂಗಿದುದುಂಟೇ? ಹೆಪ್ಪಿಟ್ಟ ಹಾಲು ಸಿಹಿಯಾದದುಂಟೇ? ಎನ್ನುವ ಪ್ರಭುವಿನ ಪ್ರಶ್ನೆಗೆ, ನಿದ್ರೆಯಿಂದ ಕನಸು ಕಾಣುವಾಗ ಎದ್ದ ನಂತರ ಅದನ್ನು ಹೇಳಿದಾಗ ಸತ್ತ ಹೆಣ ಕೂಗಿದಂತಾಯಿತು, ಹೆಪ್ಪಿಟ್ಟಹಾಲು ಸಿಹಿತುಪ್ಪವಾಗುವದೇನು, ನಿಧಿ ತನ್ನದಿದ್ದರೇ ಎದ್ದು ಕರೆಯುತ್ತದೆ ಇಲ್ಲಿಗೆ ಮಹಾದೇವಿಯ ಪರೀಕ್ಷೆ ಮುಗಿಯಿತು, ಪರೀಕ್ಷೆಯನಂತರ ಮಹಾದೇವಿಗೆ ಹರಿಯತನದ ಪಟ್ಟ. ಬಸವಣ್ಣ ಈಕೆಯ ಆಕಾರ ನೋಡಿದರೆ ಸಣ್ಣವಳು ಯಾವ ದೃಷ್ಟಿಯಿಂದ ಈಕೆಯನ್ನು ಪರೀಕ್ಷಿಸಿದರೂ ಪುರಾತನಳು, ಪರವಸ್ತುವನ್ನು ಆಚರಿಸಿದ್ದನ್ನು ನೋಡಿದರೆ ಲಿಂಗವಂತಳು ನಮ್ಮೆಲ್ಲರ ಮಾತಿಗೆ ಆಕೆಗೆ ಬೇಸರವಿಲ್ಲವೆಂದ ಮೇಲೆ ಆಕೆ ನಮ್ಮ ಅಕ್ಕ, ಮೊದಲು ಮಹಾದೇವಿಯಾಗಿದ್ದ ಆಕೆ ಪರೀಕ್ಷೆಯನಂತರ ಎಲ್ಲರ ಅಕ್ಕ ಆದಳು. ಪ್ರಪಂಚದ ಎಲ್ಲ ವಸ್ತುವಿನಲ್ಲಿ ದೇವರನ್ನು ಕಾಣುವ ಆಕೆಯ ವಚನಗಳು ಗಿಡ, ಮೃಗ, ಪಾತಾಳ, ಆಕಾಶ, ಶಿಲೆ, ಪಶು, ಪಕ್ಷಿಗಳಲ್ಲಿ ಸರ್ವಾಂತರ್ಯಾಮಿ ಶಿವನನ್ನು ಗುರ್ತಿಸುವ ಪರಿ ಪ್ರಭುದರ್ಶನವನ್ನೇ ಹೇಳುತ್ತದೆ, ವೇದಕಾಲದ ಯಾಜ್ಞವಲ್ಕರ ಗಾರ್ಗಿಯರ ಸಂಭಾಷಣೆಯ ನಂತರ ಪ್ರಭು ಅಕ್ಕಮಹಾದೇವಿಯ ಸಂಭಾಷಣೆಯೇ ಅದನ್ನು ನೆನಪಿಗೆ ತರುತ್ತದೆ.

ಕದಳಿಯೆಂಬುದು ತನು, ಕದಳಿಯೆಂಬುದು ಮನ, ಕದಳಿಯೆಂಬುದು ವಿಷಯಂಗಳು,[೨೩] ಕದಳಿಯೆಂಬುದು ಭವ ಘೋರಾರಣ್ಯ, ಕದಳಿಯೆಂಬುದಗೆದ್ದತವೆ ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟ ಮಗಳೆಂದು ಕರಣದಿಂದ ತೆಗೆದು ಬಿಗಿಯಪ್ಪಿದರೆ ಚನ್ನಮಲ್ಲಿಕಾರ್ಜುನನ ಹೃದಯದಲ್ಲಡಗಿದರು. ಶರೀರವೆಂಬದು ಕದಳಿ, ಅರಣ್ಯ, ಅರಣ್ಯದಲ್ಲಿ ಶರೀರ ಹುಟ್ಟಿದೆ, ವಿಷಯಾದಿಗಳೊಂದಿಗೆ ತೊಯ್ದಿದೆ ತೋಯ್ದ ಕಾರಣವೇ ಭವಕ್ಕೆ ತಿರು ತಿರುಗಿ ಒಣಗಿಸಲಿಕ್ಕೆ ಬರುತ್ತದೆ. ತಿರು ತಿರುಗಿ ಬರುವ ಕ್ರಮ ಜನ್ಮಾಂತರಗಳನ್ನು ಒಪ್ಪುತ್ತದೆ. ಬಿಗಿಯಾದ ಅಪ್ಪುಗೆ ಸಮರಸವನ್ನು ಹೇಳುತ್ತದೆ ಹೃದಯ ಕಮಲದಲ್ಲಿ ಅಡಗುವ ಪರಿ ಅಂಶಾ ಅಂಶೀ ಸಂಬಂಧವನ್ನು ಹೇಳುವದು, ಅಡಗಿದ ಪರಿಯನ್ನು ತಿಳಿಯಬೇಕಾದರೆ ಅದರ ಉಪಾಸನೆಯ ಕ್ರಮ ಈ ದರ್ಶನವೆಂಬುದನ್ನು ಈ ವಚನ ತಿಳಿಸುತ್ತದೆ.[೨೪] ಶೂನ್ಯ

ಸಂಪಾದನೆ ಎಂದರೆ ಪರಮಗುರು ಪರಮ ವೀರಶೈವ ಸಿದ್ಧಾಂತ ತತ್ವಜ್ಞಾನ, ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ, ದಿವ್ಯವೇದಾಂತ ಶಿರೋಮಣಿ, ಸಮಸ್ತ ಶಾಸ್ತ್ರ ಮುಖ್ಯ ಮುಖದರ್ಪಣ ಮಹಾಜ್ಞಾನ ಪ್ರವರ್ದನ, ಪರಮಾನುಭಾವ ಸಂಭೋದೇ, ಸರ್ವಾಚಾರ ಸಂಪನ್ನ ಸಂಗ್ರಹ ಎಂದು ಕರೆಯಲಾಗುತ್ತಿದೆ. ಮಹಮ್ಮದೀಯರಿಗೆ ಕುರಾನ್ ಪವಿತ್ರಗ್ರಂಥವಾದರೆ ಕ್ರಿಶ್ಚಿಯನ್ನರಿಗೆ ಬೈಬಲ್ ಪವಿತ್ರ ಗ್ರಂಥ, ಹಾಗೆಯೇ ಈ ಶಿವಾದ್ವೈತ ಲಿಂಗಾಯತಧರ್ಮಕ್ಕೆ ಶೂನ್ಯಸಂಪಾದನೆ ಪವಿತ್ರ ಗ್ರಂಥವೆನ್ನಬಹುದು.

## ಪ್ರಭುಲಿಂಗ ಲೀಲೆ

ಪ್ರಭುಲಿಂಗಲೀಲೆ ಅಧ್ಯಾತ್ಮಿಕ ಅಥವ ಅನುಭಾವಿಕ ಕಾವ್ಯ, ಇದನ್ನು ಬರೆದ ಚಾಮರಸ ನೂರೊಂದು ವಿರಕ್ತರಲ್ಲಿ ಒಬ್ಬ. ಪ್ರೌಢದೇವರಾಯನ ಮಂತ್ರಿ ಜಕ್ಕಣ ಆತನೂ ವಿರಕ್ತನೆ, ಅಂದಾಗ ಜಕ್ಕಣ ತನ್ನ ಮಂತ್ರಿ ಪದವಿಯನ್ನು ಚಾಮರಸನಿಗೆ ಕೊಟ್ಟ. ವಿರತರೂ ಕೂಡಾ ಮಂತ್ರಿಯಾಗಿದ್ದರೆಂಬುದಕ್ಕೆ ಚಾಮರಸ ಸಾಕ್ಷಿ. ಮಹಾತ್ಮರ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಹೇಗೆ ಬರೆಯಬೇಕೆಂಬುದಕ್ಕೆ ಪ್ರಭುಲಿಂಗಲೀಲೆ ಒಂದು ನಿದರ್ಶನವಾಗಿದೆ. ಈತನ ಕಾಲ ೧೬೩೦, ಈ ಚಾಮರಸ ಹಂಪೆಯಲ್ಲಿ ಕೆಲವು ದಿವಸವಿದ್ದನೆಂದು ಹೇಳಲಾಗುತ್ತದೆ. ಅಲ್ಲಿ 'ಪಂಪಾದೇವಿಯ ದಿಡ್ಡಿ' ಎಂಬ ಕೋಟೆಯ ಒಳಭಾಗದಲ್ಲಿ 'ಮತಂಗದೇವರ ಕೊತ್ತಳ'ದ ಸಮೀಪದಲ್ಲಿ ಬಂಡೆಗಳ ರಾಶಿಯ ಮಧ್ಯೆ ಗುಹೆಯಿದೆ. ಆ ಗುಹೆಗೆ ಗುಹೇಶ್ವರಾಶ್ರಮವೆಂದು ಕರೆಯಲಾಗುತ್ತದೆ. ಗುಹೆಯಲ್ಲಿರುವ ಆಶ್ರಮಗಳೆಲ್ಲವೂ ಗುಹೇಶ್ವರಾಶ್ರಮ ಎಂದು ಕರೆಯುವ ರೂಢಿ ಇದ್ದಂತೆ ತೋರುವದು. ಪ್ರಭು ಕೂಡಾ ಗುಹೆಯ ಅನುಮಿಷ ದರ್ಶನದಿಂದಲೇ ತನ್ನ ಅಂಕಿತಕ್ಕೆ ಗುಹೇಶ್ವರ ಎಂದಿರಬಹುದು. ಪ್ರಭುಲಿಂಗಲೀಲೆಯು ಕೂಡಾ ಹಾಗೆಯೇ ಗುಹೆಯಲ್ಲಿ ರಚಿತವಾಗಿರಬಹುದು. ಹರಿಹರ, ಶಿವಗಣಪ್ರಸಾದಿ ಪ್ರಭುರನ್ನು ಲೌಕಿಕರಂತೆ ಕಂಡದ್ದು ಈತನಿಗೆ ಸರಿಬಂದಿಲ್ಲ. ಚಾಮರಸ ಶರಣರ ಸಮಗ್ರ ವಚನಗಳ ಪರಿಚಯದಿಂದ ತನ್ನ ಕೃತಿಯನ್ನು ರಚಿಸಿದ್ದಾನೆ. ಇದಕ್ಕೆ ಪದ್ಯದಲ್ಲಿ ವಚನಗಳನ್ನು ಯಥಾ ರೀತಿ ಬಳಸಿರುವುದೇ ಸಾಕ್ಷಿ. ತನ್ನ ವಚನಗಳಲ್ಲಿ ಪ್ರಭು ನಿರ್ಮಾಯ, ಮಾಯಾ ಕೋಲಾಹಲ ಎಂದು ಹೇಳಿಕೊಂಡಿದ್ದನ್ನು ಯಥಾ ರೀತಿ ಚಾಮರಸ ಲೀಲೆಯಲ್ಲಿ ಹೇಳಿದ್ದಾನೆ. ಮಾರ್ಗದರ್ಶನ ಮಾಡುವದಕ್ಕಾಗಿ ಆಡಿ ಕೆಲವರಿಗೆ, ಕರುಣದಲಿ, ಮಾತಾಡಿ ಕೆಲವರಿಗೆ, ನುಡಿಸಿ ಕೆಲವರಿಗೆ, ನೋಡಿ ಕೆಲವರಿಗೆ, ಜಡಿದು ಕೆಲವರಿಗೆ, ಹಾಡಿ ಕೆಲವರಿಗೆ, ಹರಿಸಿ ಕೆಲವರಿಗೆ ಹೀಗೆ ಜೀವನದ ಬದುಕನ್ನು ಮುನ್ನಡಸಲು ಪ್ರಭು ಅತ್ಯಾವಶ್ಯಕವಾಗಿ ಕೆಲಸಮಾಡಿರುವನೆಂದು ಕವಿ ತಿಳಿಸಿದ್ದಾನೆ. ಶಿವನ ಪಂಚವಿಂಶತಿ ಲೀಲೆಯನ್ನು ಹೇಳಿರುವಂತೆ ಅದೇ ತೆರನ ಪ್ರಭು - ಲೀಲೆ (ಶಿವಲೀಲೆ) ೨೫ ಲೀಲಾಗತಿಯನ್ನು ಹೇಳಲಾಗಿದೆ.

ಮಾಯೆ - ಅಲ್ಲಮ, ಹೆಸರುಗಳು ಕೂಡಾ ವ್ಯಕ್ತಿ ಚಿತ್ರಣವನ್ನು ಕೊಡುವ ಸಾಂಕೇತಿಕದಂತಿದೆ. ಇತ್ತ ನಾಟ್ಯ ಶೈಲಿಯನ್ನು ಒಳಗೊಂಡ ಅತ್ತ ಕಾವ್ಯಮಯ ರೂಪವಾದ, ಪುರಾಣಕ್ಕೆ ಸಮೀಪವಾಗಿರುವ ಆದರೆ ಅದೇ ಮಾತ್ರ ಅಲ್ಲದ ಚರಿತ್ರಿಕಾರ್ಥದ ಮಾದರಿ ಕಾವ್ಯವಾಗಿದೆ. ಚಾರಿತ್ರಿಕದೊಂದಿಗೆ ತತ್ವದ ವಿವರಣೆಯೂ ಕೂಡಾ ಇದೆ. ಮಮಕಾರ - ಮೋಹಿ, ನಿರಹಂಕಾರ - ಸುಜ್ಞಾನಿ, ರಾಜಗುರು ಅಹಂಕರಾಚಾರ್ಯ, ಅಕ್ಕಮಹಾದೇವಿಯ ನಿರ್ಮಲ - ಸುಮತಿಯರು ಇವೆಲ್ಲ ಅರ್ಥಪೂರ್ಣ ಹೆಸರುಗಳು. ಇವು ನಿಜ ಹೆಸರುಗಳೋ ಅಥವಾ ಅಲಂಕಾರ ಹೆಸರುಗಳೋ ಅನ್ನುವಂತಿವೆ. ಹೆಸರಿಗೆ ತಕ್ಕ ವ್ಯಕ್ತಿತ್ವ ರೂಪ ಮಾತ್ರ ಇದ್ದೇ ಇದೆ. ಪ್ರಭು

ಜೀವನ ಬಹಿರ್ ಮುಖವಾಗಿ ಹಲವರ ಲೋಪದೋಷಗಳನ್ನು ತಿದ್ದುವನಾಗಿ ಬೇಡವಾದಾಗ ಅಂತರ್ಮುಖಿ ಸ್ವಯಂಭುವಾಗಿ ಇರುವ ಆತನ ಬದುಕೆ ದರ್ಶನ. ಸಾಧಕಾಂಗನ ಗತಿ ಮತ್ತು ಗೋರಕ್ಷನ ಗತಿ ಇವೆರಡರಲ್ಲಿ ತಾತ್ವಿಕಾಂಶಗಳ ವಿವರಣೆಯಿದೆ. ಇಲ್ಲಿ ವ್ಯಕ್ತಿತ್ವ ವಿಕಸನ ಮತ್ತು ಸಾಮಾಜಿಕ ಸಿದ್ಧಾಂತಕ್ಕಿಂತ ಆಧ್ಯಾತ್ಮಿಕ ಪೋಷಕಾಂಶಗಳು ಸಿಗುತ್ತವೆ. ಪ್ರಾಣಲಿಂಗದ ಅನುಸಂಧಾನ, ಶೂನ್ಯ ಸಿಂಹಾಸನಾರೋಹಣ ಇವು ಯೋಗದಲ್ಲಿ ತೂರ್ಯ ತೂರ್ಯಾತೀತದವರೆಗೆ ಸಾಗಿ ಅಲ್ಲಿ ನಿಲ್ಲುವುದೇ ಶೂನ್ಯ ಸಿಂಹಾಸನಾರೋಹಣವೆಂದು ಹೇಳಬಹುದು. ಈ ಲೀಲೆ ತೆಲುಗು, ತಮಿಳು, ಮರಾಠಿ, ಸಂಸ್ಕೃತ ಮುಂತಾದ ಭಾಷೆಗಳಲ್ಲಿ ಅನುವಾದವಾಗಿದೆ.

ಗೋರಕ್ಷನಿಗೂ ಅಲ್ಲಮನಿಗೂ ಸಂಧಿಸಿದ ಪ್ರಸಂಗ ಬಹು ಉಜ್ವಲ. ಇದು ಪ್ರಭುಲಿಂಗಲೀಲೆಯ ದರ್ಶನ ತಿಳಿಯಲು ಇರುವ ಕೀಲಿಕೈ. ಈ ಪ್ರಸಂಗವನ್ನು ಮೊದಲು ತಿಳಿಯೋಣ. ಗೋರಕ್ಷ ಒಬ್ಬ ಸೊಕ್ಕಿನ ಗೂಳಿ. ಅವನು ಸಿದ್ಧಿಯನ್ನು ಸಾಧಿಸಿಕೊಂಡಾತ. ಆತನನ್ನು ಪ್ರಭು ಸಂಧಿಸಿದ. ಆಗ ತಾನು ಇಲ್ಲಿಗೆ ಬಂದ ಪರಿಯಾವುದು ಎಂದು ಗೋರಕ್ಷ ಪ್ರಭುವಿಗೆ ಕೇಳಿದಾಗ, ದೇಹದ ಮೇಲಿನ ಆಸೆಗಾಗಿ ಚಿಂತಿಸಿ ಕಷ್ಟಪಡುವವರ ಅಂತರಂಗ ಕಳವಳವನ್ನು ನೀಗಿಸಲು ಬಂದೆ. ಪ್ರಭು ಅಂದಾಗ ಗೋರಕ್ಷನಿಗೆ ಇದು ಹೊಸದೆನಿಸಿತು. ನನ್ನನ್ನು ನೋಡದಿದ್ದರೂ ನನ್ನ ಹೆಸರನ್ನು ಹೇಳುತ್ತಿದ್ದಾನೆ. ಈತನಾರು? ನನ್ನ ಬುದ್ಧಿಗೆ ನೀನು ನಿಲುಕಲಾರೆ, ನಿನ್ನ ನೆಲೆಯನ್ನು ನೀನೆ ಬಲ್ಲೆ ಅಂದಾಗ, ಪ್ರಭು - ನಿನ್ನನ್ನು ತಿಳಿಯದ ಮಂದ ಬುದ್ಧಿಯವನು ನನ್ನನ್ನೇನು ತಿಳಿಯಬಲ್ಲೆ, ಕಣ್ಣು ಕಾಣದ ಕುರುಡ ಕನ್ನಡಿ ನೋಡಿದಂತೆಯೇ ಇದು. ನನ್ನ ಸ್ವರೂಪದ ಸಂಪತ್ತು ಮಾತಿನ ಕುಶಲರಿಗೆ ತಿಳಿಯುವದಂತೂ ಅಸಾಧ್ಯ. ಗೋರಕ್ಷ ಕಾಪಾಲಿಕರಂತೆ ದೇಹವೇ ನಾನು ಎಂದು ತಿಳಿದವನು. ಚರ್ಮ, ಅಸ್ತಿ, ಮೂತ್ರ ಮಲಗಳಿಂದ ಕೂಡಿದ ಈ ದೇಹವೇ ತಾನು ಎಂದವನಿಗೆ ತನ್ನನ್ನು ತಿಳಿಯಲು ಸಾಧ್ಯವೇ? 'ತಾನು', ಅದು ಬೇರೆಯೇ ಆಗಿದೆ, ಗೋರಕ್ಷ ಏನು ಮಾಡಲು ತಿಳಿಯದವನಿಗೆ ಇದು ಕೊಳಚೆಯ ಮನೆ, ತಿಳಿದಾಗ ಈ ಶರೀರ ರತ್ನ, ಮಾಯೆ ಇಂತಹ ಶಬ್ದಗಳು ನಿಮ್ಮಲ್ಲಿ, ನಮ್ಮಲ್ಲಿ ಇಲ್ಲ ಎಂದ. ಆಗ ಪ್ರಭು ನಿನ್ನ ಶರೀರ ಬಲಿಷ್ಠವಾದರೆ ಸಾವು ಬೆನ್ನು ಬಿಡುವುದೋ ಹೇಗೆ? ಅಂದಾಗ ಗೋರಕ್ಷನು ತನ್ನ ಕೈಯಲ್ಲಿಯ ಆಯುಧವನ್ನು ತೆಗೆದುಕೋ ನನಗೆ ಹೊಡೆ ಎಂದು ಪ್ರಭುವಿಗೆಕೊಟ್ಟ. ಪ್ರಭು ಕತ್ತಿಯಿಂದ ಗೋರಕ್ಷಗೆ ಹೊಡೆದಾಗ ಗೋರಕ್ಷನ ಶರೀರದಿಂದ ಸಪ್ಪಳ ಬರಹತ್ತಿತು. ಏಕೆಂದರೆ ವಜ್ರದೇಹವನ್ನಾಗಿಸಿದ್ದ. ಆಗ ಪ್ರಭು ಕತ್ತಿಯನ್ನು ಬಿಸಾಕಿ ಇದು ವ್ಯರ್ಥ ಎಂದ, ಇಂತಹ ಸಿದ್ಧಿಯಿಂದ ಪ್ರಳಯವನ್ನು ಗೆಲ್ಲಲಾಗುತ್ತದೆಯೇ (ಸಾವನ್ನು ಗೆಲ್ಲಬಹುದೇ) ಇದು ಸಿದ್ಧಿ ಅಲ್ಲ, ಸಿದ್ಧಿ ಬೇರೆಯೇ ಇದೆ. ಅಂದಾಗ ಆ ಸಿದ್ಧಿಯ ಚಿನ್ಹೆ ಯಾವುದು ಹೇಳು ನಿಜವನ್ನು ತೋರಿಸು. ಗೋರಕ್ಷ ಕೇಳಿದಾಗ ಕತ್ತಿಯಿಂದ ನನ್ನನ್ನು ಹೊಡೆ ಎಂದು ಪ್ರಭು, ಗೋರಕ್ಷ ಕತ್ತಿಯಿಂದ ಪ್ರಭುವಿಗೆ ಹೊಡೆದಾಗ ಕತ್ತಿಯು ಶರೀರದಲ್ಲಿ ನೀರಲ್ಲಿ ಹಾದು ಹೋದಂತೆ ಈಸಾಡಿತು. ಗಾಳಿಯಲ್ಲಿ ತೇಲಿದಂತಹ ಅನುಭವ, ಕತ್ತಿ ಇದಿರಿಸದು, ದೇಹದ ಅಂದವಳಿಯದು, ಹೊಡೆಯಲು ಹಾರಿಹೋಗುವ ಹದ್ದಿನಂತೆ ಬಂದ ಕತ್ತಿಯು ಬಯಲು ದೇಹವನ್ನು ಅಪ್ಪಲು ತಿಳಿಯದು. ಆಗ ಗೋರಕ್ಷ ಆಶ್ಚರ್ಯಗೊಂಡು ಇದಾವ ಪರಿ ತಿಳಿಸೆಂದು ಬೇಡಿಕೊಂಡ. ಆಗ ದೇಹ ಬಲಿಷ್ಠವಾದರೇ - ಮಾಯೆ ಬಲಿಷ್ಠ - ಮಾಯೆ ಬಲಿಷ್ಠವಾದರೆ ಸಿದ್ಧತನವಲ್ಲ, ಇವುಗಳನ್ನು ಮೀರಿ ನಿಲ್ಲುವದಾದರೇ ಆತ ಸಿದ್ಧರುಗಳ ರಾಜ, ಆಗ ಗೋರಕ್ಷ ಪ್ರಭುವಿನ ಪಾದಕ್ಕೆರಗಿದೆ. ನಾನು ಸೊಕ್ಕಿನಿಂದ ಕೂಡಿದ್ದೇ ಸರ್ವತಪ್ಪು ನನ್ನದೆಂದು ಗೋರಕ್ಷ ಒಪ್ಪಿಕೊಂಡಾಗ

ಪ್ರಭು ಕರುಣೆದೋರಿದ. ಗೋರಕ್ಷ ಕೇಳುವ - ಗುಹೇಶ್ವರನೆನ್ನುವರು ಯಾರು? ವಾಸಿಸಲು ನಿನಗೆ ಆಶ್ರಯ ಯಾವುದು? ಆತನನ್ನು ಭಜಿಸುವದಾದರೂ ಹೇಗೆ? ಇದಕ್ಕೆ ಪ್ರಭುವಿನ ಉತ್ತರ - ಗುಹೆಯೇ ಆತ್ಮ, ಆ ಗುಹೆಗೆ ಒಡೆಯನು ನಾನು, ಗುಹೇಶ್ವರ ಸಕಲ ಜೀವರ ಹೃದಯದಲ್ಲಿರುವವ, 'ನಾನೇ ಅವನು' ಎಂಬ ಭಾವ ಬಂದಲ್ಲಿ ಆ ಕೈವಲ್ಯ ಪ್ರಾಪ್ತಿ. ಹಾಗಾದರೆ ನಿನ್ನ ಕೈಯಲ್ಲಿ ಗುರುತಿನ ಲಿಂಗವಿದೇತಕ್ಕೆ? ನೀನು ಅದೇ ಆಗಿದ್ದರೆ ಅದನ್ನು ಇದಿರಿನಲ್ಲಿ ಹಿಡಿದು ಅದು ಬೇರೆ ನೀನು ಬೇರೆ ಎಂದು ತೋರಿಸಿಕೊಂಡೆಯಲ್ಲ, ಸಕಲರಿಗೆ ಮುಕ್ತಿ ಸ್ತ್ರೀಯನ್ನು ದೊರಕಿಸಿಕೊಡು ಎಂದನು ಗೋರಕ್ಷ. ಉದ್ಧಾರಕ್ಕಾಗಿಯೇ ನಾನು ಸುಳಿಯುತ್ತಿರುವೆನು. ಸಕಲರ ಭಾವಗಳನ್ನು ಶುದ್ಧಿಗೊಳಿಸಲೋಸುಗ ಈ ರೀತಿ ಲಿಂಗವಿದೆ. ಲಿಂಗ ಕಾಣ ಕಾಣುತ್ತಿದ್ದಂತೆಯೇ ಅಲ್ಲಮ ದೇಹದಲ್ಲಿ ಐಕ್ಯವಾಯಿತು. ಹೀಗೆ ವಿರಾಟದರ್ಶನದ ರೂಪ ಗೀತೆಯಲ್ಲಿಯೂ ದೊರೆಯುವದು. ಇದನ್ನು ನೋಡಿ ಗೋರಕ್ಷ ಆಶ್ಚರ್ಯ ಚಕಿತನಾದ. ಶರಣು ಬಂದು ಪ್ರಭುವಿನಿಂದ ಶೂನ್ಯದೀಕ್ಷೆಯನ್ನು ಪಡೆದ. ಇದು ರಾಜಯೋಗ. ಕೀಟ ಭ್ರಮರವನ್ನು ಧ್ಯಾನಿಸಿದಾಗ ಭ್ರಮರೇ ಆಗುವಂತೆ ಅಲ್ಲಮನ ಲೀಲೆಯಿಂದ ವಜ್ರ ದೇಹಿ ಬಯಲು ದೇಹಿಯಾದ ಇದೇ ಆತ್ಮ ವಿಕಸನತೆ. ಸರ್ವ ಮುನಿಗಳಿಗೂ ಬೋಧಿಸಿದ ಗತಿಯು ಕೂಡಾಯಿದೆ. ಅತ್ತ ಕಲ್ಯಾಣದಲ್ಲಿ ಬಸವ ಶೂನ್ಯ ಸಿಂಹಾಸವನ್ನು ರಚಿಸಿದ್ದ. ರಾಜಯೋಗ ಶಿವಯೋಗದಂತೆ ಸಿಂಹಾಸನ ಒಂಬತ್ತು ಹೊರಬಾಗಿಲು ಮಧ್ಯದಲ್ಲಿ ನಾಲ್ಕುಬಾಗಿಲು ಗರ್ಭಾಗಣದಲ್ಲಿ ಎರಡು ಬಾಗಿಲುಗಳು, ಶಿಖರದಲ್ಲಿ ಅಚ್ಚರಿಗೊಳಿಸುವ ಒಂದು ಬಾಗಿಲು ಹೇಗೆ ಷಟ್ ಚಕ್ರಗಳನ್ನು ಷಡ್ಲಿಂಗಗಳಲ್ಲಿ ನೆಲೆಗೊಳಿಸಿ ಬ್ರಹ್ಮಸ್ಥಾನವನ್ನು ಹಿರಿದಾಗಿಸಿದ ಶೂನ್ಯ ಪೀಠ ಅದು. ಅದನ್ನು ಏರಲು ಗುಹೇಶ್ವರನನ್ನೇ ನೆನಸುತ್ತಿದ್ದ, ಪತಿ ದೂರದಲ್ಲಿದ್ದಾಗ ಒಳ್ಳೆಯ ವಂಶದ ಹೆಣ್ಣು ಪುಷ್ಪವತಿಯಾಗಿ ತನ್ನ ಗಂಡನ ಆಗಮನವನ್ನು ನಿರೀಕ್ಷಿಸುವಂತೆ ಅಲ್ಲಮನ ಆಗಮನವನ್ನು ಬಸವ ನಿರೀಕ್ಷಿಸುತ್ತಿದ್ದ. ತಾನು ಒಂದೇ ಶರೀರದವನಲ್ಲ ಎಂಬಂತೆ ಲೀಲೆಯಿಂದ ಪ್ರಭು ಪ್ರಕಟವಾದ. ಸಿಂಹಾಸವನ್ನು ಏರಿದ, ಇದರ ನಂತರ ಪ್ರಭುವಿನ ಪ್ರಸಾದ ಸೇವನೆಯಲ್ಲಿ ಮಹತ್ವದ ಅಂಶವಿದೆ. ಬಸವನು ಬೇಡಿದವರಿಗೆ ಬೇಕಾದಷ್ಟನ್ನು ನೀಡಿ ತೃಪ್ತಿಪಡಿಸುವನು, ಬೇಡದವನೇ ಬಡವ ಅನ್ನುವ ಅರ್ಥದಲ್ಲಿ ಸೂಕ್ಷ್ಮದಾಸೋಹವಾದ ಆರೋಹಣೆ, ಕೊಪ್ಪರಿಗಟ್ಟಲೇ ಅನ್ನವನ್ನು ಸುರಿದರು ಪ್ರಭುವಿಗೆ ತೃಪ್ತಿಯಿಲ್ಲ. ಅವನಿಗೆ ಬೇಕಾದದ್ದು ಅದು ಅಲ್ಲ. ಸಮರ್ಪಣೆ ಭಾವನೆ ಚನ್ನಬಸವನ ಆಜ್ಞೆಯಂತೆ ಕೊನೆಗೆ ತನ್ನನ್ನು ತಾನು ಸಮರ್ಪಿಸಿಕೊಂಡ ಬಸವ, ತನ್ನಿಂದ ಅಹಂಕಾರವನ್ನು ದೂರವಾಗಿಸಿದ. ಮಾಡಿದನೆಂಬುದು ಮನದಲ್ಲಿರಬಾರದೆಂಬುದನ್ನು ಮನದಲ್ಲಿ ಅರಿತುಕೊಂಡ. ಎಂಟು ಮದಗಳನ್ನು, ಏಳು ವ್ಯಸನಗಳನ್ನು ದೂರೀಕರಿಸಿದ ಬಸವನಿಗೆ ಪ್ರಭು ಒಲಿದ. ದಾಸೋಹಂಭಾವವಿರಬೇಕು ಆದರೆ ಅಹಂಭಾವವಿರಬಾರದು. ಮನೋಲಯದ ಭಾಗ ಮನಸ್ಸಿನ ವಿವರಣೆಯನ್ನು ಹೇಳುವದು. ಸ್ಥೂಲ, ಸೂಕ್ಷ್ಮ ಕಾರಣಗಳಲ್ಲಿ ಜಾಗ್ರ, ಸ್ವಪ್ನ, ಸುಷುಪ್ತಿಗಳೊಂದಿಗಿನ ದಾಷ್ಟ್ಯ ಮನಸ್ಸು ನಾಶವಾಗಬೇಕಾಗಿದೆ, ಮೂರು ಅವಸ್ಥೆಗಳನ್ನು ಮೀರಿದ ತೂರ್ಯ, ತೂರ್ಯಾತೀತಗಳನ್ನು ಹೊಂದಬಹುದಾದರೇ ಮನಸ್ಸನ್ನು ಬಹಿರಂಗ ಮಿಮುಖನನ್ನಾಗಿ ಮಾಡಿ ಅಂತರ್ಮುಖಿಗೊಳಿಸಬೇಕಾಗುತ್ತದೆ. ಮನಸ್ಸಿಗೆ ಯಾವುದಾದರೂ ಒಂದು ಕೆಲಸ ಬೇಕೆಬೇಕು. ಮನಸ್ಸನ್ನು ತಿಂದು ತೇಗುವ ಹಿರಿದಾದ ಪರಾಕ್ರಮ ಇರಬೇಕಾಗುವದು. ಮನಸ್ಸನ್ನು ತಿಳಿಯುವದು ಮನಸ್ಸೇ. ಮನವೇ ಹಿಂದೆ ನಿಂತು ಹೆಚ್ಚಿನ ಯೋಜನೆಗಳನ್ನು ಸಂಯೋಜಿಸುವದು. ಅದಕ್ಕೆ ಸರಿಯಾಗಿ ಸಂಯೋಜಿಸುವ ಯೋಜನೆ ಹಾಕಿಕೊಡಬೇಕಾಗುತ್ತದೆ. ವಾಗದ್ವೈತದಿಂದ ಮಾರಿಯನ್ನು ಕೊಲ್ಲಲು ಸಾಧ್ಯವಿಲ್ಲ. ಸಂಕಲ್ಪದ ನಾನಾ ರೂಪು

ಕ್ರಿಯೆಗಳನ್ನು ನಿವಾರಿಸಿ, ಪ್ರೀತಿ, ನೀತಿಗಳನ್ನು ನುಂಗಿದಾತನೇ ಮಾಯೆಯನ್ನು ಅರಿಯಲು ಶಕ್ಯನು, ಜ್ಞಾತೃ, ಜ್ಞಾನ, ಜ್ಞೇಯಗಳಿಂದ ಬೇಧವಿಲ್ಲದ ನಿರುಪಮ ಜ್ಞಾನವನ್ನುಂಟುಮಾಡಿ ವಾಸನಾ ರಹಿತ ಭಾವವನ್ನು ಪ್ರಭು ಅನುಗ್ರಹಿಸಿದ. ಕೊನೆಯದಾಗಿ ಚತುರ್ವಿದ ಪುರುಷಾರ್ಥಗಳನ್ನು ಸಾಧಿಸಬೇಕಾದ ಪರಿಯಿದೆ. ಪ್ರಭುಧರ್ಮದ ಕಟ್ಟಳೆಗೆ ಸಿಲುಕಿದಾತನಲ್ಲ. ಆತ ನಡೆದುದೇ ಇತರರಿಗೆ ಭಕ್ತಿಪಂಥದ ಉದಯ, ಜಾತಿಗೆ ಮೀರಿದುದು ವರ್ಣಗಳ ತಿರಸ್ಕಾರವಿದೆ. ಈ ಪ್ರಭುವಿನ ಮಾರ್ಗ ವೀರಶೈವವೆಂದೂ ಚಾಮರಸ ಹೇಳಿದ್ದಾನೆ. ನಾಥ ಪಂಥ ಕೆಲವು ಆಚರಣೆಗಳು ಸಾಧಕ ಆವಸ್ಥೆಯಲ್ಲಿ ಪ್ರಭುವಿನಲ್ಲಿ ಕಾಣಬಹುದು. ಆದರೆ ಕೊನೆಯಲ್ಲಿ ಅಸಾಧ್ಯ. ಈ ಪ್ರಭುವಿನ ಲೀಲೆ ಆಧ್ಯಾತ್ಮಿಕೋನ್ನತಿಯ ಶೃಂಗಾರ ಕಾವ್ಯ. ಇಲ್ಲಿ ಅನುಭಾವ ಸಾಹಿತ್ಯ ಚರಿತ್ರೆ, ಐತಿಹ್ಯವನ್ನೊಳಗೊಂಡು ದಾರ್ಶನಿಕ ಕಾವ್ಯಮಂಜರಿ ಇದಾಗಿದೆ.

ನಾದಬಿಂದುಗಳ, ನವಚಕ್ರಗಳು ತೂರ್ಯ - ತೂರ್ಯತೀತಗಳ, ಸ್ಥೂಲ, ಸೂಕ್ಷ್ಮ ಕಾರಣಗಳ, ಆರೂ ಚಕ್ರಗಳ, ಇಷ್ಟ - ಪ್ರಾಣ - ಭಾವಗಳ ಆತ್ಮ ಸುಖ ಸಂಬಂಧದ ಮಂಥನವೇ ಈ ಚಾಮರಸನಲ್ಲಿ ಸಿಗುವದು.

### ಲಿಂಗಲೀಲಾ ವಿಲಾಸ ಚಾರಿತ್ರ್ಯ

ಕಲ್ಲುಮಠದ ಪ್ರಭುದೇವ ೧೫ನೇ ಶತಮಾನದ ನೂರಾಒಂದು ವಿರಕ್ತರಲ್ಲಿ ಒಬ್ಬರು. ಇವರು ಈ ಕಾವ್ಯವನ್ನು ರಚಿಸಿದರು. ವಿದ್ಯಾನಗರಿಯ ಕಲ್ಲುಮಠದ ಅಧಿಪತಿಗಳು ಶಿವಶರಣರ ೭೭೦ ವಚನಗಳನ್ನು ತೆಗೆದುಕೊಂಡು ಈ ಗ್ರಂಥವನ್ನು ರಚಿಸಿದ್ದಾರೆ. ಪ್ರಭುದೇವರ ಮಂತ್ರಗೌಪ್ಯಕ್ಕೆ ಟೀಕೆಯನ್ನು ಕೂಡಾ ಇವರು ಬರೆದಿದ್ದಾರೆ. ಜಕ್ಕಣಮಂತ್ರಿ (೧೪೩೦) ಏಕೋತ್ತರ ಶತಸ್ಥಲ ಗ್ರಂಥವನ್ನು ಮೆರೆಸುವಾಗ ನೂರಾಒಂದು ವಿರಕ್ತರಲ್ಲಿ ಇವರು ಇದ್ದರೆಂದು ಪ್ರೌಢದೇವರಾಯನ ಕಾವ್ಯದಿಂದ ತಿಳಿಯುವದು. ಈತನಿಗೆ ಚಿಕ್ಕನಂಜೇಶ ಎಂದು ರಾಘವಾಂಕ ಚರಿತೆಯಲ್ಲಿ, ಸಿದ್ಧನಂಜೇಶ ಎಂದೂ ಕರೆಯುವನು. ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣೀ ಸೂತ್ರ ರತ್ನಾಕರದ ೨೭ನೇ ಕಥೆಯಲ್ಲಿ ಜಕ್ಕಣ, ಕಲ್ಮಠದ ಪ್ರಭು, ಚಾಮರಸ, ಕರಸ್ಥಲದ ಮಾಗಿದೇವ, ವೀರಣ್ಣ ಒಡೆಯ, ಮುಂತಾದ ನೂರೊಂದು ವಿರಕ್ತರು ಏಕೋತ್ತರ ಶತಸ್ಥಲವನ್ನು ಮೆರವಣಿಗೆ ಮಾಡಿಸಿದರೆಂದು ಹೇಳಲಾಗಿದೆ. ಜಕ್ಕಣನು ದಂಡನಾಯಕನಾಗಿದ್ದ ಕಾಲದಲ್ಲಿ (೧೪೩೦) ೭೭೯ ವಚನಗಳು, ೧೩೭ ಸಂಸ್ಕೃತ ಶ್ಲೋಕಗಳಿಂದ ಇದು ರಚಿತವಾಗಿದೆ. ಶರಣರ ಚಾರಿತ್ರ್ಯ, ಕರ್ಮಕಾಂಡದಿಂದ ದೂರಾದ ಜ್ಞಾನದಿಂದ ಆವೃತವಾದ ಭಕ್ತಿಕಾಂಡವನ್ನು ಹೇಳುವ ಷಟಸ್ಥಲ ಮಾರ್ಗ, ಆಗಮಗಳ ಗೋಜುಬೇಡವೆಂದು ತನ್ನದೇ ಆದ ರೀತಿಯಲ್ಲಿ ೧೬ ಸ್ಥಲಗಳಿಂದ ಕೂಡಿ ಅರ್ಥೈಸಿದ ವಚನಾಗಮವಿದು. ಶರಣಾನುಭಾವಿಗಳು ತಾನು ಅನುಭವಿಸಿ ತೃಪ್ತಿಯಿಂದ ನಿಮಿರ್ದು ನುಡಿದ ಸಂತೃಪ್ತಿಯ ಮಾತುಗಳೇ ವಚನಗಳು. ಶಿವಜ್ಞಾನ ಅನುಭವವನ್ನು ಅಸಂಭವಿಸಿ ನುಡಿದಲೀಲೆ, ಶಿವೊಹಂ ಎಂಬ ನುಡಿಯಿಂದ ಸ್ಫುಟಿದೇಳುವರೀತಿ, ಚಪಲ ಜೀವನದ ಪುರುಷಾರ್ಥವನ್ನು ತಾನೇ ಆದ ರೀತಿಯಲ್ಲಿ ಅನುಭವಿಸುವ ಮಾರ್ಗ, ಅಖಂಡ ಪರಿಪೂರ್ಣ ಒಳಹೊರಗೆ ತಾನಾಗಿರ್ಪ, ಪಿಂಡಾಂಡ ಬ್ರಹ್ಮಾಂಡದಲ್ಲಿರುವ, ಪ್ರಾಣಚೈತನ್ಯ ದಯಪಾಲಿಸುವ ಸಪ್ತಸಾಗರದ ಬಗ್ಗೆಯ ಅರಿವಿಕೆಯೇ ನಿಜಸಿದ್ಧಿ. ಕೆಲವರಲ್ಲಿ ಸ್ವಪ್ನಾವಸ್ಥೆಯಲ್ಲಿ ಮಲಗಿದಂತಿದೆ. ಸಾವಿರಕೊಬ್ಬರಂತೆ ಜಾಗ್ರತವಾಗಿರುವದು, ಮಲಗುವದು ಮಾನವನ ಗುಣ. ಜಾಗ್ರತವಾಗಿರುವದು ದೇವರಗುಣ. ಮನೆಯ ಗಜ ಮನೆಗೆ ಬಂದರೆ ಮಲೆಯನ್ನು ನೆನಸುವಂತೆ, ವನದಕೋಗಿಲೆ ವನವನ್ನು ನೆನಸುವಂತೆ ತಾನು ಬಂದ ರಹಸ್ಯವನ್ನು

ನೆನಸಬೇಕಾದ ಅವಶ್ಯಕತೆಯಿದೆ. 'ದೇಹೋಹಂ' ಭಾವ ಕಳೆಯಲು ಈ ಷಟಸ್ಥಲ ಮಾರ್ಗದ ಅವಶ್ಯವಿದೆ. ದೇಹ ನೀನಲ್ಲ, ಪ್ರಾಣ ನೀನಲ್ಲ ಕರಣೇಂದ್ರಿಯ ನೀನಲ್ಲ, ನೀನು ಅನ್ನುವದು ಬೇರೆಯೇ ಇದೆ. ನೀನು ತತ್ವತಹ ಲಿಂಗವಲ್ಲದೇ ಬೇರೆ ಅಲ್ಲ. ಈ ದೇಹ ಆ ತತ್ವದಿಂದ ಹೊರ ಬಂದಿದೆ. ಅದರಿಂದಲೇ ಪಂಚಭೂತಗಳ ಉತ್ಪತ್ತಿ ಲಿಂಗದಿಂದ ಉದ್ಭವಿಸಿದ ಪ್ರಾಣಗಳು ಲಿಂಗೋನ್ಮುಖವಾಗಬೇಕು. ನಿವೃತ್ತಿಪರವೇ ಈ ಲಿಂಗಲೀಲಾ ವಿಲಾಸವು. ಇಲ್ಲಿ ಪೂಜೆಯೇ ಭಿನ್ನ ವಸ್ತುವಿನ ಪೂಜೆ ಅಲ್ಲ, ಇದು ಆತ್ಮಪೂಜೆ, ನಿಜಸ್ಥಲವನ್ನೆದುವ ಪರಮನ ಪೂಜೆ. ತನ್ನನ್ನು ತಿಳಿಯುವದಕ್ಕಾಗಿ ಪೂಜೆ ವಿನಹ ಪೂಜೆಗಾಗಿ ಪೂಜೆ ಅಲ್ಲ. ಹೃದಯದಲ್ಲಿ ಅವ್ಯಕ್ತವಾದ ಪರಮಚಿತ್ ಬೆಳಕು ಹಸ್ತ ಮಸ್ತಕ ಸಂಯೋಗದಿಂದ - ಭಾವಕ್ಕೆ - ಮನಸ್ಸಿಗೆ - ಕಂಗಳಿಗೆ - ಕರಸ್ಥಲಕ್ಕೆ - ಶ್ರೋತ್ರಕ್ಕೆ, ಹೀಗೆ ನಿಲುಕಿಸುವ ಪರಿ ಗುರುವಿನದಾಗಿದೆ. ಕರದಲಿಂಗ - ಕಾಯಲಿಂಗ - ಪ್ರಾಣಲಿಂಗ - ಬೋಧನೆಯಲ್ಲಿ ಭಾವಲಿಂಗ - ಜ್ಞಾನಲಿಂಗ ಅರಿವು ಕುರುಹು ನಿಷ್ಪತ್ತಿಯಾಗಿ ಉರಿಉಂಡ ಕರ್ಪೂರದಂತೆ ತಾನೇ ತಾನೇಂಬ ಭಾವ. ಶರಣರ ಮಾರ್ಗ ಮಾನವನ ಜೀವನವನ್ನು ನಿಜದಲ್ಲಿ ನಿರಯವಗೊಳಿಸಲು ಸಾಧನಮಾರ್ಗ ಈ ಲೀಲಾಸಾಧನೆಗೋಸ್ಕರವಾಗಿಯೇ ಈ ಗ್ರಂಥಕ್ಕೆ ಲೀಲಾವಿಲಾಸ ಎಂದು ಕರೆಯಲಾಗಿದೆ. ಎರಡರದು ಒಂದಾಗಿ ಪೂಜಿಸುವ ಭಕ್ತನು ತಾನು ಅದೇ ಆಗುವ ಶರಣಮಾರ್ಗ ವೇದಾಗಮಗಳಿಗೆ ಅಗೋಚರಪ್ರಭು ಬಸವ, ಚೆನ್ನಬಸವ, ಮಹಾದೇವಿಅಕ್ಕ ಮುಂತಾದ ಶಿವಾನುಭವಿಗಳ ತೃಪ್ತಿಯಿಂದ ಹೊರಹೊಮ್ಮಿದ ನುಡಿಗಡಣಗಳೇ ವಚನಗಳು. ಕರ್ಮ, ಜ್ಞಾನ, ಭಕ್ತಿ ಮೂರರಲ್ಲಿ ಕರ್ಮವನ್ನು ಸುಟ್ಟು ಜ್ಞಾನದಿಂದ ಕೂಡಿ ಶಕ್ತಿಯಿಂದೊಡಗೂಡಿದ ಭಕ್ತಿ ಪುರಸ್ಕರ ಷಟಸ್ಥಲ ಮಾರ್ಗ ವಿದ್ಯಾನಗರಿಯ ಪ್ರಭು ಸಾರವಾದ ವಚನಗಳನ್ನು ತೆಗೆದುಕೊಂಡು ೧೬ ಸ್ಥಲಗಳಿಂದ ಕೂಡಿಸಿ ನಿರೂಪಿಸಿದ ವಚನಾಗಮ. ಸೃಷ್ಟಿಯ ನಿರೂಪಾತ್ಮಕವಾದ ತತ್ವಜ್ಞಾನಿ ಶರಣ ಜ್ಞಾನಿ ಅಲ್ಲ, ಅಜ್ಞಾನಿ ಅಲ್ಲ, ಶೂನ್ಯವಲ್ಲ, ನಿಶ್ಯೂನ್ಯವಲ್ಲ, ದ್ವೈತಿ ಅಲ್ಲ, ಅದ್ವೈತಿ ಅಲ್ಲ, ಉಭಯಾತ್ಮಕ ತಾನೇ ತಾನಾದ ವಿಶೇಷಾದ್ವೈತವಿದು. ಈ ಲೀಲಾವಿಲಾಸದಲ್ಲಿ ಅಲ್ಲಮನ ದಾರ್ಶನಿಕ ರೂಪ ಹೇಗೆ ಸಮ್ಮಿಶ್ರಿತಗೊಂಡಿದೆ ಎಂಬುದನ್ನು ನೋಡಲಾಗುತ್ತಿದೆ. ಜಗತ್ತು ಉದ್ಭವಿಸುವ ಮೊದಲು ಏನು ಇಲ್ಲದ ಸ್ಥಿತಿ ಅದಕ್ಕೆ ನಿಷ್ಕಲ ಅನ್ನುವರು. ಸಕಲ ಅಲ್ಲಿದ್ದು ಯಾವುದು ಕಲೆಗಳು ಇಲ್ಲದ್ದು. ಅಂದರೆ ರೂಪವಿಲ್ಲದ್ದೆಂದು ಅರ್ಥ. ಸರ್ವಶೂನ್ಯವಾಗಿ ಮತ್ತೇನು ಇಲ್ಲದೇ ತಾನೆಂಬ ಅರಿವು, ತೋರಿಕೆ ಸಹ ಇರದ ಸ್ಥಿತಿಯನ್ನು ನಿಷ್ಕಲಲಿಂಗವೆಂದು ಹೇಳಲಾಗಿದೆ. ಪ್ರಭು - ನಾದ, ಬಿಂದು, ಕಳೆಗಳಿಲ್ಲದ ಸ್ಥಿತಿ, ಆದಿಯಿಲ್ಲದ್ದು, ಹಮ್ಮುಬಿಮ್ಮು, ನಾನು ನನ್ನದು, ಶೂನ್ಯ ನಿಶೂನ್ಯವಿಲ್ಲದ್ದು, ಜಗತ್ತು ರಚಿತವಾಗುವದಕ್ಕಿಂತಲೂ ಮೊದಲು ನೀನು ಒಬ್ಬ ಇದ್ದಿ ಎಂದು ಹೇಳುವನು. ಸಿದ್ಧರಾಮ ಇದಕ್ಕೆ ಶಿವೆಶಿವರು ಇಲ್ಲದಾಗ, ಬ್ರಹ್ಮ ವಿಷ್ಣುವಿಲ್ಲದಾಗ, ಸಂಕಲ್ಪ - ವಿಕಲ್ಪಗಳು ಇಲ್ಲದಾಗ ಆ ಸ್ಥಿತಿಯಲ್ಲಿ ಅಂದರೆ ನೀನು ನಿಶೂನ್ಯವಾಗಿರುವೆ. ಶಿವ ತನ್ನ ಸ್ವಯಂ ಪ್ರಕಾಶದಿಂದ ಲಿಂಗಮೂರ್ತಿಯಾಗುವ ಮೊದಲು ಜೀವ ಜಗತ್ತುಗಳು ಇಲ್ಲದಾಗ ನಿಷ್ಕಲರೂಪ ಒಂದೇ ಭಾವಕ್ಕೆ ನಿಷ್ಕಲ ಸ್ಥಲ ಎನ್ನುವರು. ಮುಂದೆ ಅದು ಪೂಜಿಸುವರ ಪೂಜೆಗೆ ಲಿಂಗದಿಂದ ಮಹಾಲಿಂಗವಾಗಿ ಪರಿಣಮಿಸಿತು ಇದೇ ಮಹಾಲಿಂಗ ಸ್ಥಲ.

ಲೀಯತೇ ಗಮ್ಯತೇಯತ್ರ ಯೇನ ಸರ್ವ ಚರಾಚರಂ
ತದೇತ ಲಿಂಗ ಮಿಥ್ಯತ್ತಂ ಲಿಂಗತತ್ವ ಪರಾಯೇಶ್ವೇ [೮೫]

ಯಾವುದರಿಂದ ಜಗತ್ತು ಲೀನ ಹೊಂದುವದೋ, ಯಾವುದರ ಸಹಾಯದಿಂದ ಚಲಿಸುವುದೋ ಅದೇ ಲಿಂಗ. ಮಹಾಲಿಂಗ ಸ್ಥಲಕ್ಕೆ ಮೊದಲು ಏನು ಇದ್ದಿಲ್ಲ. ಅದು ಶೂನ್ಯ ಏನು ಇಲ್ಲದ ಸ್ವಯಂ ಪ್ರಕಾಶ. ಬೆಳಕಿನಿಂದ ಬಯಲು ಕೂಡಿಕೊಂಡು ರೂಪಾತ್ಮಕವಾಯಿತು ಅದೇ ಲಿಂಗ. ಅದೇ ಎಲ್ಲದಕ್ಕೆ ಕಾರಣವಾದ ಜಗತ್ತೆಂಬ ಬೆಳೆಯ ಮೂಲ ಜೀವ. ಅಲ್ಲಮರು ಹೇಳಿದ್ದು ಸೃಷ್ಟಿಯ ಪೂರ್ವ ಇತಿಹಾಸ ಬಯಲು ಬಯಲಾದ ಬ್ರಹ್ಮಕರೆಗಳಿಲ್ಲದ ಕೇವಲ ಬೆಳಕು ಮಾತ್ರ. ಬೆಳಕಿನ ಅಂಗ ರೂಪ ಚಿದ್ ಬಿಂದು ಅದೇ ಮಹಾಲಿಂಗಾತ್ಮಕ ಅದಕ್ಕೆ ಹುಟ್ಟಿಸಲು ತಂದೆ ತಾಯಿಗಳ ಅವಶ್ಯಕತೆಯಿಲ್ಲ, ನೋಡುವ ಮೊದಲೇ ವ್ಯಾಪಿಸಿದೆ. ಇಲ್ಲದ ಗಮನ ಅದರಲ್ಲಿದೆ ಆದ್ದರಿಂದ ಗಮನವಿಲ್ಲದ ಗಮ್ಯ, ವ್ಯಾಪಿಸುವ ಪರಿಶುದ್ಧ ರಹಸ್ಯ ಸಿದ್ಧರಾಮನು ಕೂಡಾ ಉತ್ಪತ್ತಿ ಸ್ಥಿತಿ ಲಯಗಳಿಲ್ಲದ ಮಹಾವಸ್ತು ತನ್ನ ಲೀಲೆಯಿಂದ ತಾನೇ ಮಹಾಲಿಂಗವಾಗಿದೆ ಎನ್ನುವನು. ಹಲವು ಶರಣರು ಕೂಡಾ ವಚನಗಳಲ್ಲಿ ಇದನ್ನೇ ಹೇಳಿರುವರು. ಆ ಸ್ಥಿತಿಯು ಪ್ರಕಾರವಾಗಿ ಒಂದೇ ಸೂರ್ಯನ ಬೆಳಕನ್ನು ನೋಡಲು ಅಸಾಧ್ಯವಾಗಿರುವಾಗ ಶತಕೋಟಿ ಸೂರ್ಯನ ಬೆಳಕನ್ನು ನೋಡಲು ಬರುತ್ತದೆಯೇ, ಅಂತಹ ಮಹಾಲಿಂಗರ ಬೆಳಕನ್ನು ನೋಡಿಯೂ ಕೂಡಾ ಹೇಳಲಾಗುವದಿಲ್ಲ. ತಾಯಿ - ತಂದೆ ಬಳಗ ಏನು ಇಲ್ಲದ ತನ್ನಿಂದ ತಾನೆ ಉತ್ಪತ್ತಿಯಾದ ಬೆಳಗು ಪ್ರಾಣವಾಗಲು ಅದರ ಹರ್ಷಾನಂದದ ಪರಿಣಾಮವೇ ಕಾರಣ ಜೀವಕ್ಕೆ ತೃಪ್ತಿಯೂ ಅದೆ. ಭೇದಿಸಲು ಸರಳವಾದದ್ದಲ್ಲದ ಯಾವ ತಪ್ಪುಗಳು ಇಲ್ಲದಾಗ ಸ್ವಲೀಲೆಯಿಂದಾದ ಮಹಾಲಿಂಗದ ಘನತೆಯನ್ನು ವೇದಾಗಮನಗಳಿಂದ ಅರಿಯಲಾಗದು. ಆದರೆ ಅನುಭಾವಿಗಳಿಂದ ಅರಿಯಬಹುದು.




ಮಹಾಲಿಂಗ ತನ್ನನ್ನು ಪೂಜಿಸಕೊಂಬಬೇಕೆಂಬ ಲೀಲೆಯಿಂದ ಅಂಗ, ಲಿಂಗವೆಂದು ಎರಡಾಯಿತು. ಅದರ ಅಂಶಭಾವವೇ ಬೇರ್ಪಟ್ಟು ಆತ್ಮವಾಯಿತು.

ಲೀಲೆಯಾ ಸಹಿತಃ ಸಾಕ್ಷಾ ದುಮಾಪತಿ ರಿತಿರಿತಾ
ಲೀಲೆಯಾ ರಹಿತಃ ನಿಶ್ಚಿತ್ ಸ್ವಯಂಭು ರಿತಕಥ್ಯೇತೇಃ [೭೭]

ಲೀಲೆಯಾದರೇ ಉಮಾಪತಿ, ಲೀಲೆತಪ್ಪಿದರೆ ಸ್ವಯಂಭು ಎನ್ನುವ ಅರ್ಥಾಪತ್ತಿ ಇದು ಬೇಕೆಂದರಿದ, ಬೇಡವೆಂದರಿದಲ್ಲದೇ ಇದರ ಬಗ್ಗೆ ಅಲ್ಲಮ ಆ ನಿಷ್ಕಲ ಚೈತನ್ಯಾತ್ಮಕ ಸ್ವರೂಪ ಮಹಾಲಿಂಗ ಹೇಗಾಯಿತೋ

ಹಾಗೆ ಸಾಕಾರದಲ್ಲಿ ವಿನೋಧಿಸಬೇಕೆಂಬ ಚಿತ್ತು ಬಲಿದು ಎರಡು < ಸತ್, ಚಿತ್ತು ಆಯಿತು. ಸತ್ ಎಂದರೆ ಲಿಂಗ. ಚಿತ್ ಎಂದರೆ - ಅಂಗ ಮಾತಿನ ಲಿಂಗ ನೋಡಲು ಕಾಣಬಹುದು. ಹಿಡಿಯಲು ಸಿಗಲಿಕ್ಕಿಲ್ಲ ೧ಳ ಲೋಕದ ಕಡೆ ಇದರಲ್ಲಿ ಹುದುಗಿದೆ. ಗುಹೇಶ್ವರ (ಆದಿಲಿಂಗ) ಮೊದಲು ಬೀಜ, ಅದು ಪಂಚ ಸಾದಾಖ್ಯ ಮೂರ್ತಿಯಾಯಿತು. ಹಲವು ಆತ್ಮ ಪ್ರಕಾಶಗಳ ಬೆಳಕನ್ನು ಕೂಡಿ ಹೇಳುವ ಮಹಾಬೆಳಕು ಇದಕ್ಕೆ ಅಲ್ಲಮನ ವಚನ ಹೀಗಿದೆ.

ಮರದೊಳಗಣ ಪತ್ರ ಫಲಂಗಳು ಮರಕಾಲ ವಶದಲ್ಲಿ ತೊರುವಂತೆ .....
ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರಕಾಲವಶದಲ್ಲಿಪ್ಪವು .....
..... ಗುಹೇಶ್ವರ [೬೬]

ಮರದಲ್ಲಿ ಕಾಣಿಸುವ ಚಿಗುರು ಎಲೆಗಳು ಋತುಕಾಲದಲ್ಲಿ ಲೀಲೆಯಿಂದ ತೋರುವಂತೆ, ಅಷ್ಟೇ ಏಕೆ ಸ್ತ್ರೀಯಿಂದ ಉತ್ಪತ್ತಿಯಾಗುವ ಪ್ರಸಂಗ ಅಂದರೆ ಋತುಮತಿಯಾದ ಬಳಿಕ ಅಷ್ಟೇ ಅಲ್ಲವೇನು? ಅಂದರೆ ಈ ಋತು ಶಬ್ದ ಸಸ್ಯಗಳಿಗೆ, ಪ್ರಾಣಿಗಳಿಗೆ ಅನ್ವಯವಾಗುತ್ತದೆ. ಋತುವಿನ ನಂತರವೇ ಗಿಡವು ಚಿಗುರುವಂತೆ ಋತುವಿನ ನಂತರವೇ ಮಕ್ಕಳ ಉತ್ಪತ್ತಿ. ಅದು ಮರದ ಸ್ವಭಾವ. ಇದು ಸ್ತ್ರೀ ಎಂಬ ಮರದ ಸ್ವಭಾವ. ಅದರಿಂದ ತೋರಿ ಅದರಲ್ಲಿಯೇ ಅಡಗಿದ್ದ ಪರಿಯು ಕೂಡಾ ಇದೆ. ಅದಕ್ಕೆ ಉಮಾಶಕ್ತಿ ಉಪಮಾಶಕ್ತಿ, ಉಮಾಮಹೇಶ್ವರ ಶಕ್ತಿ, ಸಾಕಾದರೆ ಸ್ವಯಂಭುವಾಗಿರುವ ಸ್ಥಿತಿ. ಚಿತ್ ಪ್ರಭಾಸಾ ಸಾಮರ್ಥ್ಯ ಶಕ್ತಿಯನ್ನು ಹೊಂದಿದ್ದು, ಶಕ್ತಿ ಶಿವನನ್ನು ಬೇರ್ಪಡಿಸದ ಸರ್ವಕಲಾ ಸಂಪನ್ನ, ಅದರಂತೆ ಸಾಕಾರಕಲಾ ಕುಂದಬಾರದೆಂಬುದೇ ಸಾಕಾರ ರೂಪ ತಾಳಲು ಲೀಲೆ ಕಾರಣವಾಗಿದೆ. ಶಿವ ಚೈತನ್ಯತ್ಮಾಕ ಸ್ವಯಂ ಪ್ರಕಾಶ ಗುಣ ಸಾಮರ್ಥ್ಯ ಅದಕ್ಕೆ ಚಿತ್ ಶಕ್ತಿ ಎನ್ನುವರು. ಲಿಂಗಮೂರ್ತಿ ಸ್ಥಲದ ವಿವರಣೆ ಹಲವಾರು ಅಲ್ಲಮನ ವಚನಗಳು ಇದನ್ನು ಹೇಳುತ್ತವೆ. ತತ್ವ ಪರತತ್ವಗಳು ಸೃಷ್ಟಿಯಾಗುವ ಮೊದಲು ಜೀವ ಪರಮರು ಆತ್ಮಗಳು ಇದರಿಂದ ಕೇವಲ ಬಯಲು ಮಾತ್ರ ಇರುವಾಗ, ಆ ಬಯಲು ಅಖಂಡ ಚೈತನ್ಯದೊಂದಿಗೆ ಕೂಡಿ ಲಿಂಗವಾಯಿತು. ಪ್ರಕೃತಿ ಪುರುಷರಿಲ್ಲದ ಮೊದಲು ಜೀವ ಪರಮರೆಂಬ ಭಾವ ಬರುವ ಮೊದಲು ಬಯಲುಬಯಲು ಕೂಡಿ ಲಿಂಗವಾಯಿತು. ಆ ಲಿಂಗದ ಕಳಾ ಬೆಳಗಿನ ಬಿಂದುವೇ 'ಅ' ಕಾರ 'ಉ' ಕಾರ, 'ಮ' ಕಾರವೆಂದು ಅಕ್ಷರತ್ರಯ ಗದ್ದುಗೆಯಲ್ಲಿ ಬಿಂದುವಿನ ಉತ್ಪತ್ತಿ. ಓಂಕಾರ ರೂಪ ಪ್ರಣವವೇ ಮೂರ್ತಿಯಾಗಿ ಸದಾ ಶಿವನೆಂಬ ಶರಣನಾದ, ಸದಾಶಿವನ ಪಂಚಮುಖದೊಳಗೆ ಕ್ರಿಯಾಶಕ್ತಿಯ ಜನನ, ಆ ಶಕ್ತಿಯಿಂದ ಸಚರಾ ಚರ ಜಗತ್ತೆಲ್ಲವೂ ಹೊರ ಹೊಮ್ಮಿತು. ಇಂತಹ ಲೋಕ ಲೌಕಿಕದೊಳಗಿರ್ದ ಶರಣ ಎರಡೆನ್ನ ಅತಿಗಳೆದು, ತನ್ನ ನಿಜದ ಲಿಂಗವನ್ನೇ ಆಶ್ರಯಿಸಿದ ಇದು ಲಿಂಗಮೂರ್ತಿ ಸ್ಥಲ ಪ್ರಭುವಿನ ಮಾತಿನಲ್ಲಿ ಉತ್ಪತ್ತಿ

ಅನಾದಿಯ ಮಗ ⇨ ಆದಿ, ಯ ಮಗ ⇨ ಅತೀತ ⇨ ಆಕಾಶ ⇨ ವಾಯು ⇨ ಅಗ್ನಿ ⇨ ಅಪ್ಪು ⇨ ಪೃಥ್ವಿ, ಹೀಗೆ ಸಕಲ ಜೀವರೆಲ್ಲರ ಉದ್ಭವ ಸೃಷ್ಟಿಯ ವಚನಗಳಲ್ಲಿ ಉತ್ಪತ್ತಿಯ ಕ್ರಿಯೆಗಳನ್ನು ಹೇಳಲಾಗಿದೆ.

ಅಂಗಸ್ಥಲದಲ್ಲಿ - ಸ್ಥಲಂ ನಾಮ ಪರಂ ತತ್ವಂ ಶಿವರುದ್ರಾದಿ ಸೌಂಜ್ಞಕಂ
ಉಪಾಸೋ ಪಾಸಕತ್ವೇನಾಃ ಸ್ವಂತಮೇವ ದ್ವಿಧಾಭವೇತ್
ಲಿಂಗಸ್ಥಲ ಮುಪಾಶ್ಯ! ಶ ಅಂಗಸ್ಥಲ ಮುಪಾಶಕಂ. [೬೮]

ಪೂಜ ಪೂಜಕ ದೃಷ್ಟಿಯಿಂದ ಒಂದೇ ಮೂರ್ತಿ ಲಿಂಗ ಅಂಗವೆಂದು ಎರಡಾಯಿತು. ಆತ್ಮನೇ ಪರಮಾತ್ಮನ ಪೂಜೆಗೆ ಅಂಗ ಸ್ಥಲದಿಂದ ಪ್ರಸಿದ್ಧವಾದ ತತ್ವ ತಾನೇ ಶಿವರುದ್ರ ಎಂದು ಕರೆಯಲ್ಪಡುವ ವಸ್ತು ಉಪಾಸ್ಯ ಉಪಾಸಕ ದೃಷ್ಟಿಯಿಂದ ಎರಡಾದ ಪರಿಯನ್ನು ಉರಿಲಿಂಗಪೆದ್ದಿಯ ವಚನ ಹೇಳುತ್ತದೆ.

ಶಿವ ಜಗವಾಗಬಲ್ಲ ಶಿವ ಜಗವಾಗದಿರಲೂ ಬಲ್ಲ, ಶಿವರೂಪವಾಗಬಹುದು, ರೂಪವಾಗದಿರಲೂ ಬಹುದು. ಸಕಲ ವಿಶ್ವಾತ್ಮಕ ಜಗತ್ತನ್ನು, ಜೀವಿಗಳನ್ನು ಸೃಷ್ಟಿಸಲು ಬಲ್ಲ ಸೃಷ್ಟಿಸದೇ ತಾನೆ ತಾನಾದ ಸ್ಥಿತಿಯಲ್ಲಿ ಇರಲುಬಲ್ಲ. ಹಾಳಗೆಡವಲು ಸಮರ್ಥ, ಕೆಡಸದಿರಲಾರನು ಕೂಡಾ ತಾನೇ ಜಂಗಮನಾಗಿ ತನ್ನನ್ನು ಪೂಜಿಸಿಕೊಳ್ಳಬಲ್ಲ, ಶಿವಲಿಂಗವಾಗಿ ಪೂಜೆಗೊಳ್ಳಲು ಬಲ್ಲ, ಶಿವನ ಬಿಟ್ಟು ಹೊರಗೆ ಏನಾದರೂ ಇದೆ ಎಂದು ಹೇಳಲಾಗುವದಿಲ್ಲ. ಏಕೆಂದರೆ ಅವನನ್ನು ಬಿಟ್ಟು ನಾನು ಎಂಬುದಿಲ್ಲ. ಎಲ್ಲದಕ್ಕೂ ಆತನೇ ಮಾತಾ ಪಿತ. ಪ್ರಭು ಕೂಡಾ ಒಂದರೆಡಾದುದನ್ನು ಹೇಳುತ್ತಾನೆ. ಅದು ವೇದಾತೀತ ಭಕ್ತಿಗೆ ಸಾಧ್ಯ ದೇಹಾಧಾರದ ಇಂದ್ರಿಯ ವಿಷಯ, ಭೂತ, ಜೀವಾತ್ಮಗಳನ್ನು ಹೊತ್ತುಕೊಂಡು ಜಡ ಪ್ರಕೃತಿಯೊಂದಿಗೆ ತೊಳಲಿ ಬಳಲಿ ಕೂಡುವ ಪ್ರಕಾರ ಬಯಸಿ ನಾನಾ ಪಥಗಳಿಂದ ಆರಿಸಿ ಜೀವಿಗಳೆಲ್ಲವೂ ಬಳಲುತ್ತಿದೆ. ಇದು ದೊರೆಯಬೇಕಾದರೆ ಸಂಗನ ಬಸವಣ್ಣನ ನೆನಸಿದರೇ ಎಂದು ಗುಹೇಶ್ವರನ ಉಕ್ತಿ. ಸಂಸಾರ ಸಂಬಂಧ ಸ್ಥಲದ ಬಗ್ಗೆ ಘನಲಿಂಗ ತನ್ನ ಪಂಚ ಸಾದಾಖ್ಯಗಳಿಂದ ಪಂಚತತ್ವಗಳು ಹುಟ್ಟಿ ಅವುಗಳಿಂದ ೨೫ ತತ್ವಗಳು ಆತ್ಮಕ್ಕೆ ಹೊಂದಿಕೊಂಡು ಅದಕ್ಕೆ ಸಂಬಂಧಪಟ್ಟ ದೇಹ ಕರಣಂಗಳಿಂದ ಅಹಂ ಮಮತೆ ನಾನು ನನ್ನದು ಎಂಬ ಅಜ್ಞಾನ ಸಂಬಂಧಿಸಿದ ಜೀವ ಎನಿಸಿಕೊಂಡು, ಪುಣ್ಯ ಪಾಪವೆಂಬ ಪಾಶಬದ್ಧ ಜೀವವಾಗಿ, ಸುಖ, ದುಃಖ, ಬಂಧ, ಮೋಕ್ಷ, ಜನನ, ಮರಣಗಳ ಭವಮಾಲೆಗಳಿಗೆ ಒಳಪಟ್ಟು ಲಿಂಗಲೀಲಾ ವಿಲಾಸದಿಂದ ಆತ್ಮಂಗೆ ದೇಹ ಸಂಸಾರ ಬಂಧಿಸಲು ತನ್ನ ಆತ್ಮ ನಿಲುವನ್ನು ಮರೆತು ದೇಹವೇ ನಾ ಎಂದು ಹೇಳುವ ಸಂಸಾರ ಸಂಬಂಧದ ಜೀವೋತ್ಪತ್ತಿಯ ಕಥನ.

'ಅಕಲ್ಪಿತಾ' ಸತ್ಯನರಡುವ ನಿಸ್ಸೀಮ[೭೯] ..........., ನಿತ್ಯ ನಿರವಯ ಅಖಂಡ ಪರಂಜ್ಯೋತಿಯಾದ ಮಹಾಘನ ಪರಮಾತ್ಮಲಿಂಗ ಉತ್ಪತ್ತಿ ಅದರಿಂದ ಅಸಂಖ್ಯಾತ ಜೀವಿಗಳ ಉತ್ಪತ್ತಿಯಾಯಿತು. ಕೋಟ್ಯಾನುಕೋಟಿ ಅಣುಗಳಿಂದ ಪಂಚವಿಂಶತಿ ದೇಹವನ್ನು ಪಡೆದ ಮೇಲೆ ಪಾಶಬದ್ಧವಾಯಿತು. ಶರೀರದಿಂದ ಹೇಳಬಹುದಾದಾಗ ಅದು ಜೀವಾಂತರಾತ್ಮವೆಂದು, ಅದು ಪಾಶಬದ್ಧವಾದರೆ ಪರಮಾತ್ಮ ಮಾತ್ರ ಪಾಶ ಮುಕ್ತ, ಸಂಸಾರ ಸಂಬಂಧವಾಗಿ

'ವಾರಿ ಬಲಿದು ವಾರಿ ಕಲ್ಲಾದಂತೆ .....,'[೮೦]

ನೀರ ಕಲ್ಲು ಸುಣ್ಣದಿಂದ ದೊಡ್ಡದಾಗುತ್ತಾ ಮಂಜುಗಡ್ಡೆಯ ದೊಡ್ಡರೂಪವನ್ನು ಪಡೆದಂತೆ. ಏನು ಇಲ್ಲದ ನಿಷ್ಕಲ ವಸ್ತು ತನ್ನ ಲೀಲೆಯಿಂದ ಅಖಂಡ ಗೋಳಾಕಾರ ಲಿಂಗವಾಯಿತು. ಅಲ್ಲಿಂದ ಸದಾಶಿವಮೂರ್ತಿ - ಇದರಿಂದಲೇ ಸಕಲ ಜೀವ ಉತ್ಪತ್ತಿ. ಈ ಕ್ರಿಯಾ ಸಾಧನೆಯನ್ನೇ ಸಂಸಾರ ಎಂದು ಕರೆಯಲಾಗುತ್ತದೆ. ಸಂಸಾರ ಮಾಡಬೇಕಾದ ಪ್ರಸಂಗದಲ್ಲಿ ಅರಿವೆ ಮರವೆಗಳು ಸಾಮಾನ್ಯ. ಇಲ್ಲಿ ಮಾಯೆ ಎಂದರೆ ಏನು? ಇದ್ದುದನ್ನು ಇಲ್ಲದಂತೆ ತಿಳಿಯುವುದು ಮಾಯವರ್ಥವಾದರೆ ತನ್ನನ್ನು ಯಾವುದೂ ಬಂಧನದಲ್ಲಿ ಕೆಡುವುದೋ ಅದೇ ಮಾಯೇ, ಇನ್ನೊಂದು ಅರ್ಥದಲ್ಲಿ ಹೆಣ್ಣುಗಂಡು ಮಾಯೆ ಎಂಬ ಪ್ರತಿಮಾ ರೂಪವಿದೆ. ತಿಳಿಯುವುದಕ್ಕೆ

ಅಡ್ಡಿಯಾಗುವುದೇ ಮಾಯೆ ಸರಿಯಾದ ತಿಳುವಳಿಕೆಯಿಲ್ಲದೆ ನಾ ನೀ ಎನ್ನುವ ತಾಮಸಾದಿಗಳಿಗೆ ಬಂಧಿತವಾಗಿ ವಿಷಯಾದಿಗಳಿಗೆ ಆಹುತಿಯಾಗಬೇಕಾದರೆ ಮಾಯೆಯ ಸಹಾಯಕತೆಯಿದೆ.

'ಕಾಯದ ಮೊದಲಿಂಗೆ ಬೀಜವಾವುದೆಂದರಿಯದೆ ಈ ಲೋಕ .....,'[೮೧]

ಕಾಯದ ಉತ್ಪತ್ತಿಗೆ ಇಂದ್ರಿಯಗಳು ಕಾರಣವೇ? ಅಲ್ಲ ಅದಕ್ಕೆ ಕಾರಣ ಅಜಡವಾಗಿರಬೇಕು. ಏಕೆಂದರೆ ಇಂದ್ರಿಯಗಳು ಜಡವಾದವುಗಳು. ಕಲಾ ಬೇಧವೆಂದರೆ ಕಲೆಗಳಿಂದ ಉತ್ಪತ್ತಿಯಾದುದಲ್ಲ. ಅಂದರೆ ನಿಷ್ಕಲದಿಂದ ಉತ್ಪತ್ತಿಯಾದುದೆಂದು ಹೇಳ ಹೊರಟಿದೆ. ದೇಹ ಸಂಬಂಧದಿಂದಾಗಿ ಎಲ್ಲಕ್ಕೂ ಕಾರಣ ಮರೆವು. ಇದನ್ನು ಬದಿಗೆ ಸರಿಸಲು ಸುಲಭ ಸಾಧ್ಯವಲ್ಲದ್ದರಿಂದ ಶುದ್ಧ ಸುಯಿಧಾನಿ ಇತ್ಯಾದಿ ಮಾತುಗಳ ವಿವರಣೆಯಿದೆ. ಇದರಂತೆ ಹಲವು ವಚನಗಳು ದೊರೆಯುತ್ತವೆ.

'ಗುಬ್ಬಿ ಹೆರರ ಮನೆ ತನ್ನ ಮನೆ .....,'[೮೨]

ಎಲ್ಲವೂ ಪರಮಾತ್ಮಮಯವೆಂಬುದನ್ನು ಮರೆತು ಅಹಂ, ದೊಹಂ, ಎಂದು ತತ್ವದ ಸುತ್ತ ತಿರುಗುವದನ್ನು ಈ ವಚನ ಅಲ್ಲಗಳೆಯುತ್ತದೆ.

ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದು:ಖ ..... ಭಿನ್ನಾಣ ತಪ್ಪಿತ್ತು ಗುಹೇಶ್ವರ.[೮೩]

ಸುಖಕ್ಕೆ ಬೆನ್ನು ಹತ್ತಿದಾಗ ಅದು ಸಿಗುವವರೆಗೆ ಕಷ್ಟ, ಸಿಕ್ಕ ಮೇಲೆ ಅದನ್ನು ಬಹಳ ದಿವಸ ಕಾಪಾಡಿಕೊಂಡು ಹೋಗುವುದು ತೊಂದರೆ, ಸಿಗುವ ಮೊದಲು ತೊಂದರೆ ಸಿಕ್ಕಾಗ ಉಳಿಸಿಕೊಳ್ಳುವ ತೊಂದರೆ. ಮೀರಿ ಹೋದಾಗ ಬಲು ಕಷ್ಟ ಈ ಸಂಸಾರ ಸುಖ ಹೀಗೆ ಇದೆ. ಇದು ಕ್ಷಣದ ಸುಖ, ಖಾಯಂ ಸುಖ ಅಲ್ಲ. ತನ್ನ ನಿರ್ಕೆ ನಿಧಾನವ ಸಾಧಿಸುವದು - ಅಂದರೆ ತನ್ನನ್ನು ಬಿಟ್ಟು ಬೇರೆ ತೆರನಲ್ಲಿ ನಿಧಿಯನ್ನು ಹುಡುಕಿದಂತೆ ಈ ಪರಿ, ಗುರಿಯಿಲ್ಲದ ಬಾಣ, ಭಿನ್ನಾಣವೆಂದು ಹೇಳುವದು ನಿಜಾಂಶವಲ್ಲದೇ ಮತ್ತೇನು!

ಬಯಲಿನಿಂದಲೇ ಪರಶಿವಲಿಂಗದ ಉದಯ ತನ್ನಿಂದತಾನೇ ಬೆಳೆದು ಮೂರ್ತಿಯಾದ ಮಹಾಲಿಂಗ ಬಯಲಿನಿಂದ ಉತ್ಪತ್ತಿಯಾಗಿ ಬಯಲಿನಲ್ಲಿ ಲಯವಾಗುವ ಪರಿಯನ್ನು ಪ್ರಭು ಹೇಳಿದ್ದಾನೆ. ಈ ಐಕ್ಯಸ್ಥಲದ ನಂತರ ಮುಂದಿನ ಸ್ಥಿತಿ ಸ್ವಲೀಲಾನಂದ ಭಕ್ತಿ ಸ್ಥಲ. ಇದರ ತಿರುಳೇ ಲಿಂಗಲೀಲಾ ವಿಲಾಸ ಸ್ಥಿತಿ.

ಘನಲಿಂಗ ತನ್ನ ಲೀಲೆಯಿಂದ ಲಿಂಗಾಂಗವೆಂದಾಗಿ ಪೂಜ್ಯ ಪೂಜಾಕ ಭಾವದಿಂದ ಎರಡಾದದು ಒಂದೇ ವಸ್ತು. ಐಕ್ಯಸ್ಥಲದ ನಂತರದಲ್ಲಿ ಶರೀರ ಐಕ್ಯವಾದ ಲಿಂಗ ಶರಣರ ಅರಿವಿನ ತಾನು ಲಿಂಗವೆಂಬುದು ಮರೆತ ಸ್ಥಿತ ಏನನ್ನು ಬಯಸದ ಒಳ ಹೊರಗೆ ಅಖಂಡವಾಗಿರುವ ಸ್ವತಂತ್ರ ಸ್ವಲೀಲಾನಂದ ಸ್ಥಿತಿ.

ಹಸಿವಿನ ಪ್ರೇಮಕ್ಕಾಗಿ ಹುಸಿದು ಮಜ್ಜನಕ್ಕೆರೆವರು ..... ಪೂಜೆಗೊಂಬವರು ಇಲ್ಲ.[೮೪]

ಹಸಿವಿನ ಪ್ರೇಮ ಅಂದರೆ ತನ್ನನ್ನು ಅರ್ಚಿಸಿಕೊಳ್ಳಬೇಕೆಂಬುದರಿಂದ ಪೂಜೆಯೇ ವಿನಹ ಯಾವುದೇ ಲಾಭಕ್ಕಾಗಿ ಅಲ್ಲ. ಉಂಡರೇ ಹೊಟ್ಟೆ ತುಂಬುವಂತೆ, ಪೂಜಿಸಿಕೊಂಡರೆ ತೃಪ್ತಿ ಮಾತ್ರ ಅಲ್ಲಿ ಭಕ್ತ, ದೇವರು, ನಾನು, ನೀನು ಏನು ಇಲ್ಲ ಇದಕ್ಕೆ.

ಊಸ್ಮದ ವರತೆಯಂತೆ, ಉರಿಯ ನೆಳಲಂತೆ, ಮಂಜಿನ ಮಳೆಯಂತೆ, ಬಿಸಿಲ ಕುದುರೆಯಂತೆ, ಬೆಟ್ಟದ ಶಬ್ದದಂತೆ ಸುಳಿವ ಸಿದ್ಧ ಸೋಮನಾಥ ಲಿಂಗ ನಿಮ್ಮ ಶರಣ."[೨೫]

ಹಳ್ಳದ ದಂಡೆಯಲ್ಲಿ ಕುಡಿಯುವ ನೀರು ರಾಡಿ ನೀರಿನಿಂದ ಬೇರ್ಪಡಿಸಬೇಕಾದರೆ ವರತೆಯನ್ನು ಹೊತೆಯಬೇಕಾಗುವದು. ಜ್ವಲಿಸುತ್ತಿರುವ ಉರಿ ಸೂರ್ಯನ ಬೆಳಕಿನ ದಿಗಂತದಲ್ಲಿ ನೆಳಲು ಇದ್ದಂತೆ ತೋರಿದರೂ ಉಷ್ಣವಿರುತ್ತದೆ. ಮರದ ನೆರಳಿನಂತೆ ಉರಿಯ ನೆರಳು ಇರುವದಿಲ್ಲ. ಮಂಜಿನ ಮಳೆಯಲ್ಲಿ ಮಳೆಯೂ ಇಲ್ಲ ಹಸಿಯಿದೆ. ನಿಜದ ಮಳೆಯೇ ಬೇರೆ, ಮಂಜಿನ ಮಳೆ ಬೇರೆ. ಬಿಸಿಲ ಕುದುರೆ ಕುದುರೆಯಂತಿದ್ದರೂ ಅದರ ಮೇಲೆ ಹತ್ತಲು ಬರುವದಿಲ್ಲ, ಹಸರನ್ನು ಮೇಯುವುದಿಲ್ಲ. ಹಾಗೇ ಶರಣ ಶರೀರ ಆದರೂ ಆತನ ಪರಿಯೇ ಬೇರೆ. ಇತರರ ಪರಿಯೇ ಬೇರೆ. ಆತನ ಪರಿ ನಿಜಾನಂದ ಸ್ಥಿತಿ. ಕಲ್ಲುಮಠದ ಪ್ರಭುವಿನ ಲೀಲಾವಿಲಾಸದ ಸ್ಥಿತಿಯು, ವ್ಯಕ್ತಿತ್ವ ವಿಕಸವನ್ನಾಗಲೀ, ಸಾಮಾಜಿಕ ವಿಕಸನವನ್ನಾಗಲೀ ಒಳಗೊಂಡಿದೆಯೇ? ಎಂಬುದನ್ನು ನೋಡುವ ಅವಶ್ಯವಿಲ್ಲದೆ, ಆಧ್ಯಾತ್ಮಿಕ ಆರೋಹಣವನ್ನು ಗುರುತಿಸಿದೆ. ಪ್ರಭುದರ್ಶನ ಇದರಲ್ಲಿ ಸಮಕಾಲೀನ ವಚನಕಾರರೊಂದಿಗೆ ಹೇಗೆ ಹೊಂದಿಕೊಂಡಿದೆ ಎಂಬುದನ್ನು ಸಾರ ಸಂಕ್ಷೇಪವಾಗಿ ನೋಡಲಾಗಿದೆ.

### ಹರಿಹರನ ಪ್ರಭುದೇವರ ರಗಳೆ

ಹರಿಹರ ಒಬ್ಬ ವೀರಶೈವ ಕವಿಯೆಂದು ಕೆಲವರು, ಅದರಂತೆ ಶೈವ ಕವಿಯೆಂದು ಹಲವರು ಹೇಳುವುದುಂಟು. ಆದರೆ "ಈತನು ಮೈಸೂರು ರಾಜ್ಯದ ಬಳ್ಳಾರಿ ಜಿಲ್ಲೆಯಲ್ಲಿರುವ ಹಂಪೆಯಲ್ಲಿ ಶಿರ್ವಾಣೆ ಮಹಾದೇವರೆಂಬ ಆದರ್ಶ ವೀರಶೈವ ದಂಪತಿಗಳ ಪುಣ್ಯ ಉದರದಿಂದ ಹರನ ಕುರುಗೋದಯವೆಂಬಂತೆ ಜನಿಸಿದನು" ಎಂದು ಹೇಳಿದ್ದರಿಂದ ಆತನು ವೀರಶೈವ ಎಂದು ಪರಿಗಣಿಸಲಾಗಿದೆ. ಜೀವನೋಪಾಯಕ್ಕೆ ದ್ವಾರಸಮುದ್ರದ ರಾಜ ನರಸಿಂಹ ಬಲ್ಲಾಳನಲ್ಲಿ ಕರಣಿಕರ ಕೆಲಸವನ್ನು ಮುಗಿಸಿಕೊಂಡಿದ್ದ. ಈತನ ಕಾಲವು ಸುಮಾರು ೧೧೬೫ ಎಂದು ತಿಳಿದು ಅಂದರೆ ಬಸವಾದಿ ಪ್ರಮಥರು ಆಗಿಹೋದ ಕಾಲ ೧೧೩೪ ಆದರೆ ಇಲ್ಲಿ ಸ್ವಲ್ಪ ಕಾಲಾನಂತರದಲ್ಲಿಯೇ ಆಗಿಹೋದ ಈತನಿಗೆ ವಚನಗಳ ಪರಿಚಯ ವಿರದೇ ಹೋದದ್ದು ಒಂದು ದುರಂತವೆನ್ನಬಹುದು. ಯಾಕೆಂದರೆ ವಚನಗಳ ಸತ್ಯವನ್ನಾದರೂ ಈತ ಮನಗಂಡಿದ್ದರೆ ಚಾರಿತ್ರಿಕ ವಿಷಯಗಳನ್ನು ಸರಿಯಾಗಿ ಮಂಡಿಸುತ್ತಿದ್ದಾನೇನೋ ಎನಿಸುವದು. ಹಲವಾರು ರಗಳೆಗಳಾದ ಗಿರಿಜಾಕಲ್ಯಾಣ, ಶಿವಶರಣರ ರಗಳೆಗಳು, ಪಂಪಾಶತಕ, ರಕ್ಷಾಶಕತ, ಮುಡಿಗೆಯಷ್ಟಕಗಳನ್ನು ಬರೆದಿದ್ದಾನೆ. ತಾನು ಭಕ್ತನಾದಂತೆ ಕವಿತಾ ರಚನಾಕಾರ ತನ್ನ ಕವಿತಾ ರಚನೆಗಾಗಿ ತನ್ನ ವೃತ್ತಿಯನ್ನು ತ್ಯಜಿಸಿ ಹಂಪೆಗೆ ಬಂದು ನೆಲೆ ನಿಲ್ಲುತ್ತಾನೆ. ಈತನು ರಗಳೆಯ ಕವಿ ಎಂದು ಹೆಸರುವಾಸಿ. ಇವನ ಸಹೋದರಿ ರುದ್ರಾಣಿ ಅವಳ ಪತಿ ಮಹಾದೇವ. ಇವರ ಮಗನೆ ರಾಘವಾಂಕ.[೨೬] ಸೋದರಮಾವನನ್ನು ಗುರುವಾಗಿ ಸ್ವೀಕರಿಸಿದ್ದು ರಾಘವಾಂಕನ ವಿಶಿಷ್ಟತೆ. ಹರಿಹರ ಕೊನೆಯವರೆಗೂ ಬ್ರಹ್ಮಚಾರಿಯಾಗಿ ಉಳಿದದ್ದು ಒಂದು ವಿಶೇಷ. ಹರಿಹರನ ಕಾವ್ಯ ಶೃಂಗಾರ ರಸಕ್ಕೆ ಮಾರುಹೋಗಿ ತಿಗುಳ ದೇಶದಿಂದ ಹಂಪೆಗೆ ಬಂದ ಓರ್ವ ತರುಣಿಯು ನನ್ನ ಒಡೆವೆರೆಯಬೇಕು ಎಂದು ಕೇಳಿದಾಗ, ಹರಿಹರ ನಾನು ನೀನು ಬಯಸಿದಂತಿಲ್ಲ, ಅದು ಆಗದು ತಾಯಿ ಎಂಬ ನುಡಿಯನ್ನು ನೋಡಿದರೆ ಆತನೊಬ್ಬ ನಿಷ್ಠಾವಂತ ಬ್ರಹ್ಮಚಾರಿ ಎಂಬುದು ವಿದಿತ. ಭಕ್ತಿಕಾವ್ಯವನ್ನು ರಚಿಸುವಾಗ ಐತಿಹಾಸಿಕತೆಗೆ ಹಾಗೂ

ದರ್ಶನಕ್ಕೆ ಅಷ್ಟೇನು ಪ್ರಾಮುಖ್ಯತೆ ಕೊಟ್ಟಿಲ್ಲವಾದರೂ ಅಲ್ಪಸ್ವಲ್ಪ ಇದ್ದ ದಾರ್ಶನಿಕ ನಿಲುವನ್ನು ಕಂಡುಕೊಳ್ಳಲಾಗಿದೆ. ಈತ ತನ್ನ ಸಮಾಧಿಯನ್ನು ಹಂಪೆಯಲ್ಲೆ ಹೊಂದಿದಂತೆ ತೋರುವದು.

ಈ ರಗಳೆಯ ಬಗ್ಗೆ ಡಾ. ಎಂ.ಎಸ್.ಸುಂಕಾಪೂರವರು ಸಂಪಾದಿಸಿದ "ನೂತರ ಪುರಾತನರ ರಗಳೆಗಳು" ಎಂಬ ಗ್ರಂಥವನ್ನು ಅವಲೋಕಿಸಿದೆ. ಶೈವ ಸಂಪ್ರದಾಯದ ವಿಶಿಷ್ಟತೆಗಳನ್ನು ಅರಿತುಕೊಂಡು ವಿರೂಪಾಕ್ಷನಲ್ಲಿ ಅನನ್ಯ ಭಕ್ತಿಯಿಂದ ಸಾಗಿ ತನ್ನ ಜೀವನವನ್ನೇ ಕಾವ್ಯ ರಚಿಸುವ ಉದ್ದೇಶಕ್ಕಾಗಿ ಮೀಸಲಾಗಿಸಿಕೊಂಡಿದ್ದ ಎನ್ನಬಹುದು. ಸಮಚಿತ್ತದಿಂದ ಕಾವ್ಯ ರಚಿಸುವದು ಆತನ ದಿನನಿತ್ಯದ ಶಿವಾರ್ಚನೆಯೇ ಆಗಿರಬೇಕು. ಶಿವಾರ್ಚಕರಿಗೆ ಆತನ ಬಗ್ಗೆ ಅನನ್ಯ ಗೌರವ "ಶಿವಶರಣರೆಲ್ಲಾ ಕುರಿತು ಚರಿತ್ರೆಯನ್ನು ಕಾವ್ಯ ರಚಿಸುವ ಮಹತ್ವಾಕಾಂಕ್ಷೆ ಹರಿಹರನದಾಗಿತ್ತು ಎಂದು ಸಿದ್ಧನಂಜೇಶ ಉಲ್ಲೇಖಿಸುತ್ತಾನೆ."[೬] ಆತನ ಉದ್ದೇಶ ಪೂರ್ತಿ ಈಡೇರಿಲ್ಲವಾದರೂ ೯೦ ಶಿವಶರಣರ ಚರಿತ್ರೆಗಳನ್ನು ರಚಿಸಿದ್ದಾನೆ. ಹರಿಹರ ಕೇವಲ ಸ್ಥಾವರಲಿಂಗ ಉಪಾಸಕ ಎಂಬುದಕ್ಕೆ ಹಂಪೆಯ ವಿರೂಪಾಕ್ಷನೇ ಸಾಕ್ಷಿ. ಈತನಿಗೆ ಎಲ್ಲ ಪುರಾತನ ಚರಿತೆಗಳನ್ನು ಬರೆಯಲು ಸಾಧ್ಯವಾಗದಂತೆ, ಎಲ್ಲ ಶಿವಶರಣರ ಚರಿತೆಗಳನ್ನು ಬರೆಯಲಾಗಲಿಲ್ಲ. ರಗಳೆಯಿಂದ ಬಸವ ಪೂರ್ವಯುಗ ಮತ್ತು ನಂತರ ಯುಗದ ವೀರಶೈವ ಪರಿಯನ್ನು ತಿಳಿದುಕೊಳ್ಳಬಹುದು. ಶರಣರ ಅನುಭಾವ ಪೀಠದ ಅಧ್ಯಕ್ಷ ಪ್ರಭುವಿನ ಚರಿತೆಯನ್ನು ಬರೆದದ್ದು ಕೇವಲ ಒಂದು ಸ್ಥಲ ಪರಿಮಿತವಾದ ರೀತಿಯಲ್ಲಿ ವಿಶೇಷವಾಗಿ ಸಮಗ್ರ ಅಲ್ಲಮ ಚರಿತೆಯನ್ನು ಏಕೆ ಬರೆಯಲಿಲ್ಲ? ಇದಕ್ಕೆ ಆತನ ಬಗ್ಗೆ ದೊರೆತ ಸಂಗತಿಗಳು ಪರಿಮಿತವಾಗಿರಬಹುದು. ಪೂರ್ತಿಯಾಗಿ ಸಿಗದೇ ಹೋದದ್ದರಿಂದಲೇ ಅವರಿವರಿಂದ ತಿಳಿದ ಸ್ವಲ್ಪ ಭಾಗವನ್ನೇ ಪ್ರಭು ರಗಳೆಯೆಂದು ಬರೆದಿರಬಹುದಾಗಿದೆ. ಇದರಿಂದ ಐತಿಹ್ಯವನ್ನು ನಿರೀಕ್ಷಿಸುವಂತಿಲ್ಲ. 'ಬಸವರಾಜ ದೇವರ ರಗಳೆ' ಮತ್ತು 'ನಂಬಿಯಣ್ಣನ ರಗಳೆ' ಹೊಂದಿದ ಗಾತ್ರದಷ್ಟು ಪ್ರಭುರಗಳೆ ಹೊಂದಿಲ್ಲ. ಇಲ್ಲಿ ಪ್ರಭುವಿನ ಘನತೆ ಈತನಿಗೆ ಗೊತ್ತಾಗಿರಬಹುದು. ಆದರೆ ಸಮಗ್ರತೆ ಮಾತ್ರ ಗೊತ್ತಿಲ್ಲ. ಅಲ್ಲಮ ತತ್ವಜ್ಞಾನಿ, ಈತ ಭಕ್ತಿಕವಿ. ಹೀಗಾಗಿ ಆತನ ಪರಿ ತಿಳಿಯದೇ ಹೋಗಿರಬೇಕು. ಮೊದಲನೆಯ ಜೀವನ ಬಳ್ಳಿಗಾಂವಿಯಿಂದ ಹಿಡಿದು ಅನುಮಿಷ ದರ್ಶನದವರೆಗೆ, ಇನ್ನೊಂದು ಅನುಮಿಷನಿಂದ ಲಿಂಗದೀಕ್ಷೆಯಾದ ನಂತರದ ವಿರಕ್ತಜೀವನ ಹಿಡಿದುಕೊಂಡು ಕೈಲಾಸದ ಘನ ಪದವಿಯ ಪಡೆಯುವವರೆಗೆ. ಮೊದಲನೆ ಭಾಗದಲ್ಲಿ ಅಲ್ಲಮ ಕಾಮಲತೆಯ ಪ್ರಸ್ತಾಪವೇನೂ ವಿಸ್ತಾರವಾಗಿ ಬಂದಂತೆ. ಉತ್ತರ ಭಾಗವು ಅಷ್ಟು ವಿಸ್ತೃತವಾಗಿ ಬರದೇ ಸಂಕ್ಷಿಪ್ತವಾಗಿದೆ. ಅನುಭವಮಂಟಪ, ಶೂನ್ಯಸಿಂಹಾಸನ ಪರಿಗಳು ಬಂದಿಲ್ಲ. ಕೇವಲ ರಸವತ್ತಾದ ಕಾವ್ಯಗಳನ್ನು ನಿರೂಪಿಸಬಲ್ಲ ಎಂಬುದು ಸಾಬೀತು ಪಡಿಸಿದಂತಿದೆ. ಈ ರಗಳೆಯನ್ನು ಓದುವಾಗ ಅತಿ ಅವರಸರದಿಂದ ಸಾಗಿಕೊಂಡ ಹೋದ ಅನುಭವವಾಗುವದು. ಅವರಸರದಲ್ಲಿ ಪ್ರಭು ರಗಳೆಯನ್ನು ಬರೆದನೇ ಅದಕ್ಕಾಗಿ ಇಲ್ಲಿ ಚಾರಿತ್ರ್ಯ ಗೌಣವಾಗಿದೆ ಏನೋ? ಎಂಬ ಪ್ರಶ್ನೆಗಳು ಉದ್ಭಯಿಸುತ್ತವೆ. ಗೊಗ್ಗಯ್ಯ, ಗೋರಕನಾಥ, ಮುಕ್ತಾಯಿಯ ಪ್ರಸಂಗಗಳು ಬಂದಿಲ್ಲ. ಹೀಗೆಲ್ಲಾ ಈ ಕೊರತೆಯನ್ನು ಅನುಭವಿಸಿದೆ. ಮೊದಲ ಭಾಗದಲ್ಲಿ ಅಲ್ಲಮ - ಕಾಮಲತೆಯರ ಸರಸ ಸಲ್ಲಾಪ ಪ್ರಸ್ತಾಪವನ್ನು ಮಾಡಿ, ಇನ್ನೊಂದೆಡೆ ಅಲ್ಲಮ ಕಾಮಲತೆಯೊಡನಿಲ್ಲ[೮೮] ಎಂದು ಹೇಳುವುದರ ಮೂಲಕ ಸ್ವ ವಿರೋಧತೆಗೆ ಒಳಗಾಗಿದ್ದಾನೆ. ಇವನಿಂದ ಪ್ರಭು ಅನ್ನುವ ಒಬ್ಬ ಚಾರಿತ್ರಿಕ ವ್ಯಕ್ತಿ ಇದ್ದನೆಂದು ತಿಳಿದುಕೊಳ್ಳಲಿಕ್ಕೆ ಈ ರಗಳೆ ಆಧಾರವಾಗಬಹುದು. ಪ್ರಭುವಿನ ನೈಜ ಚಿತ್ರಣ ಮಾಡಿಸುವಲ್ಲಿ ಈತ ಸೋತಿದ್ದಾನೆ.

ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ[೮೯] ಕಾಮಲತೆಯ ಪ್ರಸಂಗವನ್ನು ಖಂಡಿಸಲಾಗಿದೆ. ಅವನ ವಚನಗಳೇ ಸಂದೇಹವನ್ನು ನಿವಾರಿಸಬಲ್ಲ ಸಾಕ್ಷಿಗಳಾಗಿವೆ. ಪ್ರಭುವಿನ ಬಗ್ಗೆ ಪ್ರಪ್ರಥಮವಾಗಿ ಹೇಳಿದ ಕವಿ ಹರಿಹರ. ಆತ ಉಳಿದ ಶರಣರ ಚರಿತ್ರೆಗಳನ್ನು ಕಟ್ಟಿರುವದರ ಸಹ ವದಂತಿಗಳ ಆಧಾರ ಮೇಲಿಂದ ಅನ್ನಲಾಗುತ್ತದೆ. ವಚನಗಳು ಈತನ ಕೈಗೆ ಸಿಗಲಿಲ್ಲವೆಂಬುದು ಯಕ್ಷ ಪಶ್ನೆ. ಈತ ನಂತರದಲ್ಲಿ ಪಾಲ್ಕುರಿಕೆ ಸೋಮನಾಥನಲ್ಲಿ ಕಾಮಲತೆಯ ಪಸ್ತಾಪವಿಲ್ಲ. ಈ ಪುರಾಣದಲ್ಲಿ ವಚನಗಳನ್ನು ಯಥಾವತ್ತಾಗಿ ಷಟ್ಪದಿಕರಿಸಿರುವದರಿಂದ ವಚನಗಳ ಪರಿಚಯವಿದ್ದಿತ್ತೆನ್ನಬಹುದು. ಹರಿಹರನ ರಗಳೆ ೪೪೬ ಸಾಲುಗಳನ್ನು ಹೊಂದಿದೆ. ಬಳ್ಳಿಗಾಂವಿಯಲ್ಲಿ ಪ್ರಭುವಿನ ಜನನ, 'ನೆವದಿಂದ ನಿರ್ಮಾಯಿನಿದ್ದಾನಾ ಬಸರೊಳಗೆ, ಅಂದರೆ ನಿರ್ಮಾಯಿ ಎಂದು ಹೇಳಿ ಪ್ರಭು ಮಾಯೆಗೆ ಒಳಗಾದನೆಂಬುದು ತದ್ ವಿರುದ್ಧ. ಮಾಯೆಯ ತಂದೆ ಯಾರು ಎಂಬುದನ್ನು ಹೇಳಿಲ್ಲ. ಬನವಾಸೆ ಅರಸನೆಂದು ಕೂಡಾ ತಿಳಿಯದೇ ಹೋಗುತ್ತದೆ. ಚಾರಿತ್ರಿಕವಲ್ಲದ ಭಕ್ತಿ ಮತ್ತು ವಿರಾಗವನ್ನು ಮಾತ್ರ ರಗಳೆಯಲ್ಲಿ ನೋಡಬಹುದು.

ಬಳ್ಳಿಗಾಂವಿ ಊರ ಹೊರಗಿರುವ ಕಣಶಿಲೆಯ ತೋಟದಲ್ಲಿ ಕುಳಿತು ಚಿಂತಿಸುತ್ತಾ ನೆಲವನ್ನು ಬರೆಯುತ್ತಿದ್ದಾಗ ಅಲ್ಲಿ ಥಳಥಳ ಹೊಳೆಯುವ ಕಳಸವೊಂದು ಕಾಣಿಸಿತು. ಶಿವಜ್ಞಾನೋದಯವಾಗಲಿಕ್ಕೆ ಕುರುಹು ತೋರಿದಂತಾಯಿತು. ಆಗ ಪ್ರಭು ಎದ್ದು ಬಂದು ರಾಜನಿಗೆ ಹೇಳಿದ 'ಪರಮಮುಕ್ತಾಂಗನೆಯ ಕಳಸ ಕುಚ ತೋರ್ಪಲತೆ'[೯೦] ಮುಕ್ತಿ ಹೇಗೆ ಪ್ರಾರಂಭವಾಗುತ್ತದೆ ಅನ್ನಲ್ಲಿಕ್ಕೆ ಈ ಉಪಮೆ. ಕಳಸ ಮುಕ್ತಿ ಕನ್ನಿಕೆಯ ಕುರುಹು, ಅದರೊಂದಿಗಿನ ಅದ್ವಯ ಭಾವಾನಂದವನ್ನು ಹೇಳಲಾಗಿದೆ. ಕಳಸವನ್ನು ಅಗೆಯಲು ಅರಸನಿಗೆ ಸುದ್ದಿಯನ್ನು ಮುಟ್ಟಿಸಿದಾಗ ರಾಜ ಆನೆಯನೇರಿಕೊಂಡುಬಂದ, ಆದರೆ ಈ ಗುಡಿಯ ಸಮೀಪ ಬರದೇ ಆನೆ ನಿಂತಿತು. ಬಸವನ ಆನೆಯನೇರಿಕೊಂಡು ಹೋದಿರೆ ನೀವು ಎನ್ನುವ ವಚನ ನೆನಪಿಗೆ ಬರುವದು. ಕಿಂಕರನಾಗಿ ಹೋದರೆ ಮಾತ್ರ ಶಂಕರನ ದರ್ಶನವಾದೀತು ಎನ್ನುವದಕ್ಕೆ ಇದು ಉದಾಹರಣೆಯಾಗಿದೆ. ಮದಗಳನ್ನು ದೂರೀಕರಿಸುವ ಅಗತ್ಯವಿದೆ. ವ್ಯಕ್ತಿತ್ವ ವಿಕಸನಕ್ಕೆ ಈ ದೂರೀಕರಣ ಅತ್ಯಾವಶ್ಯಕ. ಎಲ್ಲರೂ ಕೂಡಿ ಗುಡಿಯನ್ನು ಸ್ವಚ್ಛಮಾಡಿದಾಗ ಆ ಗುಡಿಯಲ್ಲಿ ಹೋಗುವರಾರು ಇಲ್ಲ. ಆಗ ಅಲ್ಲಮ ವಿರಕ್ತಿಯಿಂದ ಒಳ ನಡೆದ. ಒಳಗೆ ಅನುಮಿಷ ಲಿಂಗಾರ್ಚನೆಯಲ್ಲಿ ಮಗ್ನನಾಗಿದ್ದ. ಇದಕ್ಕೆ ಸಾಕ್ಷಿ ಎಂಬಂತೆ ದೀಪ್ತಿ ಉರಿಯುತ್ತಲಿದೆ. ಶಿವಲಿಂಗದೊಳನೆಟ್ಟ ದೃಷ್ಟಿಯಿದೆ. ಅಂದಾಗ ಅನುಮಿಷ ಲಿಂಗೈಕ್ಯನಾಗಿದ್ದರೆ ನೇತ್ರದೃಷ್ಟಿ ಇರುತ್ತಿರಲಿಲ್ಲ. ಸತ್ತ ಮೇಲೆ ಮೊದಲ ಕೊಳೆಯುವ ವಸ್ತು ಕಣ್ಣು, ಶರೀರ ಕೊಳೆತು ಎಲುಬುಗಳು ಮಾತ್ರ ಇರುವಾಗ ನೆಟ್ಟದೃಷ್ಟಿ ಎಲ್ಲಿಂದ ಬರುತ್ತದೆ. ಆದ್ದರಿಂದ ಅನುಮಿಷ ಸಮಾಧಿಯೋಗದಲ್ಲಿ ಜೀವಂತನಿದ್ದ ಎನ್ನಬಹುದು. ಈಗಲೂ ಕೂಡಾ ಸಿದ್ಧಿ ಸಮಾಧಿ ಯೋಗವನ್ನು ಮಾಡುವವರು ನೆಲದಲ್ಲಿ ಹೂಳಿಸಿಕೊಂಡು ಪೂರ್ತಿಯಾಗಿ ಮುಚ್ಚಿಸಿಕೊಳ್ಳುತ್ತಾರೆ. 'ಕಣ್ಣಲ್ಲಿಯೇ ಜೀವಮಂ ಪಿಡಿದಿರ್ದ ಮಾಳ್ಕೆಯಿಂ,'[೯೧] ಆತ ಜೀವಂತನಿದ್ದನೆಂಬುದಕ್ಕೆ ಹರಿಹರನ ಈ ನುಡಿಯೇ ಆಧಾರ. ಅನುಮಿಷನ ಮುಂದೆ ಪ್ರಭು ಪ್ರಾರ್ಥನೆಮಾಡಿ ಧರ್ಮಾಚರಣೆಯ ಮಾರ್ಗವನ್ನು ಕಂಡುಕೊಳ್ಳುವನು. ಅರ್ಜುನನಿಗೆ ವಿರಾಟದರ್ಶನವಾದಂತೆ. ಪ್ರತಿಯೊಬ್ಬ ಅನುಭಾವಿಯು ಅನುಭವಿಸುವ ಆ ಅತೀಮಾನಸ ಪ್ರಜ್ಞೆಯನ್ನು ಅನುಮಿಷನಿಂದ ಇಷ್ಟಲಿಂಗದ ಮುಖಾಂತರ ಪ್ರಭು ಕಂಡುಕೊಂಡ. ಅಲ್ಲಮ ಮುಂದಕ್ಕೆ ಕೈ ಒಡ್ಡಿದಾಗ ಅನುಮಿಷ ಇಷ್ಟಲಿಂಗವನ್ನು ದಯಪಾಲಿಸಿದ. ಇಲ್ಲಿ

ಉಪಾಸನೆಯ ಮೂರ್ತಿ ಇಷ್ಟಲಿಂಗ. ಅದರ ಮುಖಾಂತರ ಅನುಸಂಧಾನ ನಡೆದು ಚರಮಸ್ಥಿತಿಯನ್ನು ಹೊಂದುವದಾಗಿದೆ. 'ಕಾಮಲತೆ ಎತ್ತಣದು, ಈ ವಿರಕ್ತಿ ಭಾವದ ಅಲ್ಲಮನ ಲಿಂಗಾಂಗ ಸ್ಥಿತಿ ಎತ್ತಣದು ಎಂದು ಜನ ಅಂದುಕೊಂಡದ್ದನ್ನು ಹರಿಹರ ಚಿತ್ರಿಸಿದ್ದಾನೆ. ಈ ಅನುಮಿಷ ಅಲ್ಲಮರ ಸಂಬಂಧ, ಅನುಮಿಷನ ಪ್ರಾಣಲಿಂಗ ಅಲ್ಲಮನಲ್ಲಿ ಐಕ್ಯವಾಯಿತು. ಅಂದರೆ ಇದು ಶಿವಾದ್ವೈತ ದರ್ಶನಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಶಿವನ ಲೀಲೆಯಿಂದ ಗುರು ಶಿಷ್ಯನಾಗುವದು. ಶಿಷ್ಯನಾಗಿ ದೇವನನ್ನು ಪೂಜಿಸಿ ದೇವನೇ ಆಗುವದು. ಈ ಪ್ರಸಂಗದಲ್ಲಿ ಮಾತ್ರ ದರ್ಶನವನ್ನು ಕಾಣಬಹುದು. ನಡೆನುಡಿ ಎರಡು ಒಂದಾಗಿರುವ ಜ್ಞಾನ ಕ್ರಿಯೆಗಳು ಲಿಂಗವಂತರಿಗೆ ಸಮಾನರೂಪದಲ್ಲಿ ಅವಶ್ಯವಿದೆ. ಕರತಳ ಸಿಂಹಾಸನದಲ್ಲಿದ್ದ ಲಿಂಗಕ್ಕೆ ಅನ್ನುವಲ್ಲಿ ಅಲ್ಲಮ ಕರಸ್ಥಲದ ಲಿಂಗಪೂಜಕ ಎನ್ನುವದನ್ನು ಹರಿಹರ ಹೇಳುತ್ತಾನೆ. ಈಶ್ವರನ ಅಸ್ತಿತ್ವದ ಪ್ರತೀಕದಂತೆ ಅಲ್ಲಮನನ್ನು ಕಾಣಲಾಗಿದೆ. ಪರಮಾತ್ಮ ಜಗನ್ಮಯ, ಹಾಗೇ ಚಂದ್ರಕಾಂತ ಶಿಲೆ ತಂಪಿನೊಳ ಅಲ್ಲಮನು ಇಂದ್ರನೀಲಮಣಿ ತಳದೊಳ ಅಲ್ಲಮನು, ಪರಿಮಳ ಚಂದನದ ಮರಗಳಲ್ಲಿ, ಬೆಂಕಿಯಲ್ಲಿ, ಸಕಲ ಚರಾಚರಗಳಲ್ಲಿ, ಹೂವಿನ ಮಕರಂದಗಳಲ್ಲಿ ಗಿರಿ ಗೌಂದರದಲ್ಲಿ ಎತ್ತ ನೋಡಿದತ್ತ ಅಲ್ಲಮನ ಪ್ರತಿರೂಪವನ್ನು ಕಾಣುವ ಹರಿಹರ ಶಕ್ತಿ ವಿಶಿಷ್ಟ ಶಿವನ ಪರಿಚಯವನ್ನು ಪರ್ಯಾಯವಾಗಿ ಮಾಡಿಸುತ್ತಿದ್ದಾನೆ. ಸಿದ್ಧರಾಮನನ್ನು ಕರೆದುಕೊಂಡು ಕಲ್ಯಾಣಕ್ಕೆ ಬಂದ. ನಂತರ ಶ್ರೀಶೈಲದ ಪರ್ವತದತ್ತ ಸಾಗಿದ ಕಾರಣಿಕ ಪುರುಷ ಎಂಬ ರೀತಿಯಲ್ಲಿ ಚಿತ್ರಿಸಿದ್ದಾನೆ. ಕಲ್ಯಾಣ ಅನುಭವಮಂಟಪ ಸೌಗಂಧ ಈತನಿಗೆ ಎಳ್ಳಷ್ಟು ಗೊತ್ತಿರದಿದ್ದರಿಂದಲೇ ಬಸವಣ್ಣನನ್ನು ಕಂಡು ಪರ್ವಾತಾಭಿಮುಖವಾಗಿ ಪ್ರಭು ಸಾಗಿದ ಎಂಬ ನುಡಿಗಷ್ಟೇ ಕಲ್ಯಾಣ ಸಂಬಂಧವನ್ನು ಸೀಮಿತಗೊಳಿಸಿದ್ದಾನೆ. ಅಂದಮೇಲೆ ಈತನಿಗೆ ಕಲ್ಯಾಣದ ಪರಿಚಯವಿದ್ದಂತೆ ಕಾಣುವದಿಲ್ಲ. ಪರ್ವತದಲ್ಲಿ ಭೈರವನನ್ನು ಕಾಣುವ ಪರಿ. ಭೈರ ಈತನಿಗೆ ಎರಗಿದಾಗ ಆತನನ್ನು ಉದ್ಧರಿಸಿ, ಅಡವಿಯಲ್ಲಿ ಹಾಯ್ದು ಗಿರಿಕಂದರಗಳನ್ನು ದಾಟಿ ಲಿಂಗ ಸಮೇತವಾಗಿ ಕೈಲಾಸ ಶಿವನಲ್ಲಿಗೆ ಕೂಡಿಕೊಂಡ. ಅಂದರೆ ಈ ಭವ ಘೋರಾರಣ್ಯ ಎಂಬುದನ್ನು ಕವಿ ನೆನಪಿಸಿಕೊಟ್ಟಂತಾಗಿದೆ. ಎಲ್ಲಿಂದಲೋ ಬಂದನೋ ಕೊನೆಗೆ ಅಲ್ಲಿಯೇ ಸೇರಿದ ಜನ್ಮ ವಿಭಿನ್ನ ರೀತಿಯ ಶಿವಾದ್ವೈತ ದರ್ಶನವನ್ನು ಇಲ್ಲಿ ಗುರುತಿಸಬಹುದು.

## ಆ. ಪೌರಾಣಿಕ ಕೃತಿಗಳಲ್ಲಿ ನಿರೂಪಿತವಾದ ದಾರ್ಶನಿಕ ಮೀಮಾಂಸೆ

ಪುರಾಣದ ನೆಲಗಟ್ಟು ಭಕ್ತಿ, ಪವಾಡ ಅದರ ರೂಪಾಂತರ ಮಹಾಪುರುಷರ ಜೀವನ - ಸಾಧನೆ - ಸಿದ್ಧಿಗಳನ್ನು ಭಕ್ತಿಯಿಂದ ಸ್ಮರಿಸುವ ಹಾಗೂ ಅವರ ಕೃಪೆಯನ್ನು ಹಾರೈಸುವನು. ಭಕ್ತಸಮೂಹ ಈ ಪುರಾಣ ಕಾರಣರು ಹಾಗೂ ಪ್ರೇರಣರು.

**ಬಸವ ಪುರಾಣ**

ಭೀಮ ಕವಿಯ ಬಸವ ಪುರಾಣವು ವೀರಶೈವ ಪುರಾಣಗಳಲ್ಲಿ ಅತಿ ಮುಖ್ಯವಾದದ್ದು. ಅದರ ಕರ್ತೃ ಪಾಲ್ಕುರಿಕೆ ಸೋಮನಾಥ (ಕ್ರಿ.ಶ. ೧೨೦೦) ಅದರ ಕನ್ನಡ ರೂಪಾಂತರ ಭೀಮಕವಿ (ಕ್ರಿ.ಶ. ೧೪೦೦) ಪುರಾಣ ಪರಂಪರೆಯ ಕವಿರಾಜಮಾರ್ಗವನ್ನೇ ನಿರ್ಮಿಸಿದ ಶಿವಕವಿಗಳಿವರು.

ಆದಿಲಿಂಗ ರಹಸ್ಯ ಸಿದ್ಧಾ

ತಾದಿ ವೇದ ಪುರಾಣ ಸಮ್ಮತ

ವಾದ ಬಸವ ಪುರಾತನರ ಗೀತಾರ್ಥ ಮಾತ್ರ ಕದಿ

ಕೊದ ಮಣಿಗಣ ಸೂತ್ರದಂತಿರೆ

ಆದಿ ಗಣ ಚರಿತಂಗಗಳೊಳು ಸಂ

ಬೇಧಿಸಲು ಬಸವನ ಚಿಂತೆಯಂ ಬಣ್ಣಿಸುವೆನೆಸೆದು"

ಬಸವ ಪುರಾಣ ಆದಿಲಿಂಗ ರಹಸ್ಯ ಸಿದ್ಧಾಂತವನ್ನು ಬಿಂಬಿಸುವ ಕೃತಿ. ಆ ಸಿದ್ಧಾಂತವು ಕೂಡಾ ಬಸವ ಮುಖ್ಯರಾದ ಪುರಾತನರ ವೇದ ಪುರಾಣ ಸಮ್ಮತವಾದದ್ದಷ್ಟೇ ಅಲ್ಲ ಅವುಗಳಿಗೆ ಸಂವಾದಿಯು ಆದ ವಚನ ಹಾಗೂ ಅವುಗಳ 'ಅರ್ಥ'ವೇ ಮಾತ್ರ ಹಾಗೂ ಮಾತಿಕೆಯಾಗುಳ್ಳ ಸಿದ್ಧಾಂತ ಪ್ರಭುವಿನ ಬಗ್ಗೆ ಸಾನಂದ ವೃತ್ತಿ ಶಿವಯೋಗಿಯಾಗಿರುವ ಅಲ್ಲಮ "ದ್ವೈತ ಹಾಗೂ ಅದ್ವೈತ" ಯೋಗಗಳಿಗೆ ಅತೀತನಾಗಿದ್ದ ಸತ್ಕ್ರೀಯಾ ವಿಖ್ಯಾತಿಯಿಂದ ಮೂರು ಲೋಕಕ್ಕೆ ಪ್ರಸಿದ್ಧನಾದ.

ಪ್ರಭುವೆ ಜಂಗಮ ಲಿಂಗಭಕ್ತ

ಪ್ರಭುವೆ ಸಂಗಮದೇವ ವಿಶ್ವ

ಪ್ರಭುವೆ ಮತ್ತೆ ಪ್ರಮಥಾಗ್ರಗಣ್ಯ ಅಗಣ್ಯ ಪುಣ್ಯಾಂಗ

ವಿಭುವೆ ಭಿನ್ನಪವ ನವಧರಿಸು ನಿಮ

ರೆಗಬಿ ಮತಾರೋಗಣೆಯನೆದಿಸಿ

ಸಬರಿತಾರ್ಥವೆ ಮಾಡುವಂತಹ ಭಕ್ತನೆ ನಾನು"

ಎಂದು ತನ್ನ ಭಕ್ತಿಯ ಕಿಂಚಿತ್ತುವನ್ನು ಒಪ್ಪಿಕೊಂಡು ತನ್ನ ಭಕ್ತಿತತ್ವವನ್ನು ದೃಢಪಡಿಸುವ ಈ ಪರಿ, ಲಿಂಗಾಂಗ ಯೋಗಿಯಾದ ಅಲ್ಲಮಲಿಂಗದಲ್ಲಿ ಅದ್ವೈತಭಾವನೆ ಬೆಳೆಯುವದಾಗಿದೆ.

'ಉದದೊಳಪ್ಪಿನ ಪೊಟ್ಟಣವ ನಿರಿ

ಶಿದ ತೆರದಿ, ಕರ್ಪೂರವ ಸುರಿಯ

ಪ್ಪಿಧ ವೊಲು, ಅಂಬುದಿಯೊಳು ಘನೋಪುವೃಷ್ಠಿ ಕರೆದಂತೆ'"

ಅಂಗ - ಲಿಂಗ ಸಾಮರಸ್ಯವನ್ನು ಪಡೆದ, ಲಿಂಗೈಕ್ಯ ಸ್ಥಿತಿ, ಮುಕ್ತಸ್ಥಿತಿ ಬಸವ ಲಿಂಗವೇ ಆದ ಮಂತ್ರ ಶರೀರಿ, ಬಸವಲಿಂಗಾಯ ನಮ: ಮಂತ್ರವೇ ಆಯಿತು. ಭವದುದ್ಧಾರಕ ಚೈತ್ರನಂತೆ ಬಂದ ಅನುಭವಲೋಕದ ಪ್ರಭುದೇವ ಬಸವ ಭಕ್ತಿಯ ರತ್ನ ಪರೀಕ್ಷೆಯನ್ನು ಕೈಗೊಂಡ ಜೀವನ ಯಾನದ ಅಂತ್ಯದಲ್ಲಿ ಶ್ರೀಶೈಲದತ್ತ ಧಾವಿಸಿದ, ಕದಳಿಯಲ್ಲಿ ಲಿಂಗೈಕ್ಯನಾದ ಅಲ್ಲಮಪ್ರಭುವಿನ ಮಹಿಮೆ - ಪಾಲ್ಕುರಿಕೆ ಸೋಮನಾಥನಿಗೆ ಕರುಣೋಪ ಕರುಣವಾಗಿ ಬಂದುದೇ ಆಗಿದೆ. ಬಸವಪುರಾಣ ಈ ಶರಣರ ಕಾಲಕ್ಕೆ ಅತಿ ಸಮೀಪವಾದ ಕಾಲದಲ್ಲಿ ರಚಿತವಾದುದರಿಂದ ಹರಿಹರನಿಗಿಂತ ಹೆಚ್ಚಿನ ಐತಿಹಾಸಿಕವನ್ನು ಹೇಳುವಂತೆ ಕಂಡುಬರುತ್ತದೆ.

## ಶಿವತತ್ವ ಚಿಂತಾಮಣಿ

ಲಕ್ಕಣ ದಂಡೇಶನ (೧೪೦೦ - ೧೪೭೦) ೧೫ನೇ ಶತಮಾನದ ವೀರಶೈವ ಪುರಾಣಗಳಲ್ಲಿಯೇ ತತ್ವಾರ್ಥ ಮಾಹಿತಿಯನ್ನು ಭಿತ್ತರಿಸುವ ಅತ್ಯಂತ ಗಮನಾರ್ಹ ಕೃತಿ. ಇವನು ರಚಿಸಿದ ಪುರಾಣ 'ವೀರಶೈವ ಸಂಸ್ಕೃತಿ ಚಿಂತಾಮಣಿ' ಯಾಗಿರುವಂತೆ ಐತಿಹಾಸಿಕಾಂಶಗಳ ಸಮಗ್ರ ಶಿವಶರಣರ ಕಥಾ ಕೋಶವಾಗಿದೆ. ಕವಿಯೇ ಹೇಳುವಂತೆ ತನ್ನ ಕಾವ್ಯಕ್ಕೆ 'ಗುರು ವಚನದಮೃತ' ಶಿವತಾಂತ್ರಿಕ ಪೇಳ್ದ ಸಿದ್ಧರಿತವಾದುದರ ಜೊತೆಗೆ, 'ಪರಮಾನುಭಾವದನುಭವದ ಗೋಷ್ಠಿಯಾಮೃತಗಳ' ಸಮ್ಮಿಶ್ರ ಸಮುದ್ರ ಮಥನದಲ್ಲಿ ಮೂಡಿದ ಈ ಕೃತಿ, ಹೆಜ್ಜೆ ಹೆಜ್ಜೆಗೆ ಶಿವಾರ್ಚಕರ ಚರಣಾಂಬುಜಕೆ ಶರಣು ಮಾಡುತ್ತಲೇ ಹೊರಟ ಲಕ್ಕಣ ದಂಡೇಶ.

ಲಿಂಗ ನಿಜ ಸದ್ಭಾವದೊಳು ಮನಮ್ಮುಳಗಿ ಸ
ರ್ವಾಗ ದೊಳು ಚಲನೆಯಿಲ್ಲದ ನಟ್ಟ ದೃಷ್ಟಿ ಹೆರೆ
ಹಿಂಗದ ಚಲಿತನಾಗಿ ಕಾಷ್ಟೆ ಸಂಬಂಧಿಸಿದ ಶಿವೈಕ್ಯರ ಸಮಾಧಿಬರಿದು
ಜಂಗಮ ಸ್ಥಾವರಂಗಳೊಳು ತನ್ಮಯನಾಗಿ
ಕಂಗೆ ಗೋಚರಿಸಿ ಬಸವನ ಭಾವದೊಳು ಹಳೆದ
ಮಂಗಳ ಕಳಾನಿಧಿಯಲಿಪ ಮಹಾಪ್ರಭುವರನು ಚರಣಾಂಬುಜಕೆ ಶರಣು[೭೭]

ಶಂಭ ರಾರಿಯ ಶಿರವ ಮುರಿದು, ದೇಹದಿಂದ್ರಿಯಕ
ಡಂಭಕದ ಮಮತೆಯನ್ನು ಜರೆದು, ಲಿಂಗದನಿರಾ
ಲಂಭ ತನುವಾಗಿ ಬಸವನ ಮನೆಗೆ ಬರಲು ಮುಳಿದೆದ್ದು ಜಂಗಮವೆಲ್ಲವ!
ಉಂಬ ಬಾಯಿ ತಾನಾಗಿ ಉಂಡರೆಲ್ಲರಂ ತಣಿಕೀ
ತುಂಭುಂಡು ಫಲವು ಕದಳಿಗಳೆಲ್ಲಾ ಬನಿದ
ಬೆಂಬುದಂ ಮಾಡಿ ತೋರಿವ ಮಹಾ ಪ್ರಭುವರಾ .....[೭೭]

ಐತಿಹಾಸಿಕ ದೃಷ್ಟಿಯ ಲಕ್ಕಣ ದಂಡೇಶನಿಗೆ ಅಲ್ಲಮಪ್ರಭು ಜೀವಿತದ ಪೂರ್ಣ ದರ್ಶನ ಪಡೆಯುವುದಾಗಿಲ್ಲವೆಂದೇ ಹೇಳಬೇಕು. ಆದರೂ ಬಸವಪುರಾಣದಂತಾ ಬಹು ಜನಪ್ರಿಯ ಕಥಾಪುರಾಣದ ಕೀರ್ತಿ ಪ್ರಭಾವ ದಟ್ಟವಾಗಿರುವಾಗಲೇ, ವೀರಶೈವ ಸಂಸ್ಕೃತಿ ವಿಶ್ವಕೋಶದಂತಹ ಪುರಾಣವನ್ನು ರಚಿಸಿ ಹೊಸ ಸಂಪ್ರದಾಯವನ್ನೇ ಸೃಷ್ಟಿಸಿದ್ದಾನೆ ಲಕ್ಕಣದಂಡೇಶ.

## ಸಿಂಗಿರಾಜ ಪುರಾಣ

ಈ ಪುರಾಣ (ಕ್ರಿ.ಶ. ೧೫೦೦) ದಲ್ಲಿ ಪ್ರಭುದೇವರ ಮೂರುವಚನ ಚನ್ನಬಸವಣ್ಣನ ಐದು ವಚನ, ಅಕ್ಕನ ಎರಡು ಹಾಡುಗಳನ್ನು ಆಧಾರವಾಗಿ ಬಳಸಿರುವದು ಇಲ್ಲಿ ಒಂದು ವಿಶೇಷತೆ. 'ಕೊಂಡಡೂದಿನೊಬ್ಬ, ಕೊಟ್ಟಡಗಿದನೊಬ್ಬ' ಮುಂತಾದ ನುಡಿಗಳಲ್ಲಿ ಪ್ರಭು ತನ್ನ ಗುರು ಅನಮಿಷನಿಂದ ಲಿಂಗವನಗ್ರಹಸಿಕೊಂಡ ಸಂಗತಿಯೊಡನೆ ಬಸವಣ್ಣ ತನ್ನ ಪ್ರಾಣ ಲಿಂಗವನ್ನು ಕೊಟ್ಟ, 'ವೃಷಭಗಣ ಸ್ಮರಣೆಯು ಬಂದಿದೆ ಜೊತೆ ವಸುದಿಪ್ಪ ಕುಮಾರ - ನಂದಿನಾಥನ ಕೃಪೆಯಿಂದ ಅನಿಮಿಷನಾದ ಪೂರ್ವ ವೃತ್ತಾಂತವನ್ನು ಪ್ರಸ್ತಾಪಿಸಲಾಗಿದೆ.

ಜಪತಪ ಸಮಾಧಿಯೊಳಗೆ ಅನಿಮಿಷನಡಗಿದೊಡೆ ಲಿಂಗಾಂಗಿಬಾರನೆ
ಅನ್ಯ ಕಥಾನಾಗಮದೊಳ ನಿಮಿಷೇಂದ್ರಾತ್ಮ ಪಟ್ಟಾನ್ವಯದ ಕಾಂಡವ
ಏನವನ್ನಪೊಕ್ಕು ಓಡಾಡಿದಂ ⁶⁵

ಪೂರ್ವದಲ್ಲಿ ಅನುಮಿಷೇಂದ್ರನು ಯೋಗ ವಿಧಿಗಿಕ್ಕಿದಶ್ವ ವಸುದಿಪ್ಯನನ್ನು ಕಾಡಿನಲ್ಲಿ ದಿಕ್ಕೆಡಿಸಿದ ಸನ್ನಿವೇಶ ಅಲ್ಲಮನ ಗುರು ಅನಿಮಿಷಯನ ಪ್ರಸ್ತಾಪ ಇಲ್ಲಿ ಪ್ರಾಸ್ತಾವಿಕವಾಗಿ ಬಂದಿದೆ. ಈ ಲಿಂಗವನ್ನಗ್ರಯಿಸಿಕೊಳ್ಳುವ ಕ್ರಮ ಶಿವಾದ್ವೈತ ಸ್ಥಿತಿಯನ್ನು ಹೇಳುತ್ತದೆ.

ಮಗ್ಗಿ ಮಾಯಿದೇವ

ಈತನು (ಕ್ರಿ.ಶ. ೧೪೩೦) ತನ್ನ ಶತಕದಲ್ಲಿ ಅಲ್ಲಮ, ಮಹಾದೇವಿ, ಸಿದ್ಧರಾಮ, ಬಸವರನ್ನು ತನ್ನ ಪದ್ಯದಲ್ಲಿ ಸೇರಿಸಿದ್ದಾನೆ. ಆದರೆ ಇದರಲ್ಲಿ ನಿರೂಪಿತವಾದ ದಾರ್ಶನಿಕ ಸಿದ್ಧಾಂತವೆಂದರೆ ಶಿವಾದ್ವೈತದ ಸ್ವರೂಪವಾಗಿದೆ.

ಎಸೆವ ವೃಷಾಶಾದಿ ರಾಟ್ಟನ್ನ ವೃಷಾಂಕ ಗುಹೇಶ್ವರನಲ್ಲಮ ಪ್ರಪೂರ್ಣ
ಸುಲಭ ಯೋಗಿನಾಥಾ ಮಹಾದೇವಿ ಮಹಾಸತಿ ಸಿದ್ಧರಾಮ
ಮುಖ್ಯಾ ಸಕಲ ಲಿಂಗ ಸಂಗ ನಿಜ ನಿಷ್ಠ ಪುರಾತನರುನ್ನತ ಪ್ರಸಾ
ದ ಸುಖಮನ್ನಿತ್ತು ಕಾಯಿ ಪರಮ ಪ್ರಭುವೆ ಮಹಾದಾಯಿಪುರೀಶ್ವರಾ ⁶⁶

ಹೀಗೆ ಮಾಯಿದೇವ ನಿರ್ಮಾಯನನ್ನು ನೆನಸಿದ್ದಾನೆ.

ಗುರುಬಸವ

ಸಪ್ತಕಾವ್ಯದ ಗುರುಬಸವ (ಕ್ರಿ.ಶ. ೧೪೩೦) ತನ್ನ ಕಾವ್ಯಗಳಲ್ಲಿ ಮುಖ್ಯವಾಗಿ ಶಿವಯೋಗ ಅಂದಿನ ಅದ್ವೈತ ಶಿವಾದ್ವೈತ, ತತ್ವಸಿದ್ಧಾಂತ ಇವುಗಳಿಗೆಲ್ಲಾ ಮೇಲಾಗಿ ಶಿವಶರಣರ ಅನುಭಾವಯೋಗ ಸುವ್ಯಕ್ತವಾಗಿದೆ. ಪರಂಪರೆಯ ಶಾಸ್ತ್ರಗ್ರಂಥಗಳೊಡನೆ ಶಿವಶರಣರ ಶಿವಾನುಭವದ ಸ್ವಾನುಭವ ಸಾರವೇ ಈ ಕೃತಿಗಳಲ್ಲಿದೆ. ತನ್ನ ತನವನ್ನು ತಾನು ಕಳೆದುಕೊಂಡು ಸಾಧಕನ ಒಳದನಿಯೊಂದು ಈ ಎಲ್ಲ ಕೃತ್ಯಗಳ ಒಳ ಸೂತ್ರವಾಗಿದೆ. ಶಿವಶರಣರು ಕಂಡುಕೊಂಡು ವಚನಗಳ ಮೂಲಕ ಬಿತ್ತರಿಸಿದ 'ಶಕ್ತಿ ವಿಶಿಷ್ಟಾದ್ವೈತ' ಷಟಸ್ಥಲ ಸಿದ್ಧಾಂತ, ಶಿವಯೋಗ ಗುರುಬಸವನ ಕೆಲವು ಗ್ರಂಥಗಳ ಹೂರಣವಾಗಿದೆ. ಕೆಲವು ಗ್ರಂಥಗಳಿಗೆ ಅದ್ವೈತ ಹಾಗೂ ಅಷ್ಟಾಂಗ ಯೋಗದ ಪ್ರಸ್ತಾಪವಿದೆ.

ವೀರಶೈವಾಮೃತ ಮಹಾಪುರಾಣ

ಗುಬ್ಬಿಯ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣವೆಂಬ ವಿಶೇಷಣ ಪಡೆದಿರುವ ವೀರಶೈವ ಪುರಾಣ ಇದು ಒಂದೆ. ಇದು ಅನ್ವರ್ಥಕವೂ ಹೌದು, ಸಾರ್ಥಕವೂ ಹೌದು (ಕಾಲ ೧೫೩೦) ವೀರಶೈವ ಧರ್ಮ ತತ್ವಶಾಸ್ತ್ರ, ಯೋಗ, ಇತಿಹಾಸ, ಪುರಾಣ, ಆಚಾರ, ವ್ಯವಹಾರ, ಶೀಲ ಮುಂತಾದ ಸಕಲ ಹನ್ನೊಂದು ಸಂಗ ತಿಗಳು ಈ ಪುರಾಣದಲ್ಲಿ ಬಂದಿವೆ. ಅಂದಾಜು ಇದರಲ್ಲಿ ೭೦೦ ಷಟ್ಪದಿಗಳಿವೆ. ಇದನ್ನು ಬರೆಯಲು ಸುಮಾರು ೩೦ ವರ್ಷಗಳೇ ಕಳೆದಿರಬೇಕು ಅನ್ನಿಸುವದು.

## ೯. ವಚನಗಳಲ್ಲಿ ನಿರೂಪಿತವಾದ ದಾರ್ಶನಿಕ ಮೀಮಾಂಸೆ

ನಮ್ಮ ಸುತ್ತಮುತ್ತಲಿನ ಪ್ರಪಂಚ ಹೇಗಾಯಿತು? ಈ ಪ್ರಪಂಚವನ್ನು ಯಾರು ಸೃಷ್ಟಿಸಿದರು? ಈ ಪ್ರಪಂಚದ ಸ್ವರೂಪವೇನು? ಹಾಗೂ ಸೃಷ್ಟಿಯನ್ನು ಮಾಡಿದ ಕರ್ತನ ಸ್ವರೂಪವೇನು? ಜೀವ - ಜಗತ್ತು - ಈಶ್ವರ ಇವುಗಳ ಬಿಡಿ ಬಿಡಿ ಸ್ವರೂಪ ಮತ್ತು ಇವುಗಳ ಪರಸ್ಪರ ಸಂಬಂಧವೇನು ಅದರಂತೆ ಈ ಜೀವನದ ಚರಮ ಗುರಿ ಏನು? ಎಂಬುದೆಲ್ಲಾ ದರ್ಶನದ ವಿಷಯ. ಈ ದರ್ಶನದ ವಿಷಯಗಳನ್ನು ಪ್ರತಿಯೊಂದು ಮಾರ್ಗ ಒಳಗೊಂಡಿರಲೇಬೇಕಾಗುತ್ತದೆ. ಆದರೆ ಪ್ರತಿಯೊಬ್ಬ ದಾರ್ಶನಿಕ ಅಂದರೆ ತನ್ನ ಅಂತರ್ಮುಖದಿಂದ ಕಂಡುಕೊಂಡು ಇವುಗಳ ಸಂಬಂಧ ಆಯಾ ಧರ್ಮದ ದಾರ್ಶನಿಕತೆಗೆ ಒಳಗೊಂಡರೆ, ಅದರ ಅನುಭವ ದರ್ಶನಾನುಭವ ಅಥವಾ ಅನುಭಾವ ಅವುಗಳ ಬಗ್ಗೆ ಬರೆದವುಗಳಲ್ಲಿ ಅನುಭಾವ ಸಾಹಿತ್ಯವೆಂದು ಕರೆಯಬಹುದು. ಭಾರತೀಯರಲ್ಲಿ ತತ್ವಗಳು ಮತ್ತು ಧರ್ಮಗಳು ಒಂದಕ್ಕೊಂದು ಪೂರಕವಾಗಿವೆ..ಧರ್ಮಕ್ಕೆ ತತ್ವವು ಪುಷ್ಟಿಯನ್ನು ತಂದುಕೊಡುತ್ತದೆ. ತತ್ವದ ಆಧಾರ ನಿರತಧರ್ಮ ಬಹಳಷ್ಟು ಅರ್ಥಭರಿತವಾದದ್ದು.

ರಾಮಾನುಜಾಚಾರ್ಯ - ಜೀವಿಗಳಲ್ಲಿ ಪರಸ್ಪರ ಬೇಧ ಹೊರಗಿನ ಆವರಣ ಉಂಟಾಗಿದೆ ಆದರೆ ತತ್ವದಿಂದ ಜೀವರುಗಳೆಲ್ಲಾ ಸ್ವರೂಪದಲ್ಲಿ ಸಮ, ಜೀವಿಗಳಿಗೆ ಅದು ಪರಮಾತ್ಮನಿಗೆ ಕೆಲವು ವಿಷಯಗಳಲ್ಲಿ ವ್ಯತ್ಯಾಸ ಬಿಟ್ಟರೆ ಉಳಿದ ವಿಷಯಗಳಲ್ಲಿ ಅತ್ಯಂತ ಸಾಮ್ಯ. ಜೀವಾತ್ಮ ಈ ಕೆಲವು ವಿಷಯಗಳಲ್ಲಿ ಹೊರ 'ಪರಮಾತ್ಮ ಸಾಮ್ಯ' ಎಂಬ ಪುರುಷಾರ್ಥವನ್ನು ಪಡೆಯುವುದೇ ಮೋಕ್ಷ, ಇದು ಆ ನಾರಾಯಣನ ಅನುಗ್ರಹದಿಂದ ಲಭಿಸುತ್ತದೆ.

ಶಂಕರಾಚಾರ್ಯ - ಬ್ರಹ್ಮವೆಲ್ಲಾ ಜಗತ್ ಮಿಥ್ಯ - ಜೀವ ಮತ್ತು ಈಶ್ವರ ಬೇರೆ ಅಲ್ಲ. ಅಬೇಧದಲ್ಲಿ ತೋರಿಕೆ ಮಾಯೆಯ ಸಂಬಂಧವನ್ನು ಕಳಚಿದ ಜೀವ ಈಶ್ವರ ಅಥವಾ ಶಿವ ಇದು ಅದ್ವೈತ ಸ್ಥಿತಿ.

ಮದ್ವಾಚಾರ್ಯ - ಈ ಪ್ರಪಂಚ ಸತ್ಯವಾದದ್ದು. ಜೀವರುಗಳೇ ಬೇರೆ ದೇವರೆ ಬೇರೆ. ಜೀವನದ ಚರಮ ಗುರಿ ಮುಕ್ತಿ. ಆ ಮುಕ್ತಿಯಲ್ಲಿಯೂ ಜೀವರುಗಳು ಶಿವನಿಂದ ಬೇರೆ ಬೇರೆಯಾಗಿರತಕ್ಕವರು. ಆದರೆ ಶಿವನ ಸಮೀಪ ಇರುವುದು. ಆಯಾ ಪಾರ್ಶ್ವಗಳಿಂದ ನೋಡಿದಾಗ, ಜೀವ ದೇವ ಬೇರೆ ಬೇರೆ ಎಂಬ ದ್ವೈತ ಎಷ್ಟು ಸತ್ಯವೋ, ಅವೆರಡೂ ಬೇರೆ ಬೇರೆ ಅಲ್ಲ. ಅಬೇಧ ತೋರಿಕೆ ಅನ್ನುವ ಅದ್ವೈತವು ಮತ್ತು ಕೆಲವು ವಿಷಯಗಳಲ್ಲಿ ಹೊರತಾದ ಪರಮಾರ್ಥ ಸಾಮ್ಯವೆಂಬ ವಿಶಿಷ್ಟಾದ್ವೈತವೂ ಅಷ್ಟೇ ಸತ್ಯ. ಇವೆಲ್ಲವುಗಳನ್ನು ಒಟ್ಟಾರೆ ನೋಡಿ ಸರ್ವ ಶೃತಿ ಸಮನ್ವಯ ಸಿದ್ಧಾಂತವನ್ನು ವೀರಶೈವ ರೂಪಿಸಿದೆ. ಆದ್ದರಿಂದ ಇದಕ್ಕೆ ದ್ವೈತಾದ್ವೈತ ಮತ, ಶಿವಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ ಎಂದು ಕರೆಯಲಾಗುತ್ತದೆ. ತತ್ವಕ್ಕಿಂತ ಧಾರ್ಮಿಕಕ್ಕೆ, ನೈತಿಕ ಆಚರಣೆಗೆ ಹಾಗೂ ತತ್ವದ ಅನುಭವಕ್ಕೆ ಮಹತ್ವವನ್ನು ಕೊಟ್ಟರು. ಸೃಷ್ಟಿಕರ್ತನ ಸ್ವರೂಪ ಮತ್ತು ಜೀವ - ಶಿವರ ಸಂಬಂಧವಾಗಿ ಸ್ಪಷ್ಟರೀತಿಯಿಂದ ಹೇಳುತ್ತಾರೆ. ಸೃಷ್ಟಿಯೂ ಶರಣರಂತೆ ಸತ್ಯ ಆದರೆ ಮಿಥ್ಯೆಯಲ್ಲ. ಶಿವ ತನ್ನಲ್ಲಿರುವ ಅಂತ:ಶಕ್ತಿಯಿಂದ ಅಥವಾ ತನ್ನಲ್ಲಿ ಹುದುಗಿರುವ ಶಕ್ತಿಯ ಸಹಾಯದಿಂದ ಪ್ರಪಂಚವನ್ನು ನಿರ್ಮಿಸುವನು. ಶಕ್ತಿಯ ರೂಪವು ಬೆಂಕಿಯಲ್ಲಿ ಸುಡುವ ಶಕ್ತಿಯಂತೆ ನೀರಿನಲ್ಲಿ ಅಪ್ಯಾಯನಶಕ್ತಿ, ಭೂಮಿಯಲ್ಲಿ - ಧಾರಣಶಕ್ತಿ, ಗಾಳಿಯಲ್ಲಿ - ಸ್ಪಂದನಶಕ್ತಿ ಹಾಗೆ ಇವೆಲ್ಲ ಶಕ್ತಿಗಳ ಆದಿ ಅದು ಚಿಚ್ಛಕ್ತಿ ಆಗಿದೆ. ಈ ಶಕ್ತಿ ವಿಶಿಷ್ಟ ಶಿವನ ಕಲ್ಪನೆಯನ್ನು ಉರಿಲಿಂಗ ಪೆದ್ದಿಗಳ ವಚನದಲ್ಲಿ.

ಶಿವ ಜಗವಾಗಬಲ್ಲ! ಶಿವ ಜಗವಾಗದಿರಲು ಬಲ್ಲ!

ಶಿವ ರೂಪಾಗಬಲ್ಲ ಶಿವ ರೂಪಾಗದಿರಲೂ ಬಲ್ಲ,

ಶಿವ ಅಜಾಂಡ ಕೋಟಿಗಳ ಮಾಡಬಲ್ಲ, ಮಾಡದಿರಲೂ ಬಲ್ಲ,

ಶಿವ ಕೆಡಿಸಬಲ್ಲ, ಕೆಡಸದಿರಲೂ ಬಲ್ಲ

ಶಿವ ಜಂಗಮವಾಗಿ ಪೂಜಿಸಬಲ್ಲ

ಶಿವ ತಾನೇಲಿಂಗವಾಗಿ ಪೂಜೆ ಕೈಗೊಳ್ಳಲೂ ಬಲ್ಲ.[೧೦೦]

ಈಶ್ವರ ಕಲ್ಪನೆಯನ್ನು ಈ ರೀತಿಯಾಗಿ ವಚನಕಾರರು ಕಂಡಿದ್ದಾರೆ. ಪ್ರಭು ತನ್ನ ವಚನಗಳನ್ನು ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಮಾಯಾವಿಲಾಸ ವಿಡಂಬನ ಸ್ಥಲ, ಸಂಸಾರ ಹೇಯ ಸ್ಥಲ, ಗುರುಕರುಣ ಸ್ಥಲ, ಭಕ್ತಸ್ಥಲ, ಮಹೇಶಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗ ಸ್ಥಲ, ಶರಣಸ್ಥಲ, ಐಕ್ಯಸ್ಥಲ ಈ ರೀತಿ ಷಟಸ್ಥಲಾತ್ಮಕವಾಗಿ ಹೊಂದಿಸಿದ್ದಾರೆ. ಪ್ರಭುವಿನ ವಚನಗಳಲ್ಲಿ ನಾವು ವ್ಯಕ್ತಿತ್ವ ವಿಕಸನವಾಗಿ ಸಾಮಾಜಿಕವಾಗಿ ಆಧ್ಯಾತ್ಮಿಕ ಆರೋಹಣದ ದರ್ಶನವನ್ನು ನೋಡಲಾಗಿದೆ. ದರ್ಶನಪದ ಅನುಭಾವದ ಹಿನ್ನಲೆಯೇ ಎಂಬುದು ಸ್ಪಷ್ಟವಾಗಿದೆ. ಸುಮಾರು ಇಲ್ಲಿ ಪ್ರಭುವಿನ ನೂರಿಪ್ಪತ್ತು ವಚನಗಳನ್ನು ಈ ಮೂರು ರೀತಿಯಲ್ಲಿ ವಿಭಾಗಿಸಿ ನೋಡಲಾಗಿದೆ. ಆಧ್ಯಾತ್ಮಿಕದಲ್ಲಿ ಯೋಗ, ಪರಿಪೂರ್ಣ ಯೋಗ, ರಾಜಯೋಗ, ಶಿವಯೋಗ, ಷಟಸ್ಥಲಾತ್ಮಕದಿಂದ ಕೂಡಿದ ಇವುಗಳನ್ನು ಕಾಣಬಹುದು. ಈ ಯೋಗಗಳಲ್ಲಿ ಜಾಗ್ರ, ಸ್ವಪ್ನ, ಸುಷುಪ್ತಿ, ತೂರ್ಯ ತೂರ್ಯಾತೀತಗಳ ಕಲ್ಪನೆಯಿದೆ. ಈ ಮೂರು ವಿಭಾಗಗಳೆಂದರೆ ಮೂರು ತೆರದ ಜೀವನ ಮೌಲ್ಯಗಳೇ ಆಗಿವೆ. ವ್ಯಕ್ತಿತ್ವ ವಿಕಸನವೆಂದರೆ ಜೀವನ ಸರಿಯಾದ ಮಾರ್ಗದಲ್ಲಿ ಬದುಕಲು ಕಲಿಸುವ ಮೌಲ್ಯಗಳನ್ನು ಜೀವನ ಸರಿಯಾದ ಮಾರ್ಗದಲ್ಲಿ ಬದುಕಲು ಕಲಿಸುವ ಮೌಲ್ಯಗಳನ್ನು ಅಧ್ಯಯನಿಸುವುದಾಗಿದೆ. ಸಾಮಾಜಿಕತೆ - ಸಮಾಜದಲ್ಲಿ ಮನುಷ್ಯ ಸಮಾನವಾಗಿ ಬಾಳುವದು ಮೇಲು ಕೀಳುಗಳಲ್ಲಿ ಜಾತಿ ವಿಜಾತಿಗಳಿಲ್ಲ. ಇವುಗಳ ಕಥನ ಬರುವದು ಈ ಮೂರು ಮೌಲ್ಯಗಳ ವ್ಯವಸ್ಥಾಬದ್ಧ ಪ್ರಭುವಿನ ದಿಗ್ದದರ್ಶನವನ್ನು

ಅಲ್ಲಮಪ್ರಭು ಸಂಪ್ರದಾಯದ

ಸಲ್ಲಲೀತ ಸನ್ಮಾರ್ಗವನು ನಾ

ನೆಲ್ಲಲರಿವೊಂದದಲ್ಲಿ ಪೆಳುವೆನುಚಿತ ವಚನದಲಿ [೧೦೧]

ಈ ಪ್ರಭುವಿನ ಸಲ್ಲಲಿತ ಸನ್ಮಾರ್ಗ ವಚನಗಳ ಮುಖಾಂತರ ಹೇಳಲ್ಪಟ್ಟಿದೆ. ವ್ಯಕ್ತಿತ್ವ ಮತ್ತು ಸಮಾಜ ಒಂದಕ್ಕೊಂದು ಪೂರಕಗಳು. ವ್ಯಕ್ತಿತ್ವ ಸಮೂಹವೇ ಸಮಾಜ ಮನುಷ್ಯ ತನ್ನ ಉದ್ಧಾರವನ್ನು ಮಾಡಿಕೊಂಡು ಮೇಲ್ದರ್ಜೆಗೆ ಏರುವುದರ ಜೊತೆಗೆ ಸಮಾಜದ ಹೊಂದಾಣಿಕೆಯೊಂದಿಗೆ ಸಾಗಿ ಆದರ್ಶ ಸಮಾಜ ನಿರ್ಮಾಣ ಮಾಡುವುದೇ ವ್ಯವಹಾರಿಕ ಗುರಿಯಾದರೆ ಅಂತರ್ಮುಖವಾಗಿ ಪಾರಮಾರ್ಥಿಕವನ್ನು ಕಂಡುಕೊಳ್ಳಬೇಕಾದಲ್ಲಿ ಆ ಜೀವನ ಸಾರ್ಥಕವಾದಂತೆ. ಜೀವನದ ಉಸಿರಾಟದಂತೆ ಧರ್ಮ ಮೈಗೂಡಬೇಕೆಂಬುದು ಇಲ್ಲಿಯ ಸಾಕ್ಷಿಯ ರೂಪ. ಷಟಸ್ಥಲ ಮಾರ್ಗ ಆರೋಹಣದಲ್ಲಿ ಈ ಮೂರನ್ನು ಹೊಂದಿದೆ. ಭಕ್ತ ಮಹೇಶಸ್ಥಲಗಳು ವ್ಯಕ್ತಿತ್ವಕ್ಕೆ ಸಂಬಂಧಪಟ್ಟರೇ ಇಲ್ಲಿ ಭಕ್ತಿ ಮತ್ತು ನಿಷ್ಠೆ. ನೀತಿ ನಿಯಮಗಳು ಬರುವವು. ಪ್ರಸಾದಿ, ಪ್ರಾಣಲಿಂಗಿಗಳಲ್ಲಿ

ಸಾಮಾಜಿಕ ಕಳಕಳಿಯಿದೆ ಇಲ್ಲಿ ಕ್ರಿಯೆ ವಿಚಾರ, ಕಾಯಕದ ಅವಶ್ಯಕತೆ, ಅರ್ಪಣತತ್ವದ ಸಮಾನ ದರ್ಪಣವಿದೆ. ಇದರೊಂದಿಗೆ ಪ್ರಾಣಲಿಂಗಿಯಲ್ಲಿ ಸ್ವಲ್ಪ ಯೋಗದ ಭಾಗ ಬರುವದು. ಶರಣ ಮತ್ತು ಐಕ್ಯಸ್ಥಲಗಳಲ್ಲಿ ಆಧ್ಯಾತ್ಮಿಕ ಅವಶೇಷಗಳೇ ತುಂಬಿಕೊಂಡಿವೆ.




ಹೀಗೆ ಷಟಸ್ಥಲಾತ್ಮಕವಾಗಿದ್ದ ವಚನಗಳು ವೇದಾಗಮೋಪನಿಷತ್ತುಗಳಲ್ಲಿಯ ಜ್ಞಾನ ಭಾಗಗಳನ್ನು ತೆಗೆದುಕೊಂಡು ಪ್ರಾಯೋಗಿ + ಜೀವನದಲ್ಲಿ ಹೇಗೆ ಅಳವಡಿಸಿಕೊಳ್ಳಬೇಕೆಂಬುದಕ್ಕೆ ವಚನಕಾರರು ಲಕ್ಷಣ ವ್ಯಾಖ್ಯೆ ಕೊಟ್ಟಿರುವರು. ಈ ವಚನಕಾರರು ವೇದ - ಶಾಸ್ತ್ರ - ಆಗಮಗಳನ್ನು ಅಂಶಾ ಅಂಶೀಯವಾಗಿ ಸ್ವೀಕರಿಸಿದಂತೆ ಕರ್ಮಕಾಂಡದ ಬಗ್ಗೆ ಟೀಕೆಯನ್ನು ಕೂಡಾ ಮಾಡಿರುವರು. ಜೈನ ಬೌದ್ಧ ಶಿಖ್ಖರು ವೇದ ಮತವನ್ನು ತಿರಸ್ಕರಿಸಿದಂತೆ ವಚನಕಾರರು ತಿರಸ್ಕರಿಸಿದರೆನ್ನಲಿಕ್ಕೆ ಬರುವದಿಲ್ಲ. ಯಾಕೆಂದರೆ ಹಲವು ಹತ್ತು ತತ್ವಗಳನ್ನು ಇವುಗಳಿಂದಲೇ ಪಡೆದುಕೊಂಡಿದ್ದಾರೆ. ಈ ವಚನಕಾರರು ಹಿಂದೂಗಳೇ ಅಥವಾ ಅಲ್ಲವೇ ಎಂಬುದನ್ನು ಚಿಂತನೆಗೈದಾಗ, ಹಿಂದುಸ್ಥಾನದಲ್ಲಿರುವದರಿಂದ ಇವರು ಹಿಂದೂಗಳು ತತ್ವ ವಿವೇಚನೆಯಲ್ಲಿ ಸ್ವತಂತ್ರರು. ಒಂದು ಬಗೆಯ ಬುದ್ಧಿವಾದಿಗಳಾದರೂ ಅಲ್ಲಿಯೇ ನಿಲ್ಲದೇ ಅದಕ್ಕೆ ಮೀರಿದ ಅನುಭಾವವನ್ನು ಹೇಳುವರು. ಅಂದರೆ ಬುದ್ಧಿವಾದಿಗಳಲ್ಲದ, ಇಂದ್ರಿಯವಾದಿಗಳಲ್ಲದ ವಸ್ತು ಸತ್ಯಾತ್ಮಕವಲ್ಲದ ಇವೆಲ್ಲವುಗಳನ್ನೇ ಸಾಧನೆ ಮಾರ್ಗದಲ್ಲಿ ಕಂಡುಕೊಂಡು ಮುಂದೆ ಸಾಗಿದ ಅನುಭಾವಿಗಳಾಗಿದ್ದಾರೆ. ವೇದ ಕರ್ಮಕಾಂಡಕ್ಕೆ ಮುಂದೆ ಸಾಗಿದ ಅನುಭಾವಿಗಳಾಗಿದ್ದಾರೆ. ವೇದ ಕರ್ಮಕಾಂಡಕ್ಕೆ ಟೀಕೆ ಮಾಡಿದಂತೆ ಜ್ಞಾನಕಾಂಡಕ್ಕೆ ಪ್ರಶಂಸೆಯನ್ನು ಮಾಡಿದ್ದಾರೆ. ಅಷ್ಟೇ ಏಕೆ ತಮ್ಮಲ್ಲಿಯೇ ವ್ಯರ್ಥವಾಗಿರುವ ಮಡಿ - ಮೈಲಿಗೆ ಶೀಲದ ಬಗ್ಗೆ ವಚನಕಾರರು ಟೀಕಿಸಿರುವರು. ಒಳ್ಳೆಯ ಸಮಾಜ ನಿರ್ಮಾಣ ಮಾಡಲ್ಲಿಕ್ಕೆ ಈ ಟೀಕೆಗಳು ಸದುಪಯೋಗವಾಗಿದೆ. ಹಲವಾರು ವಚನಗಳಲ್ಲಿ ಉಪನಿಷತ್ತುಗಳ ವ್ಯಾಖ್ಯಾನಗಳುಂಟು. ವೇದಾಂತದ ಬ್ರಹ್ಮಸೂತ್ರಕ್ಕೆ ಆಚಾರತ್ರಯರು ತಾವು ಕಂಡುಕೊಂಡಂತೆ ಮೀಮಾಂಸೆಯನ್ನು ರೂಪಿಸಿದ ಹಾಗೆ ಇವರು ಕೂಡಾ ತಮ್ಮದೇ ಆದ ಷಟಸ್ಥಲ ಮೀಮಾಂಸೆಯನ್ನು ನಿರೂಪಿಸಿರುವರು. ಇವುಗಳಲ್ಲಿ ಪ್ರಮುಖ ದರ್ಶನವಾದಿ ಪ್ರಭು. ಈ ಪ್ರಭು ದರ್ಶನ ಮತವಲ್ಲ ಆದೊಂದು ಧರ್ಮ.

### ವ್ಯಕ್ತಿತ್ವ ಸಂಪದ

ಈ ಶರಣರ ವಿಚಾರಧಾರೆ ಅಂದಿನ ಬದುಕಿಗೆ ಮಾತ್ರವಲ್ಲದೇ ಎಂದೆಂದಿಗೂ, ಎಲ್ಲರಿಗೂ, ಯಾವ ಕಾಲದಲ್ಲಿಯೂ ಮಾರ್ಗದರ್ಶಕವಾಗುವಂತಹ ಶಕ್ತಿಯನ್ನು ಪಡೆದುಕೊಂಡಿವೆ. ಇಲ್ಲಿ ಚಿಂತನೆ ಅಂಧ ಶ್ರದ್ಧೆಯನ್ನು ಅವಲಂಬಿಸಿಲ್ಲ, ಹಿಂದಿನ ಧರ್ಮ ಗ್ರಂಥಗಳಿಂದ ಆಕರಗಳನ್ನು ತೆಗೆದುಕೊಂಡರೂ ಸಹಿತ ತಮ್ಮದೇ ಆದ ಕುಲುಮೆಯಲ್ಲಿ ಬದ್ಧತೆಯನ್ನು ಪಡೆದುಕೊಂಡಿವೆ. ಅರಿವು ಆಚರಣೆಗಳಿಂದ ಕೂಡಿದ

ಧರ್ಮಶಕ್ತಿ, ಸತ್ಯವಾದದ್ದನ್ನು ಹೇಳಿದಂತೆ, ಅಂಧ ಸಂಪ್ರದಾಯವನ್ನು ನಿಷ್ಠುರವಾಗಿ ಕಂಡಿಸಿದರೂ, ಸಮಾಜ ಧರ್ಮ, ವ್ಯಕ್ತಿತ್ವಕ್ಕೆ ಅಂಟಿದ ಕಳೆಯನ್ನು ಶುದ್ಧಗೊಳಿಸಿದರು. ಮನುಷ್ಯ ಸಮಾಜಜೀವಿ ತನ್ನ ಜೀವನದ ಪೂರ್ಣ ವಿಕಾಸಕ್ಕೆ ಸಮಾಜವನ್ನು ಅವಲಂಬಿಸಬೇಕಾಗುತ್ತದೆ. ಸಮಾಜದ ಒಂದು ಅಂಗ ವ್ಯಕ್ತಿ, ವ್ಯಕ್ತಿಗಳು ದೊಡ್ಡವರಾದಾಗ ಮಾತ್ರ ಸಮಾಜ ದೊಡ್ಡದಾಗುವದು. ಪ್ರತಿ ವ್ಯಕ್ತಿ ಸಮಾಜದ ಹಿತವನ್ನು ತನ್ನ ವಿಕಾಸದೊಂದಿಗೆ ಮೈಗೂಡಿಸಿಕೊಳ್ಳಬೇಕಾಗುವದು. ತನ್ನ ವಿಕಾಸ ಅದು ತನ್ನ ಕರ್ತವ್ಯ ಅದನ್ನು ಸಾಗಿಸಿದಾಗಲೇ ಮನುಷ್ಯತ್ವಕ್ಕೆ ಸಾರ್ಥಕತೆ ಉಂಟು. ವ್ಯಕ್ತಿ ಕೇವಲ ಐಹಿಕ ಜೀವನದಿಂದ ತೃಪ್ತನಾಗದೇ ಅವುಗಳಿಗೆ ಮೀರಿದ ಆಂತರಿಕ ಸುಖಕ್ಕಾಗಿ ಹಂಬಲಿಸಬೇಕಾಗುತ್ತದೆ. ಆಂತರಿಕ ಸುಖದ ಅನುಭವವೇ ಆತ್ಮಸುಖ, ಆತ್ಮಸುಖ ಆಧ್ಯಾತ್ಮಿಕಕ್ಕೆ ಸಂಬಂಧಪಟ್ಟರೂ ವ್ಯಕ್ತಿತ್ವವನ್ನು ಒಳಗೊಂಡಿದೆ. ನೈತಿಕ ಆಚರಣೆ ಆಡಂಬರದ ವಿಡಂಬನೆ, ಆಶೆ ಸಂಸಾರ ವ್ಯಾಮೋಹ ಮತ್ತೊಬ್ಬರಿಗೆ ಗಾಸೀ ಮಾಡುವದು ಮಾಡದಿರುವದು ಮನಸ್ಸಿನ ರೀತಿ, ಇಂದ್ರಿಯ ನಿಗ್ರಹ, ನಂಬಿಕೆ, ದು:ಖ, ಚಿಂತೆ, ಸತ್ಯ, ಅಸತ್ಯ, ಶ್ರೀಮಂತಿಕೆ, ಮೃದುವಚನ, ಆಚಾರ, ಕೋಪ, ಅರಿಷಡ್ವರ್ಗ ಚಲ, ಅಂತರಂಗಶುದ್ಧಿ, ಅಹಂಭಾವ ವಿಕಸನ, ದಾಸೋಹಂಭಾವ ಮುಂತಾದವುಗಳು ವ್ಯಕ್ತಿತ್ವ ವಿಕಸನಕ್ಕೆ ಸಂಬಂಧಪಟ್ಟವುಗಳಾಗಿವೆ. ನೈತಿಕ ಆಚರಣೆಗಳನ್ನು ಎರಡು ಭಾಗಗಳಾಗಿ ನೋಡಬಹುದು. ಸಮಾಜದೊಂದಿಗಿನ ಮಾರ್ಗ, ವೈಯಕ್ತಿಕ ಮಾರ್ಗ ವ್ಯಕ್ತಿತ್ವದ ಜೀವನ ಸಮಾಜದೊಂದಿಗೆ ಸಮ್ಮಿಳಿತಗೊಂಡಾಗ ಅದು ಪೂರ್ಣಜೀವನವಾಗುವದು. ಅಂತಹ ತುಂಬು ಜೀವನಕ್ಕೆ ಶರಣರು ಮಹತ್ವವನ್ನು ಕೊಟ್ಟರು. ವ್ಯಕ್ತಿ ತನ್ನ ವೈಯಕ್ತಿಕ ಜೀವನವನ್ನು ವಿಕಸನಗೊಳಿಸದ ಹೊರತು ಸಮಾಜವನ್ನು ಕಟ್ಟಲು ಆಗುವದಿಲ್ಲ. ಆದ್ದರಿಂದಲೇ ವ್ಯಕ್ತಿಯ ಉದ್ಧಾರಕ್ಕೆ ಪ್ರಾಶಸ್ತ್ಯ, ವೈಯಕ್ತಿಕ ನಡವಳಿಕೆಗೆ ಸದಾಚಾರ ಸನ್ಮಾರ್ಗಗಳಿಗೆ ಇಲ್ಲಿ ಹೆಚ್ಚಿನ ಪ್ರಾಮುಖ್ಯತೆಯಿದೆ. ಸರಳ ಜೀವನಕ್ಕೆ ಆಡಂಬರದ ವಿರುದ್ಧ ಆಂದೋಲನವಿದೆ.

ಕಳ್ಳಗಂಜಿ ಕಾಡು ಹೊಕ್ಕಡೆ ಹುಲಿತಿಂಬುದು ಮಾಂಬುದೇ?

ಹುಲಿಗಂಜಿ ಹುತ್ತ ಹೊಕ್ಕಡೆ ಸರ್ಪ ತಿಂಬುದ ಮಾಂಬುದೇ?

.................

ಮೃತ್ಯುವಿನ ಬಾಯ ತುತ್ತಾದ ವೇಷಡಂಭಕಾ ನೀನೆಂಬೆ.[೧೦೨]

ಸರಿಯಾದ ಬದುಕಿನಲ್ಲಿ ಸಾಗಬೇಕಾದಾಗ ಆರಿಗೂ ಅಂಜದ ಅಳುಕದ ಬದುಕಾಗಿರಬೇಕು. ಲೋಕನಿಮಿತ್ಯ ಆಚರಣೆಗಳನ್ನು ಕೈಗೊಳ್ಳಬಾರದು ಹಾಗೆಯೇ ಆಶೆಯ ಪರಿ, ಆಶೆ ಎಂಬುದು ಇರಲಿ ದುರಾಶೆ ಬೇಡ.

ಹೊನ್ನ ಮಾಯೆ ಎಂಬರು, ಹೆಣ್ಣು ಮಾಯೆಯೆಂಬರು

.......................

ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ.[೧೦೩]

ಅಹಂಕಾರ ಎಂಬುದಕ್ಕೆ -

ನಾನೆಂಬ ಅಹಂಕಾರ ತಲೆದೋರಿದಲ್ಲಿ

.......................

ನಾ ಬಲ್ಲಿದರೆಂಬ ಅರುಹಿದರೆಲ್ಲರೂ

........... ತಾಮಸಕ್ಕೊಳಗಾಗಿ ....... ಕಾಣಾ ಗುಹೇಶ್ವರಾ [೧೦೪]

ಸತ್ಯವೆಂಬುದಕ್ಕೆ -

ಸತ್ಯವಿಲ್ಲದವರೊಡನೆ ಸಹಸ್ರನಿಕೊಮ್ಮ ನುಡಿಯಲಾಗದು

.....................

ನಿಮ್ಮ ಶರಣರಲ್ಲದವರೊಡನೆ ಬಾಯ್ದೆರೆಯಲಾಗದು [೧೦೫]

ಒಳಗೆ ನೋಡಿಹನೆಂದರೆ ಒಳಗೆ ನೋಡಲಿಲ್ಲ ......

................... ಕೊಲ್ಲುವವರ ಮನೆಯಲ್ಲಿ ಸತ್ತರೆ ಏನು ಅಳುವಿರೋ ಗುಹೇಶ್ವರಾ[೧೦೬]

ಸಮಾಜದ ಜೊತೆ ಯಾವ ರೀತಿ ಹೊಂದಾಣಿಕೆ ಇರಬೇಕೆಂಬುದಕ್ಕೆ -

ಲೋಕ ಒಂದೆನೆಂದಡೆ ತಾನೊಂದು ನೆನಬೇಡ .........

ಚೈತ್ರಕ್ಕೆ ಬೆಂಗುಂಡ ನಿಕ್ಕಿದಂತಿರಬೇಕು ಹಿರಿಯರು ಗುಹೇಶ್ವರಾ [೧೦೭]

ಪದ್ಯದಾಸೆಯ ಹಿರಿಯರು ಕೆಲವರು ......

.............. ವೇಷ ನಿರ್ಬಯವಾಗಿ ಆಶೆ ರೋಷವ ಬಿಟ್ಟು

ದಾಸೋಹಿಯಾಗಿರ್ದಡೆ ಗುಹೇಶ್ವರ ಲಿಂಗವು ತಾನೆ. [೧೦೮]

ಅಂದರೆ ಆಸೆ - ರೋಷಗಳನ್ನು ದೂರೀಕರಿಸಲು ಲಿಂಗಭಕ್ತಿ ಅವಶ್ಯಕತೆಯಿದೆ. ಹಮ್ಮು - ಬಿಮ್ಮು ಅಳಿದ ನಂತರವೇ ಸಂಯಮ (Nutial) ಜೀವನ ಪ್ರಾಪ್ತಿಯಾಗುವದು. ಆಗ ಲಿಂಗಭಕ್ತನೆನಿಸಿಕೊಳ್ಳುವನು. ಇಲ್ಲಿ ದಾಸೋಹಂಭಾವ ಕೂಡಾ ಅವಶ್ಯ. ಇತ್ಯ ವ್ಯಸನಗಳನ್ನು ದೂರೀಕರಿಸಿಕೊಳ್ಳಬೇಕಾದರೆ ಕೈಯಲ್ಲಿಯ ಬೆಲ್ಲದ ಪುತ್ಥಳೀಯ (ಲಿಂಗ) ಉಪಯೋಗವಿದೆ.

ಆಚಾರವನರಿಯದೇ ವಿಭವನಳಿಯದೇ

ಕೋಪವಡಗದೇ ತಾಪಮುರಿಯದೇ

............... ನಾನು ಮರುಗುವೇ ಕಾಣಾ ಗುಹೇಶ್ವರಾ.[೧೦೯]

ಪಂಚೇಂದ್ರಿಯ ಸಪ್ತ ಧಾತುವನು

......................

ಇವೆಲ್ಲ ಕೊಂದ ಪಾಪ ನಿಮ್ಮ ನಿಮ್ಮ ತಾಕದು ಗುಹೇಶ್ವರಾ.[೧೧೦]

ಆಚಾರವಂತನೆನಬೇಕಾದರೆ ಕೋಪ ತಾಪಗಳು ಇರಬಾರದೆಂಬುದು ಇಲ್ಲಿಯ ಪ್ರತಿಮಾರೂಪ. ಅದರಂತೆ ಪಂಚೇಂದ್ರಿಗಳ ವಿಷಯ ವಾಸನೆಗಳನ್ನು ಕೊಲಬಾರದು ಎಂಬ ನುಡಿ ಸಿಕ್ಕ ಸಿಕ್ಕ ಹಾಗೆ ವಿಷಯ ವಾಸನೆಗಳಿಗೆ ಎಳಿಸದೇ ನಿರ್ದಿಷ್ಟ ವಿಷಯ ವಾಸನೆಗಳಿರಲಿ ಎಂಬ ಭಾವವಿದೆ. ಸಮರ್ಪಿತ ಭಾವದ ವಿಷಯ ಸ್ವೀಕೃತ ಇಲ್ಲಿ ಮಾನ್ಯ.

ಸತ್ಯವ ನುಡಿಯದ ಸದಾಚಾರದಲ್ಲಿ ನಡೆಯದ

......................

ಗುಹೇಶ್ವರ ಲಿಂಗದಲ್ಲಿ ನಗುತ್ತಿದ್ದಾನೆ ಕಾಣಾ

ಚನ್ನಬಸವಣ್ಣ[೧೧೧]

ಮೃಡನೇ ನಿಮ್ಮ ಪುರಾತನರ ಕಾಣುತ್ತಾ ......

........... ಬಡಮನದ ಜಡಿದು ನುಡಿಸಯ್ಯ ಗುಹೇಶ್ವರಾ.[೧೧೨]

ಸುಶ್ಶೀಲಗಳೆಲ್ಲವೂ ಆಚಾರಕ್ಕೆ ಸಂಬಂಧಪಟ್ಟವುಗಳಾಗಿವೆ. ಕ್ರಮಬದ್ಧ ಜೀವನಕ್ಕೆ ಆಚಾರ ಒಂದು ಸಂವಿಧಾನ. ಆದ್ದರಿಂದ ಆಚಾರ ಸ್ವರ್ಗ.

ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ ........

......... ದಂಪತಿ ಏಕವಾಗಿ ನಿಂದಲ್ಲಿ ಗುಹೇಶ್ವರ ಲಿಂಗಕ್ಕೆ ಅರ್ಪಿತವಾಗಿತ್ತು. [೧೧೩]

ಅಂದರೆ ಸಂಗದಿಂದ ಸದ್ಗತಿ ಸದಾಚಾರ ಉಂಟೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಅನುಭಾವಿಗಳ ಸಂಗದ ಮಥನದಿಂದ ಹೊರಹೊಮ್ಮಿದ ಈ ವಚನಗಳು ಬದುಕನ್ನು ಸರಿಯಾದ ದಿಕ್ಕಿನತ್ತ ಒಯ್ಯುತ್ತವೆ.

ದ್ಯಾನ ಆಧ್ಯಾತ್ಮಿಕರಲ್ಲಿ ಕಂಡೆನೆಂಬುದು

.................

ಭಾವದಿಂದ ಪ್ರಾಮಾಣಿಸುವುದೇ ಏಕರೂಪ ಗುಹೇಶ್ವರಾ.[೧೧೪]

ಸರ್ವ ಸಂಸಾರಿಯೊಡನಾಡಿ ಕಟ್ಟು ಒಡೆಯಿತ್ತು

.......................

ಕಾಯದ ಸಂಗದ ಜೀವವುಳ್ಳವನಕ್ಕರ ಎಂದೂ ಭವಹಿಂಗದು ಗುಹೇಶ್ವರಾ.[೧೧೫]

ಆಚಾರವನರಿಯದೇ, ವಿಭವನಳಿಯದೇ, ಕೋಪವಡಗದೇ ತಾಪ ಮುರಿಯದೆ

..................... ನಾ ಮರಗುವೇ ಕಾಣಾ ಗುಹೇಶ್ವರಾ[೧೧೬]

ಹುಸಿವುಳ್ಳವನಕ್ಕರ ವ್ಯಾಪಾರ ಬಿಡದು ...........

ಮನಕ್ಕೆ ಬಂದಂತೆ ನಡೆಯವರ ಎನಗೊಮ್ಮೆ ತೋರದಿರಾ ಗುಹೇಶ್ವರಾ [೧೧೭]

ಇಲ್ಲಿಯ ಸಂಸಾರ ಕಾಯಸಂಗವಳಿದದ್ದು ಜೀವಭಾವ ದೂರೀಕರಿಸಿದ್ದು ಕೋಪ - ತಾಪ ಸಪ್ತ ವ್ಯಸನ ಮುಕ್ತಗೊಂಡಿದ್ದು, ಹುಸಿ ವ್ಯಾಪಾರ ಕೊನೆಗೊಳಿಸಿದ ಆಚಾರಕ್ಕೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ. ಮನುಷ್ಯ ದೊಡ್ಡವನಾಗಲು ಇವೆಲ್ಲವುಗಳು ಅವಶ್ಯಕಗಳು. ಕ್ರಿಯಾಚಾರಗಳು ಸರಿ ಇಲ್ಲದಿದ್ದರು ಗುರು ಜಂಗಮರಾದರೂ ಒಂದೆರಲ್ಲ, ಯಾರಾದರೂ ಆಚಾರವಂತರಾದರೇ ಮಾತ್ರ ಬೇರೆ.

ಮುನಿಯದಿರಿ ಮುನಿಯದಿರಿ ...........

............ ಇಂತಹ ಷಡುಲೋಭದ ರುಚಿಯನುಂಗಿ

ಜಂಗಮವಾದಲ್ಲದೇ ಭವ ಹಿಂಗದು ಕಾಣಾ ಗುಹೇಶ್ವರಾ.[೧೧೮]

ಒಳಗೆ ನೋಡಿಹನೆಂದರೆ ಒಳಗೆ ನೋಡಲಿಲ್ಲ

......................

ಕೊಲ್ಲುವವನ ಮನೆಯಲ್ಲಿ ಸತ್ತರೆ ಏನು ಕಾರಣ ಅಳುವಿರೋ ಗುಹೇಶ್ವರಾ.[೧೧೯]

ಸಂಸಾರವೆಂಬ ಹೆಣ ಬಿದ್ದರೆ ತಿನಬಂದ ನಾಯಿ ಜಗಳವ ನೋಡಿರೆ .......

...................... ಗುಹೇಶ್ವರ ಲಿಂಗವಲ್ಲಿಲ್ಲ ಕಾಣಿರೊ.[೧೨೦]

ಪಂಚ ವಿಷಯಾದಿಗಳ ಸಂಸಾರ ಅವು ಹೊಂದಿಕೆಯಿಲ್ಲದ ರೀತಿ ಈ ಮಾನವನನ್ನು ಸರಿಯಾದ ಗುರಿಯತ್ತ ಒಯ್ಯಲು ವಿಫಲಗೊಳಿಸುತ್ತದೆ. ಇವುಗಳ ತಾಕಲಾಟದಲ್ಲಿಯೇ ಇರುವಾಗ ಆ ಲಿಂಗವನರಿಯುವದಂತೂ ಅಸಾಧ್ಯದ ಮಾತು. ಲಿಂಗವರಿಯ ಬೇಕಾದಲ್ಲಿ ಹೆಣ ನಾಯಿ ಜಗಳವನ್ನು ದಾಟಿ ಮುಂದೆ ಹೋಗಬೇಕಾಗುವದು. ವ್ಯಕ್ತಿಯು ತನ್ನನ್ನು ಸುಧಾರಿಸಿಕೊಂಡು ಬಾಳಲು ಕೆಲವೊಂದು ನಿಯಮಗಳನ್ನು ಅನುಸರಿಸಬೇಕಾಗುವದು. ಹೆಣ್ಣು ಹೊನ್ನು ಮಣ್ಣು ಇವುಗಳು ಮಾಯೆ ಅಲ್ಲ ಅವುಗಳನ್ನು ಶರಣರು ತಿರಸ್ಕಾರದಿಂದ ಕಂಡಿಲ್ಲ. ಈ ಎಲ್ಲವುಗಳನ್ನು ತ್ಯಾಗ ಮನೋಭಾವಗಳಿಂದ ಸ್ವಾಗತಿಸಿದ್ದಾರೆ. ಪ್ರಸಾದ ರೂಪದಿಂದ ಸ್ವೀಕೃತವಾಗಿದೆ. ಲೋಕ ವ್ಯವಹಾರಕ್ಕಾಗಿ ಸಿಲುಕಿ ತೊಂದರೆಯನ್ನನುಭವಿಸುವರೇ ಬಹಳ. ಆದರೆ ಭಗವಂತನಿಗಾಗಿ ಪ್ರಾಣತೆತ್ತುವ ವಿಕಾಸವಾದಿಗಳು ಕಡಿಮೆ. ಆಶೆ ಮತ್ತು ವೇಷ ಭಾವ ಅದಕ್ಕೆ ತಕ್ಕಂತೆ ನಡತೆಯಿಲ್ಲದಿದ್ದರೇ ಅದು ತ್ಯಾಜ್ಯಾ ಅದರೊಂದಿಗೆ ಅಹಂಕಾರ ನಿಷೇಧವಿದೆ. ಅಹಂಕಾರಕ್ಕೊಳಗಾದರೆ ಕುಟೀರಿ ಕುಹಕ ಬುದ್ಧಿ ಬರುವದು ಆಗ ಬುದ್ಧಿಯೊಡನೆ ಜ್ಞಾನ ಕೆಡುವದು. ಜ್ಞಾನಕೆಟ್ಟಾಗ ಹಿರಿಯತನ ನಷ್ಟವಾದಂತೆ, ಹೃದಯ ಕಂದಕದ ಮೇಲೆ ಮೂಲ ಅಹಂಕಾರ ಉತ್ಪತ್ತಿಯಾಗಬಾರದು. ಅಜ್ಞಾನದ ರೆಂಬೆ ಕೊಂಬೆಗಳನ್ನು ಬಯಸಿ ಕಷ್ಟಕ್ಕೊಳಗಾಗುವದಕ್ಕೆ ಅಹಂಕಾರವೇ ಕಾರಣ. ಸ್ತುತಿ ನಿಂದೆಗೆ ಕಿವಿಗೊಡಬಾರದು, ಸತ್ಯವಿಡಿದು ನಡೆಯಬೇಕು ಸತ್ಯವಂತರೊಡನೆ ಮಾತ್ರ ವ್ಯವಹರಿಸುವದು ಜೀವ ಹಿಂಸೆ ಮಾಡಲಾಗದು. ಬಲೆಯನ್ನು ಹಾಕಿ ಮತ್ಸ್ಯಮಂಡೂಕಗಳನ್ನು ಸಾಯಿಸುವವರು ತಮ್ಮ ಮನೆಯಲ್ಲಿ ಸತ್ತವರಿಗೆ ದುಃಖಿಸುವಂತೆ ಅವಕ್ಕೆ ದುಃಖಿಸಲಾರರು. ತಮಗೊಂದು ಪರಿ, ಇತರರಿಗೊಂದು ಪರಿ, ಅಳವಡದು. ಯಾರಾದರೂ ನಿನ್ನನ್ನು ಆಡಿಕೊಂಡರೇ ನೀನೆಂದೂ ಎದುರು ಮಾತನಾಡಬೇಡ ಸಿಟ್ಟು ಬೇಡವೆಂದಾಗ ಆತ ಹಿರಿಯನಾಗುವನು ಲೋಕ ವೇಷಧಾರಿ ಆನೆಯಂತೆ ವೇಷ ಧರಿಸಿ, ನಾಯಿಯ ಸ್ವಭಾವವುಳ್ಳವರು ವರ್ಜ್ಯರು. ಊರೊಳಗಿದ್ದ ಶ್ರೀಮಂತಿಕೆಯನ್ನು ಕಳ್ಳರು ಬಂದು ದೋಚಿದಾಗ ಊರೊಳಗಿದ್ದರೇ ಕಳ್ಳರ ಭಯವಿದೆಯೆಂದು ತಿಳಿದು ಅಡವಿಗೆ ಹೋದರೆ ಅಲ್ಲಿ ಕಾಡುಪ್ರಾಣಿಗಳ ಕಾಟವಿದೆ. ಕಾಡುಪ್ರಾಣಿಗಳಿಗೆ ಅಂಜಿ ಅರಮನೆಯಂತಹ ಹುತ್ತವಿದೆ ಎಂದು ಹೊಕ್ಕರೆ ಅಲ್ಲಿ ಹಾವು. ಹೀಗೆ ವೇಷಡಂಬಕರ ವಿಡಂಬನೆಯಿದೆ. ಬೆಲ್ಲವನ್ನು ಎತ್ತ ತಿಂದರೂ ಸಿಹಿಯೇ ಇರುವದು. ಬೇವು ಎತ್ತ ತಿಂದರೂ ಕಹಿಯೇ ಇರುವದು. ಸತ್ಯಬೇಕು ಮಿಥ್ಯೆಬೇಡ ಕವಿತ್ವದಾಶೆ ಸಮತಾವಾದದಾಶೇ ಎಲ್ಲ ಆಶೆ ಪಾಶಗಳನ್ನು ಬಿಟ್ಟು ದಾಸೋಹಿಯಾಗುವದು ಆಚಾರವಿರದೇ, ಕೋಪಬಿಡದೇ, ತಾಪಸುಡದೇ ವ್ಯಕ್ತಿತ್ವ ವಿಕಸನವಾಗಲಾರದು. ಪಂಚೇಂದ್ರಿಯ ಸಪ್ತ ಧಾತುಗಳನ್ನು ಕೊಲ್ಲದೇ, ಪಂಚೇಂದ್ರಿಯಗಳನ್ನು ವಿಮುಖಿಗೊಳಿಸಬೇಕು. ಅಂದರೆ ಸದುಪಯೋಗಪಡಿಸಿಕೊಳ್ಳಬೇಕು. ಬುದ್ಧನ ಅಷ್ಟಾಂಗ ಮಾರ್ಗಗಳಿದ್ದಂತೆ ಪ್ರಭುವಿನ ಮಾರ್ಗಗಳುಂಟು. ಸತ್ಯ, ಸದಾಚಾರ, ಸದ್ಭಕ್ತಿ, ನಿಜಮುಕ್ತಿ, ಸತ್ಕ್ರಿಯೆ, ಸಮ್ಯಗ್ ಜ್ಞಾನ, ಪ್ರಭುವಿನ

ಷಷ್ಠಯೋಗ ಮಾರ್ಗಗಳೆನ್ನಬಹುದು. ಕೀಳುತನದ ಮನಸ್ಸು ಬೇಡ ಸ್ತ್ರೀ - ಪುರುಷ ಇಬ್ಬರಲ್ಲಿಯೂ ಕೂಡಾ ವ್ಯಕ್ತಿತ್ವ ವಿಕಸನ ಆಗುವುದಾದರೇ ಇನ್ನಷ್ಟು ಉತ್ಕೃಷ್ಟ. ಸಜ್ಜನರ ಸಂಗವನ್ನೇ ಮಾಡು, ತನುಮನ ಭಾವದಲ್ಲಿ ಶುದ್ಧನಾಗಿರು. ಇಂದ್ರಿಯ ಹಿಡಿತದಲ್ಲಿಟ್ಟುಕೊ ಮನದ ಕತ್ತಲೆ ದೂರಮಾಡು ಕಪಟತನ ಬೇಡ ಅರಿತು ಆಚರಿಸು ಮತ್ತೊಬ್ಬರ ಬಗ್ಗೆ ಕನಿಕರವಿರಲಿ ಹುಸಿ ಮಾತುಗಾರಿಕೆ ಪರಸ್ತ್ರೀ ಸಂಗ ಅತಿಯಾದ ನಿದ್ರೆ ಇವುಗಳೆಲ್ಲವುಗಳಿಂದ ದೂರವಿರು. ಆಚಾರ - ವಿಚಾರ ನೈತಿಕವಾಗಿರುವ ಜಂಗಮನಲ್ಲಿ ಪ್ರಸಾದ, ಪಾದೋದಕಗಳು ಹಿತ. ಭವ - ವಿಭವಗಳ ತೂಕಬೇಕು. ಕೋಪವನ್ನು ಮುರಿದು ತಾಪವನ್ನು ತಗ್ಗಿಸಿ ಸತ್ಯ ಜ್ಞಾನಾನಂದದಲ್ಲಿರುವಾತಂಗೆ ಕರ್ಮ - ವಿಕರ್ಮಗಳ ಲೇಪನವಿಲ್ಲ. ವ್ಯಕ್ತಿತ್ವ ಸಂಪದ ತನ್ನಲ್ಲಿ ಉನ್ನತೀಕರಿಸಿಕೊಳ್ಳುವ ಪರಿಕರಗಳನ್ನು ಹೊಂದಿದೆ.

ವ್ಯಕ್ತಿತ್ವ, ಸಾಮಾಜಿಕ, ಆಧ್ಯಾತ್ಮಿಕ ವಿಕಾಸಗಳೆಂದು ಮೂರು ಭಾಗವಾಗಿ ವಿಭಾಗಿಸುವಾಗ ಅಷ್ಟಾವರಣ - ವ್ಯಕ್ತಿತ್ವ ವಿಕಸನಕ್ಕೆ ಕಾರಣವಾದರೆ, ಪಂಚಾಚಾರ - ಸಾಮಾಜಿಕ ವಿಕಸನಕ್ಕೆ, ಷಟಸ್ಥಲ - ಆಧ್ಯಾತ್ಮಿಕ ವಿಕಸನಕ್ಕೆ ಕಾರಣವಾಗುತ್ತವೆ. 'ಚೆನ್ನಬಸವಣ್ಣ ತಿಳಿಸಿದ ೫೦ ಆಚಾರಗಳಾದ ಪರರ ಹೆಣ್ಣಿಗೆ ಕಣ್ಣಿಡದಿರುವದು ಪರದ್ರವ್ಯ ಅಪಹರಣ ಮಾಡಿದಿರುವದು, ಸುಳ್ಳಾಡದಿರುವದು, ವಿಶ್ವಾಸಘಾತವ ಮಾಡದಿಹುದು, ಪ್ರಾಣಿ ಹಿಂಸೆ ಮಾಡದಿರುವದು, ಸಕಲ ಶಿವಶರಣರಿಗೆ ಸಂತೋಷಮಂ ಹುಟ್ಟಿಸುವುದು, ಕೆಟ್ಟ ಜನರ ಸಹವಾಸ ಮಾಡದಿಹುದು, ಸಜ್ಜನಸಂಗತಿ ಬಿಡದಿಹದು, ಸಕಲ ಜೀವಿಗಳಿಗೆ ಹಿತವ ಬಯಸುವದು, ಸರ್ವರಿಗೆ ಹಿತವ ಮಾಡುವದು, ಆಡಿದ ಭಾಷೆಯ ಪೂರೈಸುವದು, ಮತ್ತೊಬ್ಬರ ಮನ ನೋಯಿಸದಿರುವದು'[೨೮] ಸಮಾಜ ವಿಕಸನಕ್ಕೆ ಪ್ರತಿಯೊಬ್ಬ ವ್ಯಕ್ತಿ ಇವುಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ.

**ಸಮಾಜ ಸಂಪದ**

ಹನ್ನೆರಡನೆ ಶತಮಾನದ ಕ್ರಾಂತಿ ಸಮಾಜದ ಪುನರುತ್ಥಾನತೆಯನ್ನು ಪಡೆಯಿತು. ಸಮಾಜದಲ್ಲಿಯ ಹೊಲಸನ್ನು ತೆಗೆದುಹಾಕಿ ಶುದ್ಧ ಸಮಾಜವನ್ನು ಸಂಘಟಿಸಿದರು. ವರ್ಣಾಶ್ರಮವನ್ನು ದೂರೀಕರಿಸಿ ಕೆಳವರ್ಗ ಮತ್ತು ಉಚ್ಚವರ್ಗದವರ ಮಧ್ಯೆ ಇದ್ದ ಜಾತಿ ಕಂದರವನ್ನು ನಿವಾರಿಸುತ್ತ ಸಾಗಿದರು. ಕೆಳವರ್ಗದವರಿಗೆ ವೇದಶಾಸ್ತ್ರಾಭ್ಯಾಸಕ್ಕೆ ಆಸ್ಪದವಿರಲಿಲ್ಲ. ಮೇಲ್ವರ್ಗದವರ ಕೈಯಲ್ಲಿ ದುಡಿಯುವುದೇ ಶೂದ್ರರ ಪರಿಸ್ಥಿತಿಯಾಗಿತ್ತು. ಪುರುಷನು ಹೇಳಿದಂತೆ ಸ್ತ್ರೀ ಕೇವಲ ಭೋಗದ ಸಾಮಗ್ರಿಯಾಗಿ ಅಡುಗೆ ಮನೆಯ ನಾಲ್ಕು ಗೋಡೆಯ ಮಧ್ಯೆದಲ್ಲಿಯೇ ಇರಬೇಕಾಗಿತ್ತು, ಸ್ತ್ರೀ ಸಮಾನತೆ ಹಾಗೂ ಜಾತಿ ಸಮಾನತೆಗಾಗಿ ಹೋರಾಡಿದರು. ಸಾಂಪ್ರದಾಯದ ನೆರಳಿನಲ್ಲಿ ಸಮಾಜ ಸಿಕ್ಕು ಬಳಲಿತ್ತು. ಸ್ವಾರ್ಥಪರ ಅಧಿಕಾರಶಾಹಿಗಳೇ ಸಮಾಜ ಒಡೆಯುವ ಶಕ್ತಿಗಳಾಗಿದ್ದರು. ಅದನ್ನು ಸರಿಪಡಿಸುವುದೇ ಈ ವಚನಕಾರರ ಕೆಲಸವಾಯಿತು. ಮನುಷ್ಯ ಸಾಮಾಜಿಕ ಜೀವಿ, ಸಮಾಜದ ನೆಮ್ಮದಿ ಮಾನವ ನೆಮ್ಮದಿ. ಮಾನವರ ನಿಜ ಬದುಕುಗಳ ಸಮುಚ್ಚಯವೇ ಸಮಾಜ, ಸಮಾಜಕ್ಕೆ ದಕ್ಕೆ ಬಂದರೆ ಬದುಕಿಗೆ ದಕ್ಕೆ. ಬದುಕನ್ನುದ್ಧರಿಸಲು ಇವರು ಸುಂದರ ಸಮಾಜವನ್ನು ಸಾಕಾರಗೊಳಿಸಿದರು. ಜಡಗೊಂಡದ್ದನ್ನು ಚಲನಶೀಲಗೊಳಿಸಿದರು. ಹಲವಾರು ಸಾಮಾಜಿಕ ಯೋಜನೆಗಳು ಜಾರಿಗೆ ಬಂದವು. ಅವರ ದೃಷ್ಟಿಯಲ್ಲಿ ಸಮಾಜ ಕೇವಲ ಮಾನವರ ಸಮೂಹ ಮಾತ್ರವಲ್ಲ. 'ಅದು ದೈವೀ ಅಂಶಗಳ ಸಮಷ್ಠಿ'. ಇಲ್ಲಿ ಇನ್ನೊಂದು ಸಾಂಕೇತಿಕ ಅರ್ಥ ಜಂಗಮ ಅಥವಾ ಸಮಾಜವೆಂಬುದು. ಜಂಗಮ ಇದು ಜಾತಿವಾಚಕವಲ್ಲ.

ಅದು ಚಲನಶೀಲ ಸಮಾಜಕ್ಕೆ ವಿನಿಯೋಗಿಸುವ ಕಾರ್ಯವಾಹಕ. ವ್ಯಕ್ತಿಯು ಜಂಗಮಕ್ಕೆ ದಾನವನ್ನು ಕೊಡಬೇಕು ಏಕೆಂದರೆ ಆತ ಸಮಾಜಕ್ಕೆ ವಿನಿಯೋಗಿಸುವ ಸ್ವಲ್ಪ ಪ್ರಮಾಣದಲ್ಲಿ ಮಾತ್ರ ತಾನು ಇಟ್ಟುಕೊಳ್ಳುವನು. ವ್ಯಕ್ತಿ ಸಮಾಜದ ಅಂಗವಾದ್ದರಿಂದ ಸಮಾಜದ ಋಣ ತೀರಿಸಬೇಕಾಗುವದು ಆದ್ದರಿಂದ ದಾನಪದ್ಧತಿ, ಅದರಿಂದ ದೀನ, ದಲಿತರು, ದುರ್ಬಲರು ಸಹಾಯ ಪಡೆಯಬಹುದಾಗಿತ್ತು.

೧. ಜಾತಿ - ಮತ - ಪಂಥಗಳ ಬಗ್ಗೆ ವಿವರಣೆ
೨. ಬಡವ - ಬಲ್ಲಿದರ ಬೇಧ
೩. ಅಧಿಕಾರಯುಕ್ತ - ರಹಿತರಲ್ಲಿಯ ಬೇಧ
೪. ಸ್ತ್ರೀ - ಪುರುಷರಲ್ಲಿಯ ಅಂತರ
೫. ವೃತ್ತಿ ಉದ್ಯೋಗದಲ್ಲಿಯ ಬೇಧ

ಇವು ಸಮಾಜದಲ್ಲಿ ಕಂಡುಬರುವ ಅಧ್ಯಯನವೇ ಸಮಾಜ ಸಂಪದ, ಸಮಾಜ ವ್ಯಕ್ತಿಗಳಿಂದ ವಿಕಾಸ ಹೊಂದುವದು, ವ್ಯಕ್ತಿ ವಿಕಾಸಕ್ಕೆ ಸಮಾಜಬೇಕು. ಸಮಷ್ಠಿ ಸಹಕಾರದಿಂದ ವ್ಯಷ್ಠಿಹಿತ ಸಾಧ್ಯ ಹಾಗೆಯೇ ವ್ಯಷ್ಠಿ ಸಿದ್ಧಿಸುವಿಕೆಯಿಂದ ಪರಿಪೂರ್ಣ ಸಮಾಜ ನಿರ್ಮಾಣ ವ್ಯಷ್ಠಿ - ಸಮಷ್ಠಿಯು ಪರಸ್ಪರ ಅವಲಂಬಿಗಳು ಹಲವು ಪ್ರಸಂಗಗಳಲ್ಲಿ ಎರಡಕ್ಕೂ ಸಾಮರಸ್ಯ ಇಲ್ಲದ ಸ್ಥಿತಿಗಳನ್ನು ಕಾಣುತ್ತೇವೆ. ಮೇಲ್ಜಾತಿಯವರು ಸಮಾಜವನ್ನು ವಿಭಾಗಿಸಿ ತಾವು ತಿಳಿದಿದ್ದೇ ವೇದವೆಂದು ಬಗೆದಿದ್ದರೂ ಅವರು ಹೇಳಿದ್ದನ್ನೇ ಉಳಿದವರು ಕೇಳಬೇಕಾಗಿತ್ತು. ಅವರಲ್ಲಿ ಅಸ್ಪೃಶ್ಯರೆಂಬ ಪಂಚಮವರ್ಣ ಕೂಡ ಇತ್ತು. ಅವರಂತೂ ಧರ್ಮ ಗ್ರಂಥಗಳ ಅಭ್ಯಾಸವನ್ನು ಮಾಡುವದೊಟ್ಟತ್ತಿಗೆ ಇರಲಿ ಕಿವಿಯಿಂದ ಕೂಡಾ ಕೇಳಬಾರದಾಗಿತ್ತು. ಧರ್ಮ ಸ್ವಾರ್ಥತೆಯ ಮುಖವಾಡ ಹಾಕಿಕೊಂಡದ್ದನ್ನು ಪ್ರತಿಭಟಿಸಿ ಸಕಲರಿಗೆ ಲೇಸೆನ್ನು ಬಯಸುವ ಸುಂದರ ಸಮಾಜವನ್ನು ವಚನಕಾರರು ನಿರ್ಮಿಸಿದರು. ಸಮಾಜದ ಸಹಬಾಳ್ವೆಯಲ್ಲಿ ಕಾಯಕ ಮಹತ್ವದ ಸ್ಥಾನವನ್ನೇ ಪಡೆದುಕೊಂಡಿದೆ. ಅದರಡಿ ಎಲ್ಲರೂ ಸಮಾನರು, ಎಲ್ಲರೂ ಕಾಯಕ ಮಾಡಬೇಕು. ಯಾವುದೇ ಕಾಯಕ ಮಾಡಿದರೂ ಎಲ್ಲರೂ ಸರಿಸಮಾನರು ಅಲ್ಲಿ ವೃತ್ತಿ ಬೇಧಗಳಿಲ್ಲ. ಇದು ಆರ್ಥಿಕ ಸಮಾನತೆಯನ್ನು ತರುವರಲ್ಲಿಯೂ ಕೂಡಾ ಸಫಲವಾಯಿತು. ಈ ಕಾಯಕ ತತ್ವದ ಲಕ್ಷಣಗಳನ್ನು ಕೆಳಗಿನಂತೆ ವಿಭಾಗಿಸಬಹುದು.

೧. ಸೋಮಾರಿತನವು ಇರಬಾರದು
೨. ಪರ ಪೀಡನೆ, ಭಿಕ್ಷಾವೃತ್ತಿ ನಿರಾಕರಣೆ
೩. ದೈಹಿಕ ಶ್ರಮದಲ್ಲಿಯ ಘನತೆ
೪. ಸತ್ಯ, ಶುದ್ಧ, ಪ್ರಾಮಾಣಿಕತೆಗೆ ಬೆಲೆ
೫. ಕಾಯಕದಲ್ಲಿ ನಿಷ್ಠೆ ಇಡಬೇಕು
೬. ಅತಿ ಆಸೆ ಸಲ್ಲ. ಶ್ರಮಕ್ಕೆ ತಕ್ಕ ಫಲ ಇರಲಿ (ದುರಾಸೆ ಬೇಡ)
೭. ಕಾಯಕದಲ್ಲಿ ಮೇಲು - ಕೀಳು ಇಲ್ಲ
೮. ಕಾಯಕದ ಸಾರ್ಥಕತೆ ಲೌಕಿಕದಿಂದ ಅಲೌಕಿಕದವರೆಗೆ
೯. ಕಾಯಕದ ಗಳಿಕೆಯ ಧನವೇ ಸತ್ಪಾತ್ರಕ್ಕೆ ಯೋಗ್ಯ
೧೦. ದಾನ ತೆಗೆದುಕೊಳ್ಳುವದು ಸಹಿತ ಶುದ್ಧ ಕಾಯಕದಿಂದ ಬಂದಿರಬೇಕು

ಆ ಸಮಾಜ ದಲಿತೋದ್ಧಾರದ ಕೇಂದ್ರ, ಮಹಿಳೆಯರಿಗೆ ಸಮಾಜ ಹಾಗೂ ಧರ್ಮದಲ್ಲಿ ಸಮಾನತೆಯನ್ನು ತಂದುಕೊಟ್ಟರು. ಈಗ ಒಬ್ಬ ಅಂಬೇಡ್ಕರರ ಬಗ್ಗೆ ದಲಿತರು ಹೆಮ್ಮೆಪಡುವದಾದರೇ ೮೦೦ ವರ್ಷಗಳ ಹಿಂದೆ ದಲಿತರು ಎಂತಹ ಸಮಾನತೆಯಿಂದ ಇದ್ದರೆಂಬುದನ್ನು ಊಹಿಸಬೇಕಾಗುವದು. ಪ್ರತಿಯೊಬ್ಬ ವಚನಕಾರರು ಅಂಬೇಡ್ಕರರಂತೆ ಕೆಲಸಮಾಡಿದ್ದು ಪರಿಗಣನೀಯ. ದಲಿತರಿಗೆ ಮೊಟ್ಟ ಮೊದಲನೆಯದಾಗಿ ಸಮಾನ ರೀತಿಯಲ್ಲಿ ಕಂಡವರೆಂದರೆ ವಚನಕಾರರೇ. ಕಂದಾರ ಮಠಕ್ಕೆ ಉರಿಲಿಂಗ ದೇವರು ಅಸ್ಪೃಶ್ಯ ಉರಿಲಿಂಗ ಪೆದ್ದಿಯನ್ನೇ ಮಠಕ್ಕೆ ಸ್ವಾಮಿಯನ್ನಾಗಿ ನೇಮಿಸಿದ್ದು. ಬಸವಾದಿ ಶರಣರು ದಲಿತರ ಮೊದಲ ಉದ್ಧಾರಕರಾಗಿದ್ದಾರೆ. ಧರ್ಮದ ಚೌಕಟ್ಟಿನಲ್ಲಿ ಅಂಬೇಡ್ಕರ ಹೊಂದದಿದ್ದರೂ ಧರ್ಮ ಸ್ಥಾಪಕರ ಜೊತೆ ಹೊಂದಿಸಲು ಹೋಗುತ್ತಾರೆ. ಅತಿ ಹಳೆಯ ಕಾಲದ ಲೋಪಾಮುದ್ರ, ಗಾರ್ಗಿ, ಮೈತ್ರೇಯಿ, ಮುಂತಾದವರು ಪುರುಷ ಸ್ತ್ರೀ ಬೇಧವಿಲ್ಲದೇ ಸಮಾನವಾಗಿ ವಾದಿಸಿದ ಉದಾಹರಣೆಗಳುಂಟು. ಧಾರ್ಮಿಕ ನೇತಾರರೇ ಬೇರೆ ಸಮಾಜಿಕ ನೇತಾರರೇ ಬೇರೆ. ಇಲ್ಲಿ ಸ್ತ್ರೀ - ಪುರುಷ ಬೇಧವಿಲ್ಲ ಪುರುಷರಲ್ಲಿಲ್ಲದ ಹಿರಿಯ ಸ್ಥಾನವನ್ನು ಮಹಾದೇವಿ ಅಕ್ಕನಿಗೆ ಕೊಟ್ಟಿದ್ದಾರೆ. ಆಚಾರ ವ್ಯವಹಾರಗಳಲ್ಲಿ ಕೊಂಬಲ್ಲಿ ಕೊಡುವಲ್ಲಿ ಕುಲವನ್ನೇಕೆ ಅರಸಬೇಕು. ಅದಕ್ಕೆ ಪ್ರಭು -

ಎಡೆಗೆ ಬಾರದಾತ ಅಡಿಗೆಗೆ ದೂರ
ಅಡಿಗೆಗೆ ದೂರಾದಾತ ಮನೆಗೆ ದೂರ
ಮನೆಗೆ ದೂರಾದಾತ ಮನಕ್ಕೆ ದೂರ
ಮನಕ್ಕೆ ದೂರಾದಾತ ಗುಹೇಶ್ವರ ಲಿಂಗಕ್ಕೆ ದೂರ [೧೨೨]

ಒಂದೊಂದರಿಂದ ಬೇರೆಯಾದ ವ್ಯಕ್ತಿತ್ವಗಳು ದೂರ ದೂರವೆಂದು ಗುಂಪುಗಳಾಗಿ ಪರಿವರ್ತಿತ ಹೊಂದಿ ಜಾತಿಯ ಕಲ್ಪನೆ ಹುಟ್ಟಲಿಕ್ಕೆ ಕಾರಣವಾದವು. ಅಂದು ಆಚರಿಸುವವರಿಗೆ ಸಂಸಾರವು ಬಂಧಕವಾಗಲಾರದು. ಇದನ್ನು ಇದ್ದು ಇಲ್ಲದಂತೆ ಅನುಭವಿಸಬಹುದಾಗಿದೆ. ಮಾಯೆ ಅನ್ನುವದು ವಸ್ತುಗಳಲ್ಲಿಲ್ಲ. ಅದು ನೋಡುವ ದೃಷ್ಟಿಯಲ್ಲಿದೆ. ಮನೋಧರ್ಮದಲ್ಲಿದೆ. ಮಾಯೆ ಆದರೂ ಆಗಬಹುದು ಮಹಾದೇವ ಆದರೂ ಆಗಬಹುದು.

ಹೊನ್ನು ಮಾಯೆಯೆಂಬರು ಹೆಣ್ಣುಮಾಯೆಯೆಂಬರು ಮಣ್ಣುಮಾಯೆಯೆಂಬರು
ಹೊನ್ನು ಮಾಯೆಯಲ್ಲ .................
................. ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ. [೧೨೩]

ಶರಣರು ಗೃಹಸ್ಥ ಜೀವನದ ಪಾವಿತ್ರ್ಯತೆಯನ್ನು ಕಾಯ್ದುಕೊಂಡರು ಅದರಲ್ಲಿಯೆ ನಡೆದು ತೋರಿಸಿದರು. ಸರ್ವರೂ ಉದ್ಧಾರವಾಗಬಲ್ಲ ಪೂರ್ಣ ದೃಷ್ಟಿಯ ಆದರ್ಶ ಸಮಾಜ ನಿರ್ಮಾಣವಾಯಿತು. ಎಲ್ಲವನ್ನು ತಿರಸ್ಕರಿಸಿ ಒಂಟಿ ಜೀವನದಲ್ಲಿ ಬಾಳಬೇಕೆಂಬ ನೀರಸ ಸಮಾಜ ಅವರಿಗೆ ಬೇಕಿರಲಿಲ್ಲ. ಅದರಂತೆ ಭೋಗವಿಲಾಸದಲ್ಲಿಯೇ ಕಾಲ ಕಳೆಯುವ ಪದ್ಧತಿ ಇದ್ದಿರಲಿಲ್ಲ. ಸರಿಯಾಗಿ ಬದುಕಬೇಕು, ಬಾಳಬೇಕು, ಚಿರಂತನ ಬದುಕಿಗೆ ಈ ಬದುಕು ಸಹಾಯವಾಗಬೇಕು. ಉದ್ಯೋಗಕ್ಕೆ ಮೇಲು - ಕೀಳುಗಳ ಸಂಬಂಧವಿಲ್ಲ. ಅದನ್ನು ನಿರ್ವಹಿಸುವ ಮನೋಧರ್ಮದಲ್ಲಿದೆ. ಸಮಾಜ ಎಲ್ಲ ತರಹದ ಉದ್ಯೋಗಗಳಿಂದ ಸಮೃದ್ಧಿಗೊಳ್ಳಬೇಕು. ಜಾತಿ - ಬೇಧಗಳಿಂದ ಹರಿದುಹೋಗದ ಸಹಜೀವನ, ತ್ಯಾಗ - ಭೋಗಗಳ ಸಮನ್ವಯ ದೃಷ್ಟಿ ವ್ಯಷ್ಟಿ

- ಸಮಷ್ಠಿಯ ಪೂರಕ ರೂಪರೇಶೆಯ ಸಮಾಜ ಅಲ್ಲಿ ಬಡವ ಬಲ್ಲಿದ, ಸ್ತ್ರೀ - ಪುರುಷ ಎಂಬ ತಾರತಮ್ಯವಿಲ್ಲ. ಎಲ್ಲರನ್ನು ಗುರಿಮುಟ್ಟಿಸುವ ಪರಿಪೂರ್ಣ ಸಮಾಜ ನಿರ್ಮಾತೃಗಳು ಈ ವಚನಕಾರರು.

ನಾನು ಘನ, ತಾನು ಘನವೆಂಬ ಹಿರಿಯರುಂಟೇ ಜಗದೊಳಗೆ?

........................ ಆತನೇ ಶರಣ ಗುಹೇಶ್ವರಾ [೧೩೪]

ಕುಲದಲಿಧಿಕನು ಹೋಗಿ ಹೊಲಗೇರಿಯಲಿ ಮನೆಯ ಕಟ್ಟಿದೊಡೆ

...........................

ಹೊಲೆಗೆಟ್ಟು ಹೋಯಿತ್ತು ಕಾಣಾ ಗುಹೇಶ್ವರಾ. [೧೩೫]

ಹೊಟ್ಟೆಯ ಮೇಲೆ ಕಟ್ಬೋಗರದ ಮೊಟ್ಟೆಯ ಕಟ್ಟಿದರೇನು

............................

ಇಂತಪ್ಪವರ ಕಂಡೊಡೆ ನಾ ನಾಚುವೆನಯ್ಯ ಗುಹೇಶ್ವರಾ. [೧೩೬]

ತನು ಬತ್ತಲೆಯಿದ್ದಡೇನು ಮನ ಶುಚಿಯಾಗದನ್ನಕ್ಕರ?

........................... ನೀ ಸಾಕ್ಷಿ

ಯಾಗಿ ಚೀ ಎಂದು ಕಳೆಯುದೇನು ಗುಹೇಶ್ವರಾ. [೧೩೭]

ಅಂಗ ಜೀವಿಗಳೆಲ್ಲಾ ಅಸನಕ್ಕೆ ನರೆದು

...........................

ಗುಹೇಶ್ವರ ಲಿಂಗ ನಿಮಗೆಲ್ಲಿಯದೋ? [೧೩೮]

ಮದ್ಯಮಾಂಸಗಳ ಮಟ್ಟವೆಂದೆಂಬಿರಿ ನೀವು ಕೇಳಿರೆ

........................... ಮಾಂಸವಲ್ಲ

ವೇನು ಸಂಸಾರ ಸಾಗರವು? ಉಭಯನತಿಗಳೆದಾತನೇ ಗುಹೇಶ್ವರಲಿಂಗದಲ್ಲಿ ಲಿಂಗೈಕ್ಯ [೧೩೯]

ಎನಗೊಂದು ಲಿಂಗ, ನಿನಗೊಂದು ಲಿಂಗ ...........

............................ ಮುಟ್ಟ ಬಲ್ಲುವೇ ಗುಹೇಶ್ವರಾ. [೧೪೦]

ಕಾಡುಗಿಚ್ಚೆದ್ದರೆ ಅಡವಿಯೇ ಗುರಿ .......

...................... ಕೋಪಾಗ್ನಿ ಎದ್ದರೆ ನಿಂದಕರೇ ಗುರಿ ಗುಹೇಶ್ವರಾ. [೧೪೧]

ನಿಮ್ಮಶಕ್ತಿ ಜಗದೊಳಗಿಪ್ಪುದು .........

............... ನಿನ್ನ ಅಹಂಕಾರವ ನೋಡಿ ಹೇಸಿತೆನ್ನ ಮನವು ನಿಮ್ಮ ಘನ ಎನಗೆ ಗುಹೇಶ್ವರಾ. [೧೪೨]

ರಾಗವಡಗಿ ತಾಮಸ ನಿಂದು ಅಹಂಕಾರದ ಗಿರಿಯುಡಗಿ

................. ಮತ್ತೆ ಭಾವ ಶುದ್ಧ ಉಂಟೆ ಗುಹೇಶ್ವರಲಿಂಗಕ್ಕೆ. [೧೪೩]

ನಿಮ್ಮಲ್ಲಿ ಭಕ್ತಿಯುಂಟು, ತಮ್ಮಲ್ಲಿ ಭಕ್ತಿಯುಂಟು .......

................... ಬಂದ ಜಂಗಮವ ಇಂಗಿತವನರಿದು

ಇದಿರೆದ್ದು ವಂದಿಸಿ ಕೈ ಮುಗಿದು ..........

ಕೆಮ್ಮನೆ ಅಹಂಕಾರ ಹೊತ್ತಿಕೊಂಡಿಪ್ಪವರಿಗೆ ಗುಹೇಶ್ವರಲಿಂಗ ನೊಲ್ಲನೋಡಾ.[೧೩೪]

ಅರಿವ ಬಲ್ಲೆನೆಂದು ಬಿರುನುಡಿಯ ನುಡಿವರೆ?

ಸತ್ಯವ ನರಿದವಂಗೆ ನಿತ್ಯ ಭಾವ ಉಂಟೆ?

........... ಸಮಯವೆಂಬುದು ಸಂಪದ ....... ಗುಹೇಶ್ವರಲಿಂಗಕ್ಕೆ [೧೩೫]

ಅಯ್ಯಾ ಕಾರ್ಯನಲ್ಲ, ಕಾರಣನಲ್ಲ ನೋಡಾ .......

............ ಜಾತಿಯವನಲ್ಲ, ಅಜಾತಿಯವನಲ್ಲ ........

............. ಉನ್ಮನಾಗ್ರದಲ್ಲಿ ಹೊಳೆವಾತ ತಾನೆ ನೋಡಾ ಗುಹೇಶ್ವರಲಿಂಗವು [೧೩೬]

ಆವ ಜಾತಿಯಾದಡು ಆಗಲಿ ...........

.............. ಆಗಮಂಗಳ ದಾಸನ ದಾಸ ನಾನು

ಜನ್ಮ ಜನ್ಮದಲ್ಲಿ ......... ಕಾಣಾ ಗುಹೇಶ್ವರಾ. [೧೩೭]

ತನು ಬತ್ತಲಿದ್ದರೇನು ಮನ ಶುಚಿಯಾಗದನ್ನಕ್ಕರ?

.................. ಇಂತೀ ಆಸೆಯ ವೇಷದ

ಭಾಷೆಗೆ ಗುಹೇಶ್ವರ ಸಾಕ್ಷಿಯಾಗಿ ಚೀ ಎಂದೆನು.[೧೩೮]

ಸಮಾಜದೊಳಗೆ ಹಿರಿದು ಕಿರಿದೆಂಬ ಭಾವ ಯಾರಲ್ಲಿ ಇಲ್ಲವೋ ಆತ ಹಿರಿಯ ಸಮಾಜದ ಇನ್ನೊಂದು ಶಬ್ದ ಸಂಸಾರ ಸಮಾಜದಲ್ಲಿಯ ಕಲಹಕ್ಕೆ ಈ ಮಾತು ಉಪಯುಕ್ತ. ವಿಷಯದಾಸೆಗೆ ಹರಿದಾಡುವ ಇಂದ್ರಿಯಗಳು ಇಂದ್ರಿಯಗಳನ್ನು ನಾಯಿಗಳಿಗೆ ಹೋಲಿಸಿದರೆ ಅವುಗಳಿಗೆ ದಾಸನಾದ ಆಶಾವಾದಿ ಜನಗಳ ಸಮೂಹ ಸುರಕ್ಷಿತ ಸಮಾಜ ಅಲ್ಲವೇ ಅಲ್ಲ. ಮನುಷ್ಯತನದಿಂದ ಸುಗಮ ಸಂಸಾರಿಯಾದಾಗ ನಿಜ ಸಮಾಜದ ಅಭ್ಯುದಯ ಸಾಧ್ಯ. ಇದು ಸಂಸಾರ ಹೇಯಸ್ಥಲದ ವಿವರಣೆ. ಒಬ್ಬ ಕುಲವಂತ ಹೊಲಗೇರಿಯಲ್ಲಿ ಹೋಗಿ ಮನೆಯಕಟ್ಟಿದರೆ ತಮ್ಮ ಕುಲಬಾಂಧವರು ಈತನನ್ನು ದೂರವಿಡುವದು ಸ್ವಾಭಾವಿಕ. ಭಕ್ತಿ ಕುಲದವರೆಲ್ಲಾ ಆ ಭಕ್ತನ ಕೈಹಿಡಿದಾಗ ಆ ಕುಲದಲಧಿಕ ಭಕ್ತನ ಕುಲ ಮೇಲಲ್ಲ. ಹೊಲಗೇರಿಯ ಭಕ್ತನ ಕುಲ ಕೀಳಲ್ಲ. ಯಾರೂ ಲಿಂಗದಾರಿಗಳೋ ಅವರೆಲ್ಲ ಒಂದೇ ಕುಲದವರು ವೇಷ ಢಂಬಾಚಾರ, ವಿಷಯ ಲಂಪಟತನ, ಸುಳ್ಳು, ಢಾಂಬಿಕ, ಬಾಹ್ಯಾಂಡಂಬರ, ತೋರಿಕೆಯ ಲಿಂಗಧಾರಣೆ, ಜನಮರುಳೋ, ಜಾತ್ರೆ ಮರುಳೋ ಎಂಬಂತೆ ಮರುಳ ಪೂಜೆ, ಕೀರ್ತಿ ವಾರ್ತೆಗಾಗಿ ಮಾಡುವಭಕ್ತಿ, ದಾಸೋಹ, ಯಾವುದೂ ಬೇಕಿಲ್ಲ. ಶರೀರ ಬತ್ತಲೆಯಾದರೇನು? ಶರೀರದಂತೆ ಮನ ಒಗ್ಗೂಡಿರಬೇಕು. ಅಂತರಂಗ ಬಹಿರಂಗ ಏಕವಾಗಿರಬೇಕು. ಭಾವ ಬಯಲಾಗುವಿಕೆ ಕರುಣಾದಿ ಗುಣಂಗಳ ಸುಡುವಿಕೆ ಅಸನ ವ್ಯಸನಕ್ಕೆ ಕುದಿಯುವ ಪರಿ ಇವೆಲ್ಲವುಗಳನ್ನು ತೊಲಗಿಸಬೇಕು. ಅಷ್ಟಮದಂಗಳು ಮದ್ಯೆಮಾಂಸಾದಿಗಳಿಗಿಂತಲೂ ಕನಿಷ್ಠ ಇವುಗಳಿಂದೊಡಗೂಡಿದ ಸಂಸಾರಿ

ಸದೃಢ ಸಮಾಜಕ್ಕೆ ಅಪಾಯಕಾರಿ ವರ್ಣಾಶ್ರಮ ಗೋತ್ರಂಗಳೆಂದು ಹೇಳುವದು ಮರುಳತನ ತನುಗುಣ ಮನಗುಣ ಭಾವಗುಣ ನಾಸ್ತಿಯಾದಾತ ಹೆಣ್ಣಾದರೇನು ಗಂಡಾದರೇನು? ಸರಿ ಸಮಾನರು. ಅರಿಷಡ್ವರ್ಗಗಳನ್ನು ಗೆದ್ದವರೇ ಹಿರಿಯರು ಎಲ್ಲರಿಗೂ ಒಂದೇ ತರದ ಲಿಂಗ, ಲಿಂಗದಾರಿಗಳೆಲ್ಲರೂ ಒಂದೇ ಕುಲ ಅದು ಶಿವಾಚಾರ ಕುಲ ಸಕಲರಿಗೆ ಲೇಸನೇ ಬಯಸುವ ಕುಲ ಮತ್ತೊಬ್ಬರ ಮನಸ್ಸನ್ನು ನೋಯಿಸುವದು ಅಪರಾಧ, ಹೊಗಳಿಕೆಗೆ ಮಣಿ ಹಾಕಲಾಗದು. ಸ್ತುತಿ ನಿಂದೆಗಳು ಸರಿ ಸಮಾನ ಗಾಢಿಗ್ಗಚ್ಚಿಗೆ ಅಡವಿಯೇ ಗುರಿಯಾದಂತೆ, ಕೋಪಾಗ್ನಿಯಿಂದ ತನ್ನ ದೇಹವೇ ಗುರಿಯಾಗುವದು. ಅರಿವಿಂಗೆ ಹಿರಿದು ಕಿರಿದಿಲ್ಲ, ಬಿರುನುಡಿಯಲಾಗದು ತಥ್ಯ ಮಿಥ್ಯವಳನಳಿದಿರಬೇಕು. ಸಮಯವೆಂಬುದೊಂದು ಸಂಪತ್ತು ಹೀಗೆಲ್ಲಾ ಪ್ರಭು ತನ್ನ ವಚನಗಳಲ್ಲಿ ಸಮಾಜ ಪರಿಕರಗಳನ್ನು ತಿಳಿಸಿದ್ದಾನೆ. ಆದಿಶಕ್ತಿ ಅನಾದಿಶಕ್ತಿ ಎಂದರೇನು? ಆದಿ ಎಂದರೆ ಕುರುಹು, ಅನಾದಿ ಎಂದರೆ ನಾಮ. ನಾಮವಿಲ್ಲದ ಕ್ರಿವಿಲ್ಲದ ಅಂತರಂಗಪ್ರಜ್ಞೆ ಬಹಿರಂಗದ ಕುರುಹು ಏಕವಾಗಿ ನಿಂದ ನಿಲುವನ್ನು ಅಕ್ಕಮಹಾದೇವಿಯಲ್ಲಿ ಪ್ರಭು ಕಂಡುಕೊಂಡ ಪ್ರಭು ಆಕೆಯನ್ನು ಪರೀಕ್ಷೆಮಾಡಿದ ನಂತರವೇ ಚಿಕ್ಕ ಹುಡುಗಿಯ ಪಾವಕ್ಕೆ ನಮೋ ನಮೋ ಎಂದ. ಶರಣರೆಲ್ಲಾ ಅತೀ ಹಿರಿದಾದ ಪಟ್ಟವನ್ನು ಅಕ್ಕಮಹಾದೇವಿಗೆ ಕೊಟ್ಟಿದ್ದು ಒಂದು ಪವಾಡವೇ ಸರಿ. ಇದು ಹೆಣ್ಣುಗಂಡಿನ ಬೇಧವನ್ನು ತೊಡೆದುಹಾಕಿದ ಪರಿ. ಕಳೆದರೆ ವ್ಯಥೆ, ಕಳೆಯದಿದ್ದರೆ ಸಂತೋಷ, ಇವುಗಳನ್ನು ಮತಿಗೆಳೆಯಬೇಕು. ದೇವ ನಾಮದಲ್ಲಿ ಹಲವಾದರೂ ಒಬ್ಬನೇ. ಭಕ್ತಿಯ ಮುಕ್ತಿಯ ವಿಷಯವಾಸನೆ ಬಯಸುವದಿಲ್ಲ ಅದು ತಾನಾಗಿಯೇ ಬರುವಂತದ್ದು ತಪ್ಪನ್ನು ತಿದ್ದುವಾಗ ಹಿರಿಯರು ಎಡದ ಕಾಲಲೊದ್ದರೆ ಬಲದ ಕಾಲ ಹಿಡಿಯುವರು ಬಲದ ಕಾಲಲೊದ್ದರೆ ಎಡದ ಕಾಲ ಹಿಡಿಯುವರು. ಇದು ತಪ್ಪು ಒಪ್ಪಿಕೊಳ್ಳುವಂತಹ ಪ್ರಥಮೋಪದೇಶ. ಕಾಯಕ ಸಮಾನತೆಯನ್ನು ಪರಿಶೀಲಿಸುವಾಗ ಸಹಜವಾಗಿ ನಡೆಯಬೇಕೆ ವಿನಹ ಮಾಡಿದ್ದೇನೆ ಎಂಬ ಭಾವ ಇರಕೂಡದು. ಜೀವ ಜನಜಂಗಳಿಗಳೆಲ್ಲಾ ಅಶನಕ್ಕಾಗಿ ಕುದಿಯುವರು. ಯಾವಾಗಲೂ ಅದಕ್ಕಾಗಿಯೇ ಕುದಿಯಬಾರದು. ಕಾಯಕವನ್ನು ಮಾಡುವ ಜೀವನದಲ್ಲಿ ಕಳವಳ ಇರಕೂಡದು. ಸುರಪಾನ ಮಾಡಿ ಮದ ಬಂದ ಜೋಗಿಯಾಗಬಾರದು. ಕಾಯಕದಲ್ಲಿ ಯೋಗಿಯಾಗಬೇಕು. ಕಾರ್ಯ - ಕಾರಣ, ಬೇಧಕ - ಸಾಧಕ, ಪಾತಕ - ಸೂತಕ, ದ್ವೈತ - ಅದ್ವೈತ, ಕಾಟಕ - ಕೀಟಕ, ಎನ್ನವ - ನಿನ್ನವ, ಸಂಕಲ್ಪ-ವಿಕಲ್ಪ, ಆಚಾರ - ಅನಾಚಾರ, ಕುಂಟಿಣಿ - ನೆಂಟಿಣಿ, ದುಸ್ಸೀಲ - ದುರ್ಮಾರ್ಗಿ, ಜಾತಿ - ಅಜಾತಿ, ಈ ಉಭಯಗಳನ್ನು ಅಳಿದು ನಿಲ್ಲುವಾತ ನಿಜಪುರುಷ. ಯಾವ ಜಾತಿಯಾದರೇನು, ಗುರುಲಿಂಗ ಜಂಗಮರಿಗೆ ಅರ್ಥ, ಪ್ರಾಣಾಭಿಮಾನ ಕೊಟ್ಟು ಅಹಂಕಾರ ಮರೆದ ದಾಸರ ದಾಸನು ನಾನು ಎಂದು ಪ್ರಭು ಹೇಳುತ್ತಾನೆ. ಗುಣದ ಆಧಾರಮೇಲಿಂದ ಜಾತಿಯ ನಿರ್ಧಾರವೇ ವಿನಹ ಹುಟ್ಟಿನಿಂದಲ್ಲ. ತಾಮಸೀ ಮಾಯೆಯನ್ನು ಸೇರದ ಪ್ರಭು ಸಾತ್ವಿಕ ಅಕ್ಕಮಹಾದೇವಿಗೆ ನಮೋ ನಮೋ ಎಂದ. ಸತ್ಯ, ಜ್ಞಾನ, ಧರ್ಮ, ವಿರಕ್ತಿ, ಭಕ್ತಿ, ಯುಕ್ತಿ, ಇವೆಲ್ಲವು ಸದ್ವರ್ತನೆಯ ಬಿಡಿಭಾಗಗಳು ಸತಿ ಪತಿಗಳು ವಿಜಾತಿಯವರಾದರೂ ಶಿವಭಕ್ತರಾದಲ್ಲಿ ಸಜಾತಿಯವರೇ ಸರಿ ಯಾವುದೇ ಶರಣಸತಿಗೆ ಲಿಂಗಪತಿಯಾಗಲು ಅಡ್ಡಿ ಆತಂಕಗಳಿಲ್ಲ. ಹುಸಿ ಇರದಾತ ಭಕ್ತ. ಬಾಧೆವುಳ್ಳವನಾತ ಜಂಗಮನಲ್ಲ ಆಸೆ ಇದ್ದಾತ ಶರಣನಲ್ಲ, ಆಕೆ ಹುಸಿ ಬಾಧೆಯ ನಿರಾಕರಿಸಿದಾತ ಶರಣ ಆಸೆಯ ವೇಷದಿಂದ ಭಾಷೆ ಮಿಥ್ಯವಾಗಬಾರದು. ಭವಿ - ಭಕ್ತ, ಶೀಲ - ಸಂಕಲ್ಪ, ಸಮತೆ - ಸೂತಕ ಇವುಗಳನ್ನು ಮೀರಿ ನಿಂತಾತ ನಿಸ್ಸೀಮ. ಯಾವಾತ ಸಜ್ಜನನೋ ಆತ ಅಡವಿಯಲ್ಲಿದ್ದರೂ ಒಳ್ಳೆಯ ಸಮಾಜ ನಿರ್ಮಾಪಕ. ಅಧಮ ಊರಲ್ಲಿದ್ದರು ಸಮಾಜಕ್ಕೆ ತೊಡಕು. ಪ್ರಭುವಿನ ಸುಮಾರು ವಚನಗಳಲ್ಲಿ ಆ ಶತದ

ಸಮಾಜದ ಏರಿಳಿತಗಳನ್ನು ಗುರುತಿಸಬಹುದು. ಅಂತಹ ಉನ್ನತಮಟ್ಟದ ಸಮಾಜ ನಿರ್ಮಾಣಕ್ಕೆ ಪ್ರಭು ಆದಿಯಾಗಿ ಹಿಡಿದು ಪ್ರಮಥರೆಲ್ಲರೂ ದೊಡ್ಡ ಸಾಧನೆಯನ್ನೇ ಗೈದಿದ್ದಾರೆ. ಈ ಸಮಾನ ಸಮಾಜ ಚಳುವಳಿ ಸಾಮಾಜಿಕ ಕ್ಷೇತ್ರದಲ್ಲಿ ಒಂದು ಸಾಹಸ ಗಾಥೆ.

**ಆಧ್ಯಾತ್ಮಿಕ ಸಂಪದ**

ಸಾಮಾಜಿಕ ಪರಿವರ್ತನೆಯಂತೆ ಧರ್ಮದಲ್ಲಿಯೂ ಪರಿವರ್ತನೆ ತಂದರು. ಧರ್ಮದಲ್ಲಿ ಎಲ್ಲರಿಗೂ ಸಮಾನ ಅವಕಾಶ ಸಿಗುವಂತಾಯಿತು. ಧರ್ಮ ಯಾರದೇ ಸೊತ್ತಲ್ಲ ಅದು ಎಲ್ಲರ ಸೊತ್ತು. ಎಲ್ಲರೂ ಆಚರಿಸಬಹುದು. ಎಲ್ಲರಿಗೂ ಉದ್ಧಾರ ಮಾಡುವುದೇ ಧರ್ಮ. ಧರ್ಮವನ್ನು ಪರಂಪರಾಗತವಾಗಿ ಸ್ವತ್ತನ್ನು ಮಾಡಿಕೊಂಡು ಧರ್ಮದ ಹೆಸರಿನಲ್ಲಿ ಸ್ವಾರ್ಥಕತೆಗೆ ಮತ್ತು ಅಂಧ ಸಂಪ್ರದಾಯ ಪ್ರಿಯರಿಗೆ ಈ ವಚನ ಚಳುವಳಿ ಏಟು ಕೊಟ್ಟಿತು. ಎಲ್ಲರಿಗೂ ಕೈಗೆಟುಕುವ ಮಾರ್ಗವನ್ನು ತೋರಿಸಿದರು. ವೇದ, ಶಾಸ್ತ್ರ, ಬಾಷ್ಯ, ತರ್ಕ ಮುಂತಾದವುಗಳ ಆರ್ಭಟದಿಂದ ಹೆದರಿದ ಅನಾದಿಕಾರಿ ಜನ ಸಾಮಾನ್ಯರು ಧರ್ಮಯೆಂದರೆ ಈ ತೆರನದ್ದಲ್ಲ ಎಂದು ಶರಣರು ತಿಳಿಸಿದಾಗ ಕೆಳವರ್ಗದವರಿಗೆ ಬೆಳಕಿನ ಮಾರ್ಗವನ್ನೇ ಕಂಡುಕೊಂಡಂತಾಯಿತು. ದೇವರನ್ನು ಗ್ರಂಥ ವಿದ್ಯೆಯಿಂದ ಕಂಡುಕೊಳ್ಳಲಾಗದು, ಅವುಗಳು ಸಾಧನೆಗಳೇ ಹೊರತು ಸಾಧ್ಯಗಳಲ್ಲ ಎಂಬುದನ್ನು ತಿಳಿಸಿದರು. ಸಾಮಾನ್ಯ ಕ್ರೀ ನುಡಿದಂತೆ ನಡೆ ಇದೆ ಮಾತು ಕಡೆ, ಇಂತಹ ಸಹಜಾಚರಣೆಗೆ ಎಲ್ಲರೂ ಮಾರುಹೋದರು. ಮಾಯಾ ಭ್ರಾಂತಿ ಮಲತ್ರಯಗಳನ್ನು ಹಿಂದೆ ಸರಿಸಿದವರೇ ಹಿರಿಯರು. ವೇದ, ಕರ್ಮಕಾಂಡ ತಿರಸ್ಕರಿಸಿ ಉಪನಿಷತ್ತಿನ ಜ್ಞಾನದರ್ಶನಕ್ಕೆ ಮಹತ್ವ ಕೊಟ್ಟರು. ಧರ್ಮವೆಂದರೆ ದಯವಿರಬೇಕು. ಆಧ್ಯಾತ್ಮಿಕದಲ್ಲಿ ಜೀವ - ಜಗತ್ತು - ಈಶ್ವರ ಸಂಬಂಧಗಳ ಶೂನ್ಯ, ಸೃಷ್ಟಿ, ಲಯ, ಷಟಸ್ಥಾಲಾಚರಣೆ, ಮುಕ್ತಿ, ದೇವರು, ಜೀವ ದೇವರ ಐಕ್ಯ ಹೀಗೆಲ್ಲಾ ವಿವರಣೆಗಳು, ಏಕದೇವೊಪಾಸನೆ, ದೇವರ ನೆಲೆ, ಗೊಡ್ಡು ಆಚಾರಗಳ ಉಚ್ಚಾಟನೆ, ದೇವರ ಬಗೆಗಿನ ಚಿಂತನೆ ಇಲಿ ಅಧ್ಯಯನಾತ್ಮಕ ವಿವರಣೆ ಬರುವದು.

> ಚಿತ್ತವೆಂಬ ಚಿತ್ತು ಬಲಿದು, ಲಿಂಗವೆಂಬ ಕಳೆಯಂಕುರಿಸಿ ಮೂರ್ತಿಯಾಯಿತು
> ..................... ಪ್ರಾಣ ಕಳೆಯ ಒಗಳು ತಾನೇ ನಮ್ಮ
> ಗುಹೇಶ್ವರ ಲಿಂಗದಲ್ಲಿ ಲೀಲಾ ಮೂಲದ ಪ್ರಥಮ ಭಿತ್ತಿ.[೧೫]

ಚಿತ್ತು ಎಂಬ ಭಾವನೆಯೇ ಬೀಜ ಲಿಂಗಬೆಳಗು ಹಿಡಿದರೆ ಬಯಲು ನೋಡಿದರೆ ಮೂರ್ತಿ, ಅಲ್ಲಿ ಇರೇಳು ಲೋಕವಡಗಿದೆ. ನೋಡುವಲ್ಲಿ ಇಷ್ಟಲಿಂಗಮೂರ್ತಿ, ತತ್ವತಹ ನಿರ್ಬಯಲು ಅರಿವಿಗಾಗಿ ಈ ಕುರುಹು. ನೈತಿಕ ಆಚರಣೆಗಳಿಂದ ನಿರ್ಮಲ ಜ್ಞಾನಿಯಾಗುವನು. ಆತನಿಗೆ ಕರ್ಮ ಬಂಧತೆಯಿಲ್ಲ. ಕರ್ಮ ಮಾಡದೇ ಬದುಕಲಿಕ್ಕೆ ಸಾಧ್ಯವಿಲ್ಲ. ಬದುಕಿನ ಅಭ್ಯುದಯಕ್ಕೆ ಕರ್ಮ ಬೇಕೆ ಬೇಕು. ಅಜ್ಞಾನದಿಂದ ಮಾಡಿದ ಕರ್ಮ ಬಂಧನಕ್ಕೆ ಕಾರಣವಾದರೆ ಜ್ಞಾನದಿಂದ ಮಾಡಿದ ಕರ್ಮ ಸಾಧಕ. ಕರ್ಮ ಜ್ಞಾನಗಳ ಸಮನ್ವಯ ಮಾರ್ಗ ಈ ಭಕ್ತಿಪಂಥದ ನಿಲುವು. ಭಕ್ತಿ - ಬೇರು, ವಿರಕ್ತಿ- ಮರ, ಜ್ಞಾನ - ಫಲ, ಜ್ಞಾನವಿಲ್ಲದ ಕ್ರೀ - ಅದು ಜಡ, ಕ್ರೀವಿಲ್ಲದ ಜ್ಞಾನ ಅದು ಭ್ರಾಂತಿ. ವ್ಯಕ್ತಿತ್ವ ಸಾಮಾಜಿಕ ಧಾರ್ಮಿಕ ಇವು ಮೂರನ್ನು ಕೂಡಿ ಸಮಗ್ರ ಅಧ್ಯಯನ ಎನ್ನಬಹುದು. ಬದುಕಿನ ಎಲ್ಲ ರಂಗಗಳಲ್ಲಿಯೂ ಎಲ್ಲರಿಗೂ ಸಮಾನ ಅವಕಾಶಗಳಿವೆ. ಶರಣರು ಈ

ಮೂರನ್ನು ಹೇಗೆ ಸಾಧಿಸಿ ತೋರಿಸಿದರೆಂಬುದನ್ನು ನೋಡಬಹುದು. ಚೈತನ್ಯ ಜಡದಲ್ಲಿ ಯಾವ ರೀತಿಯಿದೆ ಎಂಬುದಕ್ಕೆ ಪ್ರಭು ತನ್ನ ವಚನಗಳಲ್ಲಿ

ಶಿಲೆಯೊಳಗಣ ಪಾವಕನಂತೆ ......... ನಿಮ್ಮ ಶರಣ ಸಂಬಂಧ [೧೪೦]

ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ ........ ನಿಂದ ನಿಲುವ ಅನುಭಾವ ಸುಖಿಬಲ್ಲ [೧೪೧]

ಜಲದೊಳಗಣ ಕಿಚ್ಚು ಜಲವ ಸುಡದೆ .......... ಗುಹೇಶ್ವರಾ ನಿಮ್ಮ ನಿಲುವು [೧೪೨]

ಅಂದರೆ ಶಿಲೆಯೊಳಗಿರುವ ಅಗ್ನಿ ಸಂದರ್ಭ (ಭೂಕಂಪ) ಬಂದಲ್ಲಿ ಪ್ರಕಟವಾಗುವದು. ಆದರೆ ಅದು ಸುಪ್ತ ರೀತಿಯಲ್ಲಿದೆ. ನೀರಿನಲ್ಲಿಯ ಪ್ರತಿಬಿಂಬದಂತೆ, ಬೀಜದಲ್ಲಿಯ ವೃಕ್ಷದಂತೆ, ಶೂನ್ಯದಲ್ಲಿ ಸುಪ್ತವಾಗಿದ್ದ ಶಕ್ತಿ ಸಂದರ್ಭಾನುಸಾರ ಪ್ರಕಟವಾಗುವದು. ಕಲ್ಲೊಳಗಿದ್ದಾಗ ಅಗ್ನಿ ಧಹಿಸಲಾಗದು ಹೊರ ಬಂದಾಗ ಧಹಿಸುವದು. ಜಲದೊಳಗೆ ಅಗ್ನಿ ಇರುವದು ಆದರೆ ಪ್ರಸಂಗಾವದಾನದಲ್ಲಿ ಪ್ರಕಟಗೊಳ್ಳುವದು. ಭೂಮಿಯಲ್ಲಿ ನಿಧಿ ಇರುವಂತೆ ಜೀವಿಯಲ್ಲಿ ಪರಮಾತ್ಮನ ಅಂಶವಿದೆ. ಏನು ಇಲ್ಲದ ಮೊದಲು ಆದಿ ಆಧಾರಗಳಿಲ್ಲದಾಗ ಇದೆ ಎಂದು ಹೇಳುವವರು ಇಲ್ಲ, ಇರಬೇಕಾದ ವಸ್ತುವು ಇಲ್ಲ. ಯಾವುದೇ ಆಕಾರ ತಾಳದ ಮೊದಲಿನ ಬಯಲು ಸ್ಥಿತಿಯ ವಿವರಣೆ ಇದು. ಚಿದ್ ವಸ್ತು ಸತ್ಯವಾದದ್ದು, ಆ ವಸ್ತುವಿನಿಂದ ಮೊದಲು ಈ ಪ್ರಪಂಚದ ಉತ್ಪತ್ತಿ. ಪ್ರಪಂಚದಿಂದ ಜೀವೋತ್ಪತ್ತಿ. ಇದು ಒಂದು ಕ್ರಮವಾದರೇ ತಿಳಿಯುವಿಕೆ ಜೀವಿಯಿಂದಲೇ ಪ್ರಾರಂಭ. ನಂತರ ಪ್ರಪಂಚ. ತದನಂತರ ದೇವರು. ಒಂದು ಅವರೋಹಣ ಇನ್ನೊಂದು ಆರೋಹಣ. ಸತ್ಯ ವಸ್ತುವನ್ನು ತಿಳಿಯುವದೆಂದರೆ ನಿನ್ನನ್ನು ನೀನು ತಿಳಿದಂತೆ, ದೇವರನ್ನು ಅರಿಯುವ ಮೊದಲು ಹೇಗಿದ್ದೆ. ಅದು ನಿಶ್ಶಬ್ದದ ಸ್ಥಿತಿ. ಜ್ಞಾನ ದೃಷ್ಟಿಯಿಂದ ನೋಡಿದಾಗ ಆತ್ಮ ಸಾಕ್ಷಾತ್ಕಾರ. ಆಗ ತಿಳಿಯುವದು ಅವನೇ ದೇವ, ದೇವನೇ ಅವನು ಎಂದು. ಇದಕ್ಕೆ

ಎನ್ನ ನಾನರಿಯದ ಮುನ್ನ ನೀನೆನಾಗಿದ್ದೆ ಹೇಳಾ .......... ನಿನ್ನ ಬೆಡಗಿನ ಭಿನ್ನಾಣವರಿದೆ ನೋಡಾ.[೧೪೩]

ನೀ (ದೇವರು), ನಾ (ಜೀವ) ಮತ್ತು ಇದು (ಜಗತ್ತು) ಇವುಗಳ ಸಂಬಂಧಾತ್ಮಕ ಆಧ್ಯಾತ್ಮಿಕ ಅಧ್ಯಯನವೇ ದರ್ಶನ. ಜೀವದ ಬಗೆಗೆ

ಗಗನದ ಮೇಲೊಂದು ಅಭಿನವ ಗಿಳಿಹುಟ್ಟಿ ಸಯ ಸಂಭ್ರಮದಲ್ಲಿ ಮನೆಯ ಮಾಡಿತ್ತು
...................... ಇದೆಂತೋ ಗುಹೇಶ್ವರಾ.[೧೪೪]

ಜೀವನ ಅನ್ನುವ ಗಿಳಿ ಗಗನದ ಅವಕಾಶದಲ್ಲಿ ಹುಟ್ಟಿ ೨೫ ತತ್ವಗಳಿಂದ ಕೂಡಿದೆ.

ಪಂಚಭೂತಾತ್ಮಗಳಿಂದೊಡಗೂಡಿದ ಪಂಚವಿಂಶತಿ ತತ್ವಗಳೆಂದು ಕರೆಯುವರು. ಪಿಂಚರ ಎನ್ನುವ ದೇಹ ಜೀವನವನ್ನು ಕೊರೆಯುವಂತಿರುವ ವಿಷಯ ವಾಸನೆ, ಇವು ವಿಷ್ಣುವಿನ ಅಂಶಗಳು. ಅಜ್ಞಾನ ಮರೆವು ಇವು ರುದ್ರನ ಅಂಶಗಳು ಏಕೆಂದರೆ ಜವನ ಬಾಯಿಗೆ ಒಯ್ಯುವಂತವುಗಳು. ಜೀವಾತ್ಮ ಅನ್ನುವ ಗಿಳಿ ಮಾಯೆಯ ಭ್ರಮೆಯಿಂದ ಸತ್ತಂತಾಗಿದೆ. ಆ ಭ್ರಾಂತಿ ಸರಿದಾಗ ಜೀವಂತ. ಗಿಳಿ ಚಿತ್ ಶಕ್ತಿಯೆಂದು ಅದೇ ೨೫ ತತ್ವಗಳಾಗಿ ಪರಿಣಮಿಸಿತು. ಗಿಳಿಯ ಪಂಜರದೊಳಗೆ ಹೇಗೆಂದರೆ ಮಾನವ ಬ್ರಹ್ಮನೊಳಗಿಂದ ಉತ್ಪತ್ತಿ ಆದ್ದರಿಂದ ಬ್ರಹ್ಮ ಪಂಜರ, ವಿಷ್ಣು ಸಲಹುವವನಾದ್ದರಿಂದ ಆಹಾರ, ರುದ್ರನ ಕೆಲಸ ಸಂಹಾರ ಆದ್ದರಿಂದ ಕೋಲಾದ. ಈ

ಜಗತ್ತು ಈ ಮೂರರ ಕೂಸು ಇವೆಲ್ಲವೂ ಚಿತ್ತದ ಆಟವೆಂದು ತಿಳಿದಾಗ ಅಲ್ಲಿ ನಾಮರೂಪ ಕ್ರಿಯೆಗಳು ಅಳಿದು ಒಂದೇ ಶಕ್ತಿ ಮಾತ್ರ ಇರುವದು ಇದು ಸೃಷ್ಟಿಯ ಕ್ರಮ.

ಸೃಷ್ಟಿಗೆ ಹೊಂದಿದಂತೆಯೇ ಇನ್ನೊಂದು ವಿಲಾಸ ವಿಡಂಬನ -

ಅಡವಿಯೊಳಗೆ ಕಳ್ಳರು ಕಡವಸದ ಸ್ವಾಮಿಯನು ಹುಡುಕಿ ಅರಸುತ್ತೈದಾರೆ ........... ಆಧ್ಯಾತ್ಮಿ ವಿಕಾರದ ನೆತ್ತರು ಕುಡಿದರು ಗುಹೇಶ್ವರ.[೧೪೫]

ತನ್ನನ್ನು ತಿಳಿಯಲರಿಯ ಜೀವರೆಲ್ಲರೂ ಇದ್ದ ಜಾಗವನ್ನು ಬಿಟ್ಟು ಇಲ್ಲದ ಜಾಗದಲ್ಲಿ ಹುಡುಕುತ್ತಿದ್ದಾರೆ. ಭಗವಂತನ ಕಾಣುವ ಸ್ಥಿತಿಯಲ್ಲಿ ನಡೆಯುವವರು ಭಕ್ತರು. ತನ್ನಲ್ಲಿರುವ ಭಗವಂತನನ್ನು ಹುಡುಕಲಿಕ್ಕೆ ಪರಿಶ್ರಮ ಪಡುತ್ತಿರುವರು. ಅದಕ್ಕಾಗಿ ಅಡವಿಗೆ ಹೋಗಿ ತಪಸ್ಸು ಮಾಡಿದರೆ ಕತ್ತಲೆಯ ಕೈಯಲ್ಲಿ ದೀಪ ಹಿಡಿದು ನಡೆಯುವಾಗ ದೀಪ ಆರಿದಂತೆ ಇವರ ಸ್ಥಿತಿಯಾಗಿದೆ. ದೀಪವೇನು ಕೈಯಲ್ಲಿ ಇದೆ ಆದರೆ ಆರಿದೆ. ಭಕ್ತಿಯಿದೆ ಕೈಯಲ್ಲಿ ಲಿಂಗವಿದೆ ಅದನ್ನು ಸರಿಯಾಗಿ ಅರಿಯದೇ ದಾರಿಬಿಟ್ಟು ಬೇರೆಡೆ ಸಾಗಿದೆ. ಇಲ್ಲಿ ಮೂರು ತೆರನದ ಹೋಲಿಕೆಯಿದೆ. ಬೌದ್ಧ ಅರಣ್ಯವಾಸಿ ಬಿಕ್ಕುಗಳಲ್ಲಿ ದೇಹ ದಂಡನೆ, ನಿಯಮ ವ್ರತ ಶೀಲಗಳಿವೆ. ಆದರೆ ಯಾತಕ್ಕಾಗಿ ಈ ನಿಯಮಗಳು ಅನ್ನುವದು ಮರೆತಿದೆ. ಎರಡನೆಯದಾಗಿ ಸೌತ್ರಾಂತೀಯಕರು ಒಂದು ರೀತಿಯ ವಾಮಾಚಾರಿಗಳು ಮದ್ಯ ಮಾಂಸ ತಿಂಬುವವರು ಅಂತಹ ಅಮಲಿನಲ್ಲಿ ದೇವರನ್ನು ಕಾಣಲು ಹವಣಿಸುವರು. ಜಾಗ್ರತದಲ್ಲಿ ದೇವರು ಸಿಗದ ಸ್ಥಿತಿ ಇದ್ದಾಗ ತಮಂಧದಲ್ಲಿಯಂತೂ ಬಹುದೂರ, ಅಧರ ಪಾನ ಪರಸ್ತ್ರೀಯ ಭೋಗ ವಿಲಾಸದಲ್ಲಿ ತೊಡಗಿ ತನ್ನನ್ನು ತಾನು ಮರೆತಿರುವನು. ವೇದವನೋದುವ ಹಾರುವ ಬಲಿರಕ್ತ ಮುಂತಾದ ಕರ್ಮ ಫಲಗಳಲ್ಲೇ ಪರ್ಯಾವಸಾನ ಹೊಂದುವನು. ಆಧ್ಯಾತ್ಮಕ ಹೆಸರಿನಲ್ಲಿ ಕೆಚ್ಚಲೊಳಿರುವ ಉಣ್ಣೆಯಂತೆ ರಕ್ತ ಕುಡಿಯುವವರೇ ವಿನಹ, ಆನಂದದ ಅಮೃತ ಹಾಲು ಸಿಗುತ್ತಿಲ್ಲ. ಆಧ್ಯಾತ್ಮ ಆಷಾಢಭೂತಿತನದ ವಿಡಂಬನೆಯಿದು. ಏನನ್ನು ಅರಿಯಬೇಕೆಂದು ತಿಳಿಯಲು ಹೊರಟಿರುವರೋ ಅದನ್ನು ಮರೆತು ಸಾಧನೆಯಲ್ಲಿಯೇ ಮೈಮರೆತಿರುವರು.

> ಅಯ್ಯಾ ನಿನಗೆ ಗುರುವಪ್ಪಡೆ, ನಾ ನಿನಗೆ ಶಿಷ್ಯನಪ್ಪಡೆ .............
>
> ............ ಕರಸ್ಥಲಕ್ಕೆ ಬಂದು ಕಾರುಣ್ಯವ ಮಾಡಾ ಗುಹೇಶ್ವರ.[೧೪೬]

ಇಲ್ಲಿ ಪ್ರಭು ಅನಿಮಿಷನಿಂದ ದೀಕ್ಷೆ ಪಡೆಯುವ ಪ್ರಸಂಗವಿದೆ. ಅನಿಮಿಷನ ಲಿಂಗವನ್ನು ಪ್ರಭು ಕಿತ್ತಿಕೊಂಡ ಎನ್ನುವದನ್ನು ಈ ವಚನ ಹುಸಿಗೊಳಿಸುತ್ತದೆ. ಗುರುವಾಗಿದ್ದರೆ ನೀನೆ ಎನಗೆ ಲಿಂಗದೀಕ್ಷೆಯನ್ನು ಮಾಡು ಎಂದು ಪ್ರಭು ಬೇಡಿಕೊಳ್ಳುವದನ್ನು ನೋಡಿದರೆ ಅನಿಮಿಷ ಲಿಂಗ ದೀಕ್ಷೆಯನ್ನು ಮಾಡಿದ್ದು ವಿಧಿತವಾಗುವದು. ನನ್ನ ಉದ್ಧಾರವಾಗಬೇಕೆಂದು ನೀನು ಬಯಸಿದ್ದರೆ ನೀನೆ ನನಗೆ ಲಿಂಗಧಾರಣೆ ಮಾಡಬೇಕು. ಇದು ಪ್ರಭುವಿನ ಷರತ್ತು. ಕರಣೇಂದ್ರಿಯ ಗುಣಗಳ, ಕಾಯದ ಕರ್ಮವನ್ನು ಅದರಂತೆ ವಾಯುವನ್ನು ವಿಮುಖಗೊಳಿಸಿ ಕಾಯ ಪ್ರಾಣ ಭಾವಗಳನ್ನು ಶುದ್ಧಮಾಡಿ ಕರಸ್ಥಲದಲ್ಲಿ ಲಿಂಗವನ್ನು ಸ್ಥಾಪಿಸುವುದೇ ದೀಕ್ಷೆ. ಈ ವಚನದಿಂದ ಪ್ರಭು ಕರಸ್ಥಲದ ಲಿಂಗಪೂಜಕವೆಂಬುದು ನಿಸ್ಸಂಶಯ. ಅಂದರೆ ಪ್ರಭುವಿನ ದರ್ಶನ ಲಿಂಗಾಯತದ ನಿದರ್ಶನವಾಗಿದೆ. ಪ್ರಭು ಈ ಕರಸ್ಥಲ ಲಿಂಗದೃಷ್ಟಾರ.

ಅಕ್ಷರವ ಬಲ್ಲವೆಂದು ಅಹಂಕಾರ ವೆಡೆಗೊಂಡು ತಕ್ಕೆಗೊಳ್ಳರಯ್ಯ .......

............... ವಾಗದ್ವೈತವ ಕಲಿತು ವಾಧಿಸುವರಲ್ಲದೇ .........

.......... ಗುಹೇಶ್ವರ ಸಲೆಕೊಂಡ ಮಾರಂಗೆ.[೧೪೭]

ವೇದ ಶಾಸ್ತ್ರ ಆಗಮ ಪುರಾಣ ಮುಂತಾದವುಗಳನ್ನು ಓದಿ ಆಳಕ್ಕಿಳಿಯದವರು ಮಾತಿನ ಮಲ್ಲರೆ ವಿನಹ ಆಧ್ಯಾತ್ಮವಾದಿಗಳಾಗಬಲ್ಲರು. ಅವರು ವಿದ್ಯಾವಂತರು ಆದರೆ ಅನುಭಾವಿಗಳಲ್ಲ. ಅವರ ಗುರಿ ಕೇವಲ ಪಠಿಸುವದಕ್ಕೆ ಮಾತ್ರ ಸೀಮಿತ. ಭಕ್ತಿ, ಯುಕ್ತಿ, ಮುಕ್ತಿ ಹೀಗೆ ಕ್ರಮವಾಗಿ ಸಾಗುವದನ್ನು ಬಿಟ್ಟು ವಾದ ಮಾಡುತ್ತ ಮಾತಿನ ಮಾಲೆಗೆ ಸಾಗುವದು ನಿಷ್ಫಲ. ಶಾಸ್ತ್ರವೆಲ್ಲಾ ಬಲ್ಲೆನೆಂಬ ಅಹಂಕಾರಕ್ಕೊಳಗಾಗಿ ಎಲ್ಲವು ತನಗೆ ಗೊತ್ತಿದೆ ಎಂಬ ಸ್ವಭಾವನೆ ತಲೆತುಂಬಿ ನಿಜಾನುಭಾವಿ ಸಂತರನ್ನು ಅಲಕ್ಷಿಸಿ ಜೀವ - ಜಗತ್ತು - ಈಶ್ವರಗಳ ಕೇವಲ ತಿಳಿದರೇ ಅದರಿಂದ ನಿಜ ಬದುಕಿನ ಗುರಿಯನ್ನು ಸಾಗಿಸಲಾಗದು.

ಎಣ್ಣೆ ಬೇರೆ ಬತ್ತಿ ಬೇರೆ ಎರಡು ಕೂಡಿ ಸೊಡರಾಯಿತ್ತು

............. ಭಕ್ತಿಯ ಮಾಡಬಲ್ಲಾತನೆ ದೇವ ಕಾಣಾ ಗುಹೇಶ್ವರ.[೧೪೮]

ಎಣ್ಣೆ ಮತ್ತು ಹತ್ತಿ ಬೇರೆ ಬೇರೆ ಗುಣಧರ್ಮದ ವಸ್ತುಗಳು ಎರಡು ಕೂಡಿದಾಗ ದೀಪವಾಗುವುದು. ಹಾಗೆ ಪುಣ್ಯ - ಪಾಪ ಎರಡು ಸೇರಿ ಈ ಶರೀರವಾಗಿದೆ. ಒಡಲ ವ್ಯಾಘ್ರುವನ್ನು ಸಮಾಧಾನಪಡಿಸಲೋಸುಗ, ಆಸೆ ಆಮಿಷ ಹಸಿವೆ ತೃಷೆಗಳನ್ನು ಪೂರೈಸಲು ನಿಮಿಷವು ಬಿಟ್ಟು ಬಿಡದೇ ಕಾರ್ಯಗತವಿದೆ. ಸಾಯುವವರೆಗೂ ಇದರ ತೃಪ್ತಿ ಮಾಡುವುದರಲ್ಲಿಯೇ ಹೋಯಿತು. ಅಂದರೆ ಜೀವನು ಶಿವನಾಗುವುದು ಯಾವಾಗ, ಪಂಚಭೂತಾತ್ಮಗಳಲ್ಲಿ ಶರೀರ ಸೇರಿ ಹೋಗುವ ಮುಂಚೆ ಜೀವನು ಎಚ್ಚರವಾಗಿ ಭಕ್ತಿಯೋಗದಿಂದ ಸಾಗಿದ ಸಾಧಕನೇ ದೇವನು. ಃ'ಅಣೋ ರಣಿಯನ್ ಮಹಲೋ ಮಹಿಯಾನ್ ' ಎಂಬ ಶೃತಿ ಹುಸಿ ............. ಭಕ್ತರ ಭಾವದಲ್ಲಿಪ್ಪನೆ ಮತ್ತೆಲ್ಲಿಯು ಇಲ್ಲ ಗುಹೇಶ್ವರ. ದೇವರು ಈ ಪ್ರಪಂಚದ ಕಣಕಣದಲ್ಲಿಯೂ ಹುದುಗಿದ್ದಾನೆ ಎಂಬ ಆಗಮದ ಮಾತು ಸರಿಯಾಗಿದ್ದರೂ ಅದಕ್ಕಿಂತ ಸ್ಪಷ್ಟವಾಗಿ ಭಕ್ತರ ಭಾವದಲ್ಲಿರುವನು. ಜಗತ್ತಿಗೆ ಪ್ರಳಯ ವಿಕಾರಗಳುಂಟು. ಆದರೆ ಭಕ್ತನ ಭಾವಕ್ಕೆ ಯಾವುದೇ ವಿಕಾರಗಳಿಲ್ಲ. ಇವೆಲ್ಲವುಗಳು ಅದ್ವೈತ ಸ್ಥಿತಿಯ ಪ್ರತಿಬಿಂಬಕಗಳು.

ಪ್ರಣತೆಯೂಯಿದೆ ಬತ್ತಿಯು ಇದೆ ..............

....... ಸೊಹಂ ಎಂಬುದ ಕೇಳಿ ದಾಸೋಹವ ಮಾಡದಿದ್ದರೆ ಅತಿಗಳಿವೆ ಗುಹೇಶ್ವರಾ.[೧೪೯]

ಪ್ರಣತೆ ಬತ್ತಿ ಎರಡು ಇದ್ದರೆ ಸಾಲದು ಅದಕ್ಕೆ ಎಣ್ಣೆಯೂ ಬೇಕು ಹಾಗೆ ಗುರುಲಿಂಗ ಜಂಗಮರಿದ್ದರೇ ಅಷ್ಟೇ ಸಾಲದು ಸುಜ್ಞಾನ ಭಕ್ತಿ ಶಿಷ್ಯನಲ್ಲಿ ಜಾಗ್ರತವಾಗಬೇಕು. ತಾನು ದೇವನೆಂಬುದನ್ನು ತಿಳಿದು ತಿಳಿದು ಗುರುಜಂಗಮರನ್ನು ಮರುವುಗೊಂಡು ದಾಸೋಹವ ಮಾಡದೇ ಹೋದ ಪರಿಯನ್ನು ಪ್ರಭು ತಿರಸ್ಕರಿಸುವನು.

ಯೋಗ ಶಿವಯೋಗವೆಂದೆಂಬರು ..............

......... ಸೋಹಂ ಎಂಬಲ್ಲಿ ಸುಳುವು ಅಡಗಿ ............. ನೀನು ಸ್ವತಂತ್ರ ಧೀರನೆಂದು ಕಾಣಬಂದಿತ್ತು ಸಿದ್ಧರಾಮಯ್ಯ.[೧೫೦]

೫೨ ಅಕ್ಷರಗಳ ದಾಟಿದ ಸಹಸ್ರ ಕಮಲದ ಬ್ರಹ್ಮರಂಧ್ರ ಅದಕ್ಕೆ ಆನಂದಮಯ ಸ್ಥಿತಿ ಮಹಾಂತನ ನೆಲೆ ನಿರ್ಲಿಪ್ತಭಾವ ನಿನ್ನಲ್ಲಿ ಕಾಣಬರುತ್ತಿದೆ ಎಂದು ಪ್ರಭು ಸಿದ್ಧರಾಮನಿಗೆ ಹೇಳುವನು.

ಸ್ಥಿರಾಸನದಲ್ಲಿದ್ದು ಸ್ವರವು ನಾಲ್ಕರ ನೆಲೆಯರಿದು ................
........... ದಾಸೋಹವಳಿದು ಸೋಹವಾಗಲು ಹಂಸೆಯ ಗತಿಗೆಟ್ಟು ಪರಮಹಂಸನಾಗಿ
ಸೋಹಂ ಸೋಹಂನೆಂಬುದು ಗುಹೇಶ್ವರ.[೧೫೧]

ವಿಯೋಗದಿಂದ ಶಿವನಿಂದ ಸಿಡಿದುಬಂದ ಜೀವ ಯೋಗ ಸಾಧನೆಯಿಂದ ಮತ್ತೆ ಅವನನ್ನು ಕೂಡುವುದು. ಜೀವ ದೇವನನ್ನು ಹೊಂದುವದಕ್ಕೆ ಸಾಧನ ಯೋಗ, ಇದನ್ನು ಸಾಧಿಸಬೇಕಾದಲ್ಲಿ ವಾಯು ದಿಕ್ಕನ್ನು ಬದಲಾಯಿಸಬೇಕಾಗುವುದು. ಈ ಜೀವಹಂಸ ಪರಮಹಂಸನಾಗಲು ವಾಯುಹಂಸದ ಗತಿಯನ್ನುಗೆಡಿಸಲೇಬೇಕು. ಆಗ ಅದು ಸೋಹಂ ಸ್ಥಿತಿ.

ನಿತ್ಯ ನಿರಂಜನ ತಾನೆಂದರಿಯದೇ ತತ್ವಮಸಿಯೆಂದು
.................... ಎತ್ತಣ ಮುಕ್ತಿ ಗುಹೇಶ್ವರಾ.[೧೫೨]

ಕೇವಲ ಬಾಹ್ಯ ಕ್ರಿಯಾ ಆಚರಣೆ ಕಲಾಪಗಳಲ್ಲಿ ತಲ್ಲೀನನಾಗಿ ಕರಿಯ ಕೆಂಚನ ನೆನೆದರೆ ಕೆಂಚನಾಗಬಲ್ಲನೆ ಆ ತತ್ವವು ನೀನೆಂದು ತಿಳಿಯದೇ ಮುಕ್ತಿ ಹೊಂದಿದವರನ್ನು ನೆನೆದರೆ ಮಾತ್ರ ಮುಕ್ತಿ ದೊರೆಯುವುದು ಅಸಾಧ್ಯ.

ವಾಯು ನಿದ್ರೆಗೈದೆಡೆ ಆಕಾಶ ಜೋಗುಳವಾಡಿತ್ತು ..............
......... ಗುಹೇಶ್ವರ ಅದಾನೆ ಇಲ್ಲದಂದು.[೧೫೩]

ಪ್ರಾಣವಾಯು ಸ್ಥಿಮಿತಕ್ಕೆ ಬರಲು ಶಿವೋಹಂ, ಶಿವೋಹಂ ಎಂದು ಪೂರಕದಲ್ಲಿ ಕಂಡುಬರುವುದು. ಒಳಗಿನ ಬಯಲು ಹೊರಗಿನ ನಿರ್ಬಯಲು ಬಯಲಿಗೆ ನಿರ್ಬಯಲೇ ತೊಟ್ಟಿಲು ಪೋಷಣೆ, ಸುರಾಳ ನಿರಾಳದ ಆಶ್ರಯದಲ್ಲಿ ಯಾವುದೇ ಶಿವೋಹಂ ಶಿವೋಹಂ ಶಬ್ದಗಳಿಲ್ಲ. 'ನಿಶಬ್ದಂ ಬ್ರಹ್ಮ ಉಚ್ಚತೇ' ಎನ್ನುವಂತೆ ಅದಾನೆ ಇಲ್ಲದಂತೆ ಗುಹೇಶ್ವರಾ.

ಪ್ರಣವ ನುಚ್ಚರಿಸುವ ಪ್ರಮಾಣಿಕರೆಲ್ಲರು, ಪ್ರಣವ ಮಂತ್ರದ ಅರ್ಥ ತಿಳಿದು ನೋಡಿರೆ ಪ್ರಣವ ನಾಹಂ ಎಂಬುದೇ .......... ಪ್ರಣವ ........ ಕೋಹಂ ಎಂಬುದೇ, ಪ್ರಣವ ಸೋಹಂ ಎಂಬುದೇ ಪ್ರಣವ ಚಿದಹಂ ಎಂಬುದೇ? ............. ಪ್ರಣವದರ್ಥವ ತಾನೆ ನಿಮ್ಮಯ ಗುಹೇಶ್ವರ.[೧೫೪]

ಪದಕ್ಕೊಂದು ಅರ್ಥವಿದ್ದಂತೆ ಪ್ರಾಣಕ್ಕೊಂದು ಅರ್ಥವಿದೆ. ಇಲ್ಲಿ ನಾಹಂ - ಅದು ನಾನಲ್ಲ, ಸೋಹಂ - ಅದು - ನಾನಲ್ಲ, ಸೋಹಂ - ಅದು ನಾನು (ಅವನೇ ನಾನು, ಅದೇ ನಾನು). ಚಿದಹಂ - ನಾನು - ಅದರ ಅಂಶ, ಕೋಹಂ - ನಾನು ಯಾರು ಮುಂತಾದವುಗಳ ಪ್ರಣವ ಶಬ್ದಕ್ಕೆ ಅರ್ಥಗಳುಂಟು. ಮೀಮಾಂಸಕರ ಶಬರಸ್ವಾಮಿಯಂತೆ ಅರ್ಥಕ್ಕೆ ಬೆಲೆಯೆಂಬುದಿದೆ ಆದರೆ ಶಬ್ದಕ್ಕಿಲ್ಲ. ಶಬ್ದವನ್ನು ತಿಳಿಯುವ ಸತ್ಯವೆಂದರೆ ಅದರ ಅರ್ಥ, ಗೀತೆಯಲ್ಲಿ ತಿಳಿಯುವ ನಾನಲ್ಲ ಎಂಬ ಅರ್ಥವಿದೆ, ಅಂದರೆ ಶಬ್ದ ಶ್ರೋತ್ರದ ಎಂಜಲು, ಭಾಷೆಯನ್ನು ದೈವಿಕರಿಸಲು ಬರುವುದಿಲ್ಲ. ಆದರೆ ಇಲ್ಲಿ ಪ್ರಣವದ ಅರ್ಥವೆಂದರೆ ಶಿವ ಪಾತಾಂಜಲಿಯಲ್ಲಿ

ಅದೃಶ್ಯರೂಪದಿಂದಿರುವ ಸತ್ಯಗಳು ಪ್ರಭುವಿನಲ್ಲಿ ಸ್ಪಷ್ಟತೆಯನ್ನು ಕಂಡುಕೊಂಡಿದೆ. ಗೀತವೆಲ್ಲಾ ಮಾತಿನಲ್ಲಿದೆ ಎಂದರೆ ಅದರ ಅರ್ಥಕ್ಕೆ ಬೆಲೆಯಿದೆ. ವೇದ ಮಂತ್ರಗಳಲ್ಲಿ ಬೇರೆ ಬೇರೆ ದೇವರನ್ನು ಬೇರೆ ಬೇರೆ ಮಂತ್ರಗಳಿಂದ ಸ್ತುತಿಸುವುದಾಗಿದೆ. ಆದರೆ ತಾಂತ್ರಿಕದಲ್ಲಿದ್ದಂತೆ ನಾ ನೀ ಬೇಧವಿಲ್ಲ. ಅದೇ ನಾನಾಗಿ ಪರಿಣಮಿಸುವುದಾಗಿದೆ. ದಾರ್ಶನಿಕ ನಿಲುವಿನಲ್ಲಿ ಶೈವದ ತಂತ್ರ ಪ್ರಭುವಿಗೆ ಹತ್ತಿರವಾಗಿದೆ. ಪ್ರಭುವಿನ ಈ ಒಂದು ದಾರ್ಶನಿಕ ವಚನಗಳು ಮೀಮಾಂಸಕರಿಗೆ ದಿಗ್ದರ್ಶನ ಮಾಡುವಂತವು.

ಘನತರ ಚಿತ್ರದ ರೂಹ ಬರೆಯಬಹುದಲ್ಲದೇ

.............. ಈ ಗುಣಗಳಲ್ಲಿ ನೀನಿಹೆ ಇಲ್ಲದಲ್ಲಿ ನೀನಿಲ್ಲ ಗುಹೇಶ್ವರ.[೧೫೫]

ದೇಹದ ಚಿತ್ರವನ್ನು ಬರೆಯಬಹುದಾದರೆ ಅದರ ಪ್ರಾಣವನ್ನು ಚಿತ್ರದಲ್ಲಿ ಸೆರೆ ಹಿಡಿಯಲಿಕ್ಕಾಗದು. ದೀಕ್ಷೆ ಮಾಡಿ ಲಿಂಗ ಕಟ್ಟಿಕೊಳ್ಳಬಹುದು. ಜಪ ಕ್ರಿಯೆ ಧ್ಯಾನಗಳನ್ನು ಮಾಡಬಹುದು. ಧರ್ಮ ಗ್ರಂಥಾಧ್ಯಯನ ಮಾಡಿದರೂ ಕೂಡಾ ಅನುಭಾವದ ನಿಲುವು ಇದಕ್ಕೆ ಮೀರಿದೆ. ಅದು ಅಂತರ್ಯದಿಂದಲೇ, ಹೂವಿನಿಂದ ಸುಗಂಧ ವಸರುವಂತೆ ಭಕ್ತನಿಂದ ಭಕ್ತಿ ಸುಗುಣಗಳು ವಸರಬೇಕು. ಅಲ್ಲಿ ದೇವನಿರುವನು.

ಕಾಯಕ್ಕೆ ಮಜ್ಜನ ಪ್ರಾಣಕ್ಕೆ ಓಗರ ಇದ ಮಾಡಲೇಬೇಕು

................. ಗುಹೇಶ್ವರನೆಂಬಲಿಂಗಕ್ಕೆ ಆತ್ಮವುಳ್ಳವನಕ್ಕ ಭಕ್ತಿಯ ಮಾಡಬೇಕು.[೧೫೬]

ಜೀವ ಇರುವಿಕೆಗೆ ಸ್ನಾನ ಆಹಾರ ಮುಂತಾದವುಗಳ ಅವಶ್ಯಕತೆಯಿದೆ. ಜೀವ ಇರುವವರೆಗೆ ದೇಹಕ್ಕೆ ಉಪಚಾರಮಾಡುವಂತೆ ಲಿಂಗಕ್ಕೆ ಓಗರ ಮಾಡಬೇಕು. ಸ್ನಾನ ಭೌಜ್ಯಾದಿಗಳು ಎಷ್ಟು ಮುಖ್ಯವೋ ಆತ್ಮವುಳ್ಳನಕ್ಕ ಭಕ್ತಿಯ ಅವಶ್ಯಕತೆಯಿದೆ, ಭಕ್ತಿ ಇದು ಐದನೇ ಪುರುಷಾರ್ಥ.

ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ

.................... ಸದ್ಭಕ್ತನಾದೆನಯ್ಯಾ[೧೫೭]

ಸಾಧನ ಮಾರ್ಗ ಭಕ್ತಿಯೋಗದಲ್ಲಿ ಮುಕ್ತಿಯೇ ಪರಮಧ್ಯೇಯ. ಸತ್ಯ ಸಾಕ್ಷಾತ್ಕಾರವೆಂದರೂ ಒಂದೆ, ಆತ್ಮ ಜ್ಞಾನವೆಂದರೂ ಒಂದೆ. ಪರಮಾತ್ಮನೊಡನೆ ಸಮರಸವಾಗುವುದೆಂದರೂ ಒಂದೆ. ಒಟ್ಟಾರೆ ಅದ್ವೈತವನ್ನು ಮೀರಿದ ಗುರಿಗಾರಿಕೆ ಇಲ್ಲಿದೆ. ಶುದ್ಧ ಬುದ್ಯಾತ್ಮಕವಾಗಿ ಹೊಂದಲುಬಹುದು. ಅತೀ ಸರಳ ಸಾಧನ ಭಕ್ತಿಯಿಂದಲೂ ಹೊಂದಬಹುದು. ಜ್ಞಾನ ಬುದ್ಧಿಯ ಕಾರ್ಯವಾದರೆ ಭಕ್ತಿಯು ಭಾವದ ಕಾರ್ಯ. ಭಾವವನ್ನು ಶುದ್ಧೀಕರಿಸಿ ಪರಮಾತ್ಮನಲ್ಲಿ ಅನನ್ಯ ಭಕ್ತಿಯೊಂದಿಗೆ ತನ್ನನ್ನು ಅರ್ಪಿಸುವುದರಿಂದ ಆತ್ಮ ಜ್ಞಾನ ನಿಚ್ಚಳವೂ, ದೃಢವೂ ಅಗುತ್ತಾ ಸಾಗುವುದು. ಜ್ಞಾನದಿಂದ, ಭಕ್ತಿಯಿಂದ ಸಾಧನೆಗಳಿಂದ ಆತ್ಮ ಸಾಕ್ಷತ್ಕಾರ ಪಡೆಯುವುದು ಕಷ್ಟಕರವಾಗಿರುವಲ್ಲಿ ಕೇವಲ ಬಾಯಿಮಾತಿನ ಅದ್ವೈತಕ್ಕೆ ಹ್ಯಾಗೆ ಸಾಕ್ಷಾತ್ಕಾರವಾದೀತು. ಇದಕ್ಕೆ ಸಂಬಂಧಿಸಿದ ಹಲವು ಸಾಕ್ಷಾತ್ಕಾರಿ ವಚನಗಳನ್ನು ನೋಡಬಹುದು.

ಧ್ಯಾನ ಆಧ್ಯಾತ್ಮಿಕದಲ್ಲಿ ಕಂಡಿಹೆನೆಂಬರು

ಜೀವನಲ್ಲದೆ ಪರಮನಲ್ಲ ............

....... ಭಾವದಿಂದ ಪ್ರಮಾಣಿಸುವುದೇ ಏಕರೂಪ ಗುಹೇಶ್ವರಲಿಂಗ ತಾನೆ?[೧೫೮]

ಆಧ್ಯಾತ್ಮಿಕವೆಂದರೆ ಕೇವಲ ಪರವಸ್ತುವಿನ ಕುರಿತೆ ಅಲ್ಲ, ಜೀವನ ಪರಮನನ್ನು ಅನುಭವಿಸುವವರೆಗೆ ಮಾಡುವ ಸಾಧನೆಯ ಪ್ರಕ್ರಿಯವೇ ಆಧ್ಯಾತ್ಮಿಕ. ಪರಮನನ್ನು ಕೂಡಿದ ಜೀವಿತದ ಅಭ್ಯಾಸ. ಬ್ರಹ್ಮಜ್ಞಾನವೆಂದರೆ ತನ್ನಲ್ಲಿರುವ ಬ್ರಹ್ಮಾಂಶವನ್ನು ತಿಳಿಯುವದು, ಬ್ರಹ್ಮಾಂಶವೇ ಜೀವ, ಆದ್ದರಿಂದ (Know they self) ನಿನ್ನನ್ನು ನೀ ತಿಳಿ ಅಂದರೆ ಪರಿಪೂರ್ಣತ್ವದ ಆನಂದದ ಅಮೃತ ವಿಹಾರ. ಬೆಳಿನ ಹುಲ್ಲುಗಾವಲು ನೀನು ಪರಮಾಮೃತ ಹುಲ್ಲನ್ನು ಮೆಯಿಯ ಭಾವವೆಂಬ ಕುರಿ. ಅಲ್ಲಿ ತೃಪ್ತಿ. ಉಪಾಧಿಕ ಅಂದರೆ ಉಪಾಧಿಗಳನ್ನು ಹಚ್ಚಿಕೊಂಡಿರುವುದು. ನಿರೂಪಾದಿಕವೆಂದರೆ ಏನನ್ನು ಹಚ್ಚಿಕೊಳ್ಳದಿರುವುದು. ಉಪಾದಿ - ನಿರುಪಾಧಿಕರೆಡಕ್ಕೂ ಅತೀತಭಾವ. ಅದಕ್ಕಿಂತ ಮುಂದೆ ಬಿಂದು ನಿಲ್ಲುವಿಕೆ, ಸತ್ಯವು ತಾನೇ ಪರಬ್ರಹ್ಮವಾದಂತೆ

ಪ್ರಾಣಲಿಂಗಕ್ಕೆ ಕಾಯವೇ ಸಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ
.................. ಇದು ಅದ್ವೈತ ಕಾಣಾ ಗುಹೇಶ್ವರ.[೧೫೯]

ಬಾಯಿ ಭಗವಾಗಿ ಕೈ ಇಂದ್ರಿಯವಾಗಿ
.................. ಗುಹೇಶ್ವರ ಏಕೋದ್ವೈತ? [೧೬೦]

ನಾ ದೇವನಲ್ಲದೇ ನೀ ದೇವನೆ
............ ನಾ ದೇವ ಕಾಣಾ ಗುಹೇಶ್ವರ [೧೬೧]

ದೇಹವೇ ದೇಗುಲವಾಗಿರಲು ಬೇರೆ ಮತ್ತೆ ದೇಗಲವೆಕಯ್ಯಾ
............. ಗುಹೇಶ್ವರಾ ನೀನು ಕಲ್ಲಾದರೆ ನಾನೆನಪ್ಪ.[೧೬೨]

ಕಂಗಳ ಬೆಳಗ ಕಲ್ಪಿಸಬಾರದು ...........
.......... ಅಣುರೇಣು ತೃಣಕಾಷ್ಠಭರಿತ ಮನೋಹರನಿಂದ ನೀರಾಳ ಗುಹೇಶ್ವರ.[೧೬೩]

ಮರದೊಳಗಣ ಪತ್ರಿ ಫಲಂಗಳು ಮರ ಕಾಲವಶದಲ್ಲಿಪ್ಪಂತೆ
................. ಲೀಲೆಯಾದರೆ ಉಮಾಪತಿ, ಲೀಲೆ ತಪ್ಪಿದರೆ
ಸ್ವಯಂಭು ಗುಹೇಶ್ವರ [೧೬೪]

ಬಾಹ್ಯ ಕುರುಹಿನ ಪೂಜೆಯನ್ನು ಮಾಡುತ್ತಾ ಅಂತರಂಗದ ಪ್ರಾಣಲಿಂಗಕ್ಕೆ ಸಾಗಬೇಕು ಹೊರಗಿನದು ಇಷ್ಟಲಿಂಗ ಒಳಗಿನದು ಪ್ರಾಣಲಿಂಗ. ಸ್ಥೂಲ ಶರೀರಕ್ಕೆ ಇಷ್ಟಲಿಂಗ ಪೂಜೆ ಅವಶ್ಯಕ. ನೀರಿನ ಅಭಿಷೇಕ, ಪರಿಮಳದ ಪೂಜೆ, ಮಂತ್ರ ಪಠಣ ಇತ್ಯಾದಿಗಳು. ಪ್ರಾಣಲಿಂಗಕ್ಕೆ ಸೂಕ್ಷ್ಮ ಶರೀರವೇ ಕರಡಿಗೆ ಸಹಸ್ರ ದಳದ ಹಿಮಾಲಯದ ಅಮೃತಜಲ ಸ್ನಾನ, ಭಾವವೆಂಬ ಪುಷ್ಪ ಪರಿಮಳಕ್ಕೆ ಇಂಬಿಲ್ಲ ಹೃದಯದಲ್ಲಿ ಶಿವೋಹಂ, ಶಿವೋಹಂ ಎಂಬ ನೆನಹು ಇದು ಅದ್ವೈತಸ್ಥಿತಿ. ಇದು ಒಂದು ಅದ್ವೈತದರ್ಶನವಾದರೂ ಕೇವಲ ಅದ್ವೈತದರ್ಶನ ಮಾತ್ರವಲ್ಲ. ಇದು ಶಿವಾದ್ವೈತ. ಇಲ್ಲಿ ಶಿವನು ಶಕ್ತಿ ವಿಶಿಷ್ಟ. ಇದಕ್ಕೆ ಪ್ರಭುವೇ ಮೂಲ ದಾರ್ಶನಿಕ. ಇಲ್ಲಿ ಇಷ್ಟಲಿಂಗದೊಂದಿಗೆ ಅದ್ವೈತವನ್ನು ಅನುಭವಿಸಬಹುದಾಗಿದೆ. ಬಾಯಿಯೇ ಭಗವಾಗಿ ಈ ವಚನ ಕಾಶ್ಮೀರ ಶೈವ ಕೌಳ ತಾಂತ್ರಿಕದಲ್ಲಿ ಬರುವ ಶಿವಶಕ್ತಿಯ ಕಲ್ಪನೆ ಸ್ತ್ರೀ - ಪುರುಷರ ಕೂಡಿಕೊಳ್ಳುವಿಕೆ ಅದಕ್ಕೆ ಆಧ್ಯಾತ್ಮಿಕ ಸಂಭೋಗ ಪ್ರಕ್ರಿಯೆಯ ಪ್ರಭಾವ ಆಗಿರಬಹುದು. ಅದನ್ನು ಪ್ರಭು ವಿಡಂಬಿಸುತ್ತಾನೆ. ಅದರಂತೆ ತನ್ನ

ಅದ್ವೈತರೂಪಾಂತರ ಎಂತಹದ್ದು ಎನ್ನುವದನ್ನು ವಿವರಿಸುವನು. ಇಲ್ಲಿ ನಾವು ರಜನೀಶರ ಸ್ವಲ್ಪ ಅನುಭವವನ್ನು ತೆಗೆದುಕೊಂಡು ಅಡಿಗೆ ಮಾಡಬಹುದು. ಇಂದ್ರೀಯ ಸುಖಾನುಭಾವದಿಂದ ಮನಸ್ಸನ್ನು ಹೂವಿನಂತೆ ಇಟ್ಟುಕೊಳ್ಳಬಹುದು. ಅಂದರೆ ಚಿತ್ತ ಶುದ್ಧವಾಗಿರಬೇಕೆಂಬ ಹವಣಿಕೆ ಆದರೆ ಇಲ್ಲಿ ಇಂದ್ರಿಯ ಸುಖಾನುಭಾವವೇ ಹೆಚ್ಚಿಗೆ ಪ್ರಾಶಸ್ತ್ಯವನ್ನು ಪಡೆದುಕೊಂಡು ಧ್ಯಾನ ಕ್ರಿಯೆಯನ್ನು ಗೌಣವಾಗಿಸಿದೆ. ಇಂದ್ರಿಯಗಳನ್ನು ಕೊಲ್ಲಬಾರದೆಂಬುದನ್ನು ಸ್ವಲ್ಪಮಟ್ಟಿಗೆ ಬಸವಣ್ಣ ಇಂದ್ರಿಯ ನಿಗ್ರಹವ ಮಾಡಿದರೇ ಹೊಂದುವವು ಪಾಪಂಗಳು ಎಂದು ಹೇಳಿರುವನು. ಅಂದರೆ ಇಂದ್ರಿಯಗಳನ್ನು ಶ್ವೇಚ್ಛಾಚಾರವಾಗಿ ಬಿಡಬೇಕೆಂಬದರಲ್ಲಿ ಸೀಮಿತ ಬಳಕೆಯಲ್ಲಿ ವಿನಿಯೋಗಿಸು ಎಂದರ್ಥ. ಅವುಗಳನ್ನು ಸದ್ವಿನಿಯೋಗಪಡಿಸಿಕೊಂಡು ಅದ್ವಯ ಸ್ಥಿತಿಗೆ ಮುಟ್ಟುವದು. ಸಹಜಕ್ರಿಯೆ ಊಟಮಾಡುವ ಪ್ರತಿನಿತ್ಯದ ರೀತಿಯಂತೆ ಸಾಧಕನು ಸದಾ ಪ್ರಯತ್ನಿಸಬೇಕು. ಅದ್ವೈತ ಸ್ಥಿತಿ ಅರಿಯಬೇಕಾದವನು ಜೀವಿ ವಿನಹ ಶಿವನಲ್ಲ, ಜೀವಾತ್ಮ ಪರಮಾತ್ಮನಾಗಲು ಪ್ರಯತ್ನಿಸುವನು. ದೇವ ನಾನು ವಿನಹ ನೀನಲ್ಲ. ಏಕೆಂದರೆ ಹಸಿದುಬಂದವರಿಗೆ ಒಂದು ತುತ್ತು ಅನ್ನವನ್ನು ಹಾಕಬಲ್ಲೆ. ಆದರೆ ನೀನು? ಎಲ್ಲಿಯಾದರೂ? ಯಾರು ಸಲಹುವರೋ ಅವರೇ ದೇವರು. ಸಲುಹಿಸಿಕೊಳ್ಳುವವ ದೇವನಲ್ಲ, ಶರಣನು ಕರಸ್ಥಲದಲ್ಲಿ ಪೂಜೆಮಾಡುವ ನೈವೆದ್ಯಮಾಡುವ ಹಸಿದು ಬಂದವರಿಗೆ ನೈವೇದ್ಯ ಇಕ್ಕುವನು. ೬ + ೫ = ೧೧ ಲಿಂಗತತ್ತ್ವೋಪಾಸಕನಾಗಿರುವ ಈ ದೇಹಿ ಶರಣ ದೇವನಲ್ಲದೇ ಮತ್ತ್ಯಾರು? ಆದರೆ ಈ ದೇಹವೇ ದೇವರಲ್ಲ, ಈ ದೇಹ ದೇಗುಲ ಮಾತ್ರ. ದೇಗುಲದೊಳಗೊಂದು ದೇವರಿರುವಂತೆ, ದೇಹದೊಳಗೊಂದು ಆತ್ಮ ಲಿಂಗವಿದೆ ಆದ್ದರಿಂದ ಹೊರ ದೇವಾಲಯಗಳಿಗೆ ಹೋಗುವ ಅವಶ್ಯಕತೆಯಿಲ್ಲ. ಹೊರಗಿನ ದೇವರುಗಳು ಭಾವವನ್ನು ತಿಳಿಗೊಳಿಸುವದಕ್ಕೆ ಮಾತ್ರ ಸೀಮಿತ. ತಿಳಿಭಾವನೆಯಲ್ಲಿ ಕುರುಹು ಇಷ್ಟಲಿಂಗವನ್ನು ಪೂಜಿಸಿ ಅಂತರಂಗಕ್ಕೆ ಪ್ರವೇಶಿಸಬೇಕು. ಇದನ್ನು ಬಿಟ್ಟು ಕಲ್ಲು, ಮಣ್ಣು, ಮರ, ಕಿಚ್ಚು ಮುಂತಾದವುಗಳನ್ನು ದೇವರೆಂದು ತಿಳಿಯುವುದು ಸರಿ ಅಲ್ಲ. ಇದು ನನ್ನ ದೇವಾಲಯ ಎಂಬ ಭಾವ ಜಗಳಕ್ಕೆ ಕಾರಣವಾದಿತೇ ವಿನಹ, ಭಗವಂತನಿಗೆ ಕಾರಣವಾಗದು. ಆದ್ದರಿಂದ ಗುಡಿ ಗುಂಡಾರಗಳ ಅವಶ್ಯಕತೆಯಿಲ್ಲ. ಇದ್ದರೂ ಅಲ್ಪ ಪ್ರಮಾಣದಲ್ಲಿ. ಜೀವ - ದೇವರ ಸಂಬಂಧದ ಹೊಲಿಗೆ ತಿಳಿಯಬೇಕಾದರೆ ದೇಹ ಭಾವನಷ್ಟವಾಗಬೇಕು. ಆಗ ಭಕ್ತಿ ಜ್ಞಾನ ಅಳವಡುವದು. ಮುಂದೆ ಕುರುಹು ನಷ್ಟವಾಗಿ ಮಾಯೆ ಪಾಶೆ ಹರಿದು ಜೀವ - ದೇವ ಬೇದ ಕಡಿಮೆಯಾಗಿ ತಾನೇ ದೇವನಾಗಿ ಪೂಜಿಸಿಕೊಳ್ಳುವುದು. ಅರಿವು ತನ್ನಲ್ಲೇ ಹುದುಗಿದೆ. ಅದು ಪ್ರಕಟವಾದಾಗ ತಿಳಿಯುವದು ನೀನು ಅದೇ ಎಂದು. ಆ ದೇವ ಈ ಪ್ರಪಂಚದಲ್ಲಿ ಹಾಗೂ ಜೀವಿಯಲ್ಲಿ ಹೇಗೆ ಹುದುಗಿದ್ದಾನೆಂಬುದಕ್ಕೆ, ಸಮುದ್ರದಲ್ಲಿ ನೆರೆತೊರೆಗಳು ಸಮುದ್ರದಿಂದ ಮೇಲೆದ್ದು ಬಂದರು ಸಮುದ್ರದಿಂದ ಬೇರೆಯಲ್ಲ. ಈ ಜಗತ್ತು ಶಿವನಿಂದ ಉದಯಿಸಿ ಬೇರೆ ರೂಪಗಳನ್ನು ಪಡೆದರೂ ಜಡ ಅಥವಾ ಚೇತನ, ಯಾವುದಾದರೂ ಶಿವನಿಂದ ಬಿಟ್ಟು ಬೇರೆ ಇಲ್ಲ. ಸಾಗರದಲ್ಲಿರುವ ಪ್ರಾಣಿಗಳು ಸಾಗರದಲ್ಲೆಯೇ ಇರುವವು. ಅದರಂತೆ ಭವಸಾಗರದಲ್ಲಿಪ್ಪ ಜೀವಿಗಳು ತಮ್ಮ ತಮ್ಮ ವ್ಯವಹಾರದಲ್ಲಿಯೇ ತೊಡಗಿಕೊಂಡಿವೆ ಏಕೆಂದರೆ ದೇವರ ಲೀಲೆ ಈ ಜಗನ್ಮಯ, ಪ್ರತಿಯೊಂದರಲ್ಲಿಯು ದೇವರಿರುವನು. ಕಂಗಳ ಬೆಳಗು, ಕರ್ಣನಾದ, ಜಿಹ್ವೆಯ ರುಚಿ, ಸುಷುಮ್ನನಾಳದ ಅನುಭವಾಮೃತ ಇವುಗಳನ್ನು ವರ್ಣಿಸುವುದೇ ಹೊರತು ಹೇಳುವದರಿಂದ ತಿಳಿಯಲಾಗುವದಿಲ್ಲ ಹಾಗೆ ಪರಮಾನುಭಾವವನ್ನು ಅನುಭವಿಸಿ ಅರಿಯಬೇಕಾಗುವದು. ಈ ಜಗತ್ತು ಶಿವನಿಂದ ಹೇಗೆ ಉದ್ಭಯಿಸಿತು. ಎಂದರೆ ಬೀಜದೊಳಗೆ ವೃಕ್ಷನಾಗುವದರ

ಪರಿ ಪತ್ರ, ರೆಂಬೆ, ಕೊಂಬೆ, ಫಲಗಳು ಸ್ವಭಾವತಹ ಇರುವಂತೆ ದೇವನಲ್ಲಿ ಪ್ರಪಂಚವಾಗುವ ಶಕ್ತಿ ಅಡಗಿದೆ. ಬೇಡವಾದ ತಾನೇ ತಾನಾದ ಸ್ಥಿತಿಯಲ್ಲಿರಬಹುದು. ಲೀಲೆಯಾದರೆ ಉಮಾಪತಿಯೂ ಆಗಬಹುದು.

ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಕ್ಕಿ ಹೆಸರಿಟ್ಟು[೯೬೫]

.....................

ಗುಹೇಶ್ವರ ನರಿಯದ ಅನುಭಾವಿಗಳೆಲ್ಲರ ತರಕಟ ಕಾಡಿತು

ಬಯಲು ಬಯಲನೆ ಭಿತ್ತಿ ಬಯಲು ಬಯಲನೇ ಬೆಳೆದು

.....................

ಬಯಲು ಜೀವನ, ಬಯಲು ಭಾವನೆ ನಿಮ್ಮ ಪೂಜಿಸಿದವರು
ಮುನ್ನವೇ ಬಯಲಾದರು ನಾ ನಿಮ್ಮ ನಂಬಿ ಬಯಲಾದೆ.[೯೬೬]

ಅನುಭಾವದಿಂದ ಹುಟ್ಟಿತ್ತು ಲಿಂಗ ..........
.................. ಅನುಭಾವ ದನುವಿನಲ್ಲಿ ಗುಹೇಶ್ವರ ನನುಪಮ ಸುಖಿ[೯೬೭]

ದೇವರನ್ನು ಶರಣರು ನಲ್ಲನೆಂದು ಕಂಡಂತೆ, ಶಿಶುವಿನಂತೆಯು ಕಾಣಬಲ್ಲರು. ಬಯಲೆಂಬ ದೈವ ಕೂಸಿಗೆ ಬೆಣ್ಣೆಯಿಕ್ಕಿ - ಕೂಸಿಗೆ ಹೆಸರಿಡುವಾಗ ಮಾಡುವ ಪ್ರಕ್ರಿಯೆಗಳು. ಹಾಗೆ ಹೆಸರು ಇಡಲಿಕ್ಕೆ ಬರುತ್ತದೆ. ಹೆಸರು ಭಾಷಾ ಕುದುರೆ ಹೆಸರಿನೊಂದಿಗೆ ಹೋದವರು ಹೆಸರನ್ನು ಹುಡುಕಬಲ್ಲರೆ ಹೊರತು ಅದರ ಹಿನ್ನಲೆ ಅನುಭಾವ ಸಿಗಲಿಲ್ಲ. ಭಾಷಾಂತರ್ಗತ ಅರ್ಥವ್ಯಾಪ್ತಿಯಲ್ಲಿ ಹುಡುಕಿದರೆ ಅನುಭಾವದ ನೆಲೆ ಹತ್ತಿರ ಭಾಷೆಯ ದಾಟಿ ಅಂತರಾಳಕ್ಕೆ ಇಳಿಯಬೇಕು. ಈ ಭಕ್ತಿಪಂಥದ ಸಾಪೇಕ್ಷತೆಯಲ್ಲಿ ಆ ತತ್ವ ಕೂಸ, ನಲ್ಲನಂತೆ ಕಾಣಿಸಿಕೊಂಡಿದೆ. ಭಕ್ತಿಯು ಬಲಿಯುತ್ತಾ ಮುಂದೆ ಸಾಗಿದಂತೆ ಭಕ್ತ ಮಹೇಶನಾಗುವನು. ಆತುರತೆ, ತುಂದೀಲತೆಯಿಂದ ಅವಗಢವಾಗದಂತೆ ಸಾವಧಾನದಿಂದ ವರ್ತಿಸುವದಾದರೆ ಆತ ಪ್ರಸಾದಿ. ಅನುಭವದಿಂದ ದೈವಿ ವ್ಯವಹಾರದೊಂದಿಗೆ ಲಿಂಗದೊಂದಿಗೆ ವರ್ತಿಸಿ ಸೂಕ್ಷ್ಮಕ್ಕೆ ದಾರಿಗೊಂಡಾಗ ಆತ ಪ್ರಾಣಲಿಂಗಿ. ಅಂಗಲಿಂಗ, ಏಕೋಭಾವ ಆನಂದಕ್ಕೆ ಎಡೆಯಾದಾಗ ಶರಣನಾಗಿ, ಬೇಧವೇ ಇಲ್ಲದ ಭಾವವೇ ಇಲ್ಲದ ತಾನೇ ಏಕವಾದ ಅದ್ವೈತಸ್ಥಿತಿ ಮುಟ್ಟಿದಾಗ ಐಕ್ಯನಾಗುವನು. ಇದಕ್ಕೆ ಷಟಸ್ಥಲ ಮಾರ್ಗ, ಶಿವಯೋಗ, ರಾಜಯೋಗ ಮತ್ತೇನಾದರೂ ....., ಅನುಭಾವದಿಂದ ಮಾತ್ರ ಆನಂದಿ ಪ್ರಾಪ್ತಿಯಾಗುವುದು, ಅನುಭಾವ ಈ ಭಕ್ತಿಪಂಥದ ಉತ್ತರೊತ್ತಿ ಸ್ಥಲ, ಅನುಭಾವ ಇದು ಅಂತ:ಚಕ್ಷುವಿನಿಂದ ಅರಿವಂತ ಹದ್ದು ಪ್ರಭು ಅನುಭಾವಿ (ದಾರ್ಶನಿಕ). ಇತನ ತಾತ್ವಿಕ ಕುರುಹು ಇಷ್ಟಲಿಂಗ. ಇದಕ್ಕೆ ಜಂಗಮ, ಪ್ರಸಾದ, ಮುಂತಾದ ಆವರಣಗಳು ಹುಟ್ಟಿಕೊಂಡವು. ಅನುಭಾವದ ಪರ್ಯಾಯಾತ್ಮಕ ಅರ್ಥವೇ ಆತ್ಮ ಸಾಕ್ಷಾತ್ಕಾರ. ಇದಕ್ಕೆ ಸಹಜ ಶಿವಯೋಗ ಮುಂತಾದ ಆಯಾಮಗಳಿಂದ ಸಾಧನೆ ಮಾಡಬೇಕಾಗುವುದು. ಪ್ರಾಪಂಚಿಕದೊಂದಿಗೆ ಪಾರಮಾರ್ಥ ಸಾಗುತ್ತಿರಬೇಕು. ಇಲ್ಲಿ ಮುಕ್ತಿ ಮತ್ತು ಆತ್ಮ ಸಾಕ್ಷಾತ್ಕಾರಕ್ಕೆ ಇರುವ ಸಂಬಂಧವೆಂದರೆ ಆತ್ಮ ಸಾಕ್ಷಾತ್ಕಾರಿಯಾದವನು. ಸದೇಹ ಮುಕ್ತಿಯನ್ನು ಪಡೆದಂತೆಯೇ ಇಲ್ಲಿ ಸದೇಹ ಮುಕ್ತಿ, ವಿದೇಹ ಮುಕ್ತಿಯೆಂದು ಎರಡು ತೆರಹದಲ್ಲಿ ಅರಿಯಲಾಗುತ್ತದೆ. ಆದರೆ ಈ ಪ್ರಭು ದರ್ಶನದಲ್ಲಿ ಸದೇಹ ಮುಕ್ತಿಗೆ ಬಹಳ ಬೆಲೆಯಿದೆ. ಷಟಸ್ಥಲದ ಐಕ್ಯಸ್ಥಲವೂ ಕೂಡಾ ಇದೇ ಆಗಿದೆ. ಇದರಿಂದ ಹೆಚ್ಚಿಗೆ ಏನು ಬೇಕಾಗುವುದಿಲ್ಲ. ಬಯಲಿನಿಂದ ಈ ಪ್ರಪಂಚ

ಜೀವಿಗಳು ಹುಟ್ಟಿ ಈ ತೃಪ್ತಿಯನ್ನು ಹೊಂದಿ ಅಂದರೆ ಬಯಲುಗಳಿಸಿ ಬಯಲಾಗುವಿಕೆಯೇ ಪ್ರಭುವಿನ ಶೂನ್ಯದರ್ಶನದ ನಿದರ್ಶನವಾಗಿದೆ.

ಅನುಭಾವದ ಹಿನ್ನೆಲೆಯಲ್ಲಿ ಇನ್ನೂ ಕೆಲವು ವಚನಗಳನ್ನು ನೋಡಬಹುದು. ಈಶ್ವರನಿಂದ ಜೀವ - ಜಗತ್ತುಗಳ ಆವಿರ್ಭಾವದ ಪರಿಯನ್ನು

> ಏನು ಏನೂ ಇಲ್ಲದ ಬಯಲೊಳಗೊಂದು
> ಬಗೆಗೊಳಗಾದ ಬಣ್ಣ ತಲೆದೋರಿತ್ತು
> ಆ ಬಣ್ಣವನಾ ಬಯಲು ಸಿಂಗರಿಸಲು
> ಬಯಲು ಸ್ವರೂಪಗೊಂಡಿತ್ತು ಅಂತಪ್ಪ ಸ್ವರೂಪಿನ ಬೆಡಗುತಾನೆ
> ನಮ್ಮ ಗುಹೇಶ್ವರ ಲಿಂಗದ ಪ್ರಥಮ ಭಿತ್ತಿ.[೧೬೮]

ಇದು ಬಯಲಿನಿಂದ ಪ್ರಪಂಚದ ಸೃಷ್ಟಿಯ ಉಂಟಾಗುವಿಕೆ, ಅದಕ್ಕೆ ಮೂಲಬೀಜ ಗುಹೇಶ್ವರ ಎಂದು ಹೇಳಿದೆ. ಅದರಂತೆ ಶೂನ್ಯದಿಂದ ಜೀವಿಯ ಹುಟ್ಟುವಿಕೆಯ ಪ್ರಸಂಗವನ್ನು

ಅಷ್ಟತನು ಮೂರ್ತಿ ಲಿಂಗವೆಂದೆಂಬರು ನೀವು ಕೇಳಿರಯ್ಯ ಅನಾದಿಯ ಮಗ ಆದಿ, ಆದಿಯ ಮಗ ಅತೀತ, ಅತೀತನ ಮಗ ಆಕಾಶ ............ ಪೃಥ್ವಿಯಿಂದ ಸಕಲ ಜೀವಿಗಳೆಲ್ಲರೂ ಉದ್ಭವಿಸಿದರೂ ಗುಹೇಶ್ವರಾ.[೧೬೯]

ಹೀಗೆ ಪಂಚಭೂತಾತ್ಮಗಳಿಂದ ಜೀವ ಉದ್ಭವಿಸಿದ ಬಗೆಯನ್ನು ಪ್ರಭು ಹೇಳಿದ್ದಾನೆ.

ಪುರುಷನಿಂದ ಪ್ರಕೃತಿ ಹೇಗೆ ಉತ್ಪನ್ನವಾದುದರ ಬಗ್ಗೆ

ಅಯ್ಯಾ ತತ್ವವಿತತ್ವಗಳಿಲ್ಲದಂದು, ಪ್ರಕೃತಿ ಪುರುಷರಿಲ್ಲದಂದು ಜೀವ ಪರಮರೆಂಬ ಭಾವ ಲೀಲೆದೋರದಂದು, ಏನು ಏನು ಇಲ್ಲದಂದು ಬಯಲು ಬಲಿದು ಒಂದು ಬಿಂದುವಾಗಿತ್ತು ನೋಡಾ ಆ ಬಿಂದು ಅಕ್ಷರತ್ರಯ ಗದ್ದುಗೆಯಲ್ಲಿ ಕುಳ್ಳಿರಲು ಓಂಕಾರ ಉತ್ಪತ್ತಿಯಾಯಿತ್ತು. ಆ ನಾದದಲ್ಲಿ ಮೂರ್ತಿಗೊಂಡನೊಬ್ಬ ಶರಣ ಆ ಶರಣನಿಂದಾಯಿತ್ತು ಪ್ರಕೃತಿ, ಆ ಪ್ರಕೃತಿಯಿಂದಾಯಿತ್ತು ಲೋಕ .......... ಗುಹೇಶ್ವರನ ಶರಣ ಚನ್ನಬಸವಣ್ಣನ ಘನವನು ಬಸವಣ್ಣನ ಕೃಪಡೆಯಿಂದೆಂದು ನಮೋ ನಮೋ ಎನ್ನುತ್ತಿರ್ದೆನು.[೧೭೦]

ಹೀಗೆ ಮಾನವನ ಉತ್ಪತ್ತಿಯ ಪ್ರಕರಣವನ್ನು ಪ್ರಭು ಕಲ್ಪಿಸಿದ್ದಾನೆ. ಆತ್ಮ ಪರಮಾತ್ಮರ ಸಂಬಂಧವನ್ನು

ಅಕಲ್ಪಿತ ನಿತ್ಯ ನಿರಂಜನ ನಿಸ್ಸೀಮ ನಿರವಯ ಅಖಂಡ ಪರಿಪೂರ್ಣ ಪರಂಜ್ಯೋತಿಯಾದ ಮಹಾಘನ ವಸ್ತುವಿನಲ್ಲಿ ಪರಮಾತ್ಮನುತ್ಪತ್ತಿ. ಆ ಪರಮಾತ್ಮನಿಂದ ಅಂತರಾತ್ಮ ಉತ್ಪತ್ತಿ ಅಂತರಾತ್ಮದಿಂದ ಜೀವಾತ್ಮ ಉತ್ಪತ್ತಿ ........... ಈ ಪಂಚನನರಿದ ದ್ವಂದ್ವ ರಹಿತ ತಾನೆ ನಮ್ಮ ಗುಹೇಶ್ವರ ಲಿಂಗದಲ್ಲಿ ಯಂತ್ರವಾಹಕನೆನಿಸುವನು.[೧೭೧]

ಜಗತ್ತು ಶಿವನಿಂದ ಉದ್ಭವಿಸಿದೆ. ಆದರೆ ಶಂಕರನಂತೆ ಮಾಯಾವಾದವಿಲ್ಲ. ಈ ಜಗತ್ತನ್ನು ಶಿವ ರಚಿಸಲು ಕಾರಣಗಳೇನು? ಏನಾದರೂ ಕೊರತೆಯಿದೆಯೇ, ಇದಕ್ಕೆ ಉತ್ತರ ಲೀಲೆ

ಭಾವದೊಲೊಬ್ಬ ದೇವರ ಮಾಡಿ ಮನದಲ್ಲೊಂದು ಭಕ್ತಿಯ ಮಾಡಿದಡೆ .............. ಎತ್ತನೇರಿ ಎತ್ತ ನರಸುವವರು ಎತ್ತ ಹೋದರಯ್ಯ ಗುಹೇಶ್ವರ.[೧೬೨]

ಎತ್ತನ್ನು ಹತ್ತಿಕೊಂಡು ಕುಳಿದ ಸವಾರ, ನೆನಪುಹೋಗಿ ಎತ್ತು ಕಳೆದಿದೆ ಎಂದು ಎಲ್ಲಾ ಕಡೆ ಹುಡುಕಿ ಬೆಸತ್ತಿದ್ದಾನೆ. ಆ ಎತ್ತು ಎಲ್ಲಿಯೂ ಸಿಗುತ್ತಿಲ್ಲ. ಹೊರಗೆ ಹುಡುಕಿದರೆ ಸಿಗುವುದು ಇಲ್ಲ. ಕಸ್ತೂರಿಯ ಮೃಗ ಪರಿಮಳ ವಾಸನೆಯನ್ನು ಹುಡುಕುತ್ತಾ ಸಾಗುತ್ತಿದೆ. ಆದರೆ ಕಸ್ತೂರಿ ಸಿಗುತ್ತಿಲ್ಲ. ಯಾಕೆಂದರೆ ಆ ಕಸ್ತೂರಿ ತನ್ನಲ್ಲಿಯೇ ಇದೆ ಎಂದು ಗೊತ್ತಿಲ್ಲ. ತನ್ನ ತಲೆಯಿಂದ ವಸರುವ ಕಸ್ತೂರಿ ಹಾಗೂ ತನ್ನಲ್ಲಿಯೇ ಇರುವ ಎತ್ತು ಇವೆರಡನ್ನು ಹೊರಗೆ ಹುಡುಕಬೇಕಾದ ಅವಶ್ಯಕತೆಯಿಲ್ಲ ಇವು ತನ್ನೊಳಗೆಯೇ ಇದೆ. ಹಾಗೆ ಭಗವಂತನನ್ನು ಹೊರಗೆ ಹುಡುಕುವ ಅವಶ್ಯಕತೆಯಿಲ್ಲ. ದೇಹ ಗುಡಿಯಲ್ಲಿ ಆತ್ಮವೇ ಲಿಂಗವಾಗಿದೆ. ಆತ್ಮನ ವಿಸೃತರೂಪ ಪರಮಾತ್ಮ. ಅದನ್ನು ಅರಿತುಕೊಳ್ಳಬೇಕಾದರೆ ಅಂತ:ಚಕ್ಷುವಿನಿಂದ ಮಾತ್ರ ಸಾಧ್ಯ. ಈ ಪ್ರಭುವಿನ ವಚನಗಳು ಅನುಭಾವಿಕ ಪ್ರಪಂಚಕ್ಕೆ ದೊರೆತ ಅನರ್ಘ್ಯ ರತ್ನಗಳಂತಿವೆ. 'ಗುಹೇಶ್ವರ' ಎಂಬ ವಚನಾಂಕಿತ, ಗುಹೆ ಎಂದರೆ ದೇಹ, ಈಶ್ವರ ಎಂದರೆ ಪ್ರಾಣಲಿಂಗ, ಅದ್ವೈತ ರೂಪಾತ್ಮಕವಾದ ಅಮತರರ್ಮಯ ಪರತತ್ವವನ್ನು ನಿರ್ದೇಶಿಸುವಂತಿದೆ ಈ ಶಬ್ದ. ಶಂಕರರ ಅದ್ವೈತದಲ್ಲಿ ಬ್ರಹ್ಮ ಒಂದೇ ಸತ್ಯ ಜಗತ್ತು ಮಿಥ್ಯ, ಜೀವಿಗಳೆಲ್ಲಾ ಬ್ರಹ್ಮನ ತೋರಿಕೆಗಳು, ಆದರೆ ಇಲ್ಲಿ ಬ್ರಹ್ಮ - ಜೀವಿ - ಜಗತ್ತು ಮೂರು ಸತ್ಯಗಳೇ ಆಗಿವೆ. ಈ ಅದ್ವೈತಭಾವಕ್ಕೆ

ಗುರುಶಿಷ್ಯ ಸಂಬಂಧವನ್ನರಿಸಲೆಂದು ಹೋದರೆ, ತಾನೇ ಗುರುವಾದ, ತಾನೇ ಶಿಷ್ಯನಾದ, ತಾನೇ ಲಿಂಗವಾದ, ಗುಹೇಶ್ವರ ನಿಮ್ಮ ಶರಣನ ಕಾಯದ ಕೈಯಲ್ಲಿ ಲಿಂಗವ ಕೊಟ್ಟರೆ ಭಾವ ಭತ್ತಲೆಯಾಯಿತ್ತು.[೧೬೩]

**ಕರಸ್ಥಲ ಲಿಂಗಪೂಜೆಯ ಬಗ್ಗೆ**

ಅದ್ವೈತವೆಂಬ ಶಿಶುವೆನ್ನ ಕರಸ್ಥಲವ ಸೋಂಕಿದೊಡನೆ ಎನ್ನತನ್ನಂತೆ ಮಾಡಿತ್ತಾಗಿ, ಎನ್ನ ನಾನೆಂಬ ವಿಚಾರವು ಅರಿತು ಹೋಯಿತ್ತು ಕೇಳಾ ................. ಗುಹೇಶ್ವರನ ಸಾಕ್ಷಿಯಾಗಿ ಸಂಗನ ಬಸವಣ್ಣ ನಿನ್ನ ಅಂತರಂಗದೊಳಗೆ ಬೆಳಗುತ್ತೈದಾನೆ ಎನಗೊಮ್ಮೆ ಬಸವಣ್ಣನ ಘನವ ತಿಳಿಹಿ ಕೊಡಾ ಚನ್ನಬಸವಣ್ಣ.[೧೬೪]

ಗುರುವಿನ ಪ್ರಾಣ ಲಿಂಗದಲ್ಲಿ ಲೀಯತಾದ ಬಳಿಕ ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು ನೋಡಾ! ಇದ್ದಾನೆ ನೋಡಾ ಎನ್ನ ಗುರು. ಅನಿಮಿಷನೆನ್ನ ಕರಸ್ಥಲದಲ್ಲಿ, ಇದ್ದಾನೆ ನೋಡಾ ಎನ್ನ ಗುರು ಅನಿಮಿಷನೆನ್ನ ಜ್ಞಾನದೊಳಗೆ ಇದ್ದಾನೆ ನೋಡಾ ಎನ್ನ ಗುರುವಿನ ಗುರು ಪರಮಗುರು ಬಸವಣ್ಣನೆನ್ನ ಕಂಗಳ ಮುಂದೆ ಗುಹೇಶ್ವರನ ಸಾಕ್ಷಿಯಾಗಿ ಎನ್ನಮೇಲೆ ಗುರುದ್ರೋಹವಿಲ್ಲ ಕಾಣಾ ಚನ್ನಬಸವಣ್ಣ.[೧೬೫]

ಅಂದರೆ ಅನಿಮಿಷನಿಂದ ಪ್ರಭು ಲಿಂಗ ಕಿತ್ತುಕೊಂಡನೆಂಬುದನ್ನು ಈ ವಚನದಲ್ಲಿ ಪ್ರಭು ಅಲ್ಲಗಳೆದಿದ್ದಾನೆ. ಕರಸ್ಥಲ ಪೂಜಕನಾದ ಪ್ರಭು ಅನಿಮಿಷನಿಂದ ದೀಕ್ಷೆಯನ್ನು ಪಡೆದ, ದೀಕ್ಷೆಗಾಗಿ ಕಾದಿದ್ದನೆಂಬಂತೆ ಅಲ್ಲಿ ಆ ಕ್ಷಣವೇ ಅನುಮಿಷ ಲಿಂಗೈಕ್ಯನಾದ. ಆದ್ದರಿಂದ ಪ್ರಭುವಿನ ಮೇಲೆ ಗುರು ದ್ರೋಹವಿಲ್ಲ.

ಅಮೃತ ಸಾಗರದೊಳಗದ್ದು ಆಕರ ಚಿಂತೆ ಏಕೆ .................. ಕರಸ್ಥಲದೊಳಗೆ ಲಿಂಗವಿದ್ದ ಬಳಿಕ ಇನ್ನಾವ ಚಿಂತೆ ಹೇಳಾ ಗುಹೇಶ್ವರಾ.[೧೭೬]

ಪ್ರಭು ಇಷ್ಟಲಿಂಗೋಪಾಸಕ ಎಂಬುದು ಈ ವಚನಗಳಿಂದ ತಿಳಿದುಬರುತ್ತದೆ. ಪ್ರಾಣದಲ್ಲಿ ಹುದುಗಿದ ಲಿಂಗಪೂಜೆಗಾಗಿ

ಅರಳಿಯ ಮರದ ಮೇಲೆ ಒಂದು ಹಂಸೆ ಗೂಡನಕ್ಕಿತ್ತಕಂಡೆ
.................. ಪ್ರಾಣಲಿಂಗವ ಕಾಣಬಹುದು ಕಾಣಾ ಗುಹೇಶ್ವರಾ.[೧೭೭]

ಇಲ್ಲಿ ಇಂದ್ರಿಯ ನಿಗ್ರಹವನ್ನು ಮಾಡದೇ ಅವುಗಳ ದಿಕ್ಕನ್ನು ಬದಲಾಯಿಸಬೇಕೆಂಬುದೇ ಅಥವಾ ಇಂದ್ರಿಯ ವಿಮುಖಿಗೊಳಿಸಬೇಕೆಂಬುದೇ ಆಗಿದೆ. ಮಾಯೆಯ ವಿಡಂಬನೆಯಲ್ಲಿ

ಮುಗಿನ ಬಣ್ಣದ ಪಕ್ಷಿ, ಮಗನ ಕೈಯ ಅರಗಿಳಿ! ...........
............... ನಿನ್ನ ಮಾಯೆಯೆನೆಂಬೆನು ಗುಹೇಶ್ವರ.[೧೭೮]

ಈ ಮಾಯೆಯ ಲೀಲೆಯಿಂದಲೆ, ಮೋಹ ಭ್ರಾಂತಿಯಿಂದಲೆ ಈ ದೇಹ ರವನೆಯಾಗಿದೆ.

ಭೂತ ಭೂತವ ಕೂಡಿ ಅದ್ಭುತವಾಯಿತ್ತು, ಕಿಚ್ಚು ಕೂಡಿತ್ತು, ನೀರು ನೀರಡಿಸಿತ್ತು, ಉರಿ ಪವನದೊಳಗಿರ್ದು ವಾಯು ಇಮ್ಮಡಿಸಿತ್ತು ಕಂಡೆ ಗುಹೇಶ್ವರ.[೧೭೯]

ಪಂಚಭೂತಗಳ ಸಮ್ಮಿಶ್ರ ಈ ಪ್ರಪಂಚ ಹಾಗೂ ಜೀವಿ ಎಂಬುದನ್ನು ತಿಳಿಸುತ್ತದೆ. ಆ ಕರ್ಮವನ್ನು ಮಾಡುವಲ್ಲಿ ಆಯಾ ಜೀವಿಗಳು ಸ್ವತಂತ್ರವಾಗಿವೆ. ಆ ಕರ್ಮ ಫಲಗಳ ಮೇಲಿಂದ ಮುಕ್ತಿ ನಿರ್ಧರಿತವಾಗುವುದು. ಬ್ರಹ್ಮಪಾಶ, ವಿಷ್ಣಮಾಯೆ ಎಂಬ ಬಲೆಯ ಬೀಸಿ ........... ಹೇಸದೇ ಕೊಂದೆ ಅಲ್ಲ ಗುಹೇಶ್ವರ.

ಈ ಜೀವಯ ಜನನಕ್ಕೆ ಕಾರಣ ಮಾಯಾಪಾಶ.

ಮಾಯದ ಬಲೆಯಲಿ ಸಿಲುಕಿದ ಮರುಳ ನಾನೆಂದ ಪರಿಯ ನೋಡಾ
ಲಿಂಗವೆಂದರಿಯ ಪರಿಯ ನೋಡಾ ತನ್ನ ವಿನೋದಕ್ಕೆ ಬಂದ ನಿಶ್ಚಿಂತ
ನಿರಾಳ ಗುಹೇಶ್ವರನಂದರಿಯ ಪರಿಯ ನೋಡಾ.[೧೮೦]

ಅಂದರೆ ಮರುಳತನದಿಂದ ಮಾಯೆಯ ಬಲೆಯಲ್ಲಿ ಸಿಲುಕಿದ ಅಂಗ ಲಿಂಗವನ್ನು ಅರಿಯಬೇಕಾಗಿದೆ. ಆ ಅಬೇಧದ ಪರಿ

ಜ್ಯೋತಿಯೊಳಗಣ ಕರ್ಪೂರಕ್ಕೆ, ಅಪ್ಪುಗೆಯ ಕೈಯಲ್ಲಿಪ್ಪ ಉಪ್ಪಿಂಗೆ
ಶ್ರೀ ಗುರುವಿನ ಹಸ್ತದೊಳಗಿಪ್ಪ ಶಿಷ್ಯಂಗೆ ಈ ಮೂರಕ್ಕೆಯು
ಬೇರೆ ಬೇರೆ ಕ್ರಿಯಾ ವರ್ತನೆವುಂಟೆ ಗುಹೇಶ್ವರಾ.[೧೮೧]

ಅಂದರೆ ಮಾಡುವ ಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳೇ ನೀರಿನಲ್ಲಿರುವ ಉಪ್ಪು ಇದ್ದು ಇಲ್ಲದಂತಿದೆ. ಜ್ಯೋತಿಯೊಳಡಗಿದ ಕರ್ಪೂರ ಸುವಾಸನೆಯೊದಗಿಸಿದೆ ಆದರೆ ಕರ್ಪೂರದ ಅಸ್ತಿತ್ವವಿಲ್ಲ. ಹಾಗೆ ಈ ಅದ್ವೈತದರ್ಶನ ಪರಿಯನ್ನು ಪ್ರಭುವಿನ ಹಲವಾರು ವಚನಗಳಲ್ಲಿ ನೋಡಬಹುದು.

ಅಣೋರಣಿಯಾನ್ ಮಹತೋ ಮಹಿಯಾನ್ ಎಂಬ ಸ್ಮೃತಿ ಹುಸಿ! ಲಿಂಗವಿದ್ಧ ಠಾವಿಂಗೆ ಪ್ರಳಯವುಂಟೆ? ಭಕ್ತರ ಭಾವದಲ್ಲಿಪ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ ಗುಹೇಶ್ವರ.[೧೮]

ಉಪನಿಷತ್ತುಗಳಲ್ಲಿ ಹೇಳುವಂತೆ ಅಣು ಅಣುವಿನಲ್ಲಿ ಕಣ ಕಣದಲ್ಲಿ ದೇವನಿರುವನು. ಇದು ನಿತ್ಯಾತ್ಮಕ ವಾದವನ್ನು ಪ್ರಭುವಿನ ವಚನ ಚಿತ್ಪ್ರಧಾನ ವಾದವನ್ನು ಹೇಳುತ್ತದೆ. ಎಲ್ಲದರಲ್ಲಿಯೂ ಇರುವಾತನ ಅರಿಯುವಾತ ಇಲ್ಲದೇ ಹೋದರೆ ಅದು ವ್ಯರ್ಥ. ಆದ್ದರಿಂದ ಪ್ರಭು ಭಕ್ತರ ಭಾವದಲ್ಲಿಪ್ಪ ಎಂದು ಹೇಳಿ ಚಿತ್ ಪ್ರಧಾನವಾದಿ ಎಂದು ಹೇಳಿರುವನು. ತಾನು ಶಿವನೆಂಬುದಕ್ಕೆ

ಈಶ್ವರ ನುಡಿದ ನುಡಿಯವರಿದೆ ನೆಂಬರು
ಬೀಸರ ಓದಣ್ಣಗಳೆಲ್ಲಾ ಪ್ರಾಣಲಿಂಗವೆಂದೆಂಬರಯ್ಯ
ಮನ ಘನವೆಂದರಿಯದೇ ಮರುಳಗೊಂಡರು
ಈಶ್ವರ ನರಿದಡೆ ತಾ ಶಿವನು ಗುಹೇಶ್ವರನೆಂಬು ಬೇರಿಲ್ಲ.[೧೮೩]

ಹೀಗೆ ವಚನಾಂತರ್ಗತ ಶಿವಾದ್ವೈತ ಪರ ಪ್ರಭು ದರ್ಶನವು ೧೨ನೇ ಶತಮಾನದಲ್ಲಿ ಹೊಸ ಆಧ್ಯಾತ್ಮಿಕ ದಾರಿಯೊಂದನ್ನು ಕೊಡುಗೆಯಾಗಿ ನೀಡಿತು. ಆದರೆ ಪಾಶ್ಚಾತ್ಯರ ಇಂದ್ರಿಯ ಪ್ರಾಧಾನ್ಯವಾದ, ಬುದ್ಧಿ ಪ್ರಾಧಾನ್ಯವಾದ ಚಿತ್ ಪ್ರಧಾನವಾದ ಎಲ್ಲ ವಾದಗಳನ್ನು ಬೇರ್ಪಡಿಸಿ ಪ್ಲೋಟೈಸನ್ ನ ಅನುಭವ ವಾದದಂತೆ ತನ್ನ ವಿಶಿಷ್ಟತೆಯನ್ನು ಈ ಪ್ರಭುದರ್ಶನ ಕಾಯ್ದುಕೊಂಡಿದೆ. ಅನುಭಾವದ ಹಿನ್ನಲೆಯಲ್ಲಿ ಈ ದಾರ್ಶನಿಕ ನೆಲೆಯನ್ನು ಕಂಡುಕೊಂಡಿದ್ದರಿಂದ ಇದಕ್ಕೆ ಹೊಂದಿಕೆಯಾಗಿ ಇನ್ನೂ ಹಲವಾರು ಸಮಕಾಲೀನ ಪಾಶ್ಚಾತ್ಯ, ಪೌರಾತ್ಯ ದಾರ್ಶನಿಕರನ್ನು ನೋಡಬಹುದು.

ಅನುಭವ ಎಂಬುದು ಜ್ಞಾನೇಂದ್ರಿಯ ಕರ್ಮೇಂದ್ರಿದೊಡನೆ ಮಾನವ ಚಿತ್ತದ ಮೇಲೆ ಮೂಡಿ ಸ್ಮರಣೆಯಲ್ಲಿ ಉಳಿದುಕೊಳ್ಳುವ ಅಚ್ಚು, ಅದರಂತೆ ಅನುಭಾವವೆಂಬುದು ಅತೀಂದ್ರಿಯವಾದ ಆತ್ಮಾನುಭವ, ಆನಂದಾನುಭವ, ಪರಮಾನುಭವ ಆತ್ಮ ಪರಮಾತ್ಮರ ಸಂಬಂಧತೆ ಅರಿಯುವ ಅನುಭವ. ಅನುಭೂತಿ ಎಂದರೆ ಅನುಭಾವವು ಗಟ್ಟಿಯಾಗಿ ತನ್ಮಯವಾಗಿ ಸಿದ್ಧಸ್ಥಿತಿಯನ್ನು ಪಡೆದ ಜೀವನ್ಮುಕ್ತಾವಸ್ಥೆ. ಮನದ ಒಂದು ಚಿದಾವಸ್ಥೆ ವಸ್ತುಗಳನ್ನು ಗ್ರಹಿಸುವುದು ಇದಕ್ಕೆ Conscoussness ಎಂದು ಕರೆಯುವರು. ಮನ ಪ್ರೇರಕ, ಚಿತ್ತುಗ್ರಾಹಕ. ಚಿತ್ತ ಮನಸ್ಸು ಪ್ರಾಣ ಒಂದಕ್ಕೊಂದು ಬೇರ್ಪಡಿಸಲಾಗದಂತಹ ಸಮೀಪವರ್ತಿ ಅರ್ಥಗಳನ್ನು ಹೊಂದಿವೆ. ಪ್ರಾಣ ಇದು ಜೀವಿತಕ್ಕೆ ಸಾಕ್ಷಿ, ಮನಸ್ಸು ಇದು ಜೀವಿಯ ಚಲನ ಪ್ರೇರಕ, ಚಿತ್ತ ಮನಪ್ರೇರಿತದ ಗ್ರಾಹಕ. ಅನುಭೂತಿ ಇದು ಆಧ್ಯಾತ್ಮದಲ್ಲಿ ಕೊನೆಯ ಸತ್ಯ, ಇಂದ್ರಿಯದಿಂದ ಉತ್ಪತ್ತಿಯಾದ ವಸ್ತು ವಿಷಯಗಳ ಚಿತ್ತದ ಮೇಲಿನ ಮುದ್ರಿತ ರೂಪಗಳೇ ಅನುಭವಗಳು. ಇವು ಬಾಹ್ಯ ರೀತಿಯವಾದರೆ, ಆಂತರಿಕವಾಗಿ ಸ್ವಪ್ನ, ಸ್ಮರಣೆ, ಕಲ್ಪನೆ, ಭಾವನೆಗಳ ಮುಖಾಂತರವಾಗಿ ಮುದ್ರಿತವಾದವುಗಳು ಕೂಡಾ ಅನುಭವಗಳೇ ಆಗಿವೆ. ಇವುಗಳನ್ನು ಅನುಭವಿಸುವವ ಜೀವಾತ್ಮ. ಸುಖ - ದುಃಖ - ರಾಗ - ದ್ವೇಷ ಅಭಿನಿವೇಷ ಕೋಶಗಳನ್ನು ಅನುಭವಿಸುವವನು ಜೀವಾತ್ಮನೇ ಆಗಿದ್ದಾನೆ. ೧೨ನೇ ಶತಕದಲ್ಲಿ 'ಅನುಭವ ಮಂಟಪ' ಎಂಬ ವಚನ ಕಲ್ಯಾಣದಲ್ಲಿಯ ವಚನ ಕೂಟವನ್ನು ನೋಡಿದಾಗ, ಅಲ್ಲಿ ಕೇವಲ ಸಾಮಾನ್ಯ ಅನುಭವಗಳನ್ನು ಮಾತ್ರ ಹಂಚಿಕೊಳ್ಳುವ ವ್ಯವಹಾರಿಕ ಮಂಟಪವಾಗಿದ್ದಿಲ್ಲ. ತಾನು ಕಂಡ ಅಂತರಂಗಿಕ ಅನುಭಾವ ಸತ್ಯವನ್ನು

ಇತರರೊಂದಿಗೆ ಹಂಚಿಕೊಳ್ಳುವದಾಗಿತ್ತು. ಅನುಭಾವದ ಸಂಸ್ಕೃತಿ ರೂಪ ಮತ್ತೊಬ್ಬರಿಗೆ ತಿಳಿಸುವದು ಎಂದಾಗಿದೆ. ಅನುಭಾವ ಜೀವಾತ್ಮ ಪರಮಾತ್ಮರ, ಅಂಗಲಿಂಗಗಳ, ಸಮರಸದ ಸ್ವಾನುಭವ, ಇಂದ್ರಿಯಾತೀತವಾದ ಅತೀ ಮಾನಸಪ್ರಜ್ಞೆಯ ಪರಮಾನಂದದ ನಿರಾಲಂಬ ಸ್ಥಿತಿ ಅದನ್ನು ಅರಿಯಬೇಕಾದರೆ ಅನುಭವಿಸಿ ತಿಳಿಯಬೇಕಾಗುವದು. ಸಂಸ್ಕೃತದಲ್ಲಿ ಭೂ ಭವ = ಆಗು, ಇರು ಎಂದು ಅರ್ಥ. ಇದರ ಮೇಲಿಂದ ಭೂತಿ ಎಂದರೆ ಅನುಭವ ಆಗುತ್ತಾ ಸಾಗುತ್ತಲೇ ಇರುವಂತದ್ದು. ಅಂದರೆ ಸ್ವಲ್ಪ ಹಿಂದೆ ಆದ ಅನುಭವ ಇವತ್ತಿಗೂ ಮುಂದುವರೆಯುವಂತದ್ದು ಎಂದಾಗುವದು. ಭವ ಇದು ವರ್ತಮಾನ ಶಬ್ದ ಭೂತ - ಇದು ಭೂತಕಾಲ ಪ್ರವಾಚಕ, ಭೂತಿ - ಭೂತ ಕಾಲದಿಂದ ವರ್ತಮಾನದವರೆಗೆ ಸಾಗಿದುದು ಎಂದರ್ಥ. ಭಗವಂತನ ಅನುಗ್ರಹದಿಂದ ಗುರುವಿನ ನಿರ್ದೇಶನದಂತೆ ಸಾಧನ ಮುಖಾಂತರ ಅನುಭಾವ ನೆಲೆಯಾಗಿ ನಿಂತು ಸಿದ್ಧಿಪ್ರಾಪ್ತವಾದರೆ ಅದು ಅನುಭೂತಿ. ಶಂಕರರಲ್ಲಿ 'ಅಪರೋಕ್ಷ ಅನುಭೂತಿ' ಅಂದರೆ ಪ್ರತ್ಯಕ್ಷವಲ್ಲದ ಅನುಭಾವ ಎಂದೇ ಅರ್ಥ. ದೋಷರಹಿತ ಸಹಜ ನಿರಾಲಂಬಿಕ ಜೀವನ್ಮುಕ್ತ ಆನಂದಸ್ಥಿತಿಯೇ ಅನುಭೂತಿ ಸ್ವರೂಪ.

ಅನುಭಾವ ಎಂಬುದು ಸಾಧಕನ ರೋಮ ರೋಮಗಳಲ್ಲಿ ನೆಲೆಯಾಗಿ ರಕ್ತದ ಕಣಕಣಗಳಲ್ಲಿ ತುಂಬಿ ಜಾಗ್ರ, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ ಸ್ಥಿರವಾಗಿರುವ ತೂರ್ಯಾವಸ್ಥೆಯನ್ನು ಅನುಭವಿಸಲಾರಂಭಿಸಿದರೇ ಅದೇ ಅನುಭೂತಿ.[೧೬೪] ಅನುಭಾವವು ನಿತ್ಯ ಅನುಭವ ರೂಪದಿಂದ ನೆಲೆಯಾಗಿ ನಿಂತರೆ ಅದೇ ಅನುಭೂತಿ. ಆಮೇಲೆ ಮೊದಲಿನ ಸಾಮಾನ್ಯ ಸ್ಥಿತಿಗೆ ಮರಳುವ ಪ್ರಮೆಯವೇ ಇಲ್ಲ.' ಆ ಸ್ಥಿತಿಯನ್ನು ಒಮ್ಮೆ ಅನುಭವಿಸಿ ಆದ ಮೇಲೆ ಕಳೆದುಕೊಳ್ಳುವ ಅಭಾವವಿಲ್ಲ. ನಿರಂತರ ಅನುಭವಿಸುವ ಸ್ಥಿತಿಯಾಗಿದೆ. ಅನುಭಾವ ಅನ್ನುವದು ಆಧ್ಯಾತ್ಮಿಕವಾಗಿ ಮಾತ್ರ ಉಪಯೋಗಿಸಲ್ಪಟ್ಟರೆ, ಒಂದು ಅತೀಂದ್ರಿಯ ಪ್ರಜ್ಞೆ ಅತೀಮಾನಸವಾದ ಮಿಂಚಿನಂತೆ ಗೋಚರವಾಗಿ ಮಾಯವಾದಂತಾಗುವ ಚರಮ ಸ್ಥಿತಿ ಇದು ಒಂದು ವಿಭಿನ್ನವಾದ ಒಂದು ಅನುಭವ Intituion ಎಂದು ಕರೆಯುವರು. Intustion = ಅಂತಃಪ್ರಜ್ಞೆ ಆದರೆ Mysticism = ಅನುಭಾವ ಇದು ಕ್ಷಣದಲ್ಲಿ ಮಿಂಚಿ ಮಾಯವಾಗಲಾರದ್ದು. ಇದು ಅತೀಂದ್ರಿಯ ಆಧ್ಯಾತ್ಮಿಕದ ಕುರುಹು ಲಿಂಗಾಂಗ ಸಾಮರಸ್ಯಾನುಭವದ ಬಗ್ಗೆ

> ಅನುಭಾವ ನುಡಿವ ಅಣ್ಣಗಳಿರಾ, ಅನುಭಾವವೆತ್ತನಿವೆತ್ತಿ ಹೋಗಿರಣ್ಣಾ.-
> ಅನುಭಾವವೆಂಬುದು ಆತ್ಮವಿದ್ಯೆ, ಅನುಭಾವವೆಂಬುದು ತಾನಾರೆಂಬುದು ತೋರುವದು
> ಅನುಭಾವವೆಂಬುದು ನಿಜ ನಿವಾಸದಲ್ಲಿರುವದು ಇಂತಪ್ಪ ಅನುಭಾವನರಿಯದೇ
> ಶಾಸ್ತ್ರಜಾಲದ ಪಸರಾರವಿಕ್ಕಿಕೊಡದ ವ್ಯವಹಾರ ಮಾಡುವ ಅಣ್ಣಗಳಿರಾ
> ನೀವೆತ್ತ ಸ್ವತಂತ್ರ ಸಿದ್ಧಲಿಂಗೇಶ್ವರನ ಅನುಭಾವವೆತ್ತ ಹೋಗಿರಣ್ಣಾ.[೧೬೫]

ಅನುಭಾವದ ಸ್ಪಷ್ಟತೆ ವಚನಕಾರರಲ್ಲಿ ಕಂಡುಬರುವದು. ಪ್ರಭು ಆದಿಯಾಗಿ ಎಲ್ಲ ವಚನಕಾರರೆಲ್ಲರೂ ಅನುಭಾವಿ ಪಂಥದವರಾಗಿದ್ದಾರೆ. ಈ ಅನುಭಾವದ ಹಿನ್ನೆಲೆಯಲ್ಲಿಯೇ ಧರ್ಮವನ್ನು ಕಟ್ಟಿದ್ದಾರೆಂಬುದಕ್ಕೆ

> ಅನುಭಾವದಿಂದ ಹುಟ್ಟಿತ್ತು ಲಿಂಗ, ಅನುಭಾವದಿಂದ ಹುಟ್ಟಿತ್ತು ಜಂಗಮ
> ಅನುಭಾವದಿಂದ ಹುಟ್ಟಿತ್ತು ಪ್ರಸಾದ ಅನುಭಾವ ದನುವಿನಲ್ಲಿ ಗುಹೇಶ್ವರ ನಿಮ್ಮ
> ಶರಣ ಅನುಪಮ ಸುಖಿ.

ಇತರರೊಂದಿಗೆ ಹಂಚಿಕೊಳ್ಳುವದಾಗಿತ್ತು. ಅನುಭಾವದ ಸಂಸ್ಕೃತಿ ರೂಪ ಮತ್ತೊಬ್ಬರಿಗೆ ತಿಳಿಸುವದು ಎಂದಾಗಿದೆ. ಅನುಭಾವ ಜೀವಾತ್ಮ ಪರಮಾತ್ಮರ, ಅಂಗಲಿಂಗಗಳ, ಸಮರಸದ ಸ್ವಾನುಭವ, ಇಂದ್ರಿಯಾತೀತವಾದ ಅತೀ ಮಾನಸಪ್ರಜ್ಞೆಯ ಪರಮಾನಂದದ ನಿರಾಲಂಬ ಸ್ಥಿತಿ ಅದನ್ನು ಅರಿಯಬೇಕಾದರೆ ಅನುಭವಿಸಿ ತಿಳಿಯಬೇಕಾಗುವದು. ಸಂಸ್ಕೃತದಲ್ಲಿ ಭೂ ಭವ = ಆಗು, ಇರು ಎಂದು ಅರ್ಥ. ಇದರ ಮೇಲಿಂದ ಭೂತಿ ಎಂದರೆ ಅನುಭವ ಆಗುತ್ತಾ ಸಾಗುತ್ತಲೇ ಇರುವಂತದ್ದು. ಅಂದರೆ ಸ್ವಲ್ಪ ಹಿಂದೆ ಆದ ಅನುಭವ ಇವತ್ತಿಗೂ ಮುಂದುವರೆಯುವಂತದ್ದು ಎಂದಾಗುವದು. ಭವ ಇದು ವರ್ತಮಾನ ಶಬ್ದ ಭೂತ - ಇದು ಭೂತಕಾಲ ಪ್ರವಾಚಕ, ಭೂತಿ - ಭೂತ ಕಾಲದಿಂದ ವರ್ತಮಾನದವರೆಗೆ ಸಾಗಿದುದು ಎಂದರ್ಥ. ಭಗವಂತನ ಅನುಗ್ರಹದಿಂದ ಗುರುವಿನ ನಿರ್ದೇಶನದಂತೆ ಸಾಧನ ಮುಖಾಂತರ ಅನುಭಾವ ನೆಲೆಯಾಗಿ ನಿಂತು ಸಿದ್ಧಿಪ್ತವಾದರೆ ಅದು ಅನುಭೂತಿ. ಶಂಕರರಲ್ಲಿ 'ಅಪರೋಕ್ಷ ಅನುಭೂತಿ' ಅಂದರೆ ಪ್ರತ್ಯಕ್ಷವಲ್ಲದ ಅನುಭಾವ ಎಂದೇ ಅರ್ಥ. ದೋಷರಹಿತ ಸಹಜ ನಿರಾಲಂಬಿಕ ಜೀವನ್ಮುಕ್ತ ಆನಂದಸ್ಥಿತಿಯೇ ಅನುಭೂತಿ ಸ್ವರೂಪ.

ಅನುಭಾವ ಎಂಬುದು ಸಾಧಕನ ರೋಮ ರೋಮಗಳಲ್ಲಿ ನೆಲೆಯಾಗಿ ರಕ್ತದ ಕಣಕಣಗಳಲ್ಲಿ ತುಂಬಿ ಜಾಗ್ರ, ಸ್ವಪ್ನ, ಸುಷುಪ್ತಿ ಎಂಬ ಮೂರು ಆವಸ್ಥೆಗಳಲ್ಲಿ ಸ್ಥಿರವಾಗಿರುವ ತೂರ್ಯಾವಸ್ಥೆಯನ್ನು ಅನುಭವಿಸಲಾರಂಭಿಸಿದರೇ ಅದೇ ಅನುಭೂತಿ.[೧೪] ಅನುಭಾವವು ನಿತ್ಯ ಅನುಭವ ರೂಪದಿಂದ ನೆಲೆಯಾಗಿ ನಿಂತರೆ ಅದೇ ಅನುಭೂತಿ. ಆಮೇಲೆ ಮೊದಲಿನ ಸಾಮಾನ್ಯ ಸ್ಥಿತಿಗೆ ಮರಳುವ ಪ್ರಮೆಯವೇ ಇಲ್ಲ.' ಆ ಸ್ಥಿತಿಯನ್ನು ಒಮ್ಮೆ ಅನುಭವಿಸಿ ಆದ ಮೇಲೆ ಕಳೆದುಕೊಳ್ಳುವ ಅಭಾವವಿಲ್ಲ. ನಿರಂತರ ಅನುಭವಿಸುವ ಸ್ಥಿತಿಯಾಗಿದೆ. ಅನುಭಾವ ಅನ್ನುವದು ಆಧ್ಯಾತ್ಮಿಕವಾಗಿ ಮಾತ್ರ ಉಪಯೋಗಿಸಲ್ಪಟ್ಟರೆ, ಒಂದು ಅತೀಂದ್ರಿಯ ಪ್ರಜ್ಞೆ ಅತೀಮಾನಸವಾದ ಮಿಂಚಿನಂತೆ ಗೋಚರವಾಗಿ ಮಾಯವಾದಂತಾಗುವ ಚರಮ ಸ್ಥಿತಿ ಇದು ಒಂದು ವಿಭಿನ್ನವಾದ ಒಂದು ಅನುಭವ Intituion ಎಂದು ಕರೆಯುವರು. Intustion = ಅಂತಃಪ್ರಜ್ಞೆ ಆದರೆ Mysticism = ಅನುಭಾವ ಇದು ಕ್ಷಣದಲ್ಲಿ ಮಿಂಚಿ ಮಾಯವಾಗಲಾರದ್ದು. ಇದು ಅತೀಂದ್ರಿಯ ಆಧ್ಯಾತ್ಮಿಕದ ಕುರುಹು ಲಿಂಗಾಂಗ ಸಾಮರಸ್ಯಾನುಭವದ ಬಗ್ಗೆ

> ಅನುಭಾವ ನುಡಿವ ಅಣ್ಣಗಳಿರಾ, ಅನುಭಾವವೆತ್ತನಿವೆತ್ತಿ ಹೋಗಿರಣ್ಣಾ.-
> ಅನುಭಾವವೆಂಬುದು ಆತ್ಮವಿದ್ಯೆ, ಅನುಭಾವವೆಂಬುದು ತಾನಾರೆಂಬುದು ತೋರುವದು
> ಅನುಭಾವವೆಂಬುದು ನಿಜ ನಿವಾಸದಲ್ಲಿರುವದು ಇಂತಪ್ಪ ಅನುಭಾವನರಿಯದೇ
> ಶಾಸ್ತ್ರಜಾಲದ ಪಸರಾರವಿಕ್ಕಿಕೊಡದ ವ್ಯವಹಾರ ಮಾಡುವ ಅಣ್ಣಗಳಿರಾ
> ನೀವೆತ್ತ ಸ್ವತಂತ್ರ ಸಿದ್ಧಲಿಂಗೇಶ್ವರನ ಅನುಭಾವವೆತ್ತ ಹೋಗಿರಣ್ಣಾ.[೧೮೫]

ಅನುಭಾವದ ಸ್ಪಷ್ಟತೆ ವಚನಕಾರರಲ್ಲಿ ಕಂಡುಬರುವದು. ಪ್ರಭು ಆದಿಯಾಗಿ ಎಲ್ಲ ವಚನಕಾರರೆಲ್ಲರೂ ಅನುಭಾವಿ ಪಂಥದವರಾಗಿದ್ದಾರೆ. ಈ ಅನುಭಾವದ ಹಿನ್ನೆಲೆಯಲ್ಲಿಯೇ ಧರ್ಮವನ್ನು ಕಟ್ಟಿದ್ದಾರೆಂಬುದಕ್ಕೆ

> ಅನುಭಾವದಿಂದ ಹುಟ್ಟಿತ್ತು ಲಿಂಗ, ಅನುಭಾವದಿಂದ ಹುಟ್ಟಿತ್ತು ಜಂಗಮ
> ಅನುಭಾವದಿಂದ ಹುಟ್ಟಿತ್ತು ಪ್ರಸಾದ ಅನುಭಾವ ದನುವಿನಲ್ಲಿ ಗುಹೇಶ್ವರ ನಿಮ್ಮ
> ಶರಣ ಅನುಪಮ ಸುಖಿ.

ಅನುಭಾವ ಆಧಾರದಿಂದ ಈ ಧರ್ಮದ ಚೌಕಟ್ಟು ಸ್ಥಾಪಿತವಾಗಿದೆ. [೧೮]

ಸ್ವಸ್ಥಾನ ಸೃಷ್ಟಿರದ ಸುಮನ ಮಂಟಪದೊಳಗೆ, ನಿತ್ಯ ನಿರಂಜನ ಪ್ರಭೆಯಬೆಳಗು,

ಶಿವಯೋಗದನುಭಾವವು ಏಕಾರ್ಥವಾಗಿ ಗುಹೇಶ್ವರ ನಿಮ್ಮ ಶರಣ ಉಮಾಪಕೀತನಾಗಿರ್ದನು. [೧೮]

ಇಲ್ಲಿ ಶಿವಯೋಗದ ಅನುಭಾವ ಏಕಾರ್ಥವಾಗಿ ಅನ್ನುವ ವ್ಯಾಖ್ಯೆ ಅನುಭೂತಿ ಪದವನ್ನು ಹೇಳುವಂತಿದೆ. ಇದಕ್ಕೆ ಸಿದ್ದಸ್ಥಿತಿ ಎಂದು ಹೇಳಬಹುದು. ಇದು ಚಿರಂತನ ಸುಖ ಈ ಸುಖ ಪ್ರಾಪ್ತಿಯಾಗಿಯೇ ಹಲವು ಸಂಪಾದನೆಗಳು ಹೋರಾಡಿವೆ. ತತ್ವಜ್ಞಾನ ಮತ್ತು ಆಧ್ಯಾತ್ಮಿಕ ಈ ಶಬ್ದಗಳ ವಿವರಣೆಯನ್ನು ಮಾಡುವಾಗ, ತತ್ವಜ್ಞಾನವೆಂದರೆ ಅದು ಬುದ್ಧಿಯಿಂದ ಚಿಂತಿಸಿ ಜೀವ - ಜಗತ್ತು - ಈಶ್ವರಗಳ ಸಂಬಂಧಗಳನ್ನು ಅರ್ಥಮಾಡಿಕೊಳ್ಳುವದಾಗಿದೆ. ಆದರೆ ಇದು ವಸ್ತಾತ್ಮಕವಾದದ್ದು. ಪರಸ್ಪರ ಸಂಬಂಧಗಳನ್ನು ಜೀವಾತ್ಮ ಅದಿ ದೈವಿಕವಾಗಿ ಕ್ರೂಢೀಕರಿಸುವದಕ್ಕೆ ಆಧ್ಯಾತ್ಮಿಕವೆನ್ನಬಹುದು. ಅಂದರೆ ಇದು ಜೀವದ ಜೊತೆ ತಳಕು ಹಾಕಿಕೊಂಡ ಜ್ಞಾನ. ತತ್ವಜ್ಞಾನ ಜಡಾತ್ಮಕವಾದರೆ ಆಧ್ಯಾತ್ಮ ಚೇತನಾತ್ಮಕವೆನಿಸುವುದು. ಆಧ್ಯಾತ್ಮಿಕದಲ್ಲಿ ತತ್ವಜ್ಞಾನವು ಬರುವದು. ಆದರೆ ತತ್ವಜ್ಞಾನದಲ್ಲಿ ಆಧ್ಯಾತ್ಮಿಕ ಬರಬಹುದು, ಬರಲಿಕ್ಕಿಲ್ಲ. ಆಧ್ಯಾತ್ಮಿಕವಾದ ತತ್ವಜ್ಞಾನಕ್ಕಿಂತಲೂ ವಿಶಾಲವಾಗಿದೆ. ಆಧ್ಯಾತ್ಮಿಕವಾದಿಗಳು ತತ್ವಜ್ಞಾನ ಅರಿಯಲಾರದವರೇನಲ್ಲ. ಆದರೆ ಅಲ್ಲಿಯೇ ನಿಲ್ಲದೆ ಜೀವಾತ್ಮನ ಅಂತರ್ಮಟ್ಟವನ್ನು ಹೆಚ್ಚಿಸಿಕೊಳ್ಳುತ್ತ ಪರಮಾತ್ಮನೊಡನೆ ತಾದ್ಯಾತ್ಮ ಸಂಬಂಧವನ್ನು ಪಡೆಯುವದು ಇವರ ಉದ್ದೇಶ.

**ಅಡಿಟಿಪ್ಪಣಿಗಳು**

೧. ಶಿವಗಣಪ್ರಸಾದಿ ಮಹಾದೇವಯ್ಯಗಳ ಸಂಪಾದನೆ, ಪು. ೪೬
೨. ಅದೇ, ಪು. ೪೬
೩. ಅದೇ, ಪು. ೪೬
೪. ಅದೇ, ಪು. ೪೭
೫. ಅದೇ, ಪು. ೪೭
೬. ಅದೇ, ಪು. ೨೩೮
೭. ಪರಿಪೂರ್ಣದೆಡೆಗೆ, ಪು. ೪೯
೮. ಕನ್ನಡ ಸಾಹಿತ್ಯದಲ್ಲಿ ಅಲ್ಲಮಪ್ರಭುದೇವ, ಪು. ೧೬
೯. ಅದೇ, ಪು. ೧೭
೧೦. ಅದೇ, ಪು. ೧೯
೧೧. ಅದೇ, ಪು. ೨೦
೧೨. ಅದೇ, ಪು. ೨೦
೧೩. ಅದೇ, ಪು. ೭೦
೧೪. ಅದೇ, ಪು. ೭೧
೧೫. ಶೂನ್ಯತತ್ವ ವಿಕಾಸ, ಪು. ೧೨
೧೬. ನೂತನ ಪುರಾತನ ರಗಳೆ, ಪು. ೧೦, ೧೧
೧೭. ಅದೇ, ಪು. ೧೨
೧೮. ಅದೇ, ಪು. ೧೩
೧೯. ಅದೇ, ಪು. ೧೪
೨೦. ಅದೇ, ಪು. ೧೭

೨೧. ಅದೇ, ಪು. ೨೧

೨೨. ಕನ್ನಡ ಸಾಹಿತ್ಯದಲ್ಲಿ ಅಲ್ಲಮಪ್ರಭುದೇವ, ಪು. ೯೪

೨೩. ಅದೇ, ಪು. ೯೬

೨೪. ಶೂನ್ಯತತ್ವ ವಿಕಾಸ

೨೫. ಶೂನ್ಯಸಂಪಾದನೆ ವಿವರಣಾತ್ಮಕ ಪರಿಚಯ, ಪು. ೨೫

೨೬. ಅದೇ, ಪು. ೨

೨೭. ಅದೇ, ಪು. ೩

೨೮. ಅದೇ, ಪು. ೩

೨೯. ಶೂನ್ಯತತ್ವ ವಿಕಾಸ, ಪು. ೧೧

೩೦. Philosophy of Buddism, P.9

೩೧. ಶೂನ್ಯತತ್ವ ವಿಕಾಸ, ಪು. ೩೦

೩೨. ಅದೇ, ಪು. ೩೦

೩೩. ಅದೇ, ಪು. ೨೩

೩೪. ಅದೇ, ಪು. ೨೪

೩೫. ಅದೇ, ಪು. ೨೫

೩೬. ಶೂನ್ಯಸಂಪಾದನೆ ವಿವರಣಾತ್ಮಕ ಪರಿಚಯ, ಪು. ೨೬

೩೭. ಅದೇ, ಪು. ೨೭

೩೮. ಅದೇ, ಪು. ೨೭

೩೯. ಗುಮ್ಮಳಾಪುರದ ಶೂನ್ಯ ಸಂಪಾದನೆ, ಪು. ೧೦

೪೦. ಗೂಳೂರು ಶೂನ್ಯ ಸಂಪಾದನೆ, ಪು. ೪೯

೪೧. ಅದೇ, ಪು. ೪೯

೪೨. ಅದೇ, ಪು. ೪೨

೪೩. ಅದೇ, ಪು. ೯೧

೪೪. ಅದೇ, ಪು. ೯೫

೪೫. ಅದೇ, ಪು. ೧೦೪

೪೬. ಅದೇ, ಪು. ೧೦೦

೪೭. ಅದೇ, ಪು. ೧೦೫

೪೮. ಅದೇ, ಪು. ೧೦೫

೪೯. ಅನುಭಾವ ಸಾಹಿತ್ಯ, ಪು. ೧೪

೫೦. ಶೂನ್ಯಸಂಪಾದನೆ, ಪು. ೩೩೬

೫೧. ಅದೇ, ಪು. ೧೮೦

೫೨. ಅದೇ, ಪು. ೧೮೦

೫೩. ಅದೇ, ಪು. ೨೨೭

೫೪. ಶೂನ್ಯಸಂಪಾದನೆ ಪರಾಮರ್ಶೆ, ಪು. ೬೭೭

೫೫. ಶೂನ್ಯಸಂಪಾದನೆ, ಪು. ೬೭೭

೫೬. ಶೂನ್ಯಸಂಪಾದನೆ ಪರಾಮರ್ಶೆ, ಪು. ೬೭೮

೫೭. ಶೂನ್ಯಸಂಪಾದನೆ, ಪು. ೨೫೧

೫೮. ಅದೇ, ಪು. ೨೫೨

೫೯. ಅದೇ, ಪು. ೧೧

೬೦. ಅದೇ, ಪು. ೧೧

೬೧. ಅದೇ, ಪು. ೭೩

೬೨. ಅದೇ, ಪು. ೭೬

೬೩. ಅದೇ, ಪು. ೧೮೩

೬೪. ಅದೇ, ಪು. ೧೮೮

೬೫. ಅದೇ, ಪು. ೩೮೫

೬೬. ಅದೇ, ಪು. ೩೮೫

೬೭. ಅದೇ, ಪು. ೨೨೫

೬೮. ಅದೇ, ಪು. ೨೮೭

೬೯. ಅದೇ, ಪು. ೩೮೭

೭೦. ಅದೇ, ಪು. ೨೮೮

೭೧. ಅದೇ, ಪು. ೨೮೧

೭೨. ಅದೇ, ಪು. ೨೮೫

೭೩. ಅದೇ, ಪು. ೨೯೮

೭೪. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಪು. ೧೭೨

೭೫. ಲಿಂಗಲೀಲಾ ವಿಲಾಸ ಚಾರಿತ್ರ್ಯ, ಪು. ೧೨

೭೬. ಅದೇ, ಪು. ೨೦

೭೭. ಅದೇ, ಪು. ೨೮

೭೮. ಅದೇ, ಪು. ೩೭

೭೯. ಅದೇ, ಪು. ೫೧

೮೦. ಅದೇ, ಪು. ೫೩

೮೧. ಅದೇ, ಪು. ೫೩

೮೨. ಅದೇ, ಪು. ೫೯

೮೩. ಅದೇ, ಪು. ೬೦

೮೪. ಅದೇ, ಪು. ೩೫೦

೮೫. ಅದೇ, ಪು. ೩೫೦

೮೬. ಮಹಾಕವಿ ಹರಿಹರ ದರ್ಶನ, ಪು. ೨

೮೭. ನೂತನ ಪುರಾತನ ರಗಳೆ, ಪು. ೨

೮೮. ಅದೇ, ಪು. ೧೪

೮೯. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ, ಪು. ೫೮

೯೦. ನೂತನ ಪುರಾತನ ರಗಳೆ, ಪು. ೧೧

೯೧. ಅದೇ, ಪು. ೧೩

೯೨. ಅದೇ, ಪು. ೧೬

೯೩. ಕನ್ನಡ ಸಾಹಿತ್ಯದಲ್ಲಿ ಅಲ್ಲಮಪ್ರಭುದೇವ, ಪು. ೧೦೫

೯೪. ಅದೇ, ಪು. ೧೧೧

೯೫. ಅದೇ, ಪು. ೧೧೨

೯೬. ಅದೇ, ಪು. ೧೧೬

೯೭. ಅದೇ, ಪು. ೧೧೮

೯೮. ಅದೇ, ಪು. ೧೨೧

೯೯. ಅದೇ, ಪು. ೧೨೫.

೧೦೦. ಶರಣರ ಅನುಭಾವ ಸಾಹಿತ್ಯ, ಪು. ೨೯

೧೦೧. (ಪ್ರಭುಲಿಂಗಲೀಲೆ) ಅನಪಮ ಚರಿತೆ ಅಲ್ಲಮಪ್ರಭು, ಪು. ೮೫

೧೦೨. ಶರಣರ ಅನುಭಾವ ಸಾಹಿತ್ಯ, ಪು. ೧೧೧

೧೦೩. ವಚನ ಶಾಸ್ತ್ರಸಾರ, ಭಾಗ - ೧, ಪು. ೧೬೧

೧೦೪. ಅದೇ, ಪು. ೧೬೩

೧೦೫. ಅದೇ, ಪು. ೧೩೦

೧೦೬. ಅದೇ, ಪು. ೧೩೦

೧೦೭. ಅದೇ, ಪು. ೧೪೧

೧೦೮. ಅದೇ, ಪು. ೧೫೦

೧೦೯. ಅದೇ, ಪು. ೧೭೮

೧೧೦. ಅದೇ, ಪು. ೧೭೯

೧೧೧. ಅದೇ, ಪು. ೧೮೧

೧೧೨. ಅದೇ, ಪು. ೧೬೨

೧೧೩. ಅದೇ, ಪು. ೧೬೬

೧೧೪. ಅದೇ, ಪು. ೧೮೦

೧೧೫. ಅದೇ, ಪು. ೧೮೪

೧೧೬. ಅದೇ, ಪು. ೧೮೨

೧೧೭. ಅದೇ, ಪು. ೧೯೬

೧೧೮. ಅದೇ, ಪು. ೮೦

೧೧೯. ವಚನ ಧರ್ಮಸಾರ, ಪು. ೮೦

೧೨೦. ಅದೇ, ಪು. ೮೧

೧೨೧. ಬಸವಮಾರ್ಗ, ಪು. ೮

೧೨೨. ಶರಣರ ಅನುಭಾವ ಸಾಹಿತ್ಯ, ಪು. ೧೩೯

೧೨೩. ಅದೇ, ಪು. ೧೪೬

೧೨೪. ವಚನಶಾಸ್ತ್ರ ರಹಸ್ಯ, ಪು. ೯೪

೧೨೫. ಅದೇ, ಪು. ೭೭

೧೨೬. ಅದೇ, ಪು. ೧೭೯

೧೨೭. ಅದೇ, ಪು. ೧೭೯

೧೨೮. ವಚನ ಧರ್ಮಸಾರ, ಪು. ೭೯

೧೨೯. ವಚನಶಾಸ್ತ್ರ ರಹಸ್ಯ, ಪು. ೯೨

೧೩೦. ಅದೇ, ಪು. ೨೦೬

೧೩೧. ಶೂನ್ಯಸಂಪಾದನೆ, ಪು. ೪೧

೧೩೨. ಅದೇ, ಪು. ೪೨

೧೩೩. ಅದೇ, ಪು. ೫೯

೧೩೪. ಅದೇ, ಪು. ೯೩

೧೩೫. ಅದೇ, ಪು. ೨೮೭

೧೩೬. ಅದೇ, ಪು. ೨೧೯

೧೩೭. ಅದೇ, ಪು. ೨೭೫

೧೩೮. ಅದೇ, ಪು. ೧೪೪

೧೩೯. ಅನುಭಾವ ಸಾಹಿತ್ಯ, ಪು. ೧೫೩

೧೪೦. ವಚನ ನಿರ್ವಚನ, ಪು. ೩

೧೪೧. ಅದೇ, ಪು. ೫

೧೪೨. ಅದೇ, ಪು. ೬

೧೪೩. ಅದೇ, ಪು. ೧೮

೧೪೪. ಅದೇ, ಪು. ೨೫

೧೪೫. ಅದೇ, ಪು. ೫೦

೧೪೬. ಅದೇ, ಪು. ೮೩

೧೪೭. ಅದೇ, ಪು. ೧೦೯

೧೪೮. ಅದೇ, ಪು. ೧೧೨

೧೪೯. ಅಲ್ಲಮನ ಅನುಸಂಧಾನ, ಪು. ೯೫

೧೫೦. ವಚನಶಾಸ್ತ್ರ ರಹಸ್ಯ, ಪು. ೩೬

೧೫೧. ಅಲ್ಲಮನ ಅನುಸಂಧಾನ, ಪು. ೧೩೬

೧೫೨. ಅದೇ, ಪು. ೧೬೯

೧೫೩. ಅದೇ, ಪು. ೧೯೧

೧೫೪. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಪು. ೮೦

೧೫೫. ಪ್ರಭುದೇವರ ವಚನ ಸಂಪುಟ, ಪು. ೨೬

೧೫೬. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಪು. ೧೨೯

೧೫೭. ವಚನಶಾಸ್ತ್ರ ರಹಸ್ಯ, ಪು. ೬೧

೧೫೮. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಪು. ೮೪

೧೫೯. ಅಲ್ಲಮನ ಅನುಸಂಧಾನ, ಪು. ೧೯೭

೧೬೦. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಪು. ೮೭

೧೬೧. ವಚನಧರ್ಮಸಾರ, ಪು. ೭೫

೧೬೨. ವಚನಧರ್ಮದ ರಹಸ್ಯ, ಪು. ೬೩

೧೬೩. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಪು. ೬೪

೧೬೪. ವಚನ ನಿರ್ವಚನ ಪ್ರಸ್ತಾವನೆ, ಪು. ೨೧

೧೬೫. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಪು. ೧೯೫

೧೬೬. ಅಲ್ಲಮನ ಅನುಸಂಧಾನ, ಪು. ೧೧೭

೧೬೭. ವಚನಶಾಸ್ತ್ರ ರಹಸ್ಯ, ಪು. ೩೦

೧೬೮. ಅಲ್ಲಮನ ವಚನ ಚಂದ್ರಿಕೆ, ಪು. ೧೬೩

೧೬೯. ಅದೇ

೧೭೦. ಅಲ್ಲಮನ ವಚನ ಚಂದ್ರಿಕೆ, ಪು. ೧೬೩

೧೭೧. ಅದೇ, ಪು. ೧೬೫

೧೭೨. ವಚನ ನಿರ್ವಚನ ಪ್ರಸ್ತಾವನೆ, ಪು. ೧೪

೧೭೩. ಅಲ್ಲಮನ ವಚನ ಚಂದ್ರಿಕೆ, ಪು. ೬೯

೧೭೪. ಪ್ರಭುದೇವರ ವಚನ, ಪು. ೮೩೭ (ಆರ್.ಸಿ. ಹಿರೇಮಠ)

೧೭೫. ಅದೇ, ಪು. ೯೧೬

೧೭೬. ಅಲ್ಲಮನ ವಚನ ಚಂದ್ರಿಕೆ, ಪು. ೧೦೩

೧೭೭. ಅದೇ, ಪು. ೧೯೫

೧೭೮. ವಚನ ನಿರ್ವಚನ, ಪು. ೫೨

೧೭೯. ಅದೇ, ಪು. ೪೮

೧೮೦. ಪ್ರಭುದೇವರ ವಚನ ಸಂಪುಟ, ಪು. ೬

೧೮೧. ವಚನ ನಿರ್ವಚನ, ಪು. ೧೨೬

೧೮೨. ಅದೇ, ಪು. ೧೨೬

೧೮೩. ಅದೇ, ಪು. ೧೫೪

೧೮೪. ಶರಣರ ಅನುಭಾವ ಅನುಭೂತಿ, ಪು. ೪

೧೮೫. ಅದೇ, ಪು. ೭

೧೮೬. ಅದೇ, ಪು. ೭

೧೮೭. ಅದೇ, ಪು. ೧೦



# ೬

# ಸಮಾರೋಪ

ಅಲ್ಲಮಪ್ರಭು ದೇವರ ಬಗೆಗೆ ಅವರ ವಚನಗಳ ಮೂಲಕ ವ್ಯಾಖ್ಯಾನ, ವಿಮರ್ಶೆ, ವಿವರಣೆಗೆ ತೊಡಗಿರುವುದನ್ನು ಒಂದು ಶತಮಾನಗಳ ಕಾಲ ಕಾಣುತ್ತೇವೆ. ಈ ಬಗೆಯ ವ್ಯಾಖ್ಯಾನ, ವಿಮರ್ಶೆಗಳು ಏಕಮಾದರಿ ನೆಲೆಗಳನ್ನು ಹಿಡಿದಿದ್ದವು. ಆದರೆ, ಈ ಅಧ್ಯಯನವು ಸಮಾಜೀಕರಣ, ಉನ್ನತೀಕರಣ ಮತ್ತು ವ್ಯಕ್ತಿತ್ವೀಕರಣ ಎಂಬ ಮೂರು ನೆಲೆಗಳು ಅಲ್ಲಮನ ದಾರ್ಶನಿಕ ಮೀಮಾಂಸೆಯಾಗಿರುವುದನ್ನು ಈ ಮಹಾಪ್ರಬಂಧದಲ್ಲಿ ನಿರ್ಣಯಿಸಲಾಗಿದೆ. ಯಾವುದೇ ಒಂದು ಸಮಾಜವಾಗಲಿ, ಸಮುದಾಯವಾಗಲಿ ವ್ಯಕ್ತಿತ್ವೀಕರಣ ಇಲ್ಲದೆ ಸಮಾಜೀಕರಣ ಸಾಧ್ಯವಿಲ್ಲ. ಕೇವಲ ಸಮಾಜೀಕರಣ ಎಂಬುದು ಉಪಭೋಗದ ಮಿತಿಯಲ್ಲೇ ಚಲಿಸಬೇಕೆಂಬುದಿಲ್ಲ. ಅದೇ ಕೇವಲ ಲೌಕಿಕದ ಸೆಳೆತವನ್ನು ಮಾತ್ರ ಹೊಂದಿರುತ್ತದೆ. ಇದು ಹೊರಗೂ ಬೆಳಕು. ಆದರೆ, ಒಳಗೂ ಬೆಳಕು ಬೆಳಗ ಬೇಕಾದರೆ ಉನ್ನತೀಕರಣದ ಆಶಯಗಳೂ ಬೇಕು. ವ್ಯಕ್ತಿತ್ವವು ಸಮಾಜದ ಬೆಳಕಿಗೆ ಕಾರಣವಾದರೆ, ಸಮಾಜದ ಮೂಲಕ ಉನ್ನತನೆಲೆಗೆ ತರಬೇಕಾದರೆ ಅಧಾರಗಳೆರಡೂ ಲೌಕಿಕದಿಂದ ಪಾರಮಾರ್ಥಿಕ ಭಾವಕ್ಕೆ ಸಂಚಯನಗೊಳ್ಳಬೇಕು. 'ಶಿವತ್ವ' ಎಂಬುದು ಉನ್ನತೀಕರಣದ ಒಂದು ಸಂಕೇತ. ಜೀವತ್ವ ಮತ್ತು ಶಿವತ್ವಗಳು ಅಲ್ಲಮಪ್ರಭುವಿನ ಹಾದಿ. ಈ ಹಾದಿಯನ್ನು ಆಧುನಿಕ ತತ್ವಶಾಸ್ತ್ರ ಮತ್ತು ಅನುಭಾವಶಾಸ್ತ್ರಗಳ ಮೂಲಕ ವ್ಯಾಖ್ಯಾನಿಸಿಕೊಂಡರೆ ಅಲ್ಲಮನ ಜೀವತ್ವ ಮತ್ತು ಶಿವತ್ವದ ಬೇರುಗಳು ನಮಗೆ ಸಿಗುತ್ತವೆ. ಜೀವತ್ವ ಮತ್ತು ಶಿವತ್ವ ಎಂಬುವು ಬೇರೆಬೇರೆಯಲ್ಲ. ಅವು ಒಂದರೊಳಗೆ ಒಂದು ಸೇರಿಕೊಳ್ಳಬೇಕಾದುದೇ. ಶಿವೋಹಂ ಎಂಬ ಮಾತಿನಲ್ಲೇ ಜೀವನಿರಸನ ಭಾವವು ಅಡಕವಾಗಿದೆ. ಜೀವವು

ಶಿವತ್ವಗೊಳ್ಳಬೇಕೆಂಬ ಮುಖ್ಯ ಪ್ರಮೇಯವನ್ನು ಸಾಧಕನಾದ ಅಲ್ಲಮ ತೋರಿಸಿಕೊಟ್ಟಿದ್ದಾನೆ. ಅವನ ನೂರಾರು ವಚನಗಳು ಇದಕ್ಕೆ ಸಾಕ್ಷ್ಯ ನುಡಿಯುತ್ತವೆ.

ಈ ಅಧ್ಯಯನವು ಅಂತಿಮವಾಗಿ ವ್ಯಕ್ತಿತ್ವೀಕರಣದ ಮೂಲಕ ಸಮಾಜೀಕರಣಕ್ಕೂ ತನ್ಮೂಲಕ ಉನ್ನತೀಕರಣಕ್ಕೂ ಸಾಧ್ಯವೆಂಬ ಅಂಶವನ್ನು ಹಲವು ಬಗೆಗಳಲ್ಲಿ ವ್ಯಾಖ್ಯಾನಿಸಿ, ವಿಶ್ಲೇಷಿಸಿ ತೋರಿಸಿಕೊಡುವ ಪ್ರಯತ್ನ ಮಾಡಿದೆ. ಈ ಲೌಕಿಕ ಜಗತ್ತು ಜೀವತ್ವಭಾವಕ್ಕೆ ಕೊನೆಗೊಳ್ಳುವುದಿಲ್ಲ. ಇಲ್ಲೇ ಶಿವತ್ವವೂ ಮೂರ್ತಿ ನಿರ್ಮಿಸುತ್ತದೆಂಬ ಅಂಶಕ್ಕೆ ಈ ಅಧ್ಯಯನವು ಒತ್ತು ನೀಡಿದೆ. ಅಲ್ಲಮನ ದಾರ್ಶನಿಕ ಮೀಮಾಂಸೆ ಎಂಬುದು ಈ ಮೂರು ಮುಖ್ಯ ನೆಲೆಗಳನ್ನು ಒಳಗೊಂಡಿದೆ. ಅಲ್ಲಮಪ್ರಭು ದೇವರ ಬಗೆಗೆ ಬಂದ ಕಾವ್ಯಕೃತಿಗಳೂ ಪುರಾಣಕೃತಿಗಳೂ ಈ ಅಂಶವನ್ನು ರೂಪಕಾತ್ಮಕ ನೆಲೆಯಲ್ಲೆ ನಿರೂಪಿಸುತ್ತವೆ. ಅಲ್ಲಮನ ವಚನಗಳೂ ಕೂಡ ಇದೇ ನೆಲೆಯನ್ನು ಪ್ರಧಾನವಾಗಿ ಹೊತ್ತಿವೆ. ಜಾಗತಿಕ ಹಾಗೂ ಭಾರತೀಯ ತತ್ವಜ್ಞಾನ ಮತ್ತು ಅನುಭಾವಶಾಸ್ತ್ರದ ಹಿನ್ನೆಲೆಯು ಅಲ್ಲಮನನ್ನು ಇನ್ನೂ ಆಳವಾಗಿ, ಹಲವು ಒಳನೋಟಗಳಿಂದ ತಿಳಿಯಲು ಅವಕಾಶ ಇರುವುದನ್ನು ಪ್ರಕಟಪಡಿಸುತ್ತವೆ. ಇಂದಿನ ವರ್ತಮಾನ ಜಗತ್ತು ಅಲ್ಲಮನನ್ನು ವರ್ತಮಾನೀಕರಿಸಿ ಕೊಂಡಿರುವುದು ವ್ಯಕ್ತಿತ್ವೀಕರಣ, ಸಮಾಜೀಕರಣ ಮತ್ತು ಉನ್ನತೀಕರಣದ ಈ ಕರಣತ್ರಯಗಳಲ್ಲೇ. ಈ ಅಂಶವನ್ನು ಈ ಮಹಾಪ್ರಬಂಧವು ಹಲವು ಹಾದಿಗಳಲ್ಲಿ ತೋರಿಸುತ್ತದೆ.

❖❖

# ಗ್ರಂಥಋಣ


ಅಬ್ದುಲ್ ಹಮೀದ್ ಡಾ. ಸೂಫಿಪಥ ಮತ್ತು ಶರಣಪಥಗಳ ತೌಲನಿಕ ಅಧ್ಯಯನ, ಪ್ರಿಯದರ್ಶಿನಿ ಪ್ರಕಾಶನ, ಭೆಂಗಳೂರು. ೧೯೯೮

ಅಯ್ಯಂಗಾರ್ ಶ್ರೀನಿವಾಸ ಕೆ.ಆರ್. ಗ್ರೀಕರ ತತ್ವಶಾಸ್ತ್ರ ಸಾರಸಂಗ್ರಹ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೦

ಕಲುಬುರ್ಗಿ ಎಂ.ಎಂ. ಡಾ. ಬಸವಮಾರ್ಗ ಸಂಪುಟ-೧, ಬಸವೇಶ್ವರ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೦

ಗುಡಿ ಆರ್.ಜಿ. ಡಾ. ದಾಸಸಾಹಿತ್ಯ ಒಂದು ಸೈದ್ಧಾಂತಿಕ ಅಧ್ಯಯನ, ಶ್ರೀನಿಧಿ ಪ್ರಕಾಶನ, ಅಥಣಿ, ೧೯೯೪

ಚಾಮರಸಕೃತ ಪ್ರಭುಲಿಂಗಲೀಲೆ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆ, ಧಾರವಾಡ, ೧೯೩೮

ಜಗದ್ಗುರು ಅನ್ನದಾನೇಶ ಮಹಾಸ್ವಾಮಿಗಳು, ಅಲ್ಲಮಪ್ರಭುದೇವರು ಚಾರಿತ್ರಿಕ ಚಿಂತನೆ, ಅನ್ನದಾನೇಶ್ವರ ಸಂಸ್ಥಾನ ಮಠ, ಮುಂಡರಗಿ, ೧೯೯೭

ಜಗದ್ಗುರು ಅನ್ನದಾನೇಶ್ವರ ಮಹಾಸ್ವಾಮಿಗಳು, ಜಂಗಮ ಪುಂಗವ ಶ್ರೀ ಅಲ್ಲಮಪ್ರಭುದೇವರು, ಅನ್ನದಾನೇಶ್ವರ ಸಂಸ್ಥಾನಮಠ, ಮುಂಡರಗಿ, ೧೯೯೨

ಜಚನಿ, ಡಾ. ಅಲ್ಲಯ್ಯನ ಬೆಳಕು, ಪ್ರಬೋಧ ಪ್ರಕಟಣಾಲಯ, ಬೆಂಗಳೂರು, ೧೯೫೨

ಜವರಯ್ಯ ಮ.ನ. ಡಾ. ದಲಿತವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ೧೯೯೭

ತಿಪ್ಪೇರುದ್ರಸ್ವಾಮಿ ಎಚ್. ಡಾ. ಶೂನ್ಯತತ್ವ ವಿಕಾಸ, ಡಿ.ವಿ.ಕೆ.ಮೂರ್ತಿ, ಮೈಸೂರು

ತಿಪ್ಪೇರುದ್ರಸ್ವಾಮಿ ಎಚ್. ಡಾ. ಶೂನ್ಯಸಂಪಾದನೆ ವಿವರಣಾತ್ಮಕ ಪರಿಚಯ, ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೯೮

ತಿಪ್ಪೇರುದ್ರಸ್ವಾಮಿ ಎಚ್. ಡಾ. ಅಲ್ಲಮಪ್ರಭುದೇವ, ಬಸವೇಶ್ವರ ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೭

ತಿಪ್ಪೇರುದ್ರಸ್ವಾಮಿ ಎಚ್. ಡಾ. ಶರಣರ ಅನುಭಾವಸಾಹಿತ್ಯ, ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೯೧

ತಿಪ್ಪೇರುದ್ರಸ್ವಾಮಿ ಎಚ್. ಡಾ. ಅಳಿವಿನಿಂದ ಉಳಿವಿಗೆ, ಡಿ.ವಿ.ಕೆ.ಮೂರ್ತಿ, ಮೈಸೂರು, ೨೦೦೦

ತರೀಕೆರೆ ರಹಮತ್ ಡಾ. ಕರ್ನಾಟಕದ ಸೂಫಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

ದಿವಾಕರ ಆರ್.ಆರ್. ಶರಣರ ಅನುಭಾವ, ಅನುಭವ ಅನುಭೂತಿ, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

ದೊಡ್ಡನಗೌಡರು ಜೋಳದರಾಶಿ (ಸಂ), ಶೂನ್ಯಸಂಪಾದನ ಬಯಲುಗಳಿಕೆ, ಅಖಿಲಭಾರತ ಶಿವಾನುಭವಸಂಸ್ಥೆ, ಧಾರವಾಡ, ೧೯೬೧

ನಾಗರಾಜ ಡಿ.ಆರ್. ಡಾ. ಅಲ್ಲಮಪ್ರಭು ಮತ್ತು ಶೈವಪ್ರತಿಭೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೯

ಪಂಡಿತ ನಾಗಭೂಷಣಶಾಸ್ತ್ರಿಗಳು, ಭಾರತೀಯ ದರ್ಶನ ಸಮೀಕ್ಷೆ, ಮೃತ್ಯುಂಜಯ ಪ್ರಕಾಶನ, ಮುರುಘಾಮಠ, ಧಾರವಾಡ, ೧೯೭೫

ಪುರಾಣಿಕ ಬಸವರಾಜ, ಅನುಪಮಚರಿತ ಅಲ್ಲಮಪ್ರಭುದೇವ, ಅನಿಮಿಷ ಪ್ರಕಾಶನ ಚರಂತಿ ಮಠ, ಬಾಗಲಕೋಟೆ, ೧೯೯೯

ಬಸವರಾಜು ಎಲ್. ಸರಳ ಶೂನ್ಯ ಸಂಪಾದನೆ, ಗೀತಾ ಬುಕ್ ಹೌಸ್, ಮೈಸೂರು, ೧೯೯೭

ಬಸವರಾಜು ಎಲ್. ಡಾ. ಅಲ್ಲಮನ ಲಿಂಗಾಂಗ ಸಂವಾದ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬

ಬಸವರಾಜು ಎಲ್. ಡಾ. ಶಿವದಾಸ ಗೀತಾಂಜಲಿ, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು. ೧೯೯೦

ಬಸವರಾಜು ಎಲ್. ಡಾ. ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯ ಸಂಪಾದನೆ, ಮುರುಘರಾಜೇಂದ್ರ ಬೃಹನ್ಮಠ, ಚಿತ್ರದುರ್ಗ, ೧೯೬೯

ಬಸವರಾಜು ಎಲ್. ಡಾ. ಅಲ್ಲಮನ ವಚನ ಚಂದ್ರಿಕೆ, ನಳಿನಿಶಂಕರ ಪ್ರಕಾಶನ, ಮೈಸೂರು, ೧೯೬೦

ಬನವಾಸಿ ಸಮಗ್ರ ಪರಿಚಯ, ಉಪನ್ಯಾಸ ಮಾಲೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪

ಭೂಸನೂರು ಮಠ ಸಂ.ಶಿ. (ಸಂ). ವಚನ ಸಾಹಿತ್ಯ ಸಾರ ಸಂಗ್ರಹ, ಅನ್ನದಾನೇಶ್ವರ ಶತಮಾನೋತ್ಸವ ಸಮಿತಿ, ಹಾಲಕೆರೆ, ನರೇಗಲ್, ೧೯೯೦

ಭೂಸನೂರುಮಠ ಸಂ.ಶಿ. (ಸಂ), ಲಿಂಗಲೀಲಾ ವಿಲಾಸ ಚಾರಿತ್ರ್ಯ, ಮೃತ್ಯುಂಜಯ ಮಹಾಸ್ವಾಮಿಗಳು. ಮುರುಘಾಮಠ, ಧಾರವಾಡ, ೧೯೭೬

ಭೂಸನೂರುಮಠ ಸಂ.ಶಿ. (ಸಂ), ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯ ಸಂಪಾದನೆ, ಆದವಾನಿ ಕಲ್ಲುಮಠ

ಮಂಜುರಾಜ ಎಚ್.ಎನ್. ಡಾ. ಲೋಕಚಾರ್ವಾಕ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧

ಮಲ್ಲಾಪುರ ಬಿ.ವಿ. ಡಾ. ಅಲ್ಲಮಪ್ರಭುದೇವರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩

ಮಲ್ಲೇಪುರಂ ಜಿ.ವೆಂಕಟೇಶ, ತಿಳಿವ ತೇಜದ ಮುಂದೆ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೧೯೯೬

ಮಹಾದೇವಪ್ಪ ಎನ್.ಜಿ. ಡಾ. ಧಾರ್ಮಿಕ ನಂಬಿಕೆಗಳು ಮತ್ತು ದಾರ್ಶನಿಕ ವಿಶ್ಲೇಷಣೆ, ವೀರಶೈವ ಅಧ್ಯಯನ ಅಕಾಡೆಮಿ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೫

ರಘುನಾಥ ರಾಮಚಂದ್ರ ದಿವಾಕರ, ವಚನಶಾಸ್ತ್ರ ರಹಸ್ಯ, ಆಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ, ೧೯೫೨

ರಾಘವೇಂದ್ರಾಚಾರ್ಯ ಎಚ್.ಎನ್. ಭಾರತೀಯ ತತ್ವಶಾಸ್ತ್ರ ಸಂಗ್ರಹ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೨

ರಾಮಚಂದ್ರಾಚಾರ ಡಿ.ಬಿ. ಡಾ. ಗುರುನಾನಕ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧

ಲಿಂಗಣ್ಣಯ್ಯ ಓ.ಎನ್. ಆತ್ಮಜ್ಞಾನಿ ಅಲ್ಲಮಪ್ರಭು, ಶ್ರೀಶೈಲಕುಮಾರಿ ಗ್ರಂಥಮಾಲೆ, ಬೆಂಗಳೂರು, ೧೯೫೮

ವೃಷಭೇಂದ್ರಸ್ವಾಮಿ ಎಸ್ .ಎಂ. ಡಾ. ಕನ್ನಡ ಸಾಹಿತ್ಯದಲ್ಲಿ ಅಲ್ಲಮಪ್ರಭುದೇವ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

ವಿದ್ಯಾಶಂಕರ ಎಸ್. ಡಾ. ಸಿದ್ಧಲಿಂಗಯ್ಯ ಜಿ.ಎಸ್. ಡಾ. ಹಲಿಗೆಯಾರ್ಯನ ಶೂನ್ಯಸಂಪಾದನೆ, ಸ್ನೇಹ ಪ್ರಿಂಟರ್ಸ್ , ಬೆಂಗಳೂರು, ೧೯೯೮

ವಿದ್ಯಾಶಂಕರ ಎಸ್. ಡಾ. ಚಾಮರಸನ ಪ್ರಭುಲಿಂಗಲೀಲೆ ಗದ್ಯಾನುವಾದ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೦

ಶ್ರೀ ಸಿದ್ದೇಶ್ವರ ಸ್ವಾಮಿಗಳು, ಅಲ್ಲಮಪ್ರಭುಗಳ ವಚನ ನಿರ್ವಚನ, ಸಂಪುಟ-೧, ಜಗದ್ಗುರು ಶಿವರಾತ್ರಿಕೇಶ್ವರ ಗ್ರಂಥಮಾಲೆ, ಮೈಸೂರು, ೧೯೯೮

ಶ್ರೀನಿವಾಸಮೂರ್ತಿ ಎಂ.ಆರ್. ವಚನಧರ್ಮಸಾರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೮

ಶ್ರೀ ಶಿದ್ದೇಶ್ವರ ಸ್ವಾಮಿಗಳು, ಅಲ್ಲಮಪ್ರಭುದೇವರ ವಚನ ನಿರ್ವಚನ, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೧

ಶ್ರೀ ದೇಶಪಾಂಡೆ, ಪ್ರಭುವಿನ ಪ್ರಭೆ, ಅಣೆಪ್ಪನವರ ಅಥಣಿ, ೧೯೫೫

ಶೇಷಗಿರಿರಾವ್ ವಿ.ಎನ್. ಡಾ. ಪಾಶ್ಚಾತ್ಯ ತಾತ್ವಿಕ ಚಿಂತನೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೮೫

ಸಬರದ ಬಸವರಾಜ ಡಾ. ಬಸವೇಶ್ವರ ಮತ್ತು ಪುರಂದರದಾಸ, ತರಳುಬಾಳು ಜಗದ್ಗುರು ಬೃಹನ್ಮಠ-ಸಿರಿಗೆರೆ, ೧೯೯೫

ಸಿದ್ಧಪ್ಪಾರಾಧ್ಯ ಟಿ.ಜಿ. ಡಾ. ಅಲ್ಲಮಪ್ರಭು, ಮೈಸೂರು ವಿಶ್ವವಿದ್ಯಾಲಯ, ೧೯೬೨

ಸುಂಕಾಪೂರ ಎಂ.ಎಸ್. ಡಾ. ನೂತನ ಪುರಾತನರ ರಗಳೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

ಹಳಕಟ್ಟಿ ಫ.ಗು. (ಸಂ). ವಚನಶಾಸ್ತ್ರಸಾರ ಭಾಗ-೨, ಶಿವಾನುಭವ ಗ್ರಂಥಮಾಲೆ, ವಿಜಾಪುರ, ೧೯೩೮

ಹಳಕಟ್ಟಿ ಫ.ಗು. (ಸಂ), ವಚನಶಾಸ್ತ್ರಸಾರ ಭಾಗ-೧, ಪೂರ್ವಾರ್ಧ, ಉತ್ತರಾರ್ಧ, ಹಿತಚಿಂತಕ ಪ್ರೆಸ್, ವಿಜಾಪುರ, ೧೯೩೧

ಹಳಕಟ್ಟಿ ಫ.ಗು. ವಚನಶಾಸ್ತ್ರಸಾರ ಭಾಗ-೩, ಹಿತಚಿಂತಕ ಪ್ರೆಸ್, ಬಿಜಾಪುರ, ೧೯೫೩

ಹಿರೇಮಠ ಆರ್.ಸಿ. ಡಾ. ಅಲ್ಲಮಪ್ರಭುದೇವರ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಹಿರೇಮಠ ಎಸ್.ಎಂ. ಅನುಭಾವ ಮಂಟಪ ದರ್ಶನ, ಜಗದ್ಗುರು ಅನ್ನದಾನೇಶ್ವರ ಸಂಸ್ಥಾನಮಠ, ಮುಂಡರಗಿ, ೧೯೯೦

ಹಿರೇಮಠ ಆರ್.ಸಿ. ಡಾ. ಗುಮ್ಮಳಾಪುರದ ಸಿದ್ಧಲಿಂಗರ ಶೂನ್ಯಸಂಪಾದನೆ

